# ವಸಾಹತುಶಾಹಿ ಆಡಳಿತ
# ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳು

(ನೋಂದಣಿ ಸಂಖ್ಯೆ ಕೆ.ಟಿ.ಎಸ್.ಎಮ್. 00134)

ಸಂಶೋಧನಾ ವಿದ್ಯಾರ್ಥಿ

**ನವೀನ್**

ಸಹ ಪ್ರಾಧ್ಯಾಪಕರು-ಚರಿತ್ರೆ ವಿಭಾಗ

ಸರಕಾರಿ ಪ್ರಥಮದರ್ಜೆ ಕಾಲೇಜು, ರಥಬೀದಿ, ಮಂಗಳೂರು

ಮಾರ್ಗದರ್ಶಕರು

**ಡಾ। ಡೆನಿಸ್ ಫೆರ್ನಾಂಡಿಸ್**

ಸಹ ಪ್ರಾಧ್ಯಾಪಕರು-ಚರಿತ್ರೆ ವಿಭಾಗ



ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು

(ಕನ್ನಡ ವಿಶ್ವವಿದ್ಯಾನಿಲಯ ಹಂಪಿ ಸಂಶೋಧನಾ ಮಾನ್ಯತಾ ಕೇಂದ್ರ)

ಪಿ ಎಚ್ ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ

ಸಾದರಪಡಿಸಿದ ಮಹಾಪ್ರಬಂಧ



2015

# ವಸಾಹತುಶಾಹಿ ಆಡಳಿತ
# ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳು

(ನೋಂದಣಿ ಸಂಖ್ಯೆ ಕೆ.ಟಿ.ಎಸ್.ಎಮ್ 00134)



ಸಂಶೋಧನಾ ವಿದ್ಯಾರ್ಥಿ

**ನವೀನ್**

ಸಹ ಪ್ರಾಧ್ಯಾಪಕರು-ಚರಿತ್ರೆ ವಿಭಾಗ

ಸರಕಾರಿ ಪ್ರಥಮದರ್ಜೆ ಕಾಲೇಜು, ರಥಬೀದಿ, ಮಂಗಳೂರು

ಮಾರ್ಗದರ್ಶಕರು

**ಡಾ| ಡೆನಿಸ್ ಫೆರ್ನಾಂಡಿಸ್**

ಸಹ ಪ್ರಾಧ್ಯಾಪಕರು-ಚರಿತ್ರೆ ವಿಭಾಗ




ಕರ್ನಾಟಕ ತಿಯಾಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು

(ಕನ್ನಡ ವಿಶ್ವವಿದ್ಯಾನಿಲಯ ಹಂಪಿ ಸಂಶೋಧನಾ ಮಾನ್ಯತಾ ಕೇಂದ್ರ)

**ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಸಾದರಪಡಿಸಿದ ಮಹಾಪ್ರಬಂಧ**

**2015**

# ಮಾರ್ಗದರ್ಶಕರ ದೃಢೀಕರಣ ಪತ್ರ

**ನವೀನ್**, ಇವರು **ವಸಾಹತುಶಾಹಿ ಆಡಳಿತ: ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳು** ಎಂಬ ವಿಷಯದ ಕುರಿತು ರಚಿಸಿದ ಮಹಾಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದೆ. ಈ ಸಂಶೋಧನಾ ಪ್ರಬಂಧವನ್ನು ಪಿ.ಎಚ್.ಡಿ ಪದವಿಗಾಗಿ ನವೀನ್ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲೀ ಉದ್ದೇಶಗಳಿಗಾಗಲೀ ಈ ಮೊದಲು ಎಲ್ಲಿಯೂ ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಪತ್ರವನ್ನು ನೀಡುತ್ತೇನೆ.

ಡಾ। ಡೆನಿಸ್ ಫೆರ್ನಾಂಡಿಸ್
ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ,
ಕರ್ನಾಟಕ ಥಿಯಾಲಾಜಿಕಲ್ ಸಂಶೋಧನಾ ಕೇಂದ್ರ,
ಹಂಪಿ ವಿಶ್ವವಿದ್ಯಾನಿಲಯ ಸಂಶೋಧನಾ ಮಾನ್ಯತಾ ಕೇಂದ್ರ,
ಬಲ್ಮಠ ಮಂಗಳೂರು.

# ಪ್ರಮಾಣಪತ್ರ

ಕರ್ನಾಟಕ ತಿಯಾಲಾಜಿಕಲ್ ಸಂಶೋಧನ ಕೇಂದ್ರ, ಬಲ್ಮಠ ಮಂಗಳೂರು (ಹಂಪಿ ವಿಶ್ವವಿದ್ಯಾನಿಲಯ ಸಂಶೋಧನ ಮಾನ್ಯತಾ ಕೇಂದ್ರ)ದ ಪ್ರಾಧ್ಯಾಪಕರಾದ ಡಾ, ಡೆನಿಸ್ ಫೆರ್ನಾಂಡಿಸ್ ಅವರ ಮಾರ್ಗದರ್ಶನದಲ್ಲಿ **ವಸಾಹತುಷಾಹಿ ಆಡಳಿತ: ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಬಳ್ಳಾರಿ ಇಲ್ಲಿಗೆ ಒಪ್ಪಿಸಲೆಂದು ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಇದರ ಯಾವುದೇ ಭಾಗವನ್ನು ಈ ಪೂರ್ವದಲ್ಲಿ ಯಾವುದೇ ಪದವಿಗಾಗಲೀ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ನವೀನ್

ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ

ಸರಕಾರಿ ಪ್ರಥಮದರ್ಜೆ ಕಾಲೇಜು, ರಥಬೀದಿ ಮಂಗಳೂರು.

# ವಸಾಹತುಶಾಹಿ ಆಡಳಿತ
# ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳು
## (ನೋಂದಣಿ ಸಂಖ್ಯೆ ಕೆ.ಟಿ.ಎಸ್.ಎಮ್ 00134)

**ವಿಷಯಸೂಚಿ** **ಪುಟಗಳು**

# ವಸಾಹತುಶಾಹಿ ಆಡಳಿತ
# ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳು

## ಪೀಠಿಕೆ

ಚರಿತ್ರೆಯು ನಿರಂತರವಾಗಿ ಪುನರ್‌ವ್ಯಾಖ್ಯಾನ, ಪುನರ್‌ಪರಿಶೀಲನೆ, ವಿಶ್ಲೇಷಣೆ ಹಾಗೂ ಅರ್ಥೈಸುವಿಕೆಗಳಿಗೆ ಒಳಪಟ್ಟ ಪುನರ್‌ರಚನೆಗೊಳ್ಳುವ ಅಧ್ಯಯನ ವಿಷಯವಾಗಿ ರೂಪುಗೊಂಡಿದೆ. ಈ ಪ್ರಕ್ರಿಯೆಯಲ್ಲಿ ಚರಿತ್ರೆ ಕಾಲ, ಯುಗ, ಸಂದರ್ಭ ಹಾಗೂ ಪ್ರದೇಶಗಳೊಂದಿಗೆ ವ್ಯವಹರಿಸುವುದರಿಂದ ಅಲ್ಲಿ ಕಂಡುಬರುವ ಪ್ರತಿಯೊಂದು ಪಂಥವು ತನ್ನದೇ ನೆಲೆ ಹಾಗೂ ದೃಷ್ಟಿಕೋನಗಳಿಗುಣವಾಗಿ ಅದನ್ನು ಅರ್ಥೈಸಿಕೊಳ್ಳುವ ಅಥವಾ ವಿಶ್ಲೇಷಿಸುವ ಮತ್ತು ಸತ್ಯವನ್ನು ತೀರ್ಮಾನಿಸುವ ಪ್ರಯತ್ನ ಮಾಡುತ್ತವೆ. ಆದರೆ ಚರಿತ್ರೆಯಲ್ಲಿ ಅಂತಿಮ ತೀರ್ಮಾನ ಅಥವಾ ಅಂತಿಮ ಸತ್ಯವೆಂಬುದಿಲ್ಲದಿರುವುದರಿಂದ ಅದನ್ನು ಪ್ರಕಟಿಸುವ ಪ್ರತಿಯೊಂದು ನಿಲುವು ಚರಿತ್ರೆಯ ಒಂದೊಂದು ಭಾಗವಾಗಿ ಮುಂದುವರೆಯುತ್ತದೆ. ಈ ನಿಲುವುಗಳಿಗೆ ಸಹಮತ ವ್ಯಕ್ತಪಡಿಸುವ ಅಥವಾ ಅದರಿಂದ ಭಿನ್ನವಾಗಿ ಕಾಣಿಸಿಕೊಳ್ಳುವ ರಚನೆಗಳು ಅದರೊಳಗೇ ಬೆಸೆದುಕೊಂಡಿರುತ್ತವೆ. ಆದ್ದರಿಂದ ರಚನೆಯ ಅಥವಾ ನಿಲುವುಗಳ ಮಿತಿಗಳನ್ನು, ಅವುಗಳು ರೂಪಿಸಲ್ಪಟ್ಟ ಸನ್ನಿವೇಶಗಳು, ಹಾಗೂ ಅವುಗಳ ಪರ ವಿಮರ್ಶಾತ್ಮಕ ವಿಶ್ಲೇಷಣೆಗಳಿಗೆ ಒಳಪಡಿಸಿ ಪರ್ಯಾಯ ಚರಿತ್ರೆ ನಿರ್ಮಾಣ ಮಾಡುವ ಅವಕಾಶಗಳನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಸಂಶೋಧನೆಗಳು ಮಾಡಬೇಕಾಗುತ್ತದೆ.[1]

ಇತಿಹಾಸದಲ್ಲಿ ಪರಿಸ್ಥಿತಿ ಮತ್ತು ಬೆಳವಣಿಗೆಗಳು ಸ್ವಾಭಾವಿಕವಾಗಿ ರೂಪುಗೊಳ್ಳುವುದರಿಂದ ಕೆಲವೊಂದು ಬಾರಿ ನಮ್ಮ ನಿರೀಕ್ಷೆಗಳಂತೆ ಹಾಗೂ ಕೆಲವೊಂದು ಬಾರಿ ನಿರೀಕ್ಷೆಗೆ ಮೀರಿ ನಿಂತಿರುತ್ತವೆ. ನಮ್ಮ ಪೂರ್ವಜರ ಕಾರ್ಯನಿರ್ವಹಣೆಯು ನಮಗೆ ಬೇಕಂತಿರದಿದ್ದರೂ, ಅಥವಾ ನಮ್ಮ ಸಂದರ್ಭಕ್ಕೆ ಭಿನ್ನವಾಗಿರುವಂತೆ ಕಂಡುಬಂದರೂ ಗತಕಾಲವನ್ನು ಅದರ ಇರುವಿಕೆಯ ರೂಪದಲ್ಲಿಯೇ ಸ್ವೀಕರಿಸಬೇಕಾಗುತ್ತದೆ ಹಾಗೂ ಅವುಗಳನ್ನು ತಿಳಿಯಲು ಮತ್ತು ಅರ್ಥೈಸಿಕೊಳ್ಳಲು ನಾವು ಪ್ರಯತ್ನಿಸಬೇಕಾಗುತ್ತದೆ. ಆದರೆ ನಾವು ಅದಕ್ಕೆ ಅವಶ್ಯವಾಗಿ ಉತ್ತರದಾಯಿಗಳಾಗಬೇಕೆಂದೇನೋ ಇಲ್ಲ. ಈ ದೃಷ್ಟಿಕೋನವು ನಮ್ಮ ಇತಿಹಾಸದೊಂದಿಗೆ ಸಮಂಜಸವಾಗಿ ಮತ್ತು ಅರ್ಥಪೂರ್ಣವಾಗಿ ವ್ಯವಹರಿಸಲು ಸಹಕಾರಿಯಾಗುತ್ತದೆ.[2]

ಚರಿತ್ರೆ ಅಧ್ಯಯನದಲ್ಲಿ ಪ್ರಮುಖವಾಗಿ ಎರಡು ಬಗೆಯ ನಿರೂಪಣೆಗಳು ಕಂಡು ಬರುತ್ತವೆ. ಅವುಗಳೆಂದರೆ ಅಖಂಡ ಮತ್ತು ಸ್ಥಳೀಯ. ಅಖಂಡ ಮಾದರಿಗಳು ವಿಶಾಲವಾಗಿ ಪ್ರಭಾವಶಾಲಿಯಾಗಿದ್ದು, ಸಿದ್ಧ ಮಾದರಿಗಳೊಂದಿಗೆ ಸ್ಥಳೀಯತೆಯನ್ನೂ ಅವರಿಸಿ ಸ್ಥಳೀಯ

ಮಾದರಿಗಳನ್ನು ಪ್ರಭಾವಿಸಿರುವುದರಿಂದ ಸ್ಥಳೀಯ ಮಾದರಿಯೆಂದರೆ ಅಖಂಡ ಮಾದರಿಯ ಸೂಕ್ಷ್ಮರೂಪ ಎಂಬರ್ಥದಲ್ಲಿ ಚರಿತ್ರೆ ವ್ಯಾಖ್ಯಾನಿಸಲ್ಪಟ್ಟಿದೆ.[3] ತುಳುನಾಡಿನ ಚರಿತ್ರೆಯನ್ನು ಈ ದೃಷ್ಟಿಕೋನದಲ್ಲಿ ಪರಿಶೀಲಿಸಿದಾಗ ಅದು ಭಾರತ ಇಲ್ಲವೇ ಕರ್ನಾಟಕದ ಚರಿತ್ರೆಯ ಸಣ್ಣರೂಪ ಇಲ್ಲವೇ ಅಖಂಡತ್ವದ ಸ್ಥಳೀಯ ಮಾದರಿ ಎಂಬುದಾಗಿ ಅರ್ಥೈಸಿಕೊಳ್ಳಬಹುದು.

**ತುಳುನಾಡು, ಚರಿತ್ರೆಯ ರೂಪುರೇಷೆ**

ವಸಾಹತುಶಾಹಿ ಆಡಳಿತ; ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮಗಳ ಅಧ್ಯಯನವನ್ನು ಇದೇ ದೃಷ್ಟಿಕೋನದಲ್ಲಿ ಅರ್ಥೈಸಿಕೊಂಡು ಕೈಗೊಂಡ ಸ್ಥಳೀಯ ಚರಿತ್ರೆಯ ವಿಶ್ಲೇಷಣೆಯಾಗಿದೆ. ಈ ವಿಶ್ಲೇಷಣೆಯು ವಿಶಾಲ ಇತಿಹಾಸದ ಕೆಲವು ಆಯ್ದ ವಸ್ತು ವಿಚಾರಗಳನ್ನು ಕೇಂದ್ರೀಕರಿಸಿ ಮಾಡಲಾಗಿದ್ದು ಅವುಗಳಲ್ಲಿ ತುಳುನಾಡಿನ ಸಮುದಾಯಗಳ ವಾಸ್ತವ್ಯದ ಸ್ವರೂಪ, ಸಮಾಜದ ರಚನೆ, ಭೂಮಿಯನ್ನು ಆಧರಿಸಿದ ಕೃಷಿ, ಕೃಷಿಗೆ ಪೂರಕವಾದ ವೃತ್ತಿ, ಕೃಷಿ ಸಮಾಜವನ್ನು ಪ್ರಭಾವಿಸಿದ ಸಮುದಾಯಗಳು, ಬುಡಕಟ್ಟು-ಸಮುದಾಯ-ಜಾತಿ ನೆಲೆಗಳು, ಮಾತೃ-ಪಿತೃಪ್ರಧಾನತೆ, ಕೃಷಿ ಆಧಾರಿತ ಅಧಿಕಾರ, ಭೂಮಿಯ ಒಡೆತನದ ಯಜಮಾನಿಕೆ, ಸಮುದಾಯಗಳ ಚಲನೆಯ ಹಾಗೂ ವಲಸೆಯಿಂದ ಸಂಕೀರ್ಣಗೊಂಡ ಯಜಮಾನಿಕೆ, ಭೂಒಡೆತನದ ಪಲ್ಲಟ, ಪರಶುರಾಮ ಐತಿಹ್ಯದ ವಾಸ್ತವತೆ, ಬ್ರಾಹ್ಮಣ-ಜೈನ-ಒಕ್ಕಲು ಅವುಗಳ ವಾರಸುದಾರಿಕೆ, ಕೃಷಿ ಅಧಿಕಾರದ ರಚನೆಯಲ್ಲಿ ಸ್ಥಳೀಯ ಪ್ರಭುತ್ವ ರೂಪುಗೊಂಡ ಬಗೆ, ಅವುಗಳನ್ನಾಧರಿಸಿದ ಕಟ್ಟುಕಟ್ಟಳೆಗಳು, ಪೂರ್ವದ ಮರ್ಯಾದೆ, ಸಾಂಸ್ಕೃತಿಕ ಮೌಲ್ಯಗಳು, ವಾರಸುದಾರಿಕೆಯ ಸ್ತರ, ಹೆಣ್ಣು-ಗಂಡು-ಕುಟುಂಬದಿಂದ ಆರಂಭಗೊಂಡು ರಾಜ್ಯದ ವರೆಗಿನ ಪರಿಕಲ್ಪನೆಯ ಬಗ್ಗೆ ವಿಶ್ಲೇಷಿಸಲಾಗಿದೆ. ಮಾತೃವಂಶೀಯ ನೆಲೆಗಟ್ಟು, ಪಿತೃವಂಶೀಯ ನುಸುಳುವಿಕೆಯ ಸಂಘರ್ಷ, ಅಧಿಕಾರದ ಹರಿಯುವಿಕೆ, ಕೌಟುಂಬಿಕ ಯಜಮಾನಿಕೆ, ಗುತ್ತು, ಮಾಗಣೆ, ಸೀಮೆ ಮುಂತಾದ ಸ್ತರಗಳಲ್ಲಿ ಧಾರ್ಮಿಕ ನೆಲೆಗಟ್ಟಿನಲ್ಲಿ ಕೃಷಿಅಧಿಕಾರ ಪಡೆಯುವ ವಿಧಾನಗಳನ್ನು ಚರ್ಚಿಸಲಾಗಿದೆ. ಹೀಗೆ ಒಟ್ಟು ವಸಾಹತುಪೂರ್ವದ ತುಳುನಾಡಿನ ವಾರಸುದಾರಿಕೆಯ ಸಮಗ್ರತೆಯನ್ನು ಬಿಂಬಿಸಲಾಗಿದೆ. ಒಟ್ಟಾರೆಯಾಗಿ ವಸಾಹತುಪೂರ್ವದ ತುಳುನಾಡಿನ ಚರಿತ್ರೆಯು ತನ್ನದೇ ಪ್ರಾದೇಶಿಕ ಹರವುಗಳನ್ನು ಪಡೆದುಕೊಂಡಿದ್ದ ಸಾಂಪ್ರದಾಯಿಕ ಕಟ್ಟುಪಾಡುಗಳು, ಜೀವನಕ್ರಮ, ಹಾಗೂ ಆಡಳಿತ ವ್ಯವಸ್ಥೆಗಳ ನೆಲೆಗಟ್ಟಿನಲ್ಲಿ ರೂಪುಗೊಂಡಿತ್ತು. ದೇಶಿಯ ನಿಲುವುಗಳು ಹಾಗೂ ಪ್ರಯೋಗಗಳು ಆಚರಣೆಯಲ್ಲಿದ್ದು, ತುಳುನಾಡಿನ ವಾರಸುದಾರಿಕೆಯ ಚೌಕಟ್ಟನ್ನು ಹಾಗೂ ನೆಲೆಯನ್ನು ತೀರ್ಮಾನಿಸಿದ್ದವು. ಈ ವ್ಯವಸ್ಥೆ ಪ್ರಾಚೀನ ಭಾರತದ ಕಾಲದಿಂದ ಹರಿದುಬಂದಿದ್ದು ಶತ-

ಶತಮಾನಗಳಲ್ಲಿ ಸಾಂದರ್ಭಿಕ ಬದಲಾವಣೆಗೆ ಒಳಪಟ್ಟು ತಮ್ಮ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿತ್ತು.

ವಸಾಹತುಶಾಹಿ ಆಡಳಿತ ಮತ್ತು ವಸಾಹತುಶಾಹಿಗಳ ಹಸ್ತಕ್ಷೇಪದಿಂದಾಗಿ ತುಳುನಾಡಿನ ಚರಿತ್ರೆಯ ಈ ಸನ್ನಿವೇಶಗಳು ತೀವ್ರ ವಿಮರ್ಶೆ, ಟೀಕೆ, ಆಕ್ರಮಣ, ಅರ್ಥೈಸುವಿಕೆಗೆ ಒಳಗಾಗಿದ್ದು, ವಸಾಹತುಶಾಹೀ ಪ್ರವೇಶ, ಅದರ ರಾಜಕೀಯ ವರಸೆ, ಆರ್ಥಿಕ ನೀತಿ, ಸಾಮಾಜಿಕ ನೀತಿ, ಶಿಕ್ಷಣ, ಸಮಾಜಸೇವೆ, ಮತಪರಿವರ್ತನೆ, ಧಾರ್ಮಿಕ-ಸಾಂಸ್ಕೃತಿಕ ಯಜಮಾನಿಕೆ, ಅಭಿವೃದ್ಧಿ, ಅಧುನೀಕರಣ ಕಲ್ಪನೆ ಮುಂತಾದವುಗಳಿಂದ ಪ್ರಭಾವಿತಗೊಂಡ ವರ್ತಮಾನದ ಬೆಳವಣಿಗೆ ಮುಂತಾದವುಗಳು ಪ್ರಾಮುಖ್ಯವಾಗಿದ್ದು, ಕೂಲಂಕುಷವಾಗಿ ಹಾಗೂ ವಿಮರ್ಶಾತ್ಮಕವಾಗಿ ಅಧ್ಯಯನಿಸುವ ಪ್ರಯತ್ನ ಮಾಡಲಾಗಿದೆ.

ತುಳುನಾಡಿನ ಸಂದರ್ಭದ ವಸಾಹತುಶಾಹಿ ಆಡಳಿತ ತನ್ನ ಆರಂಭಿಕ ಕಾಲಘಟ್ಟದಿಂದಲೇ ಸ್ಥಳೀಯ ರಾಜಕೀಯ ಹಂದರಗಳನ್ನು ಅಮೂಲಾಗ್ರವಾಗಿ ಬದಲಾಯಿಸಲು ಪ್ರಯತ್ನಿಸಿತ್ತಲ್ಲದೇ ಸ್ಥಳಿಯ ವ್ಯವಸ್ಥೆಗಳಿಗೆ ಹೊಸತನದ ರೂಪು ನೀಡುವಲ್ಲಿ ಮಗ್ನವಾಯಿತು. ಜೊತೆಗೆ ಇಲ್ಲಿನ ಸಾಂಸ್ಕೃತಿಕ ಹಾಗೂ ಸಾಮಾಜಿಕ ವ್ಯವಸ್ಥೆಯ ಮೇಲೂ ತನ್ನದೇ ಐತಿಹಾಸಿಕ ಸತ್ಯಗಳನ್ನು ಹೇರಲು ಪ್ರಯತ್ನಿಸಿತು. ವಸಾಹತುಶಾಹಿ ತಾನು ಕಂಡುಕೊಂಡಿದ್ದ ರಾಜಕೀಯ ಸತ್ಯಗಳನ್ನು ಅಭೂತಪೂರ್ವವೆಂದು ಪ್ರತಿಪಾದಿಸಿ, ಪಶ್ಚಿಮದ ಜ್ಞಾನವಾಹಿನಿಯ ಮೂಲಕ ವಸಾಹತಿನ ಪಾರಂಪರಿಕ ಜ್ಞಾನದೊಂದಿಗೆ ಸಂಘರ್ಷ ಹುಟ್ಟುಹಾಕಿತು. ಇತಿಹಾಸ ಬರಹಗಳ ಮೂಲಕ, ಆಳುವ ವರ್ಗಗಳನ್ನು ಆಳ್ವಿಕೆಗೆ ಒಳಗಾಗುವ ವರ್ಗಗಳೊಂದಿಗೆ ಹೋಲಿಸಿ ತನ್ಮೂಲಕ ತುಳುನಾಡಿನಲ್ಲಿ ತನ್ನ ಆಳ್ವಿಕೆಯನ್ನು ಸಮರ್ಥಿಸಿಕೊಂಡು ಅಧಿಕಾರ ಸ್ಥಾಪನೆಗೆ ಅನುಕೂಲ ಮಾಡಿಕೊಂಡಿತು.[4] ಅಧಿಕಾರ ಪಡೆಯುವ ಈ ವ್ಯವಹಾರವು ವಸಾಹತುಶಾಹಿಗಳಿಗೆ ಪೌರ್ವಾತ್ಯ ಸಮಾಜ, ಸಂಸ್ಕೃತಿ ಮತ್ತು ಜನರ ಬಗೆಗಿನ ಜ್ಞಾನವನ್ನು ಪಡೆದುಕೊಳ್ಳಲು ಅನುವು ಮಾಡಿಕೊಟ್ಟಿತು. ಜ್ಞಾನಸಂಪಾದನೆ ಅದರ ಅಧಿಕಾರದ ನೆಲೆಯನ್ನು ಸ್ಥಿರಗೊಳಿಸುವ ಮೌಲ್ಯಯುಕ್ತ ವ್ಯವಸ್ಥೆಯಾಗಿ ಪರಿಣಮಿಸಿ 'ಜ್ಞಾನ' ಸಂಪನ್ಮೂಲವಾಗಿ ವಸಾಹತುಶಾಹೀ ಅಧಿಕಾರವನ್ನು ಏಕಸ್ವಾಮ್ಯಕ್ಕೆ ಒಳಪಡಿಸಿತು. ವಸಾಹತುಶಾಹಿಯ ಜ್ಞಾನದ ಹರವು ವಿಶಾಲಗೊಂಡತೆಲ್ಲ ತುಳುನಾಡಿನ ವಾರಸುದಾರಿಕೆಯ ಮೌಲ್ಯಗಳು ವಿಮರ್ಶೆಗೊಳಪಟ್ಟವು. ಹೀಗೆ ಹತ್ತೊಂಬತ್ತನೆಯ ಶತಮಾನದಲ್ಲಿ ವಸಾಹತುಶಾಹೀ, ಪೌರ್ವಾತ್ಯ ಜ್ಞಾನದೊಂದಿಗೆ ಪಶ್ಚಿಮದ ತಾಂತ್ರಿಕ ಜ್ಞಾನಗಳನ್ನು ಸಮನ್ವಯಗೊಳಿಸಿ ವಸಾಹತುಗಳಲ್ಲಿ ಯುರೋಪಿನ ಸಾಮ್ರಾಜ್ಯಶಾಹೀ ವ್ಯವಸ್ಥೆಯನ್ನು ಕಟ್ಟುವಲ್ಲಿ ಯಶಸ್ಸನ್ನು ಪಡೆದು ಅವುಗಳನ್ನು ಅಧಿಕಾರದ ಉಪಕರಣಗಳನ್ನಾಗಿ ಮಾರ್ಪಾಡಿಸಿತು. ಇದು ತುಳುನಾಡಿನಲ್ಲಿ ಘಟಿಸಿ ಸ್ಥಳೀಯ ವ್ಯವಸ್ಥೆಗಳಿಗೆ ನೂತನ ಚರಿತ್ರೆ

ಬರೆಯಲು ಬಾಗಿಲು ತೆರೆಯಿತು. ಇದರ ಒಂದು ಭಾಗವಾಗಿ ವಸಾಹತುಪೂರ್ವದ ತುಳುನಾಡಿನ ವರ್ಗಪ್ರಾಬಲ್ಯ ಹಾಗೂ ಪರಂಪರಾಗತ ಅಧಿಕಾರ ಶ್ರೇಣಿಯ ತತ್ವದಡಿಯಲ್ಲಿ ರೂಪಿತಗೊಂಡಿದ್ದು, ವಸಾಹತುಶಾಹಿಯ ಕಾಲದಲ್ಲಿ ಅವುಗಳು ಪುನರ್‌ರೂಪಿಸಲ್ಪಟ್ಟು ವಸಾಹತುಶಾಹಿ ಆಡಳಿತದ ಉಪಕರಣಗಳಾಗಿ ಅಥವಾ ಅದರ ಮುಂದುವರಿಕೆಯನ್ನು ಸಮರ್ಥಿಸುವ ವ್ಯವಸ್ಥೆಗಳಾಗಿ ಮಾರ್ಪಾಡುಗೊಂಡವು.

ವಸಾಹತುಶಾಹಿ ವ್ಯವಸ್ಥೆಯಡಿಯಲ್ಲಿ ತುಳುನಾಡಿನಲ್ಲಾದ ಬದಲಾವಣೆಗಳು ಚಲನೆಗಳು ಅಪರೂಪದ್ದೇನಲ್ಲ. ಅಂಟೋನಿಯೋ ಗ್ರಾಮ್ಷಿಯ ಪ್ರಕಾರ ಒಂದು ವರ್ಗದ ಪ್ರಾಬಲ್ಯವನ್ನು ಕೊನೆಗೊಳಿಸಿ ಹೊಸ ಆಳುವ ವರ್ಗ ಉಚ್ಛ್ರಾಯಕ್ಕೆ ಬರುವಾಗ, ಹಳೆಯ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ಣಾಯಕ ಬದಲಾವಣೆಗಳಾಗುತ್ತವೆ. ಆದರೆ ಹೊಸ ಆಳುವ ವರ್ಗಗಳು ಹಳೆಯ ವ್ಯವಸ್ಥೇಯನ್ನೇನೂ ಸಂಪೂರ್ಣವಾಗಿ ನಾಶಪಡಿಸುವುದಿಲ್ಲ. ಮೇಲ್ನೋಟಕ್ಕೆ ನಿಷ್ಪಕ್ಷಪಾತಿಯಾಗಿ ಕಾಣುವ ಮತ್ತು ಜನರ ವಿಶ್ವಾಸ ಗಳಿಸಿಕೊಂಡಿರುವ ಹಳೆಯ ವ್ಯವಸ್ಥೆಗಳಲ್ಲಿನ ಕೆಲವು ಸಂಸ್ಥೆ ಹಾಗೂ ಅವುಗಳ ನೈತಿಕ ಮೌಲ್ಯಗಳನ್ನು ಹೊಸ ಆಳುವ ವರ್ಗಗಳು ಜತನದಿಂದ ಪೋಷಿಸುತ್ತವೆ.[5] ಈ ದೃಷ್ಟಿಕೋನದಲ್ಲಿ ತುಳುನಾಡಿನ ವಿಭಿನ್ನ ಆಯಾಮಗಳನ್ನು ವಿಶ್ಲೇಷಿಸಿದಾಗ ವಸಾಹತುಪೂರ್ವದಲ್ಲಿ ಆಳರಸರು, ಜಮೀನುದಾರರು, ಕೆಲವು ಬಲಿಷ್ಠ ಸಮುದಾಯಗಳು ಕೃಷಿ ಅಧಿಕಾರ ರಚನೆಯಲ್ಲಿ ಆಳ್ವಿಕೆಗೆ ಪೂರಕವಾದ ಧಾರ್ಮಿಕ ನೆಲೆಗಟ್ಟಿನ ಸಾಂಸ್ಕೃತಿಕ ಮೌಲ್ಯಗಳನ್ನು ಪೋಷಿಸಿ ರಾಜಕೀಯ ಅಧಿಕಾರಕ್ಕೆ ದೈವಿಕ ರಕ್ಷಾಕವಚವನ್ನು ನೀಡಿದ ಕಾರ್ಯಯೋಜನೆಗಳು ಸ್ಪಷ್ಟ. ತನ್ಮೂಲಕ ಅವರು ಆರ್ಥಿಕ-ಸಾಂಸ್ಕೃತಿಕ ಮತ್ತು ಸಾಮಾಜಿಕ ಅಧಿಕಾರೀ ವ್ಯವಸ್ಥೆಗಳ ಯಾಜಮಾನ್ಯ ವಹಿಸಿರುವುದು ಸ್ಪಷ್ಟ. ಆದರೆ ವಸಾಹತುಶಾಹಿ ವ್ಯವಸ್ಥೆಯಡಿ ಈ ಚಿಂತನೆಗಳು ತಮ್ಮ ಮೂಲಸ್ವರೂಪದಲ್ಲಿ ಬದಲಾವಣೆಗೊಂಡು ಕೇವಲ ಸಾಂಕೇತಿಕ ಅಧಿಕಾರದ ಪಳಿಯುಳಿಕೆಗಳಾಗಿ ಮುಂದುವರೆದವು ಇಲ್ಲವೇ ನೇಪಥ್ಯಕ್ಕೆ ಸರಿದವು. ವಸಾಹತುಶಾಹೀ ಕಾಲದಲ್ಲಿ ದೇಶಿಯ ವ್ಯವಸ್ಥೆಗಳಲ್ಲಿ ಎರಡು ಪ್ರಮುಖ ಬೆಳವಣಿಗೆಗಳು ದಾಖಲಾದವು. ಒಂದು, ತಮ್ಮ ಆಡಳಿತದ ಮುಂದುವರಿಯುವಿಕೆಗೆ ತೊಡಕಾಗುವ ಅಥವಾ ಪ್ರಶ್ನಿಸುವ ವ್ಯವಸ್ಥೆಗಳನ್ನು ನಾಶಪಡಿಸಿ ಹೊಸ ವ್ಯವಸ್ಥೆಯೊಂದನ್ನು ದೇಶಿಯರಿಗೆ ಪರಿಚಯಿಸುವುದು. ಮತ್ತು ಎರಡನೆಯದಾಗಿ ಈ ಬಗೆಯ ನಾಶಗೊಳಿಸುವ ಅಗತ್ಯತೆ ಕಂಡು ಬರದ ಕಡೆ ಪಾರಂಪರಿಕ ಅಧಿಕಾರೀ ನೆಲೆಗಳನ್ನು ವಸಾಹತುಶಾಹೀ ಸಹಯೋಗದ ಮೂಲಕ ಹಂತ ಹಂತವಾಗಿ ಸ್ಥಳೀಯ ಸರಕಾರದಲ್ಲಿ ಇಲ್ಲವೇ ಆಡಳಿತದಲ್ಲಿ ಪಾಲುದಾರರನ್ನಾಗಿಸಿ ಮುಂದುವರೆಸಿರುವುದು. ಉದಾಹರಣೆಗೆ ವಸಾಹತುಪೂರ್ವದ ಪಾರಂಪರಿಕ ನೌಕರಶಾಹಿಯ ಸಮರ್ಥ, ವಿಧೇಯರಾಗಿದ್ದವರನ್ನು ಕಂದಾಯ ನಿಗದಿ ಮತ್ತು ಸಂಗ್ರಹಣೆಗೆ

ನಿಯೋಜಿಸಿರುವುದು. ಜೊತೆಗೆ ಮಾತೃಪ್ರಧಾನವಾಗಿದ್ದ ವ್ಯವಸ್ಥೆಗಳಲ್ಲಿ ಅದರಲ್ಲೂ ಮುಖ್ಯವಾಗಿ ಹೆಂಗಸರು ಕುಟುಂಬದ ವ್ಯವಹಾರಕ್ಕಿಂತ ಭಿನ್ನವಾಗಿದ್ದ ಹೊರಜಗತ್ತಿನ ವ್ಯವಹಾರಗಳನ್ನು ನಿಭಾಯಿಸಲು ಅಸಮರ್ಥರು ಎಂಬತಹ ಲಿಂಗಭೇದದ ಚಿಂತನೆಯನ್ನು ಮುಂದಿರಿಸಿ ಪಿತೃಪ್ರಧಾನ ವ್ಯವಸ್ಥೆಯನ್ನು ಸದ್ದಿಲ್ಲದೇ ಹೇರಿಕೆ ಮಾಡಿರುವುದು.[6] ವಸಾಹತುಶಾಹೀ ತುಳುನಾಡಿನಲ್ಲಿ ತಾರತಮ್ಯವನ್ನು ಭದ್ರವಾಗಿ ಇಡುವ ಈ ನಮೂನೆಯ ಮೌಲ್ಯ ಹಾಗೂ ಹೊಸ ಬಗೆಯ ನೀತಿಯನ್ನು ಸಮರ್ಥಿಸಿಕೊಂಡಿತ್ತಲ್ಲದೇ ವಸಾಹತುಶಾಹಿಯ ಸಾಂಸ್ಥಿಕ ಮತ್ತು ನೈತಿಕ ನೆಲೆಗಳಿಗೆ ರಕ್ಷಾ ಕವಚವನ್ನಾಗಿ ಬಳಸಿಕೊಂಡಿತು. ಹೀಗೆ ತನ್ನ ಅಧಿಕಾರೀ ನೆಲೆಯನ್ನು ಭದ್ರಪಡಿಸಿ ಆಳುವ ವರ್ಗಕ್ಕೆ ಅಧಿಕಾರ ಪ್ರಾಪ್ತವಾಗಿಸುವುದರ ಜೊತೆಗೆ ಸ್ಥಿತಿಯನ್ನು ಸಂಪೂರ್ಣವಾಗಿ ಬದಲಾಯಿಸಿ ಜನಮನ್ನಣೆಯ ಅಧಿಕಾರ ಸ್ಥಾಪನೆಗೆ ಅನುಕೂಲ ಮಾಡಿಕೊಟ್ಟಿತು.

ಹೀಗೆ ಹೊಸ ಆಡಳಿತ, ಹಳೇ ವ್ಯವಸ್ಥೆಯನ್ನು ಭಾಗಶಃ ಬದಲಾಯಿಸಿ ಆ ಅಧಿಕಾರ ರಚನೆಯಲ್ಲಿ ತನಗೆ ಅಗ್ರಸ್ಥಾನ ಕಲ್ಪಿಸಿಕೊಂಡಿತು. ಹಳೆಯ ಯಜಮಾನಿಕೆಯ ಮೌಲ್ಯಗಳನ್ನು ಜೀರ್ಣಿಸಿಕೊಂಡು ಆಳುವ ವರ್ಗವಾಗಿ ರೂಪುಗೊಂಡ ಹೊಸವರ್ಗವು, ತನ್ನ ಉತ್ಪಾದನ ವ್ಯವಸ್ಥೆಗೆ ಸರಿಹೊಂದುವ ತನ್ನದೇ ಆದ ಮೌಲ್ಯಗಳನ್ನು ಸೃಷ್ಟಿಸಿಕೊಂಡಿತು. ಉದಾಹರಣೆಗೆ ವಸಾಹತುಶಾಹೀ ಸೃಷ್ಟಿಸಿದ ಶಿಕ್ಷಣಸಂಸ್ಥೆಗಳು ವಸಾಹತಿನಲ್ಲಿ ಭೌತಿಕ ಉತ್ಪಾದನೆಗೆ ಬೇಕಾದ ಕಸುಬುಗಳೊಂದಿಗೆ, ಆಳುವ ವರ್ಗದ ಮೌಲ್ಯ ಹಾಗೂ ಧಾರ್ಮಿಕ ಪರಿಕಲ್ಪನೆಗಳನ್ನು ಪರಿಚಯಿಸಿರುವುದು. ಅಂತೆಯೇ ವಸಾಹತುಶಾಹೀ ಮತ್ತದರ ಏಜೆನ್ಸಿಗಳು ಪ್ರಾರಂಭಿಸಿದ ಆರೋಗ್ಯ ಕೇಂದ್ರಗಳು ಸಮಾಜಸೇವೆಯನ್ನು ಕೈಗೊಳ್ಳುವುದರ ಜೊತೆಗೆ ಆಳುವ ವರ್ಗದ ಲೋಕದೃಷ್ಟಿಯನ್ನು ರೂಢಿಸಿ ಪ್ರತಿಪಾದಿಸುವ ತಾಣಗಳಾಗಿ ಬಿಂಬಿಸುವಲ್ಲಿ ಯಶಸ್ಸನ್ನು ಪಡೆದಿರುವ ಉದಾಹರಣೆಗಳು ಸಾಕಷ್ಟಿವೆ.[7] ಮಂಗಳೂರಿನ ವೆನ್ಲಾಕ್ ಆಸ್ಪತ್ರೆ, ಮತಪ್ರಚಾರಕರ ಆಡಳಿತದಡಿಯಲ್ಲಿ ಸೇವೆಯ ಹೆಸರಿನಲ್ಲಿ ಪ್ರಾರಂಭಗೊಂಡ ಆರೋಗ್ಯಕೇಂದ್ರಗಳು, ಟಿಶ್ಯೂ ಮೆಡಿಸಿನ್‌ನ ಪರಿಕಲ್ಪನೆ, ಕಮ್ಯೂನಿಟಿ ಹೆಲ್ತ್ ಎಂಡ್ ಔಟ್‌ರೀಚ್ ಕಾರ್ಯಕ್ರಮಗಳು ವಸಾಹತುಶಾಹಿಯ ಫಲೋತ್ಪಾಧಕ ಮತ್ತು ಪಶ್ಚಿಮದ ವೈದ್ಯಪದ್ಧತಿ ಹಾಗೂ ಆರೋಗ್ಯ ಸೇವೆಗಳ ಪ್ರಭುತ್ವಕಾರಕ ಕೇಂದ್ರವಾಗಿ ಗೋಚರಿಸಿತು.[8] ಇದರಿಂದಾಗಿ ಪಾರಂಪರಿಕವಾಗಿ ವೈದ್ಯವೃತ್ತಿ ನಿರ್ವಹಿಸುತ್ತಿದ್ದ ಬುಡಕಟ್ಟುಗಳು, ಸಮುದಾಯಗಳು ನೆಲೆ ಕಳೆದುಕೊಂಡು ದೂರಗಾಮಿ ನೆಲೆಯಲ್ಲಿ ಇಲ್ಲಿನ ಪರಂಪರಾಗತ ವೈದ್ಯಪದ್ಧತಿಗಳು ನೇಪಥ್ಯಕ್ಕೆ ಸರಿಯಲ್ಪಟ್ಟವು. ಹೀಗೆ ತುಳುನಾಡಿನ ಹಲವಾರು ವ್ಯವಸ್ಥೆಗಳಲ್ಲಿನ ವಾರಸುದಾರಿಕೆಯ ಕಲ್ಪನೆಗಳು ವಸಾಹತುಶಾಹೀ ಆಡಳಿತಕ್ಕೆ ಅನುಕೂಲವಾಗುವ ಇಲ್ಲವೇ ಬದಲಾಗುವ ರೀತಿಯಲ್ಲಿ

ಮಾರ್ಪಡುಗೊಂಡವು. ಈ ಮಾರ್ಪಡುವಿಕೆಯ ಆರಂಭಿಕ ಪ್ರಕ್ರಿಯೆಯಲ್ಲಿ ಸಾಂದರ್ಭಿಕವಾಗಿ ಬಲಪ್ರಯೋಗ ಇಲ್ಲವೇ ತೋಳ್ಬಲದ ಪ್ರಯೋಗ ಸರ್ವೇಸಾಮಾನ್ಯವಾಗಿತ್ತು. ಅಧಿಕಾರವನ್ನು ವ್ಯವಸ್ಥಿತವಾಗಿ ಪ್ರಾಪ್ತಿ ಮಾಡಿಕೊಂಡ ನಂತರದಲ್ಲಿ ಜನಸಮ್ಮತಿಯ ಆಳ್ವಿಕೆಯ ಪ್ರಾರಂಭಕ್ಕೆ ಮುಂದಡಿಯಿಟ್ಟವು. ಈ ಎರಡು ನಮೂನೆಯ ಅಧಿಕಾರಗಳು ಮೇಳೈಸಿ ವಸಾಹತುಶಾಹಿ ಆಳುವ ವರ್ಗವಾಗಿ ರೂಪುಗೊಂಡು ತುಳುವ ಸಮಾಜದಲ್ಲಿ ಯಜಮಾನಿಕೆಯನ್ನು ತನ್ನಾಗಿಸಿತ್ತಲ್ಲದೇ ತನ್ನ ಪರಂಪರೆ ಮುಂದುವರಿಯವಲ್ಲಿ ಭದ್ರ ಬುನಾದಿಯನ್ನು ಸ್ಥಾಪಿಸಿಕೊಂಡಿತು.[9]

## ಅಧ್ಯಯನದ ಪ್ರಾಮುಖ್ಯತೆ

ಸುದೀರ್ಘ ಪರಂಪರೆಯನ್ನು ಹೊಂದಿರುವ ತುಳುನಾಡಿನ ಚರಿತ್ರೆ, ಸಂಸ್ಕೃತಿಗೆ ಸಂಬಂಧಿಸಿದ ಮಾನ್ಯತೆಗೊಂಡ ಅಧ್ಯಯನಗಳು ಮಾಡಲ್ಪಟ್ಟಿರುವುದು ಬಹಳಷ್ಟು ವಿರಳ. ತುಳುನಾಡಿನ ವಾರಸುದಾರಿಕೆಯ ಮೂಲ ಮತ್ತು ಬದಲಾವಣೆಯ ಪ್ರಕ್ರಿಯೆಗಳ ಬಗ್ಗೆ ಬೆಳಕು ಚೆಲ್ಲಿ ತುಳುನಾಡಿನ ವ್ಯವಸ್ಥೆಯನ್ನು ತಿಳಿಯಬೇಕಾದರೆ ಇಂತಹದೊಂದು ವಿಮರ್ಶಾತ್ಮಕ ಅಧ್ಯಯನ ಅನಿವಾರ್ಯ. ತುಳುನಾಡಿನ ವಾರಸುದಾರಿಕೆಯ ಆಯಾಮಗಳ ದೃಷ್ಟಿಯಿಂದ ಮಾಡಲ್ಪಟ್ಟ ಈ ಅಧ್ಯಯನವು ಆ ದೃಷ್ಟಿಕೋನದಿಂದ ಮುಖ್ಯವಾಗಿದ್ದು ಒಂದು ಪ್ರಯತ್ನವಾಗಿದೆ. ಆದಾಗ್ಯೂ ತುಳುನಾಡಿನ ಚರಿತ್ರೆಗೆ ಸಂಬಂಧಿಸಿದಂತೆ ಹಲವು ಮೂಲ ಆಕರಗಳು ಕಾಣಸಿಗುತ್ತವೆ. ತುಳುನಾಡು ವಿಭಿನ್ನವಾದ ಚರಿತ್ರೆ ಮತ್ತು ಪರಂಪರೆಯ ಕೇಂದ್ರವಾಗಿದ್ದು ಅದರ ವಿಶಿಷ್ಟತೆಯ ಕಲ್ಪನೆ ವಿದೇಶಿ ಪ್ರವಾಸಿಗರನ್ನು ಹಾಗೂ ಇತಿಹಾಸದ ಕುತೂಹಲಿಗಳನ್ನು ಆಕರ್ಷಿಸಿದ್ದರೂ ಈ ಪ್ರದೇಶದ ಚರಿತ್ರೆ ಪ್ರಪಂಚಕ್ಕೆ ಹೆಚ್ಚು ಬಿಂಬಿತವಾಗಿಲ್ಲ. ಭಾರತದ ಇತರ ಪ್ರಾಂತ್ಯಗಳಂತೆ ಪಾರಂಪರಿಕ ಇತಿಹಾಸ ಬರವಣಿಗೆಗಳಲ್ಲಿ ತುಳುನಾಡು ವಿವರಿಸಲ್ಪಟ್ಟಿದೆ. ಉದಾಹರಣೆಗೆ ಸಂಸ್ಕೃತ ಲಿಪಿಯಲ್ಲಿ ಲಿಖಿತಗೊಂಡ ಸಹ್ಯಾದ್ರಿಖಂಡ, ಸ್ಕಂದ ಪುರಾಣ, ಕ್ಷೇತ್ರಮಹಾತ್ಮೆ, ಗ್ರಾಮಪದ್ಧತಿ ಮುಂತಾದ ಸಾಂಪ್ರದಾಯಿಕ ಚರಿತ್ರೆಗಳಲ್ಲಿ ತುಳುನಾಡು ವಿವರಿಸಲ್ಪಟ್ಟಿದ್ದು, ಮೌಖಿಕ ಆಕರಗಳಾದ ಪಾಡ್ದನ, ಐತಿಹ್ಯ, ಸಂಧಿ, ಗಾದೆ, ಜನಪದ ಸಾಹಿತ್ಯ ಮುಂತಾದವುಗಳ ಶ್ರೀಮಂತ ಸಾಹಿತ್ಯಕೃಷಿಯಿಂದ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿತು.

18ನೇ ಶತಮಾನದ ಕೊನೆಯ ಭಾಗದಲ್ಲಿ ತುಳುನಾಡು ವಸಾಹತುಶಾಹಿಗಳ ನೇರ ಪ್ರಭಾವಕ್ಕೆ ಒಳಗಾದಾಗ ಚರಿತ್ರಾ ಬರವಣಿಗೆಯ ಒಘದಲ್ಲಿ ಮಹತ್ವದ ಬದಲಾವಣೆ ಕಂಡುಬಂತು. ಸಾಹಿತ್ಯಿಕ ಇಲ್ಲವೇ ಭಾಷೆಯ ಆಡಚಣೆಯಿದ್ದರೂ ಈ ಪ್ರದೇಶದ ಇತಿಹಾಸ ರಚನೆಗೆ ಸಂಬಂಧಿಸಿದ ಕ್ರಮಬದ್ಧವಾದ ಸಂಶೋಧನೆ ಹಾಗೂ ಅಧ್ಯಯನ ಪ್ರಾರಂಭವಾಗಿರುವುದು ವಸಾಹತುಶಾಹಿಯ ಕಾಲಘಟ್ಟದಲ್ಲಿ ಎಂಬುವುದು ಗಮನಾರ್ಹ ವಿಷಯ.

ವಸಾಹತುಶಾಹೀ ಸರಕಾರ ತನ್ನ ಅಗತ್ಯತೆಗಳಿಗೆ ಅನುಗುಣವಾಗಿ ಇಲ್ಲಿನ ಪ್ರದೇಶದ ಮೇಲೆ ದೀರ್ಘ ಆಡಳಿತ ನಡೆಸುವ ಅಭಿಲಾಷೆಗಳನ್ನು ಇಟ್ಟುಕೊಂಡು ತುಳುನಾಡಿನ ಚರಿತ್ರೆಯನ್ನು ತನಗೆ ಅನುಕೂಲಿಸುವಂತೆ ರಚಿಸಿಕೊಂಡಿತು. ಇದು ಸಾಮ್ರಾಜ್ಯದ ಉಪಕರಣವಾಗಿ ತನ್ನ ಅಗತ್ಯತೆಯನ್ನು ಪೂರೈಸಿಕೊಳ್ಳುವಲ್ಲಿ ಅನುಕೂಲ ಮಾಡಿಕೊಟ್ಟಿತ್ತು. ತುಳುನಾಡಿನ ಚರಿತ್ರೆ ಹೇಗಾಯಿತೆಂದರೆ ವಸಾಹತುಶಾಹಿಗಳಿಗಾಗಿ 'ಏ ಸೆಕ್ಯೂರ್ ಅಂಡ್ ಯೂಸೇಬಲ್ ಪಾಸ್ಟ್'ನ ರೂಪ ಪಡೆದುಕೊಂಡಿತು.[10] ತುಳುನಾಡಿನ ಗತಕಾಲದ ಬರವಣಿಗೆಗಳು ವಸಾಹತುಶಾಹಿ ಆಡಳಿತವನ್ನು ನ್ಯಾಯಬದ್ಧಗೊಳಿಸುವ ಸಾಧನಗಳಾಗಿ ಪರಿವರ್ತಿತಗೊಂಡು ಅದರ ಅಧಿಕಾರಕ್ಕೆ ಮಾನ್ಯತೆ ನೀಡಿ ಪ್ರಭುತ್ವ ನಿರ್ಮಾಣ ಮಾಡುವಂತಹ ಪರಿಸರವನ್ನು ರೂಪಿಸುವ ಪರಿಕರಗಳಾದವು. ತುಳುನಾಡಿಗೆ ಸಂಬಂಧಿಸಿದ ಜಾನ್‌ಸ್ಟೋಕನ ವರದಿಗಳು ಕಂಪನಿ ಆಡಳಿತಕ್ಕೆ ಅನುಕೂಲವಾಗುವಂತಹ ಭೂಮಿಕೆ ಒದಗಿಸಿಕೊಟ್ಟಿತ್ತಲ್ಲದೇ ಇಲ್ಲಿನ ನ್ಯಾಯಿಕ ವ್ಯವಸ್ಥೆ, ಉತ್ತಾರಾಧಿಕಾರತ್ವದ ಮಾದರಿಗಳು, ಸಾಮಾಜಿಕ ಸಂಸ್ಥೆಗಳು, ಧಾರ್ಮಿಕ ಪದ್ಧತಿ ಮುಂತಾದವುಗಳು ತಕ್ಷಣಕ್ಕೆ ಅನುಕೂಲವಾಗುವ ರೀತಿಯಲ್ಲಿ ದಾಖಲಿಸಲ್ಪಟ್ಟು ವಿಶ್ಲೇಷಣೆಗೊಳಗಾದವು.

ಭಾರತ ವಿದ್ಯಾವಿದರ ಜರೂರಿನ ಓದುಗಳು ಹಾಗೂ ಭಾಷೆ, ಸಂಸ್ಕೃತಿ, ಆಚಾರವಿಚಾರ, ನಾಡು-ನುಡಿ ಮುಂತಾದವುಗಳ ಬಗ್ಗೆ ಅಧ್ಯಯನಿಸಿದ ಯುರೋಪಿನ ಪ್ರವಾಸಿ ಬರಹಗಾರರ ಕೊಡುಗೆಗಳು ರಾಜಕೀಯ ಕಾರ್ಯಕ್ರಮಗಳ ಭಾಗವಾಗಿದ್ದರೂ ತುಳುನಾಡಿನ ಚರಿತ್ರೆಯ ಹಲವಾರು ಮಗ್ಗುಲುಗಳನ್ನು ಪರಿಚಯಿಸಿದವು.[11] 19ನೇ ಶತಮಾನದ ನಾಲ್ಕನೇ ದಶಕದಲ್ಲಿ ಸಕ್ರಿಯಗೊಂಡ ಬಾಸೆಲ್ ಮಿಷನ್‌ನ ಅನುಯಾಯಿಗಳು ಮತ್ತು ವಸಾಹತುಶಾಹಿಯ ಮಿಷನರಿ ಪ್ರತಿಪಾದಕರು, ಆಡಳಿತದಲ್ಲಿ ಭಾಗಿಯಾದ ವಸಾಹತುಶಾಹೀ ಅಧಿಕಾರಿಗಳು ಕ್ರೈಸ್ತನ ಧರ್ಮವನ್ನು ಪ್ರಚಾರ ಮಾಡುವ ಉದ್ದೇಶದಿಂದ ತುಳುನಾಡಿನ ಭಾಷೆ, ವ್ಯಾಕರಣ, ಪದಕೋಶ, ಸ್ಥಳೀಯ ಧರ್ಮ, ರೂಢಿ-ಸಂಪ್ರದಾಯ, ಆಚಾರ, ವಿಚಾರ, ಮೌಖಿಕ ಚರಿತ್ರೆ ಮುಂತಾದವುಗಳ ಬಗ್ಗೆ ಆಸ್ಥೆ ವಹಿಸಿ ಅಧ್ಯಯನಗಳನ್ನು ಕೈಗೊಂಡರು.[12] ಇದರ ಭಾಗವಾಗಿ ಜಾನ್ ಸ್ಟರಕ್, ಸ್ಟೂವರ್ಟ್ ಮಿಲ್ಲನ ಗಜೇಟಿಯರ್‌ಗಳು, ಜಿಲ್ಲಾಡಳಿತದ ಸಮಯಾಧಾರಿತ ವರದಿಗಳು ತುಳುನಾಡಿನ ಚರಿತ್ರೆಗೆ ಹೊಸ ಭಾಷ್ಯವನ್ನು ಬರೆದವಲ್ಲದೇ ಚರಿತ್ರೆಯ ಬರವಣಿಗೆಗೆ ಹೊಸ ಆಯಾಮಗಳನ್ನು ಒದಗಿಸಿದವು. ಬೆಂಜಮಿನ್ ರೈಸ್ ಹಾಗೂ ಜಾನ್‌ಫ್ಲೀಟ್‌ರ ಶಾಸನಗಳ ಅಧ್ಯಯನ, ಮಾನವಶಾಸ್ತ್ರಜ್ಞರುಗಳ ಸಮುದಾಯ, ಜಾತಿ ಇತ್ಯಾದಿಗಳ ವಿಶ್ಲೇಷಣೆ ತುಳುನಾಡಿನ ಚರಿತ್ರೆಯ ಹಲವಾರು ಮಗ್ಗುಲುಗಳನ್ನು ಅನಾವರಣಗೊಳಿಸಿದವು. ಹೀಗೆ ಇಪ್ಪತ್ತನೆಯ

ಶತಮಾನದ ಆರಂಭದಲ್ಲಿ ಪಶ್ಚಿಮದ ದೃಷ್ಟಿಕೋನ ಹಾಗೂ ನೆಲೆಗಟ್ಟಿನಲ್ಲಿ ತುಳುನಾಡಿನ ಇತಿಹಾಸದ ಕ್ರಮಬದ್ಧವಾದ ಸಂಶೋಧನೆ ಹಾಗೂ ಅಧ್ಯಯನಕ್ಕೆ ಮುನ್ನುಡಿ ಬರೆಯಲಾಯಿತು.

**ಈ ವರೆಗಿನ ಅಧ್ಯಯನದ ಸಮೀಕ್ಷೆ.**

ಇಪ್ಪತ್ತನೆಯ ಶತಮಾನದ ಮೊದಲ ಮೂರು ದಶಕಗಳಲ್ಲಿ ತುಳುನಾಡಿನ ಇತಿಹಾಸದ ಸಂಶೋಧನೆ ಹಾಗೂ ಅಧ್ಯಯನದ ಮೂಲಕ ಇತಿಹಾಸ ರಚನೆಗೆ ಅಸ್ತಿಭಾರವನ್ನು ಹಾಕಿದವರಲ್ಲಿ ಪೊಳಲಿ ಶೀನಪ್ಪ ಹೆಗ್ಡೆ, ಮಂಜೇಶ್ವರ ಗಣಪತಿರಾವ್ ಐಗಳ್, ಮಂಜೇಶ್ವರ ಗೋವಿಂದ ಪೈ, ಭಾಸ್ಕರ ಆನಂದ ಸಾಲೆತ್ತೂರ್, ಕಾರ್ಕಳ ಕೇಶವಕೃಷ್ಣ ಕುಡ್ವ ಮುಂತಾದವರು ಅಗ್ರಮಾನ್ಯರು. ಪೊಳಲಿ ಶೀನಪ್ಪ ಹೆಗ್ಡೆಯವರ 'ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯಕಟ್ಟು' ಪಾಶ್ಚಾತ್ಯ ಮಾಪನದಡಿ ಪರಿಪೂರ್ಣ ಇತಿಹಾಸ ಗ್ರಂಥ ಎಂದು ಪರಿಗಣಿಸಲು ಸಾಧ್ಯವಿಲ್ಲವಾದರೂ ತುಳುವರ ಜೀವನಕ್ಕೆ ಸಂಬಂಧಿಸಿದ ಹಲವಾರು ವಿಚಾರಗಳನ್ನು ಒಳಗೊಂಡ ಸಮಗ್ರ ಬರವಣಿಗೆ ಎಂಬುವುದರಲ್ಲಿ ಸಂದೇಹವಿಲ್ಲ. ಅವರ ಇನ್ನು ಕೆಲವು ಸಂಶೋಧನೆಗಳು ಶ್ರೀಮಂತವಾಗಿದ್ದು ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತಿಹಾಸಾಧ್ಯಯನದ ದೃಷ್ಟಿಯಿಂದ ಮಹತ್ವದ ಹೆಜ್ಜೆಗಳೆಂದು ಪರಿಗಣಿಸಬಹುದು. ಮಂಜೇಶ್ವರ ಗಣಪತಿರಾವ್ ಐಗಳ್‌ರವರ 'ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಸ್ಥಳಪುರಾಣ ಮುಂತಾದವುಗಳ ಅಧುನಿಕ ಸಂಶೋಧನಾ ವಿಧಾನಕ್ಕೆ ನಿಕಟವಾಗಿದ್ದು ಕಾರ್ಯಕ್ಷೇತ್ರದ ದಾಖಲೆಗಳ ನೆರವಿನೊಂದಿಗೆ ಮಾಡಲ್ಪಟ್ಟ ಅಧ್ಯಯನವಾಗಿದೆ. ಅವರನ್ನು ತುಳುನಾಡಿನ ಇತಿಹಾಸ ರಚನೆಗೆ ಹೊಸ ಆಯಾಮವನ್ನಿತ್ತ ವಿದ್ವಾಂಸರೆಂದು ಪರಿಗಣಿಸಬಹುದಾದರೂ ಅವರ ಅಧ್ಯಯನಗಳು ವಿಮರ್ಶಾತ್ಮಕ ದೃಷ್ಟಿಕೋನದಿಂದ ವಂಚಿತವಾಗಿದೆ. ಅವರ ಮಹತ್ವದ ಕೊಡುಗೆ ಈ ಪ್ರದೇಶದ ಸ್ಥಳೀಕ ಅರಸು ಮನೆತನಗಳಿಗೆ ಸಂಬಂಧಿಸಿದ ಸಂಶೋಧನೆ. ಈ ಮೂಲಕ ಸ್ಥಳೀಯ ಇತಿಹಾಸದ ಅಧ್ಯಯನಕ್ಕೆ ಮಹತ್ವ ನೀಡಿದವರ ಸಾಲಿಗೆ ಸೇರ್ಪಡೆಗೊಂಡಿದ್ದಾರೆ. ಮಂಜೇಶ್ವರ ಗೋವಿಂದ ಪೈಗಳು ಚರಿತ್ರಾಕಾರರಲ್ಲದಿದ್ದರೂ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿ ಹಲವಾರು ಲೇಖನಗಳನ್ನು ಪ್ರಕಟಿಸಿದ್ದಾರೆ. ತುಳುನಾಡಿನ ಇತಿಹಾಸದ ಬಗೆಗಿನ ಅದಮ್ಯ ಕುತೂಹಲ ಹಾಗೂ ತೀವ್ರ ಸಂಶೋಧನಾಸಕ್ತಿಯನ್ನು ಹೊಂದಿದ್ದ ಹಾಗೂ ಸ್ವಾತಂತ್ರ ಸಂಗ್ರಾಮದ ಪರಾಕಾಷ್ಠೆಯ ಸಂದರ್ಭದಲ್ಲಿ ಇತಿಹಾಸದ ರಚನೆಗೆ ವೃತ್ತಿಪರವಾಗಿ ತೊಡಗಿಸಿಕೊಂಡಿದ್ದ ಭಾಸ್ಕರ ಆನಂದ ಸಾಲೆತ್ತೂರ್‌ರವರು ಈ ಪ್ರದೇಶದ ಚರಿತ್ರೆಯ ಬರವಣಿಗೆಗೆ ಕೊಡುಗೆ ನೀಡಿದವರಲ್ಲಿ ಪ್ರಮುಖರು. ದೇಶದ ಗತವೈಭವ ವಸಾಹತುಶಾಹೀ ಕಾಲದಲ್ಲಿ ಕಳಾಹೀನವಾಗದಂತೆ ನೋಡಿಕೊಂಡ ಇವರು ಇಲ್ಲಿನ ರಾಜಕೀಯ ಚಿಂತನೆಯನ್ನು ಸಮಕಾಲೀನ ಪ್ರಸ್ತುತಗೊಳಿಸಲು ತಮ್ಮ ಸಂಶೋಧನೆಗಳ ಮೂಲಕ ಪ್ರಯತ್ನಿಸಿದ್ದಾರೆ. ಬಿ.ಎ

ಸಾಲೆತ್ತೂರ್‌ರವರ 'ಎನ್ಶಿಯಂಟ್ ಕರ್ನಾಟಕ, ಹಿಸ್ಟರಿ ಆಫ್ ತುಳುವ' ಈ ದಿಸೆಯಲ್ಲಿ ರಚಿಸಲ್ಪಟ್ಟ ಪ್ರಮುಖ ಗ್ರಂಥವೆಂದು ಮಾನ್ಯತೆ ಪಡೆದಿದೆ. ಅಂತೆಯೇ ತುಳು ಪಾಡ್ದನಗಳನ್ನು ಆಕರಗಳನ್ನಾಗಿ ಉಪಯೋಗಿಸಿಕೊಂಡು ರಚಿಸಲಾದ ತುಳುವ ಜನಜೀವನದ ಕುರಿತ ಅಧ್ಯಯನ ಮುಖ್ಯವಾದುದು. ಇದು ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಅತೀ ಮಹತ್ವದ, ಬಹುಮಟ್ಟಿಗೆ ಇಂದಿಗೂ ಪ್ರಸ್ತುತ ಹಾಗೂ ಅಧಿಕೃತವೆಂದು ಪರಿಗಣಿಸಲ್ಪಡುವ ಕೃತಿಯಾಗಿದೆ.[13] ಹೀಗೆ ತುಳುನಾಡಿನ ಚರಿತ್ರೆಗೆ ಸಂಬಂಧಿಸಿದ ಕುತೂಹಲಕರ ಹಾಗೂ ಅಸ್ಪಷ್ಟ ವಿಚಾರಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡುವಲ್ಲಿ ಈ ಮೇಲ್ಕಂಡ ವಿದ್ವಾಂಸರು ಯಶಸ್ಸನ್ನು ಪಡೆದುಕೊಂಡಿದ್ದಾರೆಯಾದರೂ ತುಳುನಾಡಿನ ವಾರಸುದಾರಿಕೆಯ ವಿವಿಧ ಆಯಾಮಗಳಿಗೆ ಸಂಬಂಧಿಸಿದಂತೆ ಸ್ವತಂತ್ರ ಹಾಗೂ ವಿಮರ್ಶಾತ್ಮಕ ಅಧ್ಯಯನಗಳಾಗಲಿ ಸಂಶೋಧನೆಗಳಾಗಲಿ ಮಾಡಲ್ಪಟ್ಟಿಲ್ಲ.

ಇಪ್ಪತ್ತನೆಯ ಶತಮಾನದ ನಾಲ್ಕನೇ ದಶಕದಲ್ಲಿ ರಾಜಕೀಯ ಮತ್ತು ಸಾಮ್ರಾಜ್ಯಶಾಹಿ ಇತಿಹಾಸಗಳ ರಚನೆಗೆ ಹೆಚ್ಚು ಚಾಲನೆ ದೊರಕಿ ತುಳುನಾಡಿನ ರಾಜಕೀಯ ಚರಿತ್ರೆ ಬರವಣಿಗೆಗಾರರ ಗಮನ ಸೆಳೆಯಿತು. ಕರ್ನಾಟಕದ ಪ್ರಮುಖ ರಾಜಮನೆತನಗಳು ಈ ಪ್ರದೇಶದಲ್ಲಿ ಪ್ರಭುತ್ವವನ್ನು ಸ್ಥಾಪಿಸಿದ್ದರಿಂದ, ಆ ರಾಜಮನೆತನಗಳ ರಾಜಕೀಯ ಚರಿತ್ರೆಗಳು ಮುಂಚೂಣಿಗೆ ಬಂದವು. ಕದಂಬ, ಅಳೂಪ, ಹೊಯ್ಸಳ, ವಿಜಯನಗರ, ಇಕ್ಕೇರಿ, ಮೈಸೂರಿನ ಆಡಳಿತ ಮುಂತಾದ ಆಡಳಿತ ವ್ಯವಸ್ಥೆಗಳು ಇಲ್ಲಿನ ರಾಜಕೀಯ ಚರಿತ್ರೆಯ ಬರವಣಿಗೆಯ ಪ್ರಾಧಾನ್ಯ ನೆಲೆಗಳಾಗಿ ಕಾಣಿಸಿಕೊಂಡವು. ಈ ನಿಟ್ಟಿನಲ್ಲಿ ಕೆ.ವಿ ರಮೇಶರ 'ಎ ಹಿಸ್ಟರಿ ಆಫ್ ಸೌತ್ ಕೆನರಾ', 'ತುಳುನಾಡಿನ ಇತಿಹಾಸ' ಗ್ರಂಥಗಳು ಪ್ರಮುಖವಾದುದು. ಕೆ.ವಿ ರಮೇಶರು ತನ್ನ ಸಂಶೋಧನಾ ಕೃತಿಗಳಲ್ಲಿ ತುಳುನಾಡಿನ ಪ್ರಾಚೀನ, ಮಧ್ಯಯುಗೀನಾ ಅಂದರೆ ಮುಖ್ಯವಾಗಿ ವಿಜಯನಗರದ ರಾಜಕೀಯ ಪ್ರಭಾವವನ್ನು ದಾಖಲಿಸಿದ್ದಾರೆಯಾದರೂ, ಅವುಗಳಲ್ಲಿ ತುಳುನಾಡಿನ ವಾರಸುದಾರಿಕೆಯ ಬಗೆಗಿನ ಉಲ್ಲೇಖಗಳು ವಿರಳ. ಮೂಲತ 'ಎ ಹಿಸ್ಟರಿ ಆಫ್ ಸೌತ್‌ಕೆನರಾ' ಒಂದು ಸಂಶೋಧನ ಪ್ರಬಂಧ. ಇದಲ್ಲದೇ ಎಂ.ಜೆ ಶರ್ಮರ ಜೊತೆಗೂಡಿ ಶಾಸನಗಳ ಅಧ್ಯಯನ ಮಾಡಿ ತುಳುನಾಡಿನ ಚರಿತ್ರೆಯ ಬರವಣಿಗೆಗೆ ಮಹತ್ವದ ಕೊಡುಗೆ ನೀಡಿದ್ದಾರೆ.

ತುಳುನಾಡಿನ ಚರಿತ್ರೆಯ ಪುನರ್‌ರಚನೆಯಲ್ಲಿ ಗುರುರಾಜಭಟ್ಟರ ಕೊಡುಗೆ ಅದ್ವಿತೀಯವೆಂದು ಪರಿಗಣಿಸಲ್ಪಟ್ಟಿದೆ. ಅವರ 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್' ತುಳುನಾಡಿನ ಚರಿತ್ರೆಯ ವಿಶ್ವಕೋಶವೆಂದೇ ಪರಿಗಣಿಸಲ್ಪಟ್ಟಿದ್ದು, ಇಲ್ಲಿನ ಚರಿತ್ರೆಯನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಮೌಲ್ಯಯುಕ್ತ ಆಕರ ಗ್ರಂಥವಾಗಿ ಪರಿಗಣಿಸಲ್ಪಟ್ಟಿದೆ.

ಇದಲ್ಲದೇ ಅವರ ಇನ್ನಿತರ ಸಂಶೋಧನಾ ಗ್ರಂಥಗಳಾದ ತುಳುನಾಡು, ತುಳುನಾಡಿನ ಚರಿತ್ರೆಯಲ್ಲಿ ಸ್ಥಾನಿಕರು, ತುಳುನಾಡಿನ ಚರಿತ್ರೆಯಲ್ಲಿ ಬಾರಕೂರು ಮುಂತಾದವುಗಳು ತುಳುನಾಡಿನ ಬಗೆಗಿನ ಅತ್ಯಂತ ಉಪಯುಕ್ತ ಕೃತಿಗಳಾಗಿವೆಯಾದರೂ, ಇಲ್ಲಿಯೂ ಸಹ ವಾರಸುದಾರಿಕೆಯ ಆಯಾಮಗಳ ಬಗ್ಗೆ ನೇರ ಪ್ರಸ್ತಾಪಗಳಿಲ್ಲ.

ತುಳುನಾಡಿನ ಚರಿತ್ರೆಯ ಬಗ್ಗೆ ಹಲವಾರು ಸಂಶೋಧನಾ ಪ್ರಬಂಧಗಳು ಹೊರಬಂದಿದ್ದು ಅವುಗಳಲ್ಲಿ 1931ರಲ್ಲಿ ಮುಂಬಾಯಿ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲ್ಪಟ್ಟ ವಿಲಿಯಂ ಎಕ್ಸ್ ಮಸ್ಕರ್‍ಹೇನಸ್‌ರ 'ಹೈದರ್ ಅಲಿ ಅಂಡ್ ಟಿಪ್ಪುಸುಲ್ತಾನ್ ಇನ್ ಕೆನರಾ' ಮೈಸೂರು ಆಳ್ವಿಕೆಯಡಿಯಲ್ಲಿ ತುಳುನಾಡಿನ ಕ್ರೈಸ್ತರು ಅನುಭವಿಸಿದ ಕಷ್ಟನಷ್ಟಗಳ ಬಗ್ಗೆ ಮಾಹಿತಿಯನ್ನು ಕೊಡುತ್ತದೆ. 1961ರಲ್ಲಿ ಇದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲ್ಪಟ್ಟ ಸೂರ್ಯನಾಥ ಕಾಮತರ 'ತುಳುವ ಅಂಡರ್ ವಿಜಯನಗರ' ಈ ಪ್ರದೇಶದ ಚರಿತ್ರೆಯ ಬಗ್ಗೆ ಬೆಳಕು ಚೆಲ್ಲುವ ಪ್ರಮುಖ ಸಂಶೋಧನಾ ಪ್ರಬಂಧವಾಗಿದೆ. 1973ರಲ್ಲಿ ಪ್ರಕಟಗೊಂಡ ದ ಸೌತ್ ಕೆನರಾ ಡಿಸ್ಟ್ರಿಕ್ ಗಜೇಟಿಯರ್ ವಸಾಹತುಶಾಹಿ ಆಡಳಿತದ ಬಗ್ಗೆ ಸಮಗ್ರ ಮಾಹಿತಿಯನ್ನು ಕೊಡುವ ಪ್ರಮುಖ ಮಾಹಿತಿ ಕೋಶವಾಗಿದೆ.[14] ಕೆ.ಜಿ ವಸಂತಮಾಧವ, ಪಿ.ಎನ್ ನರಸಿಂಹ ಮೂರ್ತಿಯವರ ತುಳುನಾಡಿನ ಚರಿತ್ರೆಯ ಬಗೆಗಿನ ಕೊಡುಗೆಗಳು ಅನನ್ಯ. ಬಿ ವಸಂತಶೆಟ್ಟಿ, ಪುಂಡಿಕೈ ಗಣಪಯ್ಯ ಭಟ್ಟರ ಅಧ್ಯಯನಗಳು ತುಳುನಾಡಿನ ಪೂರ್ವೆತಿಹಾಸಕ್ಕೆ ಹೊಸ ಆಯಾಮಗಳನ್ನು ನೀಡಿವೆ.[15] ಆದರೆ ಈ ಎಲ್ಲಾ ಅಧ್ಯಯನಗಳು ನಿರ್ದಿಷ್ಟ ಘಟನೆ ಅಥವಾ ವಿಷಯದ ಬಗ್ಗೆ ಮಾತ್ರ ಬೆಳಕು ಚೆಲ್ಲಿರುವುದರಿಂದ ತುಳುನಾಡಿನ ಬಗ್ಗೆ ಸಮಗ್ರ ಅಧ್ಯಯನವೆಂದು ಪರಿಗಣಿಸುವಂತಿಲ್ಲ.

ಮಂಗಳೂರು ವಿಶ್ವವಿದ್ಯಾನಿಲಯ ಸ್ಥಾಪನೆಯಾದ ನಂತರ ತುಳುನಾಡಿನ ಇತಿಹಾಸ ಮತ್ತು ಮೌಖಿಕ ಚರಿತ್ರೆಯ ಬಗ್ಗೆ ಹಲವಾರು ಆಯಾಮಗಳಲ್ಲಿ ಅಧ್ಯಯನಗಳು ಮಾಡಲ್ಪಟ್ಟಿವೆ. ಇವರುಗಳ ಮಾರ್ಗದರ್ಶನದಲ್ಲಿ ಸಲ್ಲಿಕೆಯಾದ ಹಲವಾರು ಸಂಶೋಧನಾ ಪ್ರಬಂಧಗಳು ತುಳುನಾಡಿನ ಚರಿತ್ರೆ ಹಾಗೂ ಸಂಸ್ಕೃತಿಯ ಹಲವಾರು ಆಯಾಮಗಳನ್ನು ಅನಾವರಣಗೊಳಿಸಿದೆ.[16] ಜೊತೆಗೆ ಸೈಯ್ಯದ್ ಅಬ್ದುಲ್ ಬಾರಿಯವರ ನಾನ್ ಅಗ್ರೇರಿಯನ್ ಟಾಕ್ಸೇಷನ್ ಇನ್ ಕರ್ನಾಟಕ ಅಂಡರ್ ವಿಜಯನಗರ, ಎನ್ ಶ್ಯಾಮಭಟ್ಟರ 'ಕಲೋನಿಯಲ್ ಅಡ್ಮಿನಿಸ್ಟ್ರೇಷನ್ ಅಂಡ್ ರೆಸ್ಪಾನ್ಸ್', ಮಾಲತಿ ಮೂರ್ತಿಯವರ 'ಟ್ರೇಡ್ ಇನ್ ಕೊಲೊನಿಯಲ್ ಎರಾ', ವಿಲ್ಸನ್ ಪ್ರಭಾಕರರ 'ಬಾಸೆಲ್ ಮಿಷನ್ ಇನ್ ಸೌತ್‌ಕೆನರಾ', ಜಗದೀಶ ಶೆಟ್ಟರ 'ದ ಅಗ್ರೋ-ಇಕಾನಮಿಕ್ ಸ್ಟ್ರಕ್ಚರ್ ಒಫ್ ಮಿಡಿವಲ್ ಸೌತ್‌ಕೆನರಾ', ಹಿಮಕರರ ದ ಹಿಸ್ಟರಿ ಆಫ್

ಅಗ್ರಿಕಲ್ಚರ್ ಪ್ರೊಡಕ್ಷನ್ ಇನ್ ಸೌತ್‌ಕೆನರಾ, ಮೋಹನಕೃಷ್ಣ ರೈಯವರ ಅರ್ಬನೈಜೇಷನ್ ಇನ್ ಮಂಗಳೂರು, ಡೆನಿಸ್ ಫೆರ್ನಾಂಡಿಸ್‌ರ ತುಳು ವರ್ಲ್ಡ್ ಇನ್ ಯುರೋಪಿನ್ ರೈಟಿಂಗ್ಸ್ ಮುಂತಾದ ಸಂಶೋಧನ ಪ್ರಬಂಧಗಳು ತುಳುನಾಡಿನ ಚರಿತ್ರೆಯ ಹಲವಾರು ಆಯಾಮಗಳ ಬಗ್ಗೆ ವಿಶ್ಲೇಷಣೆ ನಡೆಸಿವೆಯಾದರೂ ವಾರಸುದಾರಿಕೆಯ ಬಗ್ಗೆ ಸ್ಪಷ್ಟ ವಿಶ್ಲೇಷಣೆಯಲ್ಲಿ ತೊಡಗಿಸಿಕೊಂಡಿಲ್ಲ.

ತುಳುನಾಡಿಗೆ ಸಂಬಂಧಿಸಿದ ವೀರರ ಆರಾಧನೆ, ಜನಾಂಗೀಯ ಅಧ್ಯಯನಗಳು,[17] ಮೌಖಿಕ ಚರಿತ್ರೆಗೆ ಸಂಬಂಧಿಸಿದ ಅಧ್ಯಯನಗಳು[18] ಸಂಪಾದನ ಗ್ರಂಥಗಳು[19] ಭಾಷೆಗೆ ಸಂಬಂಧಿಸಿದ ಸಂಶೋಧನೆ ಮುಂತಾದವುಗಳು[20] ತುಳುನಾಡಿನ ಇತಿಹಾಸದ ಬಗೆಗಿನ ಪರಿಜ್ಞಾನವನ್ನು ಶ್ರೀಮಂತಗೊಳಿಸಿವೆ. ಆರ್.ಆರ್.ಸಿ ಉಡುಪಿ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ ತನ್ನ ಕಾರ್ಯಚಟುವಟಿಕೆಗಳನ್ನು ಪ್ರಾರಂಭಗೊಳಿಸಿದ ನಂತರ ತುಳುನಾಡಿನ ಮೌಖಿಕ ಚರಿತ್ರೆ, ಸ್ಥಳೀಯ ಇತಿಹಾಸ ರಚನೆಗೆ ಸಾಕಷ್ಟು ಉತ್ತೇಜನ ಸಿಕ್ಕಿದೆಯಲ್ಲದೇ ಚರಿತ್ರೆಗೆ ಸಂಬಂಧಿಸಿದ ಹಲವಾರು ಸಂಶೋಧನಾ ಲೇಖನಗಳು, ಪ್ರಬಂಧಗಳು, ವೈಚಾರಿಕ ಗ್ರಂಥಗಳು ಪ್ರಕಾಶಿತಗೊಂಡಿವೆ.[21] ಇವುಗಳು ತುಳುನಾಡಿನ ಚರಿತ್ರೆಯ ವಿಭಿನ್ನ ಮಗ್ಗುಲುಗಳನ್ನು ಅನಾವರಣಗೊಳಿಸುವುದರ ಮೂಲಕ ಚರಿತ್ರೆಯ ಹರವನ್ನು ವಿಶ್ಲೇಷಿಸುವಲ್ಲಿ ಬಹುಮುಖ್ಯ ಪಾತ್ರವಹಿಸಿವೆ.

## ಅಧ್ಯಯನದ ವಿಧಾನ

ಈ ಸಂಶೋಧನೆ ನಿರ್ವಹಿಸಲು ಮಾಹಿತಿ ಸಂಗ್ರಹಿಸಿ, ವಿಭಜಿಸಿ ವಿಶ್ಲೇಷಿಸಲು ಹಲವಾರು ಮಾರ್ಗಗಳನ್ನು ಅನುಸರಿಸಲಾಗಿದೆ. ತುಳುನಾಡಿನ ವಾರಸುದಾರಿಕೆಯ ವಿಭಿನ್ನ ಮುಖಗಳಿಗೆ ಸಂಬಂಧಿಸಿದಂತೆ ಇತಿಹಾಸ ಗ್ರಂಥ, ಮೌಖಿಕ ಚರಿತ್ರೆ, ಐತಿಹ್ಯ, ಸಾಹಿತ್ಯ, ಲೇಖನ, ಸಂಶೋಧನಾ ವಿಷಯಗಳ ಬಗೆಗಿನ ವರದಿ, ಶಾಸನ, ಚಾರಿತ್ರಿಕ ಪರಿಕರ, ಪಾರಂಪರಿಕ ವಿಚಾರಗಳ ಬಗೆಗಿನ ಸಮಾಜದ ಹಿರಿಯರಿಂದ ಮಾಹಿತಿ ಮುಂತಾದವುಗಳನ್ನು ಅವಲಂಬಿಸಲಾಗಿದೆ. ವಸಾಹತುಶಾಹೀ ವ್ಯವಸ್ಥೆಯಡಿ ಬರುವ ವಿಶ್ಲೇಷಣೆಗೆ ವಿಶೇಷವಾಗಿ ಪತ್ರಾಗಾರಗಳಲ್ಲಿ ಲಭ್ಯವಿರುವ ದಾಖಲೆ, ಸಾಹಿತ್ಯ, ವರದಿ ಮುಂತಾದವುಗಳು ಕಾಲಕಾಲಕ್ಕೆ ಹೊರಡಿಸಿರುವ ಜಿಲ್ಲಾ ಗಜೆಟಿಯರ್, ಗ್ರಂಥ, ಲೇಖನಗಳು, ಸಂಶೋಧನಾ ವರದಿಗಳು, ಸಂಶೋಧನಾ ಪ್ರಬಂಧ ಮುಂತಾದವುಗಳನ್ನು ಅವಲಂಬಿಸಲಾಗಿದೆ. ಇವುಗಳ ಜೊತೆಗೆ ಐತಿಹಾಸಿಕ ಕ್ಷೇತ್ರ ಸಂದರ್ಶನ, ಇತಿಹಾಸ ತಜ್ಞರ ಮೌಖಿಕ ಅಭಿಪ್ರಾಯ ಸಂಗ್ರಹ, ಮೂಲಮನೆ, ತರವಾಡು, ಗುತ್ತುಗಳ ಸಂದರ್ಶನ, ಪರಂಪರಾಗತವಾಗಿ ದೈವ, ದೇವರುಗಳ ಅಜಲಿಗೆ ಒಳಪಟ್ಟು ಚಾಕರಿ ಕೆಲಸ ಮಾಡುವವರೊಂದಿಗಿನ ಅನುಭವ ಮುಂತಾದವುಗಳನ್ನು ಅವಲಂಬಿಸಿಕೊಂಡು ಈ ಪ್ರಬಂಧ

ಸಿದ್ಧಪಡಿಸಲಾಗಿದೆ. ತುಳುನಾಡಿನ ಸರ್ವೇಕ್ಷಣೆಯನ್ನು ಮಾಡಿ ಸಂಗ್ರಹಿಸಲಾದ ಮಾಹಿತಿಗಳ ನೆಲೆಯಲ್ಲಿ ಕೆಲವೊಂದು ವಿಷಯಗಳನ್ನು ಪ್ರಸ್ತಾಪಿಸಿ ಭಿನ್ನವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಅಂತೆಯೇ ತುಳುನಾಡು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಶ್ರೀಮಂತ ಪ್ರದೇಶವಾಗಿರುವುದರಿಂದ ಧಾರ್ಮಿಕ ತಳಪಾಯದಲ್ಲೆ ಇಲ್ಲಿನ ವಾರಸುದಾರಿಕೆಯ ಆಯಾಮಗಳು ಕಟ್ಟಲ್ಪಟ್ಟಿರುವುದರಿಂದ ಧಾರ್ಮಿಕ ಕ್ಷೇತ್ರಗಳನ್ನು ಸಂದರ್ಶಿಸಿ ಮಾಹಿತಿ ಕಲೆ ಹಾಕುವ ಪ್ರಯತ್ನ ಮಾಡಲಾಗಿದೆ.

ಐತಿಹಾಸಿಕ ಮಾಹಿತಿಗಳನ್ನು ಸಂಗ್ರಹಿಸಲು ತುಳುನಾಡಿನ ಒಳಗಿನ ಮತ್ತು ಹೊರಗಿನ ಚಿತ್ರಣಗಳನ್ನು ಸಂಗ್ರಹಿಸಲಾಗಿದೆ. ವಸಾಹತುಶಾಹೀ ಸಂದರ್ಭದಲ್ಲಿನ ಬ್ರಿಟಿಷ್ ಇತಿಹಾಸಕಾರರ ಅಭಿಪ್ರಾಯ ಸಂಗ್ರಹಣೆಯ ವರದಿಗಳನ್ನು ಚರ್ಚಿಸಲಾಗಿದೆ. ತುಳುನಾಡು ಐತಿಹಾಸಿಕವಾಗಿ ವ್ಯಾಪಾರಿ ಕೇಂದ್ರವಾಗಿದ್ದರಿಂದ ಆ ನೆಲೆಯಿಂದಲೂ ವ್ಯಾಖ್ಯಾನಿಸುವ ಪ್ರಯತ್ನ ಮಾಡಲಾಗಿದೆ. ವಿಭಿನ್ನ ಸಮುದಾಯಗಳಿಗೆ ಸಂಬಂಧಿಸಿದ ನೆಲೆಗಳನ್ನು ಸಂಗ್ರಹಿಸಿ ಅವುಗಳ ನೈಜತೆಯನ್ನು ಇತಿಹಾಸಕಾರರ ವಿಶ್ಲೇಷಣೆಗಳಡಿಯಲ್ಲಿ ಮಾಡಿ ಈ ಸಂಶೋಧನಾ ಪ್ರಬಂಧದಲ್ಲಿ ಪ್ರಸ್ತಾಪಿಸಲಾಗಿದೆ.

ತುಳುನಾಡಿಗೆ ಸಂಬಂಧಿಸಿದಂತೆ ಈ ವರೆಗೆ ಮಾಡಲಾದ ಸಂಶೋಧನೆಗಳನ್ನು ಮುಂದಿಟ್ಟುಕೊಂಡು ಈ ಸಂಶೋಧನೆಯನ್ನು ಮಾಡಲಾಗಿದೆ. ಹಿಂದಿನ ಕಾಲದಲ್ಲಿ ಕಟ್ಟಲ್ಪಟ್ಟ ವಾಸ್ತುಪ್ರಕಾರಗಳು, ಐತಿಹಾಸಿಕ ಸ್ಮಾರಕಗಳು, ಹಾಗೂ ಇಲ್ಲಿನ ಪರಂಪರೆಯ ಪ್ರತೀಕವಾಗಿರುವ ವಿವಿಧ ಮೂಲಗಳಿಂದ ವಸ್ತು ವಿಚಾರಗಳನ್ನು ಸಂಗ್ರಹಿಸಿ ಈ ಪ್ರಬಂಧವನ್ನು ಪ್ರೌಢಗೊಳಿಸುವ ಪ್ರಯತ್ನ ಮಾಡಲಾಗಿದೆ. ಅಂತೆಯೇ ಅಗತ್ಯ ಐತಿಹಾಸಿಕ ಕುರುಹುಗಳೆಲ್ಲದರ ಸಂದರ್ಶನ, ಅವುಗಳ ಪರಿವೀಕ್ಷಣೆ, ಅವುಗಳಿಗೆ ಸಂಬಂಧಿಸಿದ ಬರವಣಿಗೆ ಸಂಗ್ರಹ ಮುಂತಾದ ವಿಧಾನಗಳನ್ನು ಈ ಸಂಶೋಧನೆಯಲ್ಲಿ ಅಳವಡಿಸಿ ಪೂರ್ಣಗೊಳಿಸಲಾಗಿದೆ. ಒಟ್ಟಾಗಿ ಐತಿಹಾಸಿಕ, ತುಲನಾತ್ಮಕ, ಸಾಂಸ್ಥಿಕ, ಶಾಸನಾತ್ಮಕ, ಸಂದರ್ಶನ, ಹಾಗೂ ಸರ್ವೇಕ್ಷಣ ವಿಧಾನಗಳ ಸಹಾಯದೊಂದಿಗೆ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

## ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ

ತುಳುನಾಡಿನ ಚರಿತ್ರೆಯ ಅಧ್ಯಯನಗಳು ಹಲವು ಮಜಲುಗಳನ್ನು ದಾಟಿವೆಯಾದರೂ ಚಾರಿತ್ರಿಕ ಸತ್ಯಾನ್ವೇಷಣೆ ಮಾಡುವ ಪ್ರವೃತ್ತಿಯ ಅಭಾವ, ಚರಿತ್ರೆಯನ್ನು ವಿಭಿನ್ನ ದೃಷ್ಟಿಕೋನಗಳಿಂದ, ಆದರೆ ಕೆಲವೊಂದು ಬಾರಿ ವಿರೂಪಗೊಳಿಸುವ ಪ್ರಯತ್ನಗಳು, ತಮ್ಮದಲ್ಲದ ಮಾದರಿಗಳನ್ನು ಅಥವಾ ನಿರ್ಧಾರಗಳನ್ನು ಪ್ರಯೋಗಿಸಿ ವಿಶ್ಲೇಷಿಸುವ ಪ್ರಯತ್ನಗಳಿಂದಾಗಿ ತುಳುನಾಡಿನ ಇತಿಹಾಸ ಕವಲುದಾರಿಯಲ್ಲಿದೆ.[22] ಅಧುನಿಕತೆ ಹಾಗೂ

ಪಾಶ್ಚಾತ್ಯೀಕರಣದ ಪ್ರಭಾವದಿಂದಾಗಿ ಐತಿಹಾಸಿಕ ಹಾಗೂ ಸಮಕಾಲೀನ ವ್ಯವಸ್ಥೆಗಳು ಸಾಂಪ್ರದಾಯಿಕವೆನಿಸಿಕೊಂಡು ಮೌಲ್ಯರಹಿತವೆನಿಸಿಕೊಂಡಿದೆ.[23] ಈ ರೀತಿಯ ಬೆಳವಣಿಗೆಗಳು ತುಳುನಾಡಿನ ಇತಿಹಾಸವನ್ನು ಗಟ್ಟಿಗೊಳಿಸುವ ಪ್ರಯತ್ನಗಳಿಗೆ ತೊಡಕಾಗಿ ಪರಿಣಮಿಸಿದೆಯಾದರೂ ಇಲ್ಲಿನ ಅನನ್ಯತೆ ಉಳಿದುಕೊಂಡಿರುವುದು ಅದರ ಶ್ರೀಮಂತಿಕೆಗೆ ಹಿಡಿದ ಕೈಗನ್ನಡಿಯಾಗಿದೆ.

ದಕ್ಷಿಣಕನ್ನಡ, ಉಡುಪಿ ಮತ್ತು ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡ ಸಾಂಸ್ಕೃತಿಕ ಪ್ರದೇಶವನ್ನು ಪರಂಪರಾಗತವಾಗಿ ತುಳುನಾಡು ಎಂದು ಕರೆಯಲಾಗಿತ್ತು.[24] ಅದಾಗ್ಯೂ ತುಳುನಾಡು, ತುಳುದೇಶ, ತುಳುರಾಜ್ಯ, ತುಳುವ, ತೌಳವ, ತುಳುವಿಷಯ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ತುಳುನಾಡಿನ ಎಲ್ಲೆಕಟ್ಟುಗಳನ್ನು ಗುರುತಿಸುವುದು ಸುಲಭವಲ್ಲ. ರಾಜಕೀಯವಾಗಿ ಅಥವಾ ಆಡಳಿತಾತ್ಮಕವಾಗಿ ತುಳುನಾಡು ವಿಸ್ತಾರವಾದ ಭೂಪ್ರದೇಶವನ್ನು ಹೊಂದಿತ್ತು. ತುಳುಭಾಷಿಕರು ವಾಸಿಸುವ ಪ್ರದೇಶದಿಂದ ಹೊರಗಡೆಗೂ ತುಳುನಾಡು ವಿಸ್ತರಿಸಿದ್ದರಿಂದ ತುಳುನಾಡಿನ ಎಲ್ಲೆಗಳನ್ನು ಭಾಷಿಕವಾಗಿಯೂ ಇಲ್ಲವೇ ರಾಜಕೀಯವಾಗಿಯೂ ಗುರುತಿಸುವ ಪ್ರಯತ್ನಗಳಾಗಿದ್ದರೂ ಅವುಗಳು ಸರಿಯಾದ ಅಥವಾ ಸಮಗ್ರ ಮಾನದಂಡವಾಗಿ ಗುರುತಿಸಲ್ಪಟ್ಟಿಲ್ಲ. ಆದರೆ ತುಳುನಾಡನ್ನು ಒಂದು ಘಟಕವಾಗಿ ಸ್ಥಳೀಯ ಚರಿತ್ರೆಯ ಸ್ವಭೋಧವನ್ನು ಮುಂದಿಟ್ಟು ಅಧ್ಯಯನಿಸಿದಾಗ ತುಳು ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ಅರ್ಥೈಸಿಕೊಳ್ಳಬಹುದಾಗಿದೆ.[25] ಪ್ರಸ್ತುತ ಸಂಶೋಧನಾ ಪ್ರಬಂಧ ಪ್ರವೇಶಿಕೆ, ಫಲಿತ ಮತ್ತು ಒಂಬತ್ತು ಅಧ್ಯಾಯಗಳಲ್ಲಿ ಹಂಚಿಕೆಯಾಗಿದೆ. ಅಧ್ಯಯನದ ಶೀರ್ಷಿಕೆ ವಸಾಹತುಶಾಹಿ ಆಡಳಿತ: ತುಳುನಾಡಿನಲ್ಲಿ ವಾರಸುದಾರಿಕೆಯ ಆಯಾಮ ಎಂಬುವುದಾಗಿದ್ದು ಆರಂಭದ ಮೂರು ಅಧ್ಯಾಯಗಳು ತುಳುನಾಡಿನ ವಾರಸುದಾರಿಕೆಯ ಆಯಾಮಗಳ ನೆಲೆಗಳನ್ನು ಅವಲೋಕಿಸಿ, ನಂತರದ ಆರು ಅಧ್ಯಾಯಗಳಲ್ಲಿ ವಸಾಹತುಶಾಹಿಯ ಆಯಾಮಗಳನ್ನು ಪ್ರಸ್ತುತಪಡಿಸಲಾಗಿದೆ. ಸಂಶೋಧನೆಯ ಫಲಿತದಲ್ಲಿ ವಸಾಹತುಶಾಹಿ ಆಡಳಿತದ ಸಂದರ್ಭದ ತುಳುನಾಡಿನ ವಾರಸುದಾರಿಕೆಯ ವಿಭಿನ್ನ ಆಯಾಮಗಳಲ್ಲಿ ಉಂಟಾದ ಒಟ್ಟು ಪಲ್ಲಟದ ಅನುಭಾವಗಳು ಹಾಗೂ ಅದರ ಪುನರ್‌ವ್ಯಾಖ್ಯಾನಗಳನ್ನು ಮಾಡಲಾಗಿದೆ. ತುಳುನಾಡಿನ ವಾರಸುದಾರಿಕೆಯ ಆಯಾಮಗಳನ್ನು ಅರ್ಥೈಸಿಕೊಳ್ಳಬೇಕಾದರೆ ಪ್ರಾಚೀನ ಕಾಲದಿಂದ ವಾರಸುದಾರಿಕೆಯ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವುದು ಸಮಂಜಸವಾದುದರಿಂದ ಮೊದಲ ಮೂರು ಅಧ್ಯಾಯಗಳಲ್ಲಿ ಅದರ ಹಿನ್ನೆಲೆಯನ್ನೂ, ನಂತರದ ಆರು ಅಧ್ಯಾಯಗಳಲ್ಲಿ ವಸಾಹತುಶಾಹೀ ಆಡಳಿತದ ಸಂದರ್ಭವನ್ನು ಅರ್ಥೈಸಿ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ತುಳುನಾಡಿನ ವಾರಸುದಾರಿಕೆಯ ಆಯಾಮಗಳಿಗೆ ವಸಾಹತುಪೂರ್ವದ

ವ್ಯವಸ್ಥೆಯೇ ಅಡಿಪಾಯವೆಂದು ಕಂಡುಕೊಂಡು ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ತುಳುನಾಡು ಭಿನ್ನ ಸಂಸ್ಕೃತಿಗಳ ಕೂಡುವಿಕೆಯಿಂದಾದ ಸಾಂಸ್ಕೃತಿಕ ಘಟಕವಾಗಿದ್ದು, ಬಹುಭಾಷಿಕ ನೆಲೆಯಾಗಿ ರೂಪುಗೊಂಡಿದೆ. ಈ ಹಿನ್ನೆಲೆಯಲ್ಲಿ ತುಳುನಾಡಿನ ವಾರಸುದಾರಿಕೆಯ ಆಯಾಮಗಳನ್ನು ಬಹುಅರ್ಥದ ಕ್ಲಿಷ್ಟ ಪರಿಕಲ್ಪನೆಗಳಾಗಿ ವಿಶ್ಲೇಷಿಸಬೇಕಾಗುತ್ತದೆ.

ಅಧ್ಯಯನದಲ್ಲಿ ವಾರಸುದಾರಿಕೆಯನ್ನು ಪರಂಪರೆ ಎಂಬ ಅರ್ಥದಲ್ಲಿ ಅನುಭಾವಿಸುವುದರ ಜೊತೆಗೆ ವಾರಸುದಾರಿಕೆಯನ್ನು 'ಹೆರಿಟೇಜ್', 'ಲೆಗೆಸಿ'[26] ಎಂಬರ್ಥದಲ್ಲಿಯೂ ಪರಿಕಲ್ಪಿಸಬಹುದು. ಅಂದರೆ ಸಾಂಸ್ಕೃತಿಕ ಬಳುವಳಿ, ನ್ಯಾಯಯುತವಾದ ಹಕ್ಕುಬಾಧ್ಯತೆಗಳನ್ನು ಮುಂತಾದವುಗಳನ್ನು ಪೂರ್ವಾರ್ಜಿತವಾಗಿ ಪಡೆದುಕೊಳ್ಳುವುದು ಎಂಬುವುದಾಗಿ ಅರ್ಥೈಸಿಕೊಳ್ಳಬಹುದು. ಪರಂಪರೆ ಎಂದರೆ ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಗೊಳ್ಳುವ ಒಂದು ಸ್ಥಿತಿ ಅಥವಾ ಪ್ರಕ್ರಿಯೆ. ಇದು ಸಂಪರ್ಕದ ಸಾಂಗತ್ಯದಿಂದ ನಡೆಯುತ್ತದೆಯಲ್ಲದೇ, ಆನೇಕ ಬಾರಿ ಸಾಮಾಜಿಕ ಗುಂಪು ವಿಮರ್ಶಿಸದೇ ಒಪ್ಪಿಕೊಳ್ಳುವ ಒಂದು ವ್ಯವಸ್ಥೆ.[27] ಇದನ್ನು ಕಲ್ಚರಲ್ ಹೆರಿಟೇಜ್ ಅಥವಾ ಸಾಂಸ್ಕೃತಿಕ ಬಳುವಳಿ ಎಂದು ಗ್ರಹಿಸಬಹುದು. ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ, ಭೂತಕಾಲದಿಂದ ವರ್ತಮಾನಕ್ಕೆ, ವರ್ತಮಾನದಿಂದ ಭವಿಷ್ಯಕ್ಕೆ ಹೀಗೆ ಸಾಮಾಜಿಕ ಪ್ರಕ್ರಿಯೆಯ ಭಾಗವಾಗಿ ದಾಟಲ್ಪಡುವ, ಒಂದು ಸಾಮಾಜಿಕ ಗುಂಪಿಗೆ ಸೇರಿದ ಜನರು ಹೊಂದಿದ ಸಾಮಾನ್ಯ ಮೌಲ್ಯಗಳು, ನಂಬಿಕೆಗಳು, ರೀತಿ ರಿವಾಜು, ಆಚಾರ ವಿಚಾರಗಳು, ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳನ್ನು ಪರಂಪರೆ ಎನ್ನಬಹುದು.[28]

ತುಳುನಾಡನ್ನು ಈ ರೀತಿಯ ಪರಂಪರೆ ಹೊಂದಿರುವ ವಿಶೇಷ ಘಟಕವಾಗಿ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗೆ ಗತಕಾಲದಿಂದ ಆರಂಭಗೊಂಡು ವಸಾಹತುಶಾಹಿ ಆಡಳಿತದ ವರೆಗೆ ತುಳುನಾಡಿನ ವಾರಸುದಾರಿಕೆಯು ಹಲವಾರು ಏರಿಳಿತಗಳನ್ನು ಕಂಡು, ಭೂತಕಾಲದ ಅನುಭವಗಳನ್ನು ಆಧರಿಸಿ, ವರ್ತಮಾನ ಮತ್ತು ಭವಿಷ್ಯತ್ತಿನೆಡೆಗೆ ನೋಟಹರಿಸಿ ತನ್ನನ್ನು ತಾನೇ ಬದಲಾಯಿಸಿ ರೂಪಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿತು. ಕನ್ನಡದಲ್ಲಿ ಉಕ್ತವಾಗಿರುವ ಉತ್ತರಾಧಿಕಾರ[29] ತುಳು ಆಡುನುಡಿಯಲ್ಲಿ ಪ್ರಚಲಿತದಲ್ಲಿರುವ ಪರಪೋಕು[30] ಎಂಬ ಪದಗಳ ನೈಜ ಅರ್ಥ ಕಾರ್ಯಗತದಲ್ಲಿದ್ದು ತುಳುನಾಡಿನ ವಾರಸುದಾರಿಕೆಯು ಇತಿಹಾಸ ತಜ್ಞರ ವಿಶ್ಲೇಷಣೆ ಹಾಗೂ ವಸಾಹತುಶಾಹಿಗಳ ಅವಶ್ಯಕ ಹಸ್ತಕ್ಷೇಪದಿಂದಾಗಿ ಈ ಬಗೆಯ ಸಂಕೀರ್ಣತೆಗೆ ಒಳಗಾಗಿದೆ ಎಂಬುವುದನ್ನು ಪ್ರಬಂಧದಲ್ಲಿ ಕಂಡುಕೊಳ್ಳಲಾಗಿದೆ.

ಆಂಗ್ಲಭಾಷೆಯ 'ಇನ್‌ಹೆರಿಟೆನ್ಸ್' ಎಂಬ ಪದವು ಉತ್ತಾರಾಧಿಕಾರ, ಪಿತ್ರಾರ್ಜಿತ, ವಾರಸಾವಾಗಿ ಪಡೆ, ಉತ್ತಾರಾಧಿಕಾರ, ರಿಕ್ತ, ದಾಯಭಾಗ, ಅನುವಂಶಿಕ ಲಕ್ಷಣ, ಪಾಲು, ಹುಟ್ಟುಹಕ್ಕು, ಜನ್ಮಸಿದ್ಧ ಹಕ್ಕು, ಭಾಗವಂದಿಗ, ದಾಯಸ್ಥ, ಹಕ್ಕುದಾರ, ಸೇರಿರುವಿಕೆ, ಅಂತರ್ಗತವಾಗಿರುವಿಕೆ, ಅಂತಸ್ಥತೆ ಮುಂತಾದ ಅರ್ಥಗಳನ್ನು ಒಳಗೊಂಡಿದೆ. ಆಂಗ್ಲಭಾಷೆಯಲ್ಲಿನ ಅರ್ಥಗಳಿಗುಣವಾಗಿ ವಾರಸುದಾರಿಕೆಯನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು. ಕಮ್ ಇನ್‌ಟು ಪೊಸೆಷನ್ ಆಫ್ ಎ ರೈಟ್–ಸ್ವಾಧೀನದಲ್ಲಿರುವ ಹಕ್ಕು, ರೀಸಿವ್ ಆಸ್ ಎ ರೈಟ್ ಪ್ರಮ್ ಓಲ್ಡ್–ಹಳೆಯದರಿಂದ ಹಕ್ಕನ್ನು ಸ್ವೀಕರಿಸುವುದು. ಕ್ರಿಯೇಟಿಂಗ್ ಎ ನ್ಯೂ ಕ್ಲಾಸ್ ಪ್ರಮ್ ಎಕ್ಸಿಷ್ಟಿಂಗ್ ಕ್ಲಾಸ್ ಇಸ್ ಕಾಲ್ಡ್ ಆಸ್ ಇನ್‌ಹೆರಿಟೆನ್ಸ್ ಇತ್ಯಾದಿ. ಇನ್‌ಹೆರಿಟೆನ್ಸ್, ಅಥವಾ ಉತ್ತಾರಾಧಿಕಾರ ಐದು ರೂಪದಲ್ಲಿ ಬಳಕೆಯಲ್ಲಿವೆ ಅವುಗಳೆಂದರೆ 1.ಸಿಂಗಲ್ ಇನ್‌ಹೆರಿಟೆನ್ಸ್ 2.ಹೈಯರಾರ್ಕಿಕಲ್ ಇನ್‌ಹೆರಿಟೆನ್ಸ್. 3.ಮಲ್ಟಿ ಲೆವೆಲ್ ಇನ್‌ಹೆರಿಟೆನ್ಸ್. 4.ಹೈಬ್ರಿಡ್ ಇನ್‌ಹೆರಿಟೆನ್ಸ್. 5.ಮಲ್ಟಿಪಲ್ ಇನ್‌ಹೆರಿಟೆನ್ಸ್ ಮುಂತಾದವುಗಳು.

ವಾರಸುದಾರಿಕೆ, ಉತ್ತಾರಾಧಿಕಾರಕ್ಕೆ ಸಂಬಂಧಿಸಿ ಹಿಂದು ಕಾನೂನುಗಳಲ್ಲಿ ಹಲವಾರು ಚಿಂತನಾ ವ್ಯಾಖ್ಯಾನಗಳಿದ್ದು ಅವುಗಳ ಜೊತೆಗೆ ಆಯಾಯ ಪ್ರದೇಶದಲ್ಲಿ ವಾಸ್ತವ್ಯ ಹೂಡಿರುವ ಸಮುದಾಯಗಳು ಅವುಗಳ ರೂಢಿ–ಸಂಪ್ರದಾಯಗಳಿಗೆ ಅನುಗುಣವಾಗಿ ನಡೆದುಕೊಳ್ಳುವ ಪರಿಪಾಠವಿದೆ. ತುಳುನಾಡಿನ ಈ ಭಾಗದಲ್ಲಿ ಅಳಿಯಸಂತಾನ ಕಟ್ಟು, ನೆರೆಯ ಕಾಸರಗೋಡು ಮತ್ತು ಮಲಬಾರ್ ಪ್ರಾಂತ್ಯಗಳಲ್ಲಿ ಮರುಮಕ್ಕಾತ್ತಾಯ ಪದ್ಧತಿ ಜಾರಿಯಲ್ಲಿದೆ.[31]

ಉತ್ತಾರಾಧಿಕಾರಕ್ಕೆ ಸಂಬಂಧಿಸಿ ಭಾರತದ ಇತಿಹಾಸದಲ್ಲಿ ಎರಡು ಬಹುಮುಖ್ಯ ಚಿಂತನೆಗಳ ಅಸ್ತಿತ್ವವನ್ನು ಕಾಣಬಹುದು. ಜೀಮೂತವಾಹನನ ದಯಾಭಾಗವನ್ನು ಬಂಗಾಳಿ ಚಿಂತನೆ ಎಂದು, ವಿಜ್ಞಾನೇಶ್ವರನ ಮಿತಾಕ್ಷರವನ್ನು ಬನಾರಸ್ ಚಿಂತನೆಗಳೆಂದು ಹಿಂದೂ ಕಾನೂನುಗಳಡಿಯಲ್ಲಿ ಒಪ್ಪಿಕೊಳ್ಳಲಾಗಿದೆ. ಇವುಗಳಲ್ಲಿ ಮಿತಾಕ್ಷರ ಭಾರತಾದ್ಯಂತ ಪ್ರಚಲಿತದಲ್ಲಿದ್ದು, ಬಹುತ್ವದ ಆಧಾರದಲ್ಲಿ ರೂಪುಗೊಂಡಿದೆ. ದಕ್ಷಿಣ ಭಾರತದ ದ್ರವಡ (ದ್ರಾವಿಡ) ಚಿಂತನೆಯು ದಕ್ಷಿಣಭಾರತದ ಉತ್ತಾರಾಧಿಕಾರಕ್ಕೆ ಸರಿಹೊಂದುವ ಚಿಂತನೆಯಾಗಿದೆ.

ತುಳುವರ ವಾರಸುದಾರಿಕೆ ಇಲ್ಲವೇ ಉತ್ತಾರಾಧಿಕಾರತ್ವ ಹಲವಾರು ಸಂಕೀರ್ಣ ಹಾಗೂ ಸಂಪ್ರದಾಯ ಲೇಪಿತವಾಗಿದ್ದು, ಕೆಲವೊಂದು ರೂಢಿ ಸಂಪ್ರದಾಯಗಳಲ್ಲ ವಿರೋಧಾಭಾಸಗಳಿವೆ. ಉದಾಹರಣೆಗೆ ತುಳುನಾಡಿನಲ್ಲಿ ವಾಸ್ತವ್ಯವಿರುವ ಸುಮಾರು ನಲ್ವತ್ತರಡಕ್ಕೂ ಮಿಕ್ಕಿ ಜಾತಿಸಮುದಾಯಗಳು ಅಳಿಯಸಂತಾನದ ವಾರಸಾಧಿಕಾರಗಳನ್ನು ಗುರುತಿಸಿಕೊಂಡಿದೆಯಾದರೂ ಸಮುದಾಯಗಳ ಆಚರಣೆಗಳಲ್ಲಿ ವ್ಯತ್ಯಾಸಗಳಿವೆ. ತುಳುನಾಡಿನ ಅಳಿಯಸಂತಾನ ಕಟ್ಟು ನೆರೆಯ ರಾಜ್ಯದ ಮರುಮಕ್ಕಾತ್ತಾಯ ವಾರಸುದಾರಿಕೆಯ ಆಯಾಮಗಳೊಂದಿಗೆ ಹೋಲಿಕೆಯನ್ನು

ಪಡೆದುಕೊಂಡಿದೆ. ತುಳುನಾಡಿನಲ್ಲಿ ಭೂಒಡೆತನ ಮತ್ತು ಪರಿಶಿಷ್ಟ, ಧಾರ್ಮಿಕ ಮತ್ತು ಸಾಂಸ್ಕೃತಿಕ ಅಧಿಕಾರದ ನೆಲೆಗಟ್ಟಿನಲ್ಲಿ ಅಳಿಯಸಂತಾನ ವಾರಸುದಾರಿಕಾ ಪದ್ಧತಿ ಚಾಲ್ತಿಯಲ್ಲಿದ್ದು, ಇದನ್ನು ಸ್ಥಳೀಯ ಕಾನೂನುಕಟ್ಟಳೆಯ ಪರಂಪರೆ ಎನ್ನಲಾಗಿದೆ. ಈ ಪ್ರದೇಶಕ್ಕೆ ವಲಸೆ ಬಂದು ಜೀವನವನ್ನು ಕಂಡುಕೊಂಡ ಸಮುದಾಯಗಳಲ್ಲಿ ಪಿತೃಪ್ರಧಾನ, ಮಕ್ಕಳಕಟ್ಟು ಮುಂತಾದ ವಾರಸುದಾರಿಕೆಗಳಿದ್ದು ಅವುಗಳನ್ನು ಜತನವಾಗಿ ಕಾಪಾಡಿಕೊಂಡು ಬಂದಿದೆ. ಇವು ಮೇಲ್ವರ್ಗಕ್ಕೆ ಸೀಮಿತವಾಗಿದ್ದರೂ, ಪ್ರಸ್ತುತ ವಾರಸುದಾರಿಕೆಯ ಇವೆರಡೂ ಚಿಂತನೆಗಳು ಸಂಕೀರ್ಣ ರೂಪ ಪಡೆದುಕೊಂಡಿವೆ. ವಸಾಹತುಶಾಹಿ ಆಡಳಿತದ ಸಂದರ್ಭದ ನ್ಯಾಯಾಧಿಕರಣ, ಅಳಿಯಸಂತಾನ ಸಾರ್ವತ್ರಿಕವಾಗಿ ಎಲ್ಲಾ ತುಳುವರಿಗೂ ಅನ್ವಯವಾಗುವುದಿಲ್ಲವೆಂದು ಹಲವಾರು ಸಂದರ್ಭಗಳಲ್ಲಿ ನ್ಯಾಯತೀರ್ಮಾನ ನೀಡಿ ಈ ಚಿಂತನಾ ಲಹರಿಯಲ್ಲಿ ಗೋಜಲುಗಳನ್ನು ಸೃಷ್ಟಿಸಿದೆ. ಈ ಗೋಜಲುಗಳು ಮತ್ತಷ್ಟು ಕ್ಲಿಷ್ಟಗೊಂಡಿರುವುದು ವಸಾಹತುಶಾಹಿ ಶಿಕ್ಷಣದಿಂದಾಗಿ, ವಸಾಹತುಶಾಹಿ ಶಿಕ್ಷಣ ವ್ಯವಸ್ಥೆ ತುಳುನಾಡಿನಲ್ಲಿ ಆಸ್ತಿತ್ವವಿರುವ ರೂಢಿಸಂಪ್ರದಾಯಗಳಿಗೆ ಭಿನ್ನ ಅರ್ಥ ಕಲ್ಪಿಸಿ ಕೆಲವೊಂದು ಬಾರಿ ವಿರೋಧ ವ್ಯಕ್ತಪಡಿಸಿತ್ತಾದರೂ ಕೆಲವು ಸಮುದಾಯಗಳು ಕಾಲಾನಂತರದಲ್ಲಿ ಈ ಗೋಜಲುಗಳಿಂದ ಹೊರಬಂದಿವೆ. ಉದಾಹರಣೆಗೆ ತುಳುನಾಡಿನಲ್ಲಿ ಮತಪರಿವರ್ತಿತ ಕ್ರೈಸ್ತ ಸಮುದಾಯಕ್ಕೆ ಸಂಬಂಧಿಸಿದ ವಾರಸುದಾರಿಕೆಯ ಕಾನೂನುಗಳನ್ನು 1865ರ ಕಾನೂನಿಗೆ ಅನ್ವಯಿಸಿ, ಇಂಗ್ಲೀಷ್ ಮಾದರಿಯ ಕಾನೂನುಗಳಿಗೆ ಸರಿಹೊಂದಿಸಿರುವುದು. ವಸಾಹತಿನ ಕ್ರೈಸ್ತರು ವಸಾಹತುಶಾಹಿಯ ಧರ್ಮವನ್ನು ಹಂಚಿಕೊಂಡಿರುವುದರಿಂದ ಸಹಜವಾಗಿ ಅವರು ಇಂಗ್ಲೀಷ್ ಕಾನೂನು ಸಂಪ್ರದಾಯಕ್ಕೆ ಒಳಪಡಬೇಕಾಗುತ್ತದೆ ಎಂಬುವುದು ಹೆನ್ರಿ ಮೈನೆಯವರ ವಾದವಾಗಿತ್ತು. 1872, 15ರ ಕ್ರೈಸ್ತ ವಿವಾಹ ಕಾನೂನು ದ. ಇಂಡಿಯನ್ ಕ್ರಿಶ್ಚನ್ ಮ್ಯಾರೇಜ್ ಆಕ್ಟ್ ಅಂಗ್ಲಿಕನ್ ಮಾದರಿ ವಿವಾಹ ಸಂಪ್ರದಾಯವನ್ನು ಕಾನೂನಿನ ಮೂಲಕ ಪ್ರತಿಬಂಧಿಸಿ ಭಾರತೀಯ ಕ್ರೈಸ್ತರನ್ನು ಅವರ ಮೂಲ ಮತಧರ್ಮದ ಚೌಕಟ್ಟಿನಿಂದ ಹೊರಗಿಡುವಂತೆ ಮಾಡಿತು. ಇದರ ಪ್ರತಿಫಲವೆಂಬಂತೆ 1930ರಲ್ಲಿ ರೋಮನ್ ಕ್ಯಾಥೋಲಿಕ್ಕರು ಪ್ರತ್ಯೇಕ ಶಾಸನ ರೂಪಿಸುವಂತೆ ವಸಾಹತುಶಾಹಿಗೆ ಒತ್ತಡವನ್ನು ತಂದರು. ಇದು ಒಂದು ರೀತಿಯ ಸಂಕೀರ್ಣತೆಯಾದರೆ, ಕ್ರೈಸ್ತೇತರರಲ್ಲೂ ಈ ರೀತಿಯ ವೈರುಧ್ಯಗಳು ಸೃಷ್ಟಿಯಾಗಿ ವಸಾಹತುಪೂರ್ವದ ವಾರಸುದಾರಿಕೆಯ ಆಯಾಮಗಳು ಕೌಟುಂಬಿಕ ವಿಚಾರಗಳಿಗೆ ಸಂಬಂಧಿಸಿ ಬದಲಾವಣೆಗೆ ತೆರೆದಿವೆ.

ಪ್ರಸ್ತುತ ಅಧ್ಯಯನದಲ್ಲಿ ಅಳಿಯಸಂತಾನಕಟ್ಟು, ಮಕ್ಕಳಕಟ್ಟು, ಮಾತೃ-ಪಿತೃ ಪ್ರಧಾನತೆಯನ್ನು ಒಂದು ಪರಿಕಲ್ಪನೆಯನ್ನಾಗಿ ಮಾತ್ರ ತೆಗೆದುಕೊಳ್ಳಲಾಗಿದೆ ವಿನಃ ಸಂಪೂರ್ಣ

ಅಧ್ಯಯನದ ವಸ್ತುವಾಗಿ ಅಲ್ಲ. ಬದಲಿಗೆ ಈ ಪ್ರದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ನ್ಯಾಯಿಕ ನೆಲೆಗಟ್ಟುಗಳ ವಾರಸುದಾರಿಕೆಯನ್ನು ಸಮಗ್ರವಾಗಿ ಚಿಂತಿಸಲಾಗಿದೆ. ಪ್ರಬಂಧದ ಮೊದಲ ಅಧ್ಯಾಯದಲ್ಲಿ ವಾರಸುದಾರಿಕೆಯ ಆಯಾಮಗಳಲ್ಲಿ ಒಂದಾದ ತುಳುವರ ವಾಸ್ತವ್ಯ, ಸಾಮಾಜಿಕ ಅನನ್ಯತೆಯ ಬಗ್ಗೆ ಮೂಲಅಧ್ಯಯನ ರೂಪದಲ್ಲಿ ವಿಶ್ಲೇಷಿಸುವ ಪ್ರಯತ್ನಗಳನ್ನು ಮಾಡಲಾಗಿದ್ದು, ಅದರ ಜೊತೆಗೆ ತುಳುನಾಡಿನ ಇತಿಹಾಸ ತಜ್ಞರ ಅಭಿಪ್ರಾಯಗಳು ಹಾಗೂ ವಾದಗಳನ್ನು ಪ್ರಸ್ತಾಪಿಸಲಾಗಿದೆ. ತುಳುನಾಡಿನ ಮೂಲನಿವಾಸಿಗಳೂ ಸೇರಿಕೊಂಡು ಇಲ್ಲಿನ ಸಂಸ್ಕೃತಿಯನ್ನು ಒಪ್ಪಿಕೊಂಡು ಈ ಪ್ರದೇಶದಲ್ಲಿ ನೆಲೆನಿಂತ ಸಮುದಾಯಗಳ ವಾಸ್ತವ್ಯ ಶ್ರೇಣಿಕೃತ ಸಮಾಜದ ರಚನೆಗೆ ಅವಕಾಶ ಮಾಡಿರುವುದು ಮಾತ್ರವಲ್ಲ ಚರಿತ್ರೆ ರೂಪುಗೊಳ್ಳುವಲ್ಲಿ ಕೃಷಿಯ ಪ್ರಾಮುಖ್ಯತೆ, ಸಮುದಾಯಗಳ ಸಂಬಂಧಗಳ ಸ್ವರೂಪ, ಬುಡಕಟ್ಟು, ಸಮುದಾಯ, ಜಾತಿ ಆಧಾರಿತವಾದ ಬೆಳವಣಿಗೆ, ಸಾಮುದಾಯಿಕವಾಗಿ ಭೂಮಿಯ ಒಡೆತನ ಪಡೆಯುವಲ್ಲಿನ ಸಂಬಂಧಗಳು, ಕೃಷಿಯ ವಿಸ್ತರಣೆಯಿಂದಾದ ಬದಲಾವಣೆಗಳು, ನೂತನ ಅರ್ಥವ್ಯವಸ್ಥೆ, ಅಧೀನ, ಪ್ರಧಾನ ಆರ್ಥಿಕತೆಯ ಕಲ್ಪನೆ, ಸಾಮುದಾಯಿಕ ಭೂಮಿಯ ಒಡೆತನದಲ್ಲಾದ ಪಲ್ಲಟ, ಸಮಾಜದ ಪುನರ್‌ರಚನೆ, ಕೆಳವರ್ಗ-ಮೇಲ್ವರ್ಗ ಇಲ್ಲವೇ ಅಧೀನ-ಪ್ರಧಾನ ಆರ್ಥಿಕತೆಯ ಆಶೋತ್ತರ ಈಡೇರಿಸುವ ಬಗೆಗೆ ಈ ಅಧ್ಯಯನದಲ್ಲಿ ವಾಸ್ತವತೆಯ ನೆಲೆಯಲ್ಲಿ ಪ್ರಸ್ತಾಪಿಸಲಾಗಿದೆ. ಜೊತೆಗೆ ತುಳುವ ಸಂಸ್ಕೃತಿಯ ರೂಪುಗೊಳ್ಳುವಿಕೆಯ ಹಿನ್ನೆಲೆಯನ್ನು ಮುಂದಿಟ್ಟುಕೊಂಡು ಅಧ್ಯಯನಿಸಲಾಗಿದೆ.

ಪ್ರಬಂಧದ ಎರಡನೇ ಅಧ್ಯಾಯದಲ್ಲಿ ತುಳುನಾಡಿನ ಪ್ರಭಾವಿ ಸಮುದಾಯಗಳು ಮತ್ತು ವಾರಸುದಾರಿಕೆಯ ಬಗ್ಗೆ ವಿಚಾರಗಳನ್ನು ಪ್ರಸ್ತಾಪಿಸಲಾಗಿದೆ. ವಿಜಯನಗರ ಕಾಲಾವಧಿಯಿಂದ ಕೃಷಿ. ಕೃಷಿಯೇತರ ಕ್ಷೇತ್ರಗಳಲ್ಲಾದ ಬದಲಾವಣೆ, ಸಮುದಾಯಗಳ ಚಲನೆ, ಭೂಮಿಯ ಒಡೆತನದ ಬಗ್ಗೆ ಚರ್ಚಿಸಲಾಗಿದೆ. ಬ್ರಾಹ್ಮಣರ ವಲಸೆಯಿಂದ ಮೂಲ ವಾಸ್ತವ್ಯಗಾರರ ಜೀವನ ವ್ಯವಸ್ಥೆಯಲ್ಲಿ ಆದ ಬದಲಾವಣೆಯ ಬಗ್ಗೆ ವಿವರಿಸಲಾಗಿದೆ. ಉದಾಹರಣೆಗೆ ದಕ್ಷಿಣಭಾರತದ ಶಾಸನಗಳಲ್ಲಿ ಪ್ರಸ್ತಾಪಿತ ಕುಟ್ಟನಿಕ್ಕಿ-ಭೂಮಿಯ ಪೂರ್ವದ ವಾರಸುದಾರರನ್ನು ಬದಲಾಯಿಸುವುದು. ಮುನ್ ಪೆರಾರ್‍ಯ ಮಾರಿ-ಹೊಸತಾಗಿ ಭೂಮಿ ಪಡೆದುಕೊಂಡವರು ಮುಂತಾದ ವಿಚಾರಗಳ ಉಲ್ಲೇಖಗಳಿವೆ. ಈ ಆಧಾರದಲ್ಲಿ ತುಳುನಾಡಿನಲ್ಲಾದ ಬದಲಾವಣೆಯ ಬಗ್ಗೆ ಕೂಲಂಕುಶವಾಗಿ ಅವಲೋಕಿಸಿದಾಗ ಸಾಮಾನ್ಯಶಕೆ 14-15ನೇ ಶತಮಾನಗಳಲ್ಲಿ ಕಾಡು ಸವರಿ ಭೂಮಿಯನ್ನು ಕೃಷಿಯೋಗ್ಯಗೊಳಿಸಿರುವುದು, ಭೂಧಾನ, ಪರಶುರಾಮ ಸೃಷ್ಟಿಯ ಐತಿಹ್ಯ ಮುಂತಾದವುಗಳ ಉಲ್ಲೇಖಗಳು ಶಾಸನಗಳಲ್ಲಿ ವಿಪುಲವಾಗಿರುವುದರಿಂದ ತುಳುನಾಡಿನ ಭೂಒಡೆತನದಲ್ಲಿ ಪ್ರಭಾವಿ ಸಮುದಾಯಗಳ ಪ್ರಭಾವವನ್ನು ಅರ್ಥೈಸಿಕೊಳ್ಳಬಹುದು.

ಸಾಮಾನ್ಯಶಕೆ ಹದಿನಾಲ್ಕನೇ ಶತಮಾನದ ನಂತರ ಅಳೂಪರ ಅಧಿಕಾರದ ನೆಲೆಗಳು ದುರ್ಬಲಗೊಂಡಾಗ ನಿಧಾನವಾಗಿ ಜೈನರ ಪಾಳೇಯಗಾರಿಕೆಯು ಈ ಪ್ರದೇಶದಲ್ಲಿ ಕಾಣಿಸಿಕೊಂಡಿತು. ಭೂಮಿಯ ಒಡೆತನಕ್ಕೆ ಹೆಚ್ಚು ನಿಕಟರಾದ ಜೈನರು ಈ ಪ್ರದೇಶದ ವಾರಸುದಾರಿಕೆಯ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಈ ಬೆಳವಣಿಗೆಯ ಜೊತೆಗೆ ವಸಾಹತುಪೂರ್ವದ ಕಾಲದ ಭೂಮಿಯ ಒಡೆತನಕ್ಕೆ ಸಂಬಂಧಿಸಿದಂತೆ ಹಲವಾರು ವರ್ಗಗಳ ನಡುವೆ ಪೈಪೋಟಿ ನಡೆದಿದ್ದು, ಕೆಲವು ವರ್ಗಗಳು ಪಾರಮ್ಯತೆ ಸಾಧಿಸಿದ್ದವು. ಅವುಗಳಲ್ಲಿ ಮುಖ್ಯವಾದುದೆಂದರೆ ಬ್ರಾಹ್ಮಣವರ್ಗ. ಭೂಮಿಯ ಒಡೆತನವು ಸಹಜವಾಗಿಯೇ ಬ್ರಾಹ್ಮಣರಿಗೂ ಕೆಲವೊಂದು ವಿಶೇಷ ಅಧಿಕಾರ, ಸ್ಥಾನಮಾನಗಳನ್ನು ಆ ಕಾಲಘಟ್ಟದಲ್ಲಿ ನೀಡಿತೆಂಬುವುದು ಸಾಂಪ್ರದಾಯಿಕ ಚರಿತ್ರೆ, ಶಾಸನಗಳು ಹಾಗೂ ಅಲಿಖಿತ ಆಕರಗಳಿಂದ ತಿಳಿದುಕೊಳ್ಳಬಹುದು.[32] ಚರಿತ್ರೆಯ ಮೂಲಗಳ ಪ್ರಕಾರ ಬ್ರಾಹ್ಮಣರು ತುಳುನಾಡಿನ ನಿಜವಾದ ಮೂಲನಿವಾಸಿಗಳಲ್ಲ, ಬದಲಿಗೆ ವಲಸಿಗ ವರ್ಗವಾಗಿದೆ. ಆದರೆ ಅವರು ತಮ್ಮ ವಲಸೆಯ ಇತಿಹಾಸದ ಮೂಲ ಸ್ವರೂಪವನ್ನೆ ಬದಲಾಯಿಸುವ ಪ್ರಯತ್ನದಲ್ಲಿ ತೊಡಗಿದರಲ್ಲದೇ ಇಲ್ಲಿನ ಮೂಲನಿವಾಸಿಗಳಿಗೆ ವಲಸಿಗ ಪಟ್ಟ ಕಟ್ಟಿ ತಾವೇ ಮೂಲನಿವಾಸಿಗಳೆಂಬಂತೆ ತೋರ್ಪಡಿಸಿ, ಅದನ್ನು ಸಾಮಾಜಿಕ ವ್ಯವಸ್ಥೆಯ ನಂಬುಗೆಯ ಸಂಪ್ರದಾಯವನ್ನಾಗಿ ಪರಿವರ್ತಿಸಿದರು ಎಂಬುವುದು ವಿದ್ವಾಂಸರ ಅಭಿಪ್ರಾಯವಾಗಿದೆ.[33] ಈ ರೀತಿಯ ಕಾರ್ಯಯೋಜನೆಗಳು ಪ್ರಬಲ ವರ್ಗಗಳು ತನ್ನದಲ್ಲದ ವಾರಸುದಾರಿಕೆಯನ್ನು ಹೇಗೆ ತನ್ನದಾಗಿಸುವ ಪ್ರಯತ್ನಗಳನ್ನು ಕ್ರಮಬದ್ಧಗೊಳಿಸಿತು ಎಂಬುವುದಕ್ಕೆ ಸಾಕ್ಷಿಯಾಗಿದೆ. ಮುಂದುವರೆದು ಬ್ರಾಹ್ಮಣರು ವಲಸೆ ಬಂದಾಗ ಭೂಒಡೆತನವನ್ನು ಹೊಂದಿದ್ದ ಮೂಲವಾಸಿ ಪ್ರಭಾವಿಗಳು ಜೈನರೊಂದಿಗೆ ಕೈಜೋಡಿಸಿ ಇಲ್ಲವೇ ಸಂಬಂಧ–ಸಹಕಾರ ಬೆಳೆಸಿಕೊಂಡು ಬ್ರಾಹ್ಮಣರ ವಾಸ್ತವ್ಯಕ್ಕೆ ಅನುವು ಮಾಡಿದರಲ್ಲದೇ ಈ ಭಾಗದ ಇತಿಹಾಸಕ್ಕೆ ಹೊಸ ಆಯಾಮವೊಂದನ್ನು ನೀಡಿದರು.[34] ಜೈನರ ರಾಜಕೀಯ ಅಧಿಕಾರ, ಸಾಮಾಜಿಕ ಸ್ಥಿತಿ–ಗತಿ ಹಾಗೂ ಆರ್ಥಿಕ ಶಕ್ತಿಗಳು ಇಲ್ಲಿನ ಒಕ್ಕಲುಗಳನ್ನು ಅಧಿಕಾರಕ್ಕಾಗಿ ಹಪಿಸುವಂತೆ ಮಾಡಿತ್ತಲ್ಲದೇ, ಜೈನಮತವನ್ನು ಉನ್ನತ ಸಂಸ್ಕೃತಿಯನ್ನಾಗಿ ಪರಿಗಣಿಸಲು ಪ್ರೇರೆಪಿಸಿರಬೇಕೆಂದು ಇತಿಹಾಸತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ಈ ಪ್ರದೇಶದ ಕೃಷಿ ಆಧಾರಿತ ಅಧಿಕಾರ ಪಡೆದುಕೊಂಡ ವಲಸಿತ ಜೈನಸಮುದಾಯಗಳ ಕೃಷಿ–ವ್ಯಾಪಾರ ಮತ್ತು ಆರ್ಥಿಕ ಉನ್ನತಿಯಿಂದ ಪ್ರಭಾವಿತಗೊಂಡು ಸಹಕುಟುಂಬ ವಾಸ್ತವ್ಯ ಹೂಡಿರುವ ವಿಚಾರವನ್ನು ಇತಿಹಾಸ ಒಪ್ಪಿಕೊಂಡಿದೆ. ಜೈನ ಮತ್ತು ಒಕ್ಕಲುಗಳ ಕುಟುಂಬಗಳಲ್ಲಿನ ಸಾಮಾಜಿಕ ಸಂಬಂಧಗಳು ಈ ಬಗೆಯ ಅಭಿಪ್ರಾಯ ತಳೆಯಲು ಕಾರಣವಾಗಿದೆ.[35] ಇವೆಲ್ಲವೂ ಜೈನರ ನೆಲೆ ಭದ್ರವಾಗಲು ಕಾರಣವಾಯಿತ್ತಲ್ಲದೇ ಅವರ ಭೂಮಿಯ ವಾರಸುದಾರಿಕೆಯ ಪ್ರಕ್ರಿಯೆಗೆ ಚಾಲನೆ

ನೀಡಿತು. ಜೈನ ನಾಮಾಂಕಿತಗಳಾದ ಅಜಿಲ, ಆಳ್ವ, ಅಧಿಕಾರಿ, ಬಲ್ಲಾಳ, ಬಂಗ, ಭಂಡಾರಿ, ಚೌಟ, ಹೆಗ್ಡೆ, ಕಡಂಬ, ಕಾಜವ, ಕೊಂಡೆ, ಮಲ್ಲಿ, ಪೂವಣಿ, ಬಲಿಪ ಇತ್ಯಾದಿ ಇಲ್ಲಿನ ಒಕ್ಕಲುಗಳ ಸಾದೃಶ್ಯತೆಯನ್ನು ಇಟ್ಟುಕೊಂಡಿವೆ. ಜೊತೆಗೆ ಒಕ್ಕಲುಗಳು ಆರಾಧಿಸುತ್ತಿರುವ ಸರ್ವಚೇತನಗಳನ್ನು ಜೈನಕುಟುಂಬಗಳು ಆರಾಧಿಸುತ್ತಿರುವುದಲ್ಲದೇ ವಾರಸ ಅಧಿಕಾರವನ್ನು ಮುಂದುವರೆಸಿಕೊಂಡು ಎರಡು ವರ್ಗಗಳ ಅನ್ಯೋನ್ಯತೆಗೆ ನಾಂದಿ ಹಾಡಿತು.[36] ಹೀಗೆ ಜೈನರು ದೈವದ ಆರಾಧಕರಾಗಿ, ನೂರಾರು ದೈವಗಳನ್ನು ಅಧಿಕಾರದ ಮಾನ್ಯತೆಗಳಿಗನುಗುಣವಾಗಿ ಮರುರೂಪಿಸಿ, ಭೂಒಡೆತನದ ಅಧಿಕಾರಗಳನ್ನು ಸಾಂಸ್ಕೃತಿಕ, ಧಾರ್ಮಿಕ ಮತ್ತು ರಾಜಕೀಯವಾಗಿ ಮಾನ್ಯಮಾಡುವ ಆರಾಧನೆಗಳನ್ನು ಸೃಷ್ಟಿಸಿ ನೆಲೆ ಭದ್ರಪಡಿಸಿಕೊಂಡರು.[37] ಈ ರೀತಿಯ ಆಚಾರ, ವಿಚಾರಗಳನ್ನು ವಿಶ್ಲೇಷಣೆಗೆ ಒಳಪಡಿಸಿದರೆ ವಸಾಹತುಪೂರ್ವದಲ್ಲಿ ಅಧಿಕಾರ ಹೇಗೆ ಸ್ಥಾಪಿಸಲ್ಪಟ್ಟಿತ್ತು ಎಂಬುವುದನ್ನು ಸ್ಪಷ್ಟಪಡಿಸಬಹುದು. ವಸಾಹತುಪೂರ್ವದ ರಾಜಪ್ರಭುತ್ವ, ಪ್ರಭಾವಿ ಸಮುದಾಯಗಳು, ಸಾಂಸ್ಥಿಕ ವ್ಯವಸ್ಥೆಗಳು ಇತ್ಯಾದಿಗಳು ಭೂಮಿಯ ಮೇಲೆ ಒಡೆತನ ಸ್ಥಾಪಿಸಿ, ಅಧಿಕಾರ ಚಲಾಯಿಸುವಲ್ಲಿ ಅಲೌಕಿಕ ಶಕ್ತಿ ಪ್ರಭಾವಿಸಿರುವುದನ್ನು ಅಥವಾ ಬಳಕೆಯನ್ನು ಶಾಸನಗಳಲ್ಲೂ ಉಲ್ಲೇಖಿಸಿವೆ.[38]

ಮೂರನೇ ಅಧ್ಯಾಯದಲ್ಲಿ ವಾರಸುದಾರಿಕೆಯ ವಿವಿಧ ಸ್ತರಗಳ ಬಗ್ಗೆ ಅಧ್ಯಯನ ನಡೆಸಲಾಗಿದೆ. ಇತಿಹಾಸದ ಆರಂಭಿಕ ಶತಮಾನಗಳಲ್ಲಿ ವಾರಸುದಾರಿಕೆ ಎಂಬ ಪರಿಕಲ್ಪನೆಯು ಸ್ಪಷ್ಟ ಅರ್ಥ ಅಥವಾ ರೂಪ ಪಡೆದುಕೊಳ್ಳದ ಕಾರಣ ಅದರ ಅರ್ಥೈಸುವಿಕೆಗೆ ಸಂಬಂಧಿಸಿದಂತೆ ವಿಭಿನ್ನ ಆಯಾಮ ಅಥವಾ ಮಗ್ಗುಲುಗಳನ್ನು ಪರಿಶೀಲಿಸುವುದು ಅನಿವಾರ್ಯ. ಒಂದರ್ಥದಲ್ಲಿ 'ಭೂಮಿಯ ಒಡೆಯ' ಎಂಬುವುದು ಮಧ್ಯಯುಗೀನಾ ಚರಿತ್ರೆಯಲ್ಲಿ ಕಂಡುಬರುವ ಉೂಳಿಗಮಾನ್ಯ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿರುವ 'ಖಾಸಗಿ ಒಡೆತನ'ದ ಸೂಚಕ. ಆದರೆ ಉಳಿಗಮಾನ್ಯ ವ್ಯವಸ್ಥೆಯ ಪೂರ್ವದಲ್ಲಿ ಈ ಪದ ನಿಧಾನವಾಗಿ ಆದರೆ ನಿರ್ದಿಷ್ಟವಾಗಿ ವಿಕಾಸಗೊಂಡಿರುವುದರಿಂದ ಊಳಿಗಮಾನ್ಯ ಪದ್ಧತಿಯಲ್ಲಿ ಕಾಣುವ ಈ ವ್ಯವಸ್ಥೆಯು ಇತಿಹಾಸಪೂರ್ವದ ಬೆಳವಣಿಗೆಗಳ ಮುಂದುವರೆದ ಭಾಗ ಎಂಬುವುದು ನಿಸ್ಸಂದೇಹ. ಅಧಿಕಾರ ಮತ್ತು ಅಧಿಕಾರದ ಚಲಾವಣೆ ಇವುಗಳೆರಡು ಸಾಮಾಜಿಕ ಅವಸ್ಥೆಗಳಾಗಿವೆ. ಕೃಷಿ ಅಧಿಕಾರದ ರಚನೆಯಲ್ಲಿ ಆಳುವವರ ಪ್ರಬಲತೆ, ಆಳಲ್ಪಡುವವರ ವಿಧೇಯತೆ ಭೂಮಿಯ ಒಡೆತನವನ್ನು ನಿರ್ಧರಿಸುವಲ್ಲಿ ಪ್ರಾಮುಖ್ಯತೆಯನ್ನು ಪಡೆದಿತ್ತು. ಮಾತ್ರವಲ್ಲ ಪ್ರಬಲ ಸಮುದಾಯಗಳು ಅಲೌಕಿಕ ಶಕ್ತಿಯನ್ನು ಮುಂದಿಟ್ಟುಕೊಂಡು ತುಳುನಾಡಿನಲ್ಲಿ ಪರಿಷ್ಕೃತವಾಗಿದ್ದ, ಗುತ್ತು, ಮಾಗಣೆ, ಸೀಮೆ, ರಾಜ್ಯಗಳಲ್ಲಿ ಅಧಿಕಾರವನ್ನು ತನ್ನದಾಗಿಸಿತ್ತು. ಜೊತೆಗೆ ಸೀಮೆ, ಮಾಗಣೆ, ಗ್ರಾಮ, ಗುತ್ತು ದೈವ-ದೇವರ ಶ್ರೇಣಿಕರಣ

ತುಳುನಾಡಿನ ಸಂಸ್ಕೃತಿಯನ್ನು ವಿಶಿಷ್ಟಗೊಳಿಸಿತ್ತಲ್ಲದೇ ಅಧಿಕಾರದ ವಾರಸುದಾರಿಕೆಯನ್ನು ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಕ್ರಮಬದ್ಧಗೊಳಿಸಿತು.

ಜಗತ್ತಿನ ಮಾನವ ವ್ಯವಸ್ಥೆಯ ಮೂಲಘಟಕಗಳಾದ ಗಂಡು ಮತ್ತು ಹೆಣ್ಣು, ಸ್ವಭಾವ ಹಾಗೂ ದೈಹಿಕ ರಚನೆಯಲ್ಲಿ ಭಿನ್ನರೂಪ ಪಡೆದುಕೊಂಡಿವೆಯಾದರೂ, ಸಂತಾನೋತ್ಪತ್ತಿ ಹಾಗೂ ಆಹಾರದ ಬೇಡಿಕೆ-ಪೂರೈಕೆಗಳ ವಿಚಾರ ಬಂದಾಗ ಒಂದನ್ನೊಂದು ಕೂಡಿಕೊಂಡು ಕಾರ್ಯನಿರ್ವಹಿಸುತ್ತವೆ. ಇದು ಜಗದ ಸ್ವಾಭಾವಿಕ ನಿಯಮ. ಹಸಿವಿನ ಪೂರೈಕೆ ಉತ್ಪಾದನ ವಿಧಾನಗಳೊಂದಿಗೆ ನೇರ ಸಂಬಂಧ ಹೊಂದಿದ್ದು ಇದು ಬದಲಾಗುವ ಋತುಮಾನಗಳನ್ನು ಅವಲಂಬಿಸಿದೆ. ಆಹಾರ ಧಾನ್ಯಗಳನ್ನು ಬೆಳೆಸಿ ತನ್ಮೂಲಕ ಆರ್ಥಿಕ ಮಟ್ಟವನ್ನು ಉನ್ನತಿಗೊಳಿಸುವ ವ್ಯಾವಸಾಯಿಕ ರೀತಿ-ನೀತಿಗಳನ್ನು ಒಳಗೊಂಡಿರುತ್ತದೆ. ಸಂತಾನೋತ್ಪತ್ತಿಯ ಉದ್ದೇಶದಿಂದ ಒಂದಾಗುವ ಗಂಡು ಹೆಣ್ಣುಗಳು ಕೇವಲ ಆ ಉದ್ದೇಶಕ್ಕೆ ಮಾತ್ರ ಸೀಮಿತಗೊಳ್ಳದೇ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಇತರ ಕ್ಷೇತ್ರಗಳಿಗೆ ಸಂಬಂಧಿಸಿದ ಜೀವನ-ಆಚರಣೆಗಳಿಗೂ ಸಂಬಂಧಿಸಿದೆ. ಈ ಎರಡು ಅವರ್ತನಗಳ ಫಲವಾಗಿ ಕುಟುಂಬವೊಂದು ಸ್ಥಾಪಿಸಲ್ಪಟ್ಟು ಕೌಟುಂಬಿಕ ಜೀವನ ಆರಂಭಗೊಳ್ಳುತ್ತದೆ. ಹೀಗೆ ಕುಟುಂಬ ತುಳುವ ಸಂಸ್ಕೃತಿಯಲ್ಲಿ ವಾರಸುದಾರಿಕೆಯ ಮೂಲ ಸ್ತರವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಕೌಟುಂಬಿಕ ವ್ಯವಸ್ಥೆಯು ಹಲವಾರು ಅಂಶ ಕ್ರಿಯೆಗಳನ್ನು ಒಳಗೊಂಡಿದ್ದು ಅವುಗಳಲ್ಲಿ ಮುಖ್ಯವಾದವುಗಳೆಂದರೆ ಆಹಾರ, ವಸತಿ, ಉಡುಗೆ-ತೊಡುಗೆ, ಸಂಬಂಧ, ನಿರ್ಧಾರ, ಭಾಷೆ, ನಿಷೇಧಗಳು, ರಕ್ಷಣೆ, ಕೃಷಿಪದ್ಧತಿ, ಆಚರಣೆ, ನಂಬಿಕೆ, ಕ್ರೀಡೆ, ಗಾದೆ, ಒಗಟು, ಹಾಡು, ವ್ಯವಹಾರ ಇತ್ಯಾದಿಗಳು. ಆದರೆ ಇದು ಎಲ್ಲಾ ಕುಟುಂಬಗಳ ವಿಚಾರದಲ್ಲೂ ಸಮಾನವಾಗಿರುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಹಲವು ವಿಚಾರಗಳಿಗೆ ಸಂಬಂಧಿಸಿದಂತೆ ಕೌಟುಂಬಿಕ ಜೀವನ ಕುಟುಂಬದಿಂದ ಕುಟುಂಬಕ್ಕೆ ಭಿನ್ನತೆಯನ್ನು ಪಡೆದುಕೊಂಡಿರುತ್ತದೆ. ಆದ್ದರಿಂದ ಕೆಲವು ಸಂದರ್ಭಗಳಲ್ಲಿ ಒಂದು ಕುಟುಂಬಕ್ಕೆ ಶಿಷ್ಟವಾಗಿರುವ ಅಂಶಗಳು ಇನ್ನೊಂದು ಕುಟುಂಬಕ್ಕೆ ಪರಿಶಿಷ್ಟವಾಗಿರುತ್ತವೆ. ಆದರೆ ಈ ವ್ಯತ್ಯಾಸಗಳು ಕುಟುಂಬದ ಮೂಲತತ್ವಕ್ಕೆ ಯಾವುದೇ ಅಪಚಾರವನ್ನು ಮಾಡುವುದಿಲ್ಲ. ಸಮಾನ ಆಚರಣೆಗಳು, ನಂಬಿಕೆ ಇತ್ಯಾದಿಗಳಿರುವ ಕುಟುಂಬಗಳೆಲ್ಲ ಒಂದೆಡೆ ಸೇರಿದಾಗ ಒಂದು ಜನಾಂಗ ರೂಪುಗೊಂಡು, ಸಮಾನ ವ್ಯವಹಾರದ ವೇದಿಕೆಯಲ್ಲಿ ಒಂದಾಗುತ್ತವೆ. ಕುಟುಂಬದ ಹೊರಗಿನ ಜಗತ್ತಿನ ಸಂಸ್ಕೃತಿ, ಆಚರಣೆ ಹಾಗೂ ನಡವಳಿಕೆಗಳ ಪ್ರಭಾವ ಎಷ್ಟೇ ತೀವ್ರವಾಗಿದ್ದರೂ, ಪ್ರತಿಯೊಂದು ತನ್ನದೇ ಆದ ಆಸ್ತಿತ್ವವನ್ನು ಉಳಿಸಿಕೊಳ್ಳುವಂತೆ ಕುಟುಂಬವು ತನ್ನ ನೆಲೆಯನ್ನು ಉಳಿಸಿಕೊಂಡು ಬರುತ್ತದೆ.[39] ಮಾತ್ರವಲ್ಲ ಹೊರ ಜಗತ್ತಿನಲ್ಲಿ ತನ್ನದೇ ಆದ ಸ್ಥಾನಮಾನಗಳನ್ನು

ಪಡೆದುಕೊಳ್ಳುತ್ತವೆ. ಹೀಗೆ ಕುಟುಂಬಕ್ಕೆ ಗಂಡು-ಹೆಣ್ಣುಗಳ ಸಮನ್ವಯತೆ ಕಾರಣವಾದರೇ ಗಂಡು ಹೆಣ್ಣುಗಳ ಸಮನ್ವಯತೆಗೆ ಕುಟುಂಬ ಅನಿವಾರ್ಯವಾಯಿತು. ಕುಟುಂಬದ ಆಚರಣೆ, ಸಂಸ್ಕೃತಿ ಇತ್ಯಾದಿಗಳು ನಾಗರೀಕತೆ ಬೆಳವಣಿಗೆಯಾದಂತೆ ವಿಸ್ತರಣೆ ಹಾಗೂ ಮಾರ್ಪಾಡುಗಳಿಗೆ ಒಳಗಾದವೆಂಬುವುದು ವಿದ್ವಾಂಸರ ಅಭಿಪ್ರಾಯ.[40] ಇದು ವಾರಸುದಾರಿಕೆಯ ಆರಂಭಗೊಳ್ಳುವ ಪ್ರಾಥಮಿಕ ನೆಲೆಯಾಗಿದೆಯೆಂದೂ ವಿದ್ವಾಂಸರು ಆಭಿಪ್ರಾಯಪಡುತ್ತಾರೆ. ಹೀಗೆ ಕುಟುಂಬದಿಂದ ಪ್ರಾರಂಭಗೊಳ್ಳುವ ವಾರಸುದಾರಿಕೆಯ ಸ್ತರಗಳು ಸಾಮುದಾಯಿಕವಾಗಿ ನೆಲೆ ಕಂಡುಕೊಂಡು ಅದಕ್ಕೆ ಸಮಾನಾಂತರವಾಗಿ ರೂಪುಗೊಂಡ ರಾಜಕೀಯ ಸ್ತರಗಳೊಂದಿಗೆ ಸಂಬಂಧ ಬೆಳೆಸಿಕೊಂಡು ರೂಪುಗೊಂಡಿದ್ದನ್ನು ವಿಶ್ಲೇಷಿಸಲಾಗಿದೆ. ಮಾತೃವಂಶೀಯತೆ, ಕೃಷಿ ನೆಲೆಗಳು, ಪಿತೃವಂಶೀಯತೆ, ಸಂಪ್ರದಾಯಗಳ ಹುಟ್ಟು, ಕೌಟುಂಬಿಕ ಯಜಮಾನಿಕೆ, ಸಿರಿ, ನಾಗ, ಬೆರ್ಮೆ ಆರಾಧನೆಯ ಮೂಲಕ ಪೂರ್ವಿಕತೆ, ಇವುಗಳ ಆರಾಧನಾ ಶ್ರೇಣಿಕರಣದೊಂದಿಗೆ ವಾರಸುದಾರಿಕೆಯನ್ನು ಆಡಳಿತಾತ್ಮಕವಾಗಿ ರೂಪಿಸಲಾಗಿದೆ.

ತುಳುನಾಡಿನ ಸಂದರ್ಭದಲ್ಲಿನ ಏಣಿ-ಶ್ರೇಣಿಯ ವಾರಸುದಾರಿಕೆಗಳು ಉದಾಹರಣೆಗೆ ಕುಟುಂಬ, ಗುತ್ತು, ಮಾಗಣೆ, ಸೀಮೆ, ನಾಡುಗಳ ಉಪಾಧಿಯಲ್ಲಿ ಬೆಳವಣಿಗೆಯಾಗಿದ್ದಲ್ಲದೇ ಅಧಿಕಾರಕ್ಕೆ ಸಂಬಂಧಿಸಿ ಮಾತೃಪ್ರಧಾನತೆ, ಪಿತೃಪ್ರಧಾನತೆಯ ನೆಲೆಗಳಲ್ಲಿ ರೂಪಿತವಾಗಿದ್ದನ್ನು ಕಂಡುಕೊಳ್ಳಲಾಗಿದೆ. ತುಳುನಾಡಿನ ಆಡಳಿತ, ಆರಾಧನ ಶ್ರೇಣಿಕರಣ, ಆಡಳಿತದ ಕೊನೆಯ ಘಟಕವಾಗಿ ಗ್ರಾಮದ ಸಮಗ್ರತೆಯನ್ನು ಬಿಂಬಿಸುವ ಅಜಲು, ಗುತ್ತು, ಪತ್ತೇರಿಕೂಟಗಳಿಂದ ಸಮಗ್ರಗೊಂಡ ಗ್ರಾಮಸಭೆ ಮುಂತಾದವುಗಳ ಅಧಿಕಾರದ ವಾರಸುದಾರಿಕೆ ಮಾತ್ರವಲ್ಲ ಅವುಗಳನ್ನು ಕಾರ್ಯರೂಪಕ್ಕೆ ತರುವ ಕೃಷಿ ಆಧಾರಿತ ದೈವ-ದೇವರುಗಳ ಆಚರಣೆ, ಪಟ್ಟಾಭಿಷೇಕ, ಗಡಿ ಸಂಪ್ರದಾಯ, ಜೊತೆಗೆ ಕೃಷಿ ಆಧಾರಿತ ಕ್ರೀಡೆ ಮುಂತಾದವುಗಳು ಮುಖ್ಯವಾಗುತ್ತದೆ.

ನಾಲ್ಕನೇ ಅಧ್ಯಾಯದಲ್ಲಿ ವಸಾಹತುಶಾಹಿ, ತುಳುನಾಡಿನ ಮೇಲಾದ ಪ್ರಭಾವ ಯುರೋಪಿನಲ್ಲಿ ವಿಕಾಸಗೊಂಡ ಬದಲಾವಣೆಗಳ ಪರ್ವಕಾಲದ ಅಧುನಿಕ ಚಿಂತನೆಗಳನ್ನು ಬಂಡವಾಳವಾಗಿಟ್ಟುಕೊಂಡ ಪಾಶ್ಚಿಮಾತ್ಯರು ಅವುಗಳ ಆಸ್ತಿತ್ವವೇ ಇಲ್ಲದ ಪಶ್ಚಿಮೇತರ ರಾಷ್ಟ್ರಗಳ ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆಗಳ, ಅದರಲ್ಲೂ ಉತ್ಪಾಧನ ವಿಧಾನಗಳ ಮೇಲೆ ಹತೋಟಿ ಸಾಧಿಸಿದರು. ಪರಿಣಾಮವಾಗಿ ಸಾಮಾನ್ಯಶಕೆ ಹದಿನೆಂಟನೇ ಶತಮಾನದಲ್ಲಿ ಸಾಮ್ರಾಜ್ಯಶಾಹೀ-ವಸಾಹತುಶಾಹೀ ಚಿಂತನೆಗಳು ಚಿಗುರೊಡೆದು ಪ್ರಪಂಚದಾದ್ಯಂತ ವಸಾಹತುಗಳನ್ನು ಸ್ಥಾಪಿಸುವಲ್ಲಿ ಯಶಸ್ವಿಗೊಂಡವು. ಸಾಮಾನ್ಯಶಕೆ ಹತ್ತೊಂಬತ್ತನೇ ಶತಮಾನವು ಭಾರತದ ಇತಿಹಾಸದ ಕಾಲಘಟ್ಟದಲ್ಲಿ ಅತ್ಯಂತ ಪ್ರಮುಖ ಹಾಗೂ ನಿರ್ಣಾಯಕ

ಸ್ವರೂಪದ ಸಂದರ್ಭವಾಗಿದ್ದು, ಜಗತ್ತಿನಾದ್ಯಂತ ಕಾಣಿಸಿಕೊಂಡ ಪಾಶ್ಚಾತ್ಯರ ಸಾಮ್ರಾಜ್ಯಶಾಹೀ ಸ್ವರೂಪದ ಆಕ್ರಮಣಕಾರೀ ನಿಲುವು ಭಾರತದಲ್ಲೂ ತನ್ನ ನೆಲೆಯನ್ನು ಸ್ಥಾಪಿಸಿಕೊಂಡಿತು.

ವಸಾಹತುಶಾಹಿಯ ಸಾರ್ವಭೌಮ ಅಧಿಕಾರೀ ವ್ಯವಸ್ಥೆಯಿಂದಾಗಿ ಇಲ್ಲಿನ ಪರಂಪರಾಗತ ವ್ಯವಸ್ಥೆಗಳು ಸ್ಥಿತ್ಯಂತರಕೊಳಪಟ್ಟು ವಾರಸುದಾರಿಕೆಯ ವ್ಯವಸ್ಥೆಗಳು ಹೊಸ ಭಾಷ್ಯಕ್ಕೆ ಒಳಗಾದವು. ತುಳುನಾಡಿನಲ್ಲಿ ವಸಾಹತುಶಾಹೀ ಪ್ರಭುತ್ವ ಅಧುನಿಕತೆಯ ಪ್ರತಿನಿಧಿಯಾಗಿ ತನ್ನ ಹರವನ್ನು ವಿಸ್ತಾರಗೊಳಿಸುತ್ತಾ ಹೋದಂತೆ ವಸಾಹತನ್ನು ಪುನರ್ರಚಿಸುವ ಹಾಗೂ ತನ್ನ ಅಭಿಲಾಷೆಯನ್ನು ಪೂರೈಸಿಕೊಳ್ಳುವ ಪ್ರಯತ್ನದಲ್ಲಿ ಯಶಸ್ಸನ್ನು ಪಡೆಯಿತು. ವಸಾಹತುಶಾಹಿಗಳ ಈ ಪ್ರಯತ್ನ ಬಹುಸ್ವರೂಪಿಯಾಗಿದ್ದ ತುಳುನಾಡನ್ನು ಏಕತ್ವದೊಳಗೆ ಘನೀಕರಿಸುವ ಇಲ್ಲವೇ ತುಳುನಾಡನ್ನು ಹಳೆಯ ವಾರಸುದಾರಿಕಾ ವ್ಯವಸ್ಥೆಗಳಿಂದ ಬೇರ್ಪಡಿಸಿ ಅಧುನಿಕ ಮಾದರಿಯ ನೆಲೆಯೊಂದರಡಿಯಲ್ಲಿ ಪುನರ್ರಚಿಸುವ ಹಾಗೂ ಪಶ್ಚಿಮದ ಸಂಸ್ಕೃತಿಯನ್ನು ಹರಡುವ ಪ್ರಯತ್ನದಲ್ಲಿ ಭಾಗಿಯಾಯಿತು. ಪರಿಣಾಮವಾಗಿ ತುಳುನಾಡಿನ ಪರಿಕಲ್ಪನೆಯ ಪ್ರಕೃತಿ, ಮಾನವ ಹಾಗೂ ಸಮಾಜ, ದೇವರು, ದೈವ, ಧರ್ಮ, ಸಂಸ್ಕೃತಿ ಮುಂತಾದವುಗಳ ಬಗ್ಗೆ ದೃಷ್ಟಿಕೋನಗಳು ಬದಲಾಯಿತ್ತಲ್ಲದೇ ವಾರಸುದಾರಿಕೆಯ ಆಯಾಮಗಳು ಮತ್ತು ಅವುಗಳ ಧನಾತ್ಮಕ ಚಿಂತನೆಗಳು ಅರ್ಥ ಕಳೆದುಕೊಂಡವು.

ಐದನೇ ಅಧ್ಯಾಯ ಸ್ಥಳೀಯ ರಾಜಕೀಯಾಡಳಿತದ ಪಲ್ಲಟ, ವಸಾಹತುಶಾಹಿ ಎಂಬ ಶೀರ್ಷಿಕೆಯನ್ನು ಹೊಂದಿದೆ. ತುಳುನಾಡಿನ ಸಾಮಂತರಸರ ರಾಜಕೀಯ ದೌರ್ಬಲ್ಯ, ಮೈಸೂರಿನ ಪ್ರಭುತ್ವದ ಛಾಯೆಯ ಆಸ್ತಂಗತ ವಸಾಹತುಶಾಹಿ ತುಳುನಾಡಿನ ರಾಜಕೀಯಾಡಳಿತದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಲು ಉಪಕ್ರಮಿಸಿತು. ವಸಾಹತುಶಾಹಿಯಿಂದಾಗಿ ಬಹುಮುಖಿ ಆಯ್ಕೆಗಳು ಅಪ್ರಸ್ತುತಗೊಂಡು ವಸಾಹತಿನ ರಾಜಕೀಯ ಆಡಳಿತದ ಬಹುಮುಖತೆಗಳಿಗೆ ಆಕರ್ಷಣೆ ಮತ್ತು ನ್ಯಾಯಬದ್ಧತೆಯನ್ನು ನಿರಾಕರಿಸಿತು. ಆರಂಭದಲ್ಲಿ ವ್ಯಾಪಾರಿ ಸಂಸ್ಥೆಯ ರೂಪದಲ್ಲಿದ್ದ ವಸಾಹತುಶಾಹಿ ತನ್ನ ರೈಟ್ ಆಫ್ ಕಾಂಕ್ವೆಸ್ಟ್ ಪರಿಕಲ್ಪನೆಯನ್ನು ನಿಧಾನವಾಗಿ ಹೇರಿತು. ಈ ಮೂಲಕ ರೂಲ್ ಆಫ್ ಲಾವನ್ನು ಪ್ರತಿಪಾದಿಸಿ, ಆಜ್ಞೆಯ ಮೂಲಕ ತುಳುನಾಡಿನ ಆಡಳಿತವನ್ನು ಕಾರ್ಯಗತಗೊಳಿಸಿತು. ರೂಲ್ ಆಫ್ ಲಾ ವಸಾಹತಿನ ಸಾಂಪ್ರದಾಯಿಕ ಆಡಳಿತ ಘಟಕಗಳ ಅಧಿಕಾರವನ್ನು ಮೊಟಕುಗೊಳಿಸಿತ್ತಲ್ಲದೇ, ಸೀಮೆ, ಮಾಗಣೆ, ಗ್ರಾಮ, ಗುತ್ತುಗಳ ಅಧಿಕಾರದಲ್ಲಿ ಹಸ್ತಕ್ಷೇಪ ನಡೆಸಿತು. ಜೊತೆಗೆ ದೈವ-ದೈವಸ್ಥಾನ, ಮಠ, ಮಾನ್ಯಗಳ ಅಧಿಕಾರವನ್ನು ದುರ್ಬಲಗೊಳಿಸಿತು. ವಸಾಹತಿನ ಪ್ರತಿರೋಧವನ್ನು ದಮನಗೊಳಿಸಲು ಪಾರಂಪರಿಕ ಅಧಿಕಾರೀ ವ್ಯವಸ್ಥೆಗಳನ್ನು ಕಂದಾಯ ನಿರ್ಣಯ ಮತ್ತು ಸಂಗ್ರಹಕ್ಕಾಗಿ ಸಾಂದರ್ಭಿಕವಾಗಿ ಸಹಯೋಗಗೊಳಿಸಿತು. ಇದು

ವಸಾಹತುಶಾಹಿಯ ಪ್ರಭುತ್ವವನ್ನು ರೂಪಿಸಲು ಅವಶ್ಯ ಬಲತುಂಬಿಸಿತ್ತಲ್ಲದೇ, ಸ್ಥಳೀಯ ರಾಜಕೀಯಾಡಳಿತವನ್ನು ಪ್ರಬಲಗೊಳಿಸುವಲ್ಲಿ ವಸಾಹತುಶಾಹಿ ಪ್ರಣೀತ ನ್ಯಾಯಾಂಗ, ಸುಧಾರಿತ ಪೋಲಿಸ್ ಬಲ, ಸೈನಿಕ ವ್ಯವಸ್ಥೆ, ವ್ಯವಸ್ಥಿತ ನೌಕರಶಾಹಿಯನ್ನು ಮುಂದಿಟ್ಟುಕೊಂಡಿತ್ತು. ಮುಂದುವರಿದು ವಸಾಹತಿನ ಅಜಲು, ಧಾರ್ಮಿಕ ನೆಲೆಗಟ್ಟಿನಲ್ಲಿ ನಡೆಯುತ್ತಿದ್ದ ಅಧಿಕಾರವನ್ನು ಮುದ್ರಿತ ಕಾನೂನು-ಕಟ್ಟಳೆ-ಆಜ್ಞೆಗಳ ನೆರವಿನೊಂದಿಗೆ ಪ್ರತಿಪಾದಿಸಿತು. ಈ ಸಂದರ್ಭದಲ್ಲಿ ವಸಾಹತುಪೂರ್ವದ ದಂಡ ಮತ್ತು ಬಲಪ್ರಯೋಗದ ಪ್ರವೃತ್ತಿ ವಸಾಹತುಶಾಹಿಯ ಒತ್ತಡ ಮತ್ತು ಆಜ್ಞೆಗಳಾಗಿ ಪರಿವರ್ತನೆಗೊಂಡರೇ, ನ್ಯಾಯ, ನೀತಿ ಮತ್ತು ಧರ್ಮದ ನಿಯಮಗಳು ರೂಲ್-ಒಫ್-ಲಾ ಆಗಿ ನ್ಯಾಯಬದ್ಧಗೊಂಡವು. ಮುಂದುವರೆದು ಸಹಯೋಗ, ವಿಧೇಯತೆ ಮತ್ತು ಅಭಿವೃದ್ಧಿಯ ಮುಖವಾಡಗಳಾಗಿ ಕಾರ್ಯಪ್ರವೃತ್ತವಾದವು. ಈ ರೀತಿಯ ಬೆಳವಣಿಗೆಗಳು ತುಳುನಾಡಿನಲ್ಲಿ ಕಾರ್ಯಪ್ರವೃತ್ತಗೊಂಡು, ವಸಾಹತುಶಾಹಿ ಹೇರಿಕೆಯ ರೂಪದಲ್ಲಿ ಬಂದಾಗ ಅದನ್ನು ಪ್ರತಿಭಟಿಸುವ ಸಾಮರ್ಥ್ಯವಾಗಲೀ ಅಥವಾ ಒಪ್ಪಿಕೊಳ್ಳುವ ಮನಸಾಗಲೀ ಇಲ್ಲದೇ ಇದ್ದು, ಅನಿವಾರ್ಯವಾಗಿ ತಮ್ಮದೇ ನೆಲದಲ್ಲಿ ಪರಕೀಯರಾಗಬೇಕಾಯಿತು. ಇದರ ಪರಿಣಾಮವಾಗಿ ತುಳುನಾಡಿನ ಜೀವಾಳವಾಗಿದ್ದ ಗ್ರಾಮವ್ಯವಸ್ಥೆಗಳು ನೈಜ್ಯತೆಯನ್ನು ಕಳೆದುಕೊಂಡವು. ಮುಂದುವರೆದು ಸಾಮಂತತೆಯ ನಿಯಂತ್ರಣದಲ್ಲಿದ್ದ ಪಾರಂಪರಿಕ ವ್ಯವಸ್ಥೆಗಳು ಸಹಯೋಗಿಗಳಾಗಿ, ಅವುಗಳು ವಸಾಹತುಶಾಹಿಯ ಆಸಕ್ತಿ ಮತ್ತು ಅನುಕೂಲಕ್ಕೆ ತಕ್ಕಂತೆ ಸಾಧಕವಾಗಿ ಬಳಕೆಯಾದವು. ಜೊತೆಗೆ ಭೂಒಡೆತನವನ್ನು ಅನುಭವಿಸಿದ್ದ ವ್ಯವಸ್ಥೆಗಳು ಸಹಯೋಗಗೊಂಡಿದ್ದರಿಂದ ಅವುಗಳ ಆಡಳಿತದ ಚಾಲನಾ ಶಕ್ತಿಗಳಾಗಿ ಮಾರ್ಪಾಡುಗೊಂಡ ಬಗ್ಗೆ ಅಧ್ಯಯನಿಸಲಾಗಿದೆ.

ಪ್ರಬಂಧದ ಆರನೇ ಅಧ್ಯಾಯದಲ್ಲಿ ಭೂಮಿ, ವಾರಸುದಾರಿಕೆ, ವಸಾಹತುಶಾಹಿ, ಸಾಂಪ್ರದಾಯಿಕ ಅರ್ಥ ವ್ಯವಸ್ಥೆಯ ವಿಘಟನೆಯ ಬಗ್ಗೆ ಚರ್ಚೆಯನ್ನು ಮಾಡಲಾಗಿದೆ. ವಸಾಹತುಶಾಹಿ ಆಡಳಿತ ವಸಾಹತಿನ ಸ್ವಾವಲಂಬಿತ ಅರ್ಥ ವ್ಯವಸ್ಥೆಯನ್ನು ಹಾಳುಗೆಡವಿತ್ತಲ್ಲದೇ, ಅದು ತುಳುವರ ಬದುಕಿನ ಅವಿಭಾಜ್ಯ ಅಂಗವಾಗಿರದೆ ಇಲ್ಲಿನ ಐಶ್ವರ್ಯವನ್ನು ಕಾಣಿಕೆ ಎಂದು ದೋಚುತ್ತಾ ಈ ಪ್ರದೇಶದಲ್ಲಿ ಸದಾ ವಿದೇಶಿಯರಾಗಿಯೇ ಉಳಿದರು. ಈ ರೀತಿಯ ವಸಾಹತುಶಾಹಿಯ ನೀತಿ ತುಳುವರಲ್ಲಿ ಅಸಹನೆಯನ್ನು ಮೂಡಿಸಿತ್ತಲ್ಲದೇ ಕೂಟದಂಗೆಗಳಂತಹ ಘಟನೆಗೆ ಕಾರಣವಾಯಿತು. ಮುನ್ರೋನ ರೈತವಾರಿ ಸಾಮ್ರಾಜ್ಯಶಾಹಿ ವಿಸ್ತರಣೆಗೆ ಅನುಕೂಲ ಮಾಡಿಕೊಡುವಲ್ಲಿಂದ ವಸಾಹತುಶಾಹಿಯ ಪ್ರಭಾವದಿಂದ ಸ್ಥಳೀಯ ಎನ್ನುವುದು ಅಸ್ತಿತ್ವ ಕಳೆದುಕೊಂಡು ನೂತನ ಸ್ಥಳಿಯವೊಂದು ರೂಪಿತವಾಗಿ ವಸಾಹತುಶಾಹಿಗಳ ಉದ್ದೇಶಕ್ಕೆ ತೆರೆದುಕೊಂಡ ಬಗೆಯನ್ನು ತಿಳಿಸುತ್ತದೆ. ಕೃಷಿ

ವಾಣಿಜ್ಯಕರಣಗೊಳ್ಳುವುದರೊಂದಿಗೆ ವಸಾಹತುಶಾಹಿ ಆರ್ಥಿಕತೆ ಇಲ್ಲವೇ ಬಂಡವಾಳಶಾಹಿ ಈ ಪ್ರದೇಶದಲ್ಲಿ ತುಳುವರ ಸ್ವಾವಲಂಬನೆಗೆ ಕೊಡಲಿ ಏಟು ನೀಡಿತು. ಏಳನೇ ಅಧ್ಯಾಯದಲ್ಲಿ ಸಾಮಾಜಿಕ ವಾರಸುದಾರಿಕೆಯ ಪಲ್ಲಟದ ಬಗ್ಗೆ ವಿಶ್ಲೇಷಿಸಲಾಗಿದೆ. ಪಶ್ಚಿಮ ಹೇಳಿದ್ದೇ ಸತ್ಯ ಎಂದು ನಂಬಿಕೊಂಡ ಭಾರತೀಯರನ್ನು ವಸಾಹತುಶಾಹಿ ಆಡಳಿತದ ಮಾನವನ ಸಂಬಂಧಗಳನ್ನು ನಿಯಂತ್ರಣದಲ್ಲಿಡುವ ಸಾಮಾಜಿಕತೆ ಮತ್ತು ನಿಯಂತ್ರಣ ವ್ಯವಸ್ಥೆಗಳನ್ನು ಸ್ಥಾಪಿಸಿಕೊಂಡವು. ಜಾತೀಯ ಮಾನದಂಡಗಳು ವಸಾಹತುಶಾಹಿ ಅದರ ಹಿನ್ನೆಲೆಯ ವಾರಸುದಾರಿಕೆಯಲ್ಲಿ ರೂಪುಗೊಂಡವು. ಸಾಮಾಜಿಕ ಬದಲಾವಣೆಯಲ್ಲಿ ಮತಪ್ರಚಾರಕರು ತೋರಿದ ನಿಷ್ಠೆ ಇಲ್ಲಿನ ವಾರಸುದಾರಿಕೆಯ ಕಲ್ಪನೆಯಲ್ಲಿ ಮಹತ್ತರ ಬದಲಾವಣೆಯನ್ನು ಮಾಡಿದೆ. ಮಾತ್ರವಲ್ಲ ವಸಾಹತುಶಾಹಿಗೆ ನಿಷ್ಠೆಯಲ್ಲಿದ್ದ ಬಾಸೆಲ್‌ಗಳು ಅಳಿಯಸಂತಾನ ಕಟ್ಟುಕಟ್ಟಳೆಯಂತೆ ಬಾಸೆಲ್ ಮಿಷನ್‌ಡುಪ್ಪು ಸೌಹಾರ್ದ ಸುವಾರ್ತಿಕೆಗಳ ಕಟ್ಟಳೆ ಎಂಬ ಹೆಸರಿನಲ್ಲಿ ಹೊಸ ಕಟ್ಟುಪಾಡುಗಳನ್ನು ವಿಧಿಸಿತು. ಹೀಗೆ ತುಳುಕ್ರೈಸ್ತರ ಮತಪರಿವರ್ತನೆಯನ್ನು ಜತನವಾಗಿಡುವ ಕೆಲಸಗಳು ನಡೆದವು.

ಎಂಟನೇ ಅಧ್ಯಾಯದಲ್ಲಿ ವಸಾಹತುಶಾಹಿ ವಾರಸುದಾರಿಕೆ ತುಳುನಾಡಿನ ಧಾರ್ಮಿಕ, ಸಾಂಸ್ಕೃತಿಕ ಮಾನದಂಡಗಳನ್ನು ಹೇಗೆ ಬದಲಾಯಿಸಿದರೂ ಕ್ರಿಶ್ಚಿಯಾನಿಟಿಯ ಪ್ರಸಾರ ಮತ್ತು ಸ್ವೀಕಾರ ಇಲ್ಲಿನ ಸಾಮುದಾಯಿಕ ವ್ಯವಸ್ಥೆಯಿಂದಾಗಿ ಕುಂಠಿತಗೊಂಡಿತೆಂದೇ ಹೇಳಬೇಕು. ಭಾರತೀಯ ಸಮಾಜದ ಉಚ್ಚ ವರ್ಗದ ಜನರನ್ನು ಕ್ರೈಸ್ತರನ್ನಾಗಿ ಬದಲಾಯಿಸಲು ಸಾಧ್ಯವಾಗದೇ ಕೇವಲ ಕೆಳವರ್ಗದ ಸಮುದಾಯಗಳನ್ನು ಸೇರಿಸಿಕೊಳ್ಳುವುದರಲ್ಲೇ ಮಿಶನರಿಗಳು ತೃಪ್ತಿಪಟ್ಟುಕೊಳ್ಳಬೇಕಾಯಿತು. ತತ್ಪರಿಣಾಮವಾಗಿ ಕ್ರಿಶ್ಚಿಯಾನಿಟಿಯು ಕೆಳವರ್ಗದ ಸಮುದಾಯುಗಳೊಂದಿಗೆ ಗುರುತಿಸಲ್ಪಟ್ಟು ಮೂಲೆಗುಂಪಾಯಿತು. ಒಂದೊಮ್ಮೆ ಹೀದನ್‌ಗಳನ್ನು ಪರಿವರ್ತಿಸುವುದರಲ್ಲಿ ಸುಲಭವಾಗಿ ಯಶಸ್ಸನ್ನು ಕಾಣುತ್ತೇವೆ ಎಂದು ಕನಸುಕಂಡ ಮಿಷನರಿಗಳು ಹೀದನ್‌ಗಳಿಗೆ ತಮ್ಮ ಗಾಡ್‌ನ ವಾಣಿಯನ್ನು ಯಶಸ್ವಿಯಾಗಿ ತಲುಪಲು ಅಸಮರ್ಥರಾದಾಗ ಅವರು ಎರಡು ಸಂಗತಿಗಳ ವಿರುದ್ಧ ಕಿಡಿ ಕಾರಿದರು. ಅವುಗಳೆಂದರೆ ಕ್ರೈಸ್ತನ ಸಂದೇಶಗಳ್ನು ಜನರಿಗೆ ತಲುಪಿಸುವಲ್ಲಿ ಅಡ್ಡಗೋಡೆಯಾದ ಸಾಮುದಾಯಿಕ-ಜಾತಿ ವ್ಯವಸ್ಥೆಗಳು ಹಾಗೂ ಪುರೋಹಿತರು.[41] ಭಾರತದಲ್ಲಿ ಮಿಶನರಿಗಳು ತೀರಾ ನೋವಿನಿಂದ ಕಂಡುಕೊಂಡದ್ದೇನೆಂದರೆ ಹೀದನ್ನರ ಪರಿವರ್ತನೆ ನಡೆಸಬೇಕಾದರೆ ರಾಜಾಶ್ರಯವನ್ನು ಪಡೆಯುವುದಕ್ಕಿಂತ ಬ್ರಾಹ್ಮಣರನ್ನು ಪರಿವರ್ತಿಸುವುದೇ ಹೆಚ್ಚು ನಿರ್ಣಾಯಕ ಹೆಜ್ಜೆ ಎಂಬುವುದು. ಅದಾಗ್ಯೂ ಈ ನಡೆಯಲ್ಲಿ ಸಾಂದರ್ಭಿಕವಾಗಿ ಯಶಸ್ಸನ್ನು ಕಂಡಾಗಲೆಲ್ಲ ಸ್ವರ್ಗವೇ ಧರೆಗಿಳಿದಂತೆ ಸಂಭ್ರಮಿಸಿದರೂ ಅವರ ಯತ್ನ ನಿಶ್ಚಿತ ಗುರಿಯನ್ನು ತಲುಪಲಿಲ್ಲ. ಇದರಿಂದ

ಹತಾಶಗೊಂಡ ಮಿಷನರಿಗಳು ಕೆಳವರ್ಗದ ಕಡೆ ಹೆಚ್ಚು ಕೇಂದ್ರಿತರಾದರು. ಉದಾಹರಣೆಗೆ ತುಳುನಾಡಿನಲ್ಲಿ ಬಾಸೆಲ್ಗಳು ಬಿಲ್ಲವರ ಮತಪರಿವರ್ತನೆಗೆ ಒತ್ತು ಕೊಟ್ಟು ಅವರ ಆರಾಧನೆಯಲ್ಲಿ ಭೂಮಿಕೆಯನ್ನು ವಹಿಸುತ್ತಿದ್ದ ಅರ್ಚಕರನ್ನೆ ಮತಾಂತರಿಸಿದರು. 1843 1855, 1859, 1875, 1880ರಲ್ಲಿ ಕ್ರಮವಾಗಿ ತುಳುನಾಡಿನ ಆಯಕಟ್ಟಿನ ಸ್ಥಳಗಳಾದ ಉಡುಪಿ, ಗುಡ್ಡೆ, ಉರ್ವ, ಪಾದೂರು, ಮಡಂಬುಗಳಲ್ಲಿ ಬಾಸೆಲ್ಗಳು ಸಕ್ರಿಯಗೊಂಡರೆ, ಮಂಗಳೂರು, ಮಂಜೇಶ್ವರ, ಕಾಸರಗೋಡು, ವೇಣೂರು, ಮೂಡಬಿದ್ರಿ, ಶಿರ್ವ ಮುಂತಾದೆಡೆ ಕ್ಯಾಥೊಲಿಕ್ಕರು ಕಾರ್ಯಪ್ರವೃತ್ತರಾಗಿ ತುಳುವರ ನಂಬಿಕೆಗಳಲ್ಲಿ ಒಡಕನ್ನು ಮೂಡಿಸುವಲ್ಲಿ ಯಶಸ್ಸನ್ನು ಪಡೆದರು. ಮಾತ್ರವಲ್ಲ ಇಲ್ಲಿನ ಸಂಕೇತಗಳ ಮೇಲಿನ ನಿರ್ಬಂಧ, ಮುಖ್ಯವಾಗಿ ಕ್ರೈಸ್ತರ ವಾರಸುದಾರಿಕೆ ರೂಪುಗೊಳ್ಳುವಲ್ಲಿ ವಹಿಸಿದ ಪ್ರಧಾನ ಭೂಮಿಕೆ ಮುಂತಾದವುಗಳ ಬಗ್ಗೆ ಅಧ್ಯಯನಿಸಲಾಗಿದೆ. ಒಂಬತ್ತನೇ ಅಧ್ಯಾಯದಲ್ಲಿ ಅಭಿವೃದ್ಧಿ, ಅಧುನಿಕತೆ ವಾರಸುದಾರಿಕೆಯ ಮೇಲೆ ಬೀರಿದ ಪ್ರಭಾವ, ಪಲ್ಲಟ, ಬಾಗಿಲಿಗೆ ಬಂದ ಅಧುನಿಕತೆಯನ್ನು ವಸಾಹತಿನ ಸಮುದಾಯಗಳು ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳುವಲ್ಲಿ ತೋರಿದ ಆಸಕ್ತಿ ಇಲ್ಲವೇ ಅವುಗಳಿಂದ ದೂರವಾಗಿದ್ದುಕೊಂಡು ಸಾಂಪ್ರದಾಯಕ ನೆಲೆಗಟ್ಟಿನಲ್ಲಿ ಮುಂದುವರೆದಿರುವುದು. ತುಳುನಾಡಿನ ನ್ಯಾಯಾಂಗ, ಪೋಲಿಸ್ ವ್ಯವಸ್ಥೆ, ಶಿಕ್ಷಣ ಮುಂತಾದವುಗಳು ವಸಾಹತುಶಾಹಿಯ ಪರಿವರ್ತನಾ ಯೋಜನೆಗಳಾಗಿ ಪಾರಂಪರಿಕ ವ್ಯವಸ್ಥೆಗಳು ಮೌಲ್ಯ ಕಳೆದುಕೊಳ್ಳುತ್ತಿರುವ ಅತಂಕದ ಬಗ್ಗೆಯೂ ಚರ್ಚಿಸಲಾಗಿದೆ. ಭಾಷೆ, ಭಾಷೆಯ ಮೂಲಕ ಶಿಕ್ಷಣ, ಶಿಕ್ಷಣದ ಮೂಲಕ ವಸಾಹತುಶಾಹಿಯ ಸಹಯೋಗಿಗಳಾಗಿ ನೆಲೆಗೊಳ್ಳುವುದನ್ನು ಅಧ್ಯಯನ ಮಾಡಲಾಗಿದೆ. ಇನ್ನೊಂದೆಡೆ ಇದೇ ವಸಾಹತುಶಾಹೀ ಶಿಕ್ಷಣ ವ್ಯವಸ್ಥೆಯನ್ನು ಪುನರ್‌ವ್ಯಾಖ್ಯಾನಿಸುವಲ್ಲಿ ಪ್ರಯತ್ನಗಳಾಗಿವೆ. ವಸಾಹತುಶಾಹಿಯ ಕಾನೂನು ವ್ಯವಸ್ಥೆ, ಕಾನೂನುಗಳನ್ನು ಜಾರಿ ತರುವಲ್ಲಿ ಪೋಲಿಸ್ ವ್ಯವಸ್ಥೆ, ನೌಕರಶಾಹಿ, ಭಾಷೆಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡಿತ್ತಲ್ಲದೇ, ತುಳುನಾಡಿನ ಎಲ್ಲವೂ ವಸಾಹತುಶಾಹಿ ಆಡಳಿತಕ್ಕೆ ತಕ್ಕ ಹಾಗೇ ಮಾರ್ಪಾಡುಗೊಂಡವು.

## ---ಕೊನೆಟಿಪ್ಪಣಿ---

1 ಮೋಹನಕೃಷ್ಣ ರೈ, ತುಳುನಾಡು ಕನ್ನಡನುಡಿ, ತುಳುಕರ್ನಾಟಕದ ನಾಡು-ನುಡಿ ಚಿಂತನೆ: ಪ್ರಸರಾಂಗ ಕನ್ನಡ ವಿ.ವಿ ಹಂಪಿ 2012, ಪುಟ 3.

2 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ರಾಷ್ಟ್ರಕವಿ, ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ 2010 ಪುಟ 17.

3 ಮೋಹನಕೃಷ್ಣ ರೈ, ತುಳುನಾಡು ಕನ್ನಡನುಡಿ, ಪುಟ 19.

4 ಮೋಹನಕೃಷ್ಣ ರೈ, ತುಳುನಾಡು ಕನ್ನಡನುಡಿ, ಪುಟ 35.

5 ಜಿ. ರಾಜಶೇಖರ ಮತ್ತು ಕೆ.ಫಣಿರಾಜ್, ಶತಮಾನ ಚಿಂತನೆ-1 ಅಂಟೋನಿಯೊ ಗ್ರಾಮ್ಶಿ, ಅಭಿನವ ಬೆಂಗಳೂರು 2003. ಪುಟಗಳು 41-45.

6 ಅರುಣಿಮಾ. ಜಿ, ದೇರ್ ಕಮ್ಸ್ ಪಾಪಾ, ಒರಿಯಂಟ್ ಲಾಂಗ್ಮೆನ್ ಹೊಸದೆಹಲಿ; 2003 ಪುಟ 3.

7 ಮೋಹನಕೃಷ್ಣ ರೈ, ಅರ್ಬನೈಸೇಷನ್ ಇನ್ ಮಂಗಳೂರು, ಅಪ್ರಕಟಿತ ಸಂಶೋಧನಾ ಪ್ರಬಂಧ ಮಂ.ವಿ.ವಿ 2003. ಪುಟ 80; 1848ರಲ್ಲಿ ಮಂಗಳೂರು ಆಸ್ಪತ್ರೆ ಕಾರ್ಯಾಚರಣೆ ಮಾಡುವ ಉದ್ದೇಶ ಜನಸೇವೆಯಾದರೂ, ಮಂಗಳೂರು ವಸಾಹತುಶಾಹೀ ಸೈನ್ಯದ ಕೇಂದ್ರವಾಗಿ, ಜಿಲ್ಲಾಡಳಿತ ತುಳುನಾಡಿನ ಇತರ ಭಾಗಗಳನ್ನು ಹತೋಟಿಯಲ್ಲಿಡುವ ಸಂದರ್ಭದಲ್ಲಿ ವಸಾಹತುಷಾಹೀಗಳಿಗೆ ತಮ್ಮ ಆರೋಗ್ಯ ಕಾಪಾಡಿಕೊಳ್ಳುವಲ್ಲಿ ಆಸ್ಪತ್ರೆಯ ಅನುಕೂಲತೆ ಅಗತ್ಯವಾಗಿತ್ತು. ಹೀಗೆ ಮಂಗಳೂರಿನಲ್ಲಿ ಅಧುನಿಕ ಆಸ್ಪತ್ರೆಯ ಉಪಚಾರ ಪದ್ಧತಿಯ ಪರಿಕಲ್ಪನೆ ಆರಂಭಗೊಂಡಿತು. 1887 ಅವಧಿಯಲ್ಲಿ ತುಳುನಾಡಿನಾದ್ಯಂತ ಆಯಕಟ್ಟಿನ ಜಾಗಗಳಲ್ಲಿ ಸುಮಾರು 18 ಆಸ್ಪತ್ರೆಗಳು ಸ್ಥಾಪನೆಗೊಂಡವು. ಸೌತ್‌ಕೆನರಾ ಗಜೇಟಿಯರ್ ಜುಲೈ 1906, ಪುಟ 25; 1897ರ ಸಾಂಕ್ರಾಮಿಕ ರೋಗ ನಿವಾರಣಾ ಕಾಯ್ದೆಯಡಿ ತುಳುನಾಡಿನ ಪ್ರಧಾನ ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ವರ್ಷಾವಧಿ ಜಾತ್ರೆಗಳನ್ನು ನಿಷೇಧ ಮಾಡಿರುವುದು, ಕಾಲರಾ ರೋಗ ತಡೆಗಟ್ಟುವಲ್ಲಿ ವ್ಯಾಕ್ಸೀನ್ಗಳ ಪರಿಚಯ ಮುಂತಾದವುಗಳು ವಸಾಹತುಶಾಹಿ ಆಡಳಿತದ ಲೋಕದೃಷ್ಟಿಯನ್ನು ಬಿಂಬಿಸುವ ವಿಚಾರಗಳಾಗಿವೆ.

8 ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ಮೈಸೂರು 1974. ಜೆಸೂಯಿಟರು ಪ್ರಾರಂಭಿಸಿದ ಕಂಕನಾಡಿ ಮಂಗಳೂರಿನ ಫಾದರ್‌ಮುಲ್ಲರ್, ಬಾಸೆಲ್‌ಮಿಷನಿನವರ ಉಡುಪಿಯ ಲಂಬಾರ್ಡ್ ಆರೋಗ್ಯ ಕೇಂದ್ರ ಮುಂತಾದವುಗಳು.

9 ಜಿ. ರಾಜಶೇಖರ ಮತ್ತು ಕೆ.ಫಣಿರಾಜ್, ಶತಮಾನ ಚಿಂತನೆ-1 ಅಂಟೋನಿಯೊ ಗ್ರಾಮ್ಶಿ, ಅಭಿನವ ಬೆಂಗಳೂರು 2003. ಪುಟ 45.

10 ಎಂ. ಮುಕುಂದ ಪ್ರಭು, ಪ್ರಧಾನ ಸಂಪಾದಕರು ಪೊಲಿ, ಕೆನರಾ-200, ಮಂಗಳೂರು 2000, ಪುಟ 9.

11 ಫ್ರಾನ್ಸಿಸ್ ಬುಖಾನನ್, ಎ. ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್, ಮದ್ರಾಸ್ 1807. ಮೆಕೆಂಝಿಯ ಕೈಪಿಯತ್ತು ಮುಂತಾದ ಬರವಣಿಗೆಗಳಲ್ಲಿ ಈ ವಿಚಾರಗಳು ಪ್ರಸ್ತುತಗೊಂಡಿವೆ.

12 ರೆವರೆಂಡ್ ಎ, ಬ್ರಿಗೇಲ್-ತುಳುಭಾಷೆಯ ಮೊದಲ ವ್ಯಾಕರಣ ಗ್ರಂಥ, ರೆವರೆಂಡ್ ಎ, ಮೆನ್ನರ್-ತುಳು ಇಂಗ್ಲಿಷ್ ಪದಕೋಶ, ಪಾಡ್ದನಗಳ ಸಂಗ್ರಹ, ರೆವರೆಂಡ್ ಕಿಟ್ಟೆಲ್-ಕನ್ನಡ ಇಂಗ್ಲಿಷ್ ಪದಕೋಶ, ಬಿಷಫ್ ಕಾಲ್ಡ್‌ವೆಲ್-ದ್ರಾವಿಡ ಭಾಷಾ ವ್ಯಾಕರಣ, ಆರ್.ಸಿ ಟೆಂಪಲ್ ಸಂಪಾದಿತ ಎ.ಸಿ ಬರ್ನೆಲ್‌ನ ಇಂಡಿಯನ್ ಅಂಟಿಕ್ವೇರಿಯ ಸಂಪುಟಗಳಲ್ಲಿ ಪ್ರಕಟವಾದ-ದ ಡೆವಿಲ್ ವರ್ಷಿಪ್ ಒಫ್ ದ ತುಳುವಾಸ್, ಮೊಗ್ಲಿಂಗ್, ವೈಟ್‌ಫೀಲ್ಡ್ ಮುಂತಾದವರ ಬರವಣಿಗೆಗಳು ಮುಖ್ಯವಾದುದು.

13 ಎಂ ಮುಕುಂದ ಪ್ರಭು, ಪೊಲಿ, ಕೆನರಾ 200, ಮಂಗಳೂರು 2000, ಪುಟ 6-8.

14 ಕೆ.ಅಭಿಶಂಕರ (ಸಂಪಾದಿತ) ಸೌತ್ ಕೆನರಾ ಡಿಸ್ಟ್ರಿಕ್ ಗಜೇಟಿಯರ್ ಬೆಂಗಳೂರು 1973.

15 ವಸಂತ ಮಾಧವ ಕೆ.ಜಿ, ವೆಸ್ಟರ್ನ್ ಕರ್ನಾಟಕ; ಇಟ್ಸ್ ಅಗ್ರೇರಿಯನ್ ರಿಲೇಶನ್ಸ್ 1500-1800, ರಿಲಿಜೀಯನ್ಸ್ ಇನ್ ಕೊಸ್ಟಲ್ ಕರ್ನಾಟಕ, ಪಾಲಿಟಿಕಲ್ ಇಸ್ಟರಿ ಅಫ್ ಕೆನರಾ (ಅಪ್ರಕಟಿತ ಸಂಶೋಧನ ಗ್ರಂಥ) ಮುಂತಾದವುಗಳು. ವಸಂತ ಶೆಟ್ಟಿ. ಬಿ.-ಬ್ರಹ್ಮಾವರದ ಇತಿಹಾಸ, ಬಾರಕೂರು-ಎ ಮೆಟ್ರೋಪಾಲಿಟನ್ ಸಿಟಿ ಅಫ್ ಅಂಟಿಕ್ವಿಟಿ ಹಿಸ್ಟರಿ ಅಂಡ್ ಕಲ್ಚರ್ ಮತ್ತು ಹಲವಾರು ಲೇಖನಗಳು ತುಳುನಾಡಿನ ಚರಿತ್ರೆಯ ಬಗ್ಗೆ ಮಾಹಿತಿಯನ್ನು ಕೊಡುತ್ತದೆ. ನರಸಿಂಹ ಮೂರ್ತಿ-ಜೈನಿಸಂ ಅನ್ ದಿ ಕೆನರಾ ಕೋಸ್ಟ್, ಪುಂಡಿಕೈ ಗಣಪಯ್ಯ ಭಟ್ಟ-ಹಿಸ್ಟಾರಿಕಲ್ ಆಂಡ್ ಕಲ್ಚರಲ್ ಜಿಯೋಗ್ರಫಿ ಅಂಡ್ ಎತ್ನೋಗ್ರಫಿ ಆಫ್ ತುಳುನಾಡು (ಅಪ್ರಕಟಿತ ಸಂಶೋಧನ ಪ್ರಬಂಧ ಮೈಸೂರು ವಿ.ವಿ 1994) ತೌಳವ ಬಿಡಿ ಲೇಖನ ಮಾಲೆ ಮುಂತಾದವುಗಳು.

16 ಬಿ.ಎ ವಿವೇಕ ರೈ-ತುಳು ಜನಪದ ಸಾಹಿತ್ಯ, ಚಿನ್ನಪ್ಪ ಗೌಡ-ಭೂತಾರಾಧನೆ-ಒಂದು ಜಾನಪದೀಯ ಅಧ್ಯಯನ, ಪುರುಷೋತ್ತಮ ಬಿಳಿಮಲೆ-ಶಿಷ್ಟ-ಪರಿಶಿಷ್ಟ, ಕರಾವಳಿ ಜಾನಪದ ಮುಂತಾದವುಗಳು.

---

17 ಪುರುಷೋತ್ತಮ ಬಿಳಿಮಲೆ-ಕೊರಗರ ಸಂಸ್ಕೃತಿ, ವಾಮನ ನಂದಾವರ-ಕೋಟಿಚೆನ್ನಯ ಒಂದು ಜಾನಪದೀಯ ಅಧ್ಯಯನ, ಮೋಹನ್ ಎಸ್-ಮರಾಠಿ ನಾಯಕರು ಒಂದು ಸಾಂಸ್ಕೃತಿಕ ಅಧ್ಯಯನ, ಇಂದಿರಾ ಹೆಗ್ಡೆ-ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಎಸ್.ಡಿ ಶೆಟ್ಟಿ-ಜೈನಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ, ವಹಾಭ್ ದೊಡ್ಡಮನೆ-ಮುಸ್ಲಿಮ್ಸ್ ಇನ್ ದಕ್ಷಿಣ ಕನ್ನಡ, 'ದೇಜಪ್ಪ ದಲ್ಲೋಡಿ-ಬಿಲ್ಲವರು', ಮಹಾಲಿಂಗ ಭಟ್ಟ-ಹವ್ಯಕರು ಒಂದು ಅಧ್ಯಯನ ಮುಂತಾದವುಗಳು.

18 ಅಮೃತ ಸೋಮೇಶ್ವರರ ತುಳು ಪಾಡ್ದನ ಸಂಪುಟ, ತುಳುವ ಜಾನಪದ ಕೆಲವು ನೋಟಗಳು, ತುಳು ಬದುಕು ಇತ್ಯಾದಿ, ನಾವಡ ಎ.ವಿ-ತುಳು-ಪಾಡ್ದನ ಬಂಧ ಮತ್ತು ವಿನ್ಯಾಸ, ಪೀಟರ್ ಜೆ ಕ್ಲಾಸ್-ತುಳುವ ದರ್ಶನ, ಗಾಯತ್ರಿ ನಾವಡರ ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಪೂವಪ್ಪ ಕಾಣಿಯೂರು-ಮೌಖಿಕ ಸಂಕಥನ, ರಾಜಶ್ರೀ-ತುಳುಜನಪದ ಕಾವ್ಯ ಇಹಪರ ಲೋಕದೃಷ್ಟಿ ಮುಂತಾದವುಗಳು.

19 ಸುರೇಂದ್ರರಾವ್, ಚಿನ್ನಪ್ಪ ಗೌಡ (ಸಂ) ದಿ ರಿಟ್ರೀವ್ಡ್ ಏಕರ್, ನಾವಡ ಎ.ವಿ ಕರಾವಳಿ ಜಾನಪದ(ಸಂ) ನಾವಡ ಎ.ವಿ, ಡೆನ್ನಿಸ್ ಫೆರ್ನಾಂಡಿಸ್ ದಿ ಡೆವಿಲ್ ವರ್ಷಿಪ್ ಆಫ್ ತುಳುವಾಸ್ ಮುಂತಾದವುಗಳು.

20 ವೆಂಕಟರಾಜ ಪುಣಿಂಚಿತ್ತಾಯ-ತುಳು ನಡೆನುಡಿ, ತುಳುಲಿಪಿ, ಯು.ಪಿ ಉಪಾಧ್ಯಾಯರ ತುಳು-ನಿಘಂಟು.

21 ಸುರೇಂದ್ರರಾವ್, ಬಂಟ್ಸ್ ಇನ್ ಹಿಸ್ಟರಿ ಅಂಡ್ ಕಲ್ಚರ್, ಮೋಹನಕೃಷ್ಣ ರೈ-ತುಳು ಸಂಸ್ಕೃತಿ; ಚತುರ್ಮುಖಿ ಅಧ್ಯಯನ, ಕೆನರಾದ ವಿಭಜನೆ-ಹತ್ತಿ ರಾಜಕೀಯದ ವಿಶ್ಲೇಷಣೆ, ತುಳುನಾಡು-ಕನ್ನಡನುಡಿ, ಶೈಲಾ ಟಿ ವರ್ಮ-ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಾವಿತ್ರಿ ಕೆ, ನಂಬಿದ ಸತ್ಯಗಳು ಇತ್ಯಾದಿ. ತುಳುನಾಡಿನ ಸಮಗ್ರ ಇತಿಹಾಸ ದೃಷ್ಟಿಯಿಂದ ಉಡುಪಿಯ ಗೋವಿಂದ ಪೈ ಸಂಶೋಧನ ಕೇಂದ್ರ ಮೌಖಿಕ ಸಾಹಿತ್ಯ, ಜನಪದ ಆಚರಣೆ ಮುಂತಾದವುಗಳನ್ನು ಡಿಜಿಟಲೀಕರಣ ಮಾಡಿದ್ದು ನಶಿಸಿ ಹೋಗುತ್ತಿರುವ ತುಳು ಸಂಸ್ಕೃತಿಯ ವಿಚಾರಗಳನ್ನು ಜತನದಿಂದ ಸಂರಕ್ಷಣೆ ಮಾಡುತ್ತಿರುವುದು ಮುಖ್ಯವಾಗುತ್ತದೆ.

22 ಮೋಹನಕೃಷ್ಣ ರೈ ಕೆ, ಪ್ರಭುತ್ವ ಮತ್ತು ಜನತೆ, ಪ್ರಸರಾಂಗ ಕನ್ನಡ ವಿ.ವಿ ಹಂಪಿ 2007: ಪುಟ 5.

23 ಎಂ.ವಿ.ಆರ್ ಶಾಸ್ತ್ರಿ, ಯಾವುದು ಚರಿತ್ರೆ, ಅನುವಾದ ಬಾಬು ಕೃಷ್ಣಮೂರ್ತಿ, ದ್ರಾವಿಡ ವಿ.ವಿ ಕುಪ್ಪಂ; ಪುಟ ಮುನ್ನುಡಿ 11, ಅಧ್ಯಾಯ ಒಂದರಲ್ಲಿ ಪುಟ 1. ವಸಾಹತುಶಾಹಿಯ ಅವಶೇಷಗಳನ್ನು ತೊಲಗಿಸಿ ಸ್ವತಂತ್ರ ರಾಷ್ಟ್ರಕ್ಕೆ ಸರಿಹೊಂದುವಂತಹ ವಿಧಾನಗಳನ್ನು ರೂಪಿಸಿಕೊಳ್ಳುವ ಕೆಲಸದಲ್ಲಿ ಶಿಕ್ಷಣ, ನ್ಯಾಯಾಂಗ ಆಡಳಿತ ರಂಗಗಳಂತೆ ಚರಿತ್ರೆಯ ವಿಷಯದಲ್ಲೂ ಬದಲಾಗಬೇಕಿತ್ತು ಆದರೆ ವಸಾಹತುಶಾಹಿಯ ನಂತರವೂ ಇತಿಹಾಸದ ಬಗೆಗಿನ ನಮ್ಮ ಜ್ಞಾನ ಅಪೂರ್ಣ ಮಾತ್ರವಲ್ಲ ಅದರೆಡೆಗಿನ ಕುತೂಹಲದ ಕೊರತೆಯು ಈ ಎಲ್ಲ ಸಂದರ್ಭಗಳಿಗೆ ಕಾರಣವಾಗಿವೆ. ಭಾರತೀಯರಿಗೆ ಇತಿಹಾಸದ ಜ್ಞಾನವಿಲ್ಲ, ದಾಖಲಿಸಿಕೊಳ್ಳುವ ಪ್ರೌಢಿಮೆಯಿಲ್ಲವೆಂಬ ಬ್ರಿಟಿಷ್ ಇತಿಹಾಸಕಾರರ ನಿಲುವುಗಳು ತುಳುನಾಡಿಗೆ ಹೆಚ್ಚು ಹೊಂದಿಕೊಳ್ಳುತ್ತದೆ.

24 ಬಿ.ಎ ವಿವೇಕ ರೈ, ತುಳು ಸಾಹಿತ್ಯ ಚರಿತ್ರೆ, ಸಂಪಾದನ ಗ್ರಂಥ, ಕನ್ನಡ ವಿ.ವಿ ಹಂಪಿ, 2007, ಮುನ್ನುಡಿ ಪುಟ 4.

25 ಅದೇ ಪುಟ 30-35.

26 ನ್ಯಾಯಯುತವಾದ ಹಕ್ಕುಬಾಧ್ಯತೆಗಳನ್ನು ಪೂರ್ವಾರ್ಜಿತವಾಗಿ ಪಡೆದುಕೊಂಡಿರುವುದು.

27 ಕಲ್ಚರಲ್ ಹೆರಿಟೇಜ್ ಅಥವಾ ಸಾಂಸ್ಕೃತಿಕ ಬಳುವಳಿ.

28 ನಾಗಪ್ಪಗೌಡ, ದ ಗೆಟ್ಹೊ ಅಂಡ್ ಸ್ಪಿರಿಟ್, ಟ್ರೆಡಿಷನ್ ಅಂಡ್ ಮೊಡರ್ನಿಟಿ ಇನ್ ವಿವೇಕಾನಂದಾಸ್ ಥಾಟ್ ಪುಟ 9.

29 ಚಂದ್ರ ಮಲ್ಲಂಪಳ್ಳಿ, ಕ್ರಿಶ್ಚನ್ಸ್ ಅಂಡ್ ಪಬ್ಲಿಕ್ ಲೈಫ್ ಇನ್ ಕೊಲೊನಿಯಲ್ ಸೌತ್ ಇಂಡಿಯಾ, ರುಟ್ಲನ್ ಕರ್ಜನ್, ನ್ಯೂಯಾರ್ಕ್ 2004, ಪುಟಗಳು 40, 55-56.

30 ಹಳೆಯದಾದ ಇಲ್ಲವೇ ಪ್ರಾಕ್‌ಕಾಲದ ರೂಢಿಸಂಪ್ರದಾಯ.

31 ಶಂಕರ ಭಟ್, ಅಳಿಯ ಸಂತಾನ. ಜಿ ಅರುಣಿಮಾ, ಕೊಲೊನಿಯಾಲಿಸಂ ಎಂಡ್ ದ ಟ್ರಾನ್ಸ್ಫಾಮೇಶನ್ ಒಫ್ ಮೆಟ್ರಲಿನಿ ಇನ್ ಕೇರಳ ಅಂಡ್ ಮಲಬಾರ್ 1850-1940.

32 1. ಸೌ.ಇ.ಇ.ಸಂ. 9 ಭಾಗ 2, 540: 28

2. ಸೌ.ಇ.ಇ ಸಂ.9 ಭಾಗ 1 621, 659, 675, 694:

3 ಸೌ.ಇ.ಇ ವಿ.9 512;

4 ವಸಂತ ಮಾಧವ ಕೆ,ಜಿ ವೆಸ್ಟರ್ನ್ ಕರ್ನಾಟಕ; ಇಟ್ಸ್ ಅಗ್ರೇರಿಯನ್ ರಿಲೇಶನ್ಸ್ 1500-1800 ಹೊಸದೆಹಲಿ 1991, ಪುಟ 12,

5. ಸೌ.ಇ.ಇ ವಿ. 7 ನಂ 264, ಸೌ.ಇ.ಇ ವಿ.9 620, 632, 655.

6. ವಸಂತ ಮಾಧವ, ಕೆ.ಜಿ, ವೆಸ್ಟರ್ನ್ ಕರ್ನಾಟಕ: ಇಟ್ಸ್ ಅಗ್ರೇರಿಯನ್ ರಿಲೇಶನ್ಸ್ 1500-1800 ಹೊಸದೆಹಲಿ 1991, ಪುಟ 129.

ಗ್ರಾಮಪದ್ಧತಿ, ತುಳುನಾಡಿನಲ್ಲಿ ಲಭ್ಯವಿರುವ ದಾನಶಾಸನಗಳು, ಪಾಡ್ದನಗಳು ಇತ್ಯಾದಿ.

33 ಚಂದ್ರಪೂಜಾರಿ, ಸಂಶೋಧನೆ ಏನು? ಯಾಕೆ? ಹಂಪಿ. ವಿ. ವಿ ಪ್ರಸರಾಂಗ, ಪುಟಗಳು 130-131

34 ಸ್ಟರಕ್.ಜೆ, ಮದ್ರಾಸ್ ಡಿಸ್ಟ್ರಿಕ್ ಮ್ಯಾನುವೆಲ್ಸ್ ಸೌತ್ ಕೆನರಾ ಸಂಪುಟ-1 ಮದ್ರಾಸ್ 1894. ಪುಟ 155.

35 ಕಡವ ಶಂಭುಶರ್ಮ, ತುಳು ದೇಶ ಭಾಷಾ ವಿಚಾರವೂ, ಪುಟಗಳು 58-59.

36 ಒಕ್ಕಲುಗಳು ಆರಾಧಿಸುತ್ತಿದ್ದ ಸರ್ವಚೇತನವಾದಿ ದೈವಗಳಲ್ಲಿ ಕೆಲವೊಂದು ಜೈನ ಸಾಮಂತರ ಪಟ್ಟದ ದೈವಗಳಾಗಿ ಆರಾಧಿಸಲ್ಪಟ್ಟಿರುವುದು ಆ ಕಾಲದ ರಾಜಕಾರಣದಲ್ಲಿ ಪಾಲು ಪಡೆದ ಈ ಎರಡು ವರ್ಗಗಳು ಒಂದು ರೀತಿಯ ಅಲಿಖಿತ ಅಧಿಕಾರ ಒಪ್ಪಂದಗಳನ್ನು ಮಾಡಿದ್ದು ಇತಿಹಾಸ ವಿಶ್ಲೇಷಣೆಗೆ ಒಳಪಡಬೇಕಾದ ವಿಚಾರ.

37 1.ವೇಣೂರಿನಲ್ಲಿ ದೈವ ಆರಾಧನೆ ಕೈ ಬಿಟ್ಟದ್ದಕ್ಕೆ ಜೈನರು ಅನುಭವಿಸಿದ ಶಿಕ್ಷೆಗಳು 2.ತಂಬಿಲ, ಕೋಲ, ನೇಮ, ಆಯನ, ಬಂಡಿ, ಧರ್ಮ ನೇಮಗಳಂತಹ ಆಚರಣೆಗಳನ್ನು ಯಥಾವತ್ತಾಗಿ ಮುಂದುವರೆಸಿರುವುದು.

38 ಎಸ್.ಡಿ ಶೆಟ್ಟಿ ಉಜಿರೆ, ತುಳುನಾಡಿನ ಜೈನಧರ್ಮ, ಉಡುಪಿ, 2002, ಪುಟಗಳು 189-190.

39 ಪುರುಷೋತ್ತಮ ಬಿಳಿಮಲೆ, ಕರಾವಳಿ ಜಾನಪದ, ಶಾರದ ಪ್ರೆಸ್ ಮಂಗಳೂರು. 1990 ಪುಟಗಳು 1-2.

40 ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005

41 ಡಾ. ಬಾಲಗಂಗಾಧರ, ಸ್ಮೃತಿ-ವಿಸ್ಮೃತಿ-ಭಾರತೀಯ ಸಂಸ್ಕೃತಿ, ಕನ್ನಡ ಅನುವಾದ ರಾಜರಾಮ್ ಹೆಗಡೆ, ಅಕ್ಷರ ಪ್ರಕಾಶನ ಹೆಗ್ಗೋಡು 2010.

## ವಾರಸುದಾರಿಕೆಯ ಕಲ್ಪನೆ: ತುಳುನಾಡು

ವಾರಸುದಾರಿಕೆಯ ಕಲ್ಪನೆಗೆ ಸಂಬಂಧಿಸಿದಂತೆ ಸಮುದಾಯಗಳ ವಾಸ್ತವ್ಯ, ಸಾಮಾಜಿಕ ರಚನೆ, ಸಾಮಾಜಿಕ ರಚನೆಯ ಸುತ್ತ ಇರುವ ಅನುಸಂಧಾನಗಳು, ಸಾಮಾಜಿಕ ರಚನೆಗೆ ಪೂರಕವಾಗಿರುವ ಮಾನವ ನಿರ್ಮಿತ ವಸ್ತುಗಳು, ಸಮಾಜಗಳ ಸಮಕಾಲೀನ ದತ್ತ ಮಾಹಿತಿಗಳು, ಸಾಮಾಜಿಕ ರಚನೆಯ ಹರವುಗಳನ್ನು ಶಬ್ದೀಕರಿಸುವ ವ್ಯವಸ್ಥಿತ ಕಾರ್ಯಕ್ಷೇತ್ರ, ಅನುಭವ ಜ್ಞಾನ ಮುಂತಾದವುಗಳ ಜಾಡಿನ ಆಧಾರದಲ್ಲಿ ಮಾನವನ ವಾಸ್ತವ್ಯದ ಹೆಜ್ಜೆಗಳನ್ನು ಗುರುತಿಸಲು ಸಹಾಯಕ ಎಂಬ ಆಶಯವನ್ನು ಚರಿತ್ರಕಾರರು ವ್ಯಕ್ತಪಡಿಸಿದ್ದಾರೆ.[1] ಮುಂದುವರೆದು ಒಂದು ಪ್ರದೇಶದಲ್ಲಿ ವಾಸ್ತವ್ಯ ಹೂಡಿದ ವಿವಿಧ ಜನಸಮುದಾಯಗಳ ಸಾಮಾಜಿಕ ಅನನ್ಯತೆಗಳು, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ವ್ಯವಸ್ಥೆಗಳು ಹಾಗೂ ಕೃಷಿ ವ್ಯವಸ್ಥೆಯಿಂದ ರೂಪಿತವಾದ ಸಾಂಸ್ಥಿಕ ಅಧಿಕಾರ ಮುಂತಾದವುಗಳು ತುಳುನಾಡಿನ ವಾರಸುದಾರಿಕೆಯ ಕಲ್ಪನೆಗೆ ಆಯಾಮಗಳನ್ನು ಒದಗಿಸುವ ಮೂಲಧಾತುಗಳಾಗಿಯೂ ಪರಿಗಣಿಸಬಹುದೆಂಬುವುದು ವಿದ್ವಾಂಸರ ಅಭಿಪ್ರಾಯ. ಮಾನವನ ವಾಸ್ತವ್ಯದಿಂದ ರೂಪಿತವಾದ ಸಮಾಜದ ಸಾಮುದಾಯಿಕ ಚಟುವಟಿಕೆಗಳು ಪರಸ್ಪರ ಕಲೆತು ವಿನ್ಯಾಸಗೊಂಡಾಗ ಅವಲಂಬನೆಗೆ ಒಳಗಾಗುತ್ತವೆ. ಉದಾಹರಣೆಗೆ ಆರ್ಥಿಕವಾಗಿ ಕೊಡು-ಕೊಳ್ಳುವ ಅಥವಾ ರಾಜಕೀಯವಾಗಿ ಅಧಿಕಾರದ ರೂಪದಲ್ಲಿ ಒಂದು ಇನ್ನೊಂದರ ಮೇಲೆ ಹತೋಟಿ ಸ್ಥಾಪಿಸುವ ವ್ಯವಸ್ಥೆ ಅವಲಂಬನೆಯ ಪ್ರತೀಕ. ಮಾತ್ರವಲ್ಲ ಒಂದು ಪ್ರದೇಶದ ಅಧಿಕಾರಗಳನ್ನು ಒಪ್ಪಂದಗಳಿಂದ ನಿರ್ವಚಿಸಿ ಮಾನ್ಯತೆಯನ್ನು ಪಡೆಯುವುದು ಸಮುದಾಯಗಳಲ್ಲಿನ ಜನರ ವಾಸ್ತವ್ಯಕ್ಕೆ ಹಾದಿಯನ್ನು ಕಲ್ಪಿಸಿಕೊಡುತ್ತದೆ ಎಂಬುವುದು ಚರಿತ್ರಕಾರರ ಅಂಬೋಣ.[2]

ಮಾನವನ ವಾಸ್ತವ್ಯದ ಚಾರಿತ್ರಿಕ ಬೆಳವಣಿಗೆಗಳನ್ನು ಅವಲೋಕಿಸಿದಾಗ ತುಳುನಾಡಿನ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ನೆಲೆಗಟ್ಟುಗಳು ಪರಸ್ಪರ ಸಹಬಾಳ್ವೆಯ ಸ್ವರೂಪದವುಗಳು ಎಂದು ಜಾನಪದ ಹೆಚ್ಚು ಪ್ರಾಮಾಣಿಕ ಮತ್ತು ಪ್ರಾತಿನಿಧಿಕವಾಗಿ ಸ್ಪಷ್ಟಪಡಿಸಿದ್ದು ಒಂದೆಡೆಯಾದರೆ,[3] ಇನ್ನೊಂದೆಡೆ ತುಳುನಾಡಿನ ಸಂದರ್ಭದ ಸಮಾಜ ಶ್ರೇಣಿಕೃತವಾಗಿದ್ದು, ಏಕರೂಪತೆಯನ್ನು ಪಡೆದುಕೊಂಡಿರಲಿಲ್ಲ ಎಂಬುವುದು ವಿದ್ವಾಂಸರ ಅಭಿಪ್ರಾಯವಾಗಿದೆ.[4] ಆದುದರಿಂದ ತುಳುನಾಡಿನ ವಾರಸುದಾರಿಕೆ ಒಂದರ್ಥದಲ್ಲಿ ಏಕಪ್ರಕಾರವಾಗಿರಬೇಕಿತ್ತು ಆದರೆ ಶ್ರೇಣಿಕೃತ ಸಮಾಜದಂತೆ ಇಲ್ಲಿನ ವಾರಸುದಾರಿಕೆಗಳ ಆಯಾಮಗಳು ಸಮಾಜದ ರಚನೆಯೊಂದಿಗೆ ರೂಪುಗೊಂಡಿದ್ದರಿಂದ ವಿಭಿನ್ನತೆಗಳಿಂದ ಕೂಡಿರಬಹುದೆಂದು ಸಹ ಅಭಿಪ್ರಾಯಪಡಬಹುದು.

ತುಳುನಾಡಿನಲ್ಲಿ ಆದ ಸಮುದಾಯಗಳ ಸಂಚಲನೆ, ಊಳಿಗಮಾನ್ಯ ವ್ಯವಸ್ಥೆಯ ಕಟಿಬದ್ಧತೆ, ಜೈನ-ಬ್ರಾಹ್ಮಣ-ಒಕ್ಕಲು ಮುಂತಾದ ಸಮುದಾಯಗಳ ಪ್ರಾಬಲ್ಯ, ಚರಿತ್ರೆಯ ಸ್ವರೂಪವನ್ನು ಹೇಗೆ ಬದಲಾಯಿಸಿತು ಎಂಬುವುದರ ಬಗ್ಗೆ ಹೆಸರಾಂತ ವಿದ್ವಾಂಸರು ಮಹತ್ವದ ಚರ್ಚೆ ಮಾಡಿರುತ್ತಾರೆ.[5] ದಕ್ಷಿಣ ಭಾರತದ ಚರಿತ್ರೆಯ ಅಧ್ಯಯನ ಮಾಡಿದ ಡಾ. ಕೇಶವನ್ ವೇಲುತಾಟರು ಅಭಿಪ್ರಾಯಪಡುವಂತೆ ಬ್ರಾಹ್ಮಣರ ವಾಸ್ತವ್ಯ, ದೇವಸ್ಥಾನ ಕೇಂದ್ರಿತ ಸಾಮಾಜಿಕ ಜೀವನ, ಕೃಷಿ-ಸಾಮಾಜಿಕ ವ್ಯವಸ್ಥೆಯ ಹರವನ್ನು ವಿಸ್ತಾರಗೊಳಿಸಿತು. ಭತ್ತದ ಕೃಷಿ, ಕೃಷಿಪ್ರಣೀತ ಆರ್ಥಿಕತೆಯನ್ನು ಬಲಿಷ್ಠಗೊಳಿಸಿ, ಸ್ಥಳೀಯ ಶ್ರೇಣಿಕೃತ ಕೃಷಿ ಅಧಿಕಾರದ ಸ್ತರಗಳಲ್ಲಿ ಪ್ರಧಾನ ಭೂಮಿಕೆಯನ್ನು ವಹಿಸಿತು. ಬ್ರಾಹ್ಮಣರ ಪ್ರಭಾವದಿಂದಾಗಿ ತುಳುವರ ರೂಢಿ-ಆಚರಣೆ, ಅಂತಸ್ತು ನಿಗದಿಕರಣಗೊಂಡು, ಸಮುದಾಯಗಳ ಸಾಮಾಜಿಕ ನಿಯಮಗಳು ಹೊಸತಾಗಿ ವ್ಯಾಖ್ಯಾನಿಸಲ್ಪಟ್ಟವು.[6] ಭತ್ತದ ಕೃಷಿ ವಿಸ್ತಾರಗೊಂಡಂತೆಲ್ಲ ಅದಕ್ಕೆ ಪೂರಕವಾಗಿರುವ ವೃತ್ತಿ ಪರಿಣತ ಹಾಗೂ ಶ್ರಮ ಆಧಾರಿತ ಸಮುದಾಯಗಳು ಜಾತಿ ನೆಲೆಗಳಲ್ಲಿ ನೆಲೆಗೊಂಡವು. ಜೊತೆಗೆ ಪ್ರಭಾವಿ ಸಮುದಾಯಗಳ ಪ್ರಭಾವ ಸ್ಥಳೀಯಾಡಳಿತ ವ್ಯವಸ್ಥೆಯಲ್ಲಿ ಬದಲಾವಣೆ ತಂದಿತ್ತಲ್ಲದೇ, ತುಳುವರ ರಾಜಕೀಯ, ಆರ್ಥಿಕ, ಸಾಮಾಜಿಕ ಜೀವನವನ್ನು ಶ್ರೇಣಿಕೃತ ಸ್ವರೂಪಕ್ಕೆ ಮಾರ್ಪಡಿಸಿತು. ಇದರ ಪರಿಣಾಮವಾಗಿ ತುಳುನಾಡಿನ ವಾರಸುದಾರಿಕೆ ಸಾಮಾನ್ಯಶಕೆ ಒಂಬತ್ತು, ಹತ್ತನೇ ಶತಮಾನದ ಸಂದರ್ಭದಲ್ಲಿ ಬಹುರೂಪ ಪಡೆದುಕೊಂಡಿತು.[7] ಈ ಬೆಳವಣಿಗೆ ವಾರಸುದಾರಿಕೆಯ ಕಲ್ಪನೆಗೆ ಹೊಸ ಆಯಾಮ ನೀಡಿದ್ದಲ್ಲದೇ, ಈ ಪ್ರದೇಶದಲ್ಲಿ ವಾಸ್ತವ್ಯವಿದ್ದ ಸಮುದಾಯಗಳು, ಸಮುದಾಯಗಳನ್ನು ನಿಯಂತ್ರಣ ಮಾಡುವ ಅಂತರ್ಗತ ವ್ಯವಸ್ಥೆ ಹಾಗೂ ಸಾಮುದಾಯಿಕ ಸಂಸ್ಥೆಗಳ ಸ್ವರೂಪಗಳು ಮರುವ್ಯಾಖ್ಯಾನಗೊಂಡವು. ಭೂಮಿ, ಭೂಮಿಯ ಒಡೆತನದ ಹಕ್ಕುಬಾಧ್ಯತೆಗಳ ವಿವಿಧ ಆಯಾಮಗಳ ತೆರೆದುಕೊಳ್ಳುವಿಕೆ, ಹಲವಾರು ಸಮುದಾಯಗಳ ಜತೆಗೂಡುವಿಕೆಯಿಂದಾಗಿ ತುಳುನಾಡು ಅಮೂಲಾಗ್ರ ಬದಲಾವಣೆಗೆ ಒಳಪಟ್ಟಿತು. ಈ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿದ್ದು, ಸಂಶೋಧನೆಗಳು ಈ ವಿಷಯವನ್ನು ದೃಢೀಕರಿಸಿವೆ.[8]

ತುಳುನಾಡಿನ ಸಾಮಂತತೆ, ಶ್ರೇಣಿಕೃತ ವ್ಯವಸ್ಥೆ, ಪ್ರಾದೇಶಿಕ ಭಿನ್ನತೆ, ಆಚಾರ, ವಿಚಾರ, ನಂಬಿಕೆ, ಭೌಗೋಳಿಕತೆ ತುಳುವ ಸಮಾಜವನ್ನು ವಿಶಿಷ್ಟವನ್ನಾಗಿ ಮಾಡಿವೆಯಲ್ಲದೇ, ಶ್ರೇಣಿಕೃತ ಸಮಾಜ ಪದರುಗೊಳ್ಳುವಲ್ಲಿನ ಜನರ ಬದುಕು ರೂಪುಗೊಂಡಿರುವ ಬಗೆ, ಚಾರಿತ್ರಿಕವಾಗಿ ಅದು ವಿಕಸನಗೊಂಡಿರುವ ರೀತಿ, ಬಹುಭಾಷಿಕ ಸಂಸ್ಕೃತಿಯ ಹುಟ್ಟು, ಜನರನ್ನು ಶ್ರಮಜೀವಿಗಳನ್ನಾಗಿ ಮಾಡಿದ ಭೌಗೋಳಿಕ ಪರಿಸರ, ಸಮಾಜ ಸಂಸ್ಕೃತಿಗಳ ರಚನೆಯ ಮಾದರಿಗಳು, ರೂಢಿ-

ಸಂಪ್ರದಾಯಗಳು, ಸಾಮಾಜಿಕ ಸಂಬಂಧಗಳು, ಭಾಷೆ, ಧರ್ಮಾಚರಣೆ ಮುತಾದವುಗಳು ವಾರಸುದಾರಿಕೆಯ ಅಧ್ಯಯನದ ಹಿನ್ನೆಲೆಯಲ್ಲಿ ಮುಖ್ಯಗೊಂಡವು.

ವಸಾಹತುಪೂರ್ವದ ರಾಜಕೀಯ ವಾರಸುದಾರಿಕೆಯನ್ನು ಗುರುತಿಸುವಾಗ ತುಳುನಾಡನ್ನಾಳಿದ ಅರಸರು ಮತ್ತು ಸಾಮಂತರ ಅಧಿಕಾರದ ಮಟ್ಟ ಮತ್ತು ಆಳವನ್ನು ಆಳುಗಳ ಸಂಖ್ಯೆಯ ಮೂಲಕ ನಿರ್ಧಾರ ಮಾಡಲಾಗಿ, ಅವರ ರಾಜಕೀಯ ಅಧಿಕಾರದ ಪರಿಧಿಯನ್ನು ನಿರ್ದಿಷ್ಟ ಪಡಿಸಲಾಗಿತ್ತು. ಉದಾಹರಣೆಗೆ ನೂರಾಳ, ಇನ್ನೂರಾಳ, ಮುನ್ನೂರಾಳ, ನಾನೂರಾಳ, ಐಂದಾಳ, ಸಾವಿರಾಳ, ಮೂಸ್ರಾಳ, ಐಸ್ರಾಳ, ಆಸ್ರಾಳ ಮುಂತಾದ ಸ್ತರೀಕೃತ ಆಡಳಿತ ಘಟಕಗಳು ರೂಪುಗೊಂಡಿದ್ದನ್ನು ಪಾಡ್ದನ ಮತ್ತು ಶಾಸನಗಳು ಆಧಾರ ಸಹಿತವಾಗಿ ಸ್ಪಷ್ಟಪಡಿಸಿವೆ.[9] ಅಂತೆಯೇ ಆಡಳಿತದ ಸ್ತರಗಳನ್ನು ಕೂಲಂಕುಶವಾಗಿ ಅವಲೋಕಿಸಿದಾಗ ಹಲವಾರು ಸಮುದಾಯಗಳನ್ನು ಒಳಗೊಂಡ ಸಂಖ್ಯಾಧಾರಿತ ಸಾಮಂತತೆಯ ಸ್ತರಗಳು ಆಡಳಿತಾತ್ಮಕವಾಗಿ ಆಸ್ತಿತ್ವದಲ್ಲಿ ಇತ್ತೆಂಬುವುದನ್ನು ಚರಿತ್ರೆ ಸ್ಪಷ್ಟಪಡಿಸಿದೆ.[10] ಉದಾಹರಣೆಗೆ ಅರ್ಕುಳ ನಾನೂರಾಳ, ಮೊಗರ್ನಾಡು ಸಾವಿರಾಳ, ಉಳ್ಳಾಲ ಸಾವಿರಾಳ, ಶೆಡ್ಯೆ ಸಾವಿರಾಳ, ಹರೇಕಳ-ಇನವಳ್ಳಿ ಸಾವಿರಾಳ, ವಿಟ್ಲ ಎರಡು ಸಾವಿರಾಳ ಇತ್ಯಾದಿ ಈ ನೆಲೆಯವು ಎಂಬುವುದು ಸ್ಪಷ್ಟ.[11] ಹೀಗೆ ಈ ಸ್ವರೂಪದ ರಾಜಕೀಯ ವ್ಯವಸ್ಥೆ, ಅದನ್ನು ಒಳಗೊಂಡ ಆರ್ಥಿಕತೆ, ಸಾಮಂತತೆಯ ಪರಿಕಲ್ಪನೆ ಉಳಿಗಮಾನ್ಯ ಅಥವಾ ಶೋಷಣಾತ್ಮಕ ವ್ಯವಸ್ಥೆಗೆ ಅನುವು ಮಾಡಿತು. ಈ ರೀತಿಯ ಔಪಚಾರಿಕ ವ್ಯವಸ್ಥೆಯಿಂದಾಗಿ ತುಳುನಾಡು ವಸಾಹತು ಪೂರ್ವದಲ್ಲಿ ಆರ್ಥಿಕವಾಗಿ, ಅದರ ಉತ್ಪಾದನ ವ್ಯವಸ್ಥೆ ಶ್ರೇಣಿಕೃತವಾಗಿ, ಕೃಷಿಯಾಧಾರಿತ, ಶ್ರೇಣಿಕೃತ ಅಧಿಕಾರದ ಸ್ತರಗಳನ್ನು ಒಳಗೊಂಡ ಸಮಾಜವಾಗಿ ವಿನ್ಯಾಸಗೊಂಡಿತು.[12]

### ವಾಸ್ತವ್ಯ-ವಾರಸುದಾರಿಕೆ-ತುಳುನಾಡು

ತುಳುನಾಡಿನ ಸಮಾಜ ಮತ್ತು ಸಂಸ್ಕೃತಿ ಅಧ್ಯಯನದಲ್ಲಿ ಪುರಾತತ್ವ ಸಂಶೋಧಕರ ಸಲಿಕೆ ಹೆಚ್ಚು ಕೆಲಸ ಮಾಡದಿದ್ದರೂ ಇತ್ತೀಚಿನ ಅಧ್ಯಯನಗಳು ಮಾನವ ವಾಸ್ತವ್ಯದ ಬಗ್ಗೆ ಮಹತ್ವದ ಸಂಶೋಧನೆಗಳನ್ನು ನಡೆಸುವಲ್ಲಿ ಸಹಕಾರಿಯಾಗಿದೆ.[13] ಭೌಗೋಳಿಕ ಮತ್ತು ಹವಾಮಾನದ ದೃಷ್ಟಿಯಿಂದ ತುಳುನಾಡಿಗೂ ಕೊಂಕಣಗೋವಾ ಕರಾವಳಿಗೂ ಹೆಚ್ಚಿನ ವ್ಯತ್ಯಾಸ ಕಂಡು ಬರುವುದಿಲ್ಲವಾದುದರಿಂದ ಪಶ್ಚಿಮ ಕರಾವಳಿಯಲ್ಲಿ ಪುರಾತನ ಮಾನವ ನೆಲೆಸಿರುವ ತೀರ್ಮಾನಕ್ಕೆ ಬರುವ ಆಶಯವನ್ನು ಚರಿತ್ರೆಕಾರರು ವ್ಯಕ್ತಪಡಿಸುತ್ತಾರೆ.[14] ಆದುದರಿಂದ ತುಳುನಾಡಿನಲ್ಲಿ ಮಾನವನ ವಾಸ್ತವ್ಯದ ಚರಿತ್ರೆಯ ಗುರುತಿಸುವಿಕೆ ಪೂರ್ವೇತಿಹಾಸದ ಕಾಲಕ್ಕೆ ಚಲಿಸಿದೆ ಎಂಬುವುದು ಚರಿತ್ರಕಾರರ ವಾದ.[15]

ತುಳುನಾಡಿನ ಲಭ್ಯ ಪುರಾತತ್ವ ಸಮರ್ಥನೆಗಳ ಪ್ರಕಾರ ಹಳೆಶಿಲಾಯುಗದಿಂದ ಆರಂಭಗೊಂಡ ಮಾನವನ ವಾಸ್ತವ್ಯವು ನಂತರದ ಕಾಲಾವಧಿಗಳಲ್ಲಿ ಸಾಂದ್ರಗೊಳ್ಳುತ್ತಾ, ವ್ಯವಸ್ಥಿಕೃತ ಸ್ವರೂಪ ಪಡೆಯುವ ವರೆಗೆ ಸಾಗಿತು. ಕಬ್ಬಿಣಯುಗ ಹಾಗೂ ಗುಹಾಸಮಾಧಿಗಳ ಕಾಲಕ್ಕೆ ಸಂಬಂಧಿಸಿದಂತೆ ದೊರೆತ ವಸ್ತು-ವಿಚಾರಗಳ ಆಧಾರದಲ್ಲಿ, ಮಾನವನ ಕ್ರಮಬದ್ಧ ವಾಸ್ತವ್ಯದ ಕುರುಹು ಸಾಮಾನ್ಯ ಶಕೆಯ ಒಂದನೆಯ ಶತಮಾನದಿಂದ ಸಾಮಾನ್ಯ ಶಕೆಯ ಮೂರನೇ ಶತಮಾನದ ವರೆಗೆ ಇತ್ತೆಂದು ಸ್ಪಷ್ಟವಾಗುತ್ತದೆ. ಅಂತೆಯೆ ಬೃಹತ್ ಶಿಲಾಸಮಾಧಿಗಳ ಪಳಿಯುಳಿಕೆಗಳು ಕಬ್ಬಿಣದ ಉಪಯೋಗಕ್ಕೆ ಸಂಬಂಧಿಸಿದಂತೆ ಸ್ಪಷ್ಟ ಮಾಹಿತಿ ನೀಡುವುದರ ಜೊತೆಗೆ ವಾಸ್ತವ್ಯಕ್ಕೆ ಸಂಬಂಧಿಸಿದಂತೆಯೂ ಸಾಂದರ್ಭಿಕ ಮಾಹಿತಿಯನ್ನು ನೀಡುತ್ತದೆ. ಈ ಸಮಾಧಿಯ ಸುತ್ತ ಸಿಕ್ಕಿರುವ ಪಳಿಯುಳಿಕೆಗಳು ಹಾಗೂ ಸುತ್ತಮುತ್ತಲಿನ ಕಲ್ಲುಗಳ ಗುರುತುಗಳನ್ನು ಆಧಾರವಾಗಿ ತೆಗೆದುಕೊಂಡರೆ ಸಮಾಧಿಗೊಂಡವನ ಚರಿತ್ರೆಯ ಜೊತೆಗೆ ಅವನ ಅಂತಸ್ತುಗಳ ಬಗ್ಗೆಯೂ ಸ್ಪಷ್ಟವಾಗುತ್ತದೆ. ಮುಂದುವರೆದು ಸಮಾಧಿಗಳ ಪಕ್ಕ ಸಿಕ್ಕಿರುವ ಆಯುಧಗಳನ್ನು ಪರಿಶೀಲಿಸಿದಾಗ ಕಬ್ಬಿಣವನ್ನು ತಯಾರಿಸುವ, ಅವುಗಳನ್ನು ಬಳಕೆ ಮಾಡುವ ಆರ್ಥಿಕತೆಗಳಿರಬಹುದೆಂಬುವುದರ ಜೊತೆಗೆ ಈ ಆರ್ಥಿಕತೆಗಳೊಂದಿಗೆ ವಿಸ್ತಾರವಾದ ಜಾಲಬಂಧವೂ ಜಾರಿಯಲ್ಲಿರುವುದನ್ನು ತಿಳಿದುಕೊಳ್ಳಬೇಕಾಗುತ್ತದೆ.[16] ಆದರೆ ಈ ವಿವರಣೆಯು ಭಿನ್ನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನ ಶೈಲಿಯ ಬಗ್ಗೆ ಪ್ರಸ್ತಾಪಿಸುತ್ತದೆ.[17] ಆದಾಗ್ಯೂ ಆ ಕಾಲದ ವಾಸ್ತವ್ಯಕ್ಕೆ ಸಂಬಂಧಿಸಿದ ಮಾಹಿತಿಯೂ ಪರಿಪೂರ್ಣವಾಗಿಲ್ಲವೆಂಬುವುದು ಇತಿಹಾಸಕಾರರ ಅಭಿಪ್ರಾಯ.

ಇತಿಹಾಸಕಾರರ ಮಾತಿನಲ್ಲಿ ಹೇಳುವುದಾದರೆ ತುಳುನಾಡಿನ ಶಿಲಾಸಮಾಧಿ ಯುಗದ ಮಾನವನ ವಾಸ್ತವ್ಯದ ಪಳಿಯುಳಿಕೆಗಳಾದ ಗವಿ, ಆಯುಧ, ಮಣ್ಣಿನ ಗಡಿಗೆ, ಪಾತ್ರೆ ಮುಂತಾದ ವಸ್ತುಗಳು ಇಲ್ಲಿನ ಬೇರೆ ಬೇರೆ ಪ್ರದೇಶಗಳಲ್ಲಿ ದೊರೆತಿರುವುದರಿಂದ ಆ ಕಾಲದ ಜನರ ಬದುಕನ್ನು ವ್ಯವಸ್ಥಿತವಾಗಿ ತಿಳಿದುಕೊಳ್ಳಲು ಹೆಚ್ಚಿನ ಅಧ್ಯಯನ ಸಂಶೋಧನೆಗಳು ಆಗಬೇಕಾಗಿದೆ.[18] ಪ್ರಸಿದ್ಧ ಇತಿಹಾಸಕಾರರಾದ ರೋಮಿಲಾ ಥಾಪರ್ ಹೇಳುವಂತೆ ದಕ್ಷಿಣ ಭಾರತದಲ್ಲಿ ವಾಸ್ತವ್ಯವನ್ನು ಸಂಕೇತಿಸುವ ಕಬ್ಬಿಣದ ಉಪಯೋಗ ಬೃಹತ್ ಶಿಲಾಯುಗದ ಕಾಲದಲ್ಲಿಯೇ ಪ್ರಚಲಿತದಲ್ಲಿತ್ತು.[19] ಕಬ್ಬಿಣದ ಉಪಯೋಗವು ಕ್ರಮಬದ್ಧ ಕೃಷಿ ವ್ಯವಸ್ಥೆಯೊಂದರ ಆರಂಭಕ್ಕೆ ತಳಹದಿಯಾಗಿ ಸಾಮಾಜಿಕ ಬದಲಾವಣೆಗಳಾಗಿರುವ ಸಾಧ್ಯತೆಗಳನ್ನು ಪ್ರತಿಪಾದಿಸಿದ್ದಾರೆ.

ತುಳುನಾಡಿನಲ್ಲಿ ಬೇಟೆ, ಆಹಾರ ಸಂಗ್ರಹಣೆ, ಮೀನುಗಾರಿಕೆ, ಪಶುಸಂಗೋಪನೆ, ಸ್ಥಳಾಂತರ ಬೇಸಾಯ, ಒದ್ದೆಮಣ್ಣಿನ ಕೃಷಿ, ಉಪ್ಪು ತಯಾರಿಕೆ, ಕರಕುಶಲ ಉತ್ಪಾದನೆ ಇತ್ಯಾದಿ

ಚಟುವಟಿಕೆಗಳಲ್ಲಿ ಕಬ್ಬಿಣದ ಬಳಕೆ ಪ್ರಭಾವ ಬೀರಿ ಸಾಮಾಜಿಕ ಸ್ಥಿತ್ಯಂತರಗಳಿಗೆ ಕಾರಣವಾಗಿರಬಹುದು.[20] ಹೀಗೆ ಕಬ್ಬಿಣದ ಸಂಸ್ಕೃತಿ ಮತ್ತು ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಉದ್ಧಗಲಕ್ಕೂ ಮಾನವ ನೆಲೆಸಿ ವಿವಿಧ ಮಾದರಿಯ ವ್ಯವಸ್ಥೆಗಳು ಸ್ಥಾಪಿಸಲ್ಪಟ್ಟು, ಅದರ ಆಧಾರದ ಮೇಲೆ ಮಾನವನ ವಾಸ್ತವ್ಯದ ಬಗ್ಗೆ ಸುಲಭವಾಗಿ ತಿಳಿದುಕೊಳ್ಳಬಹುದಾದರೂ ತುಳುನಾಡಿನ ಭೌಗೋಳಿಕ ವ್ಯವಸ್ಥೆಗೆ ಅನುಗುಣವಾಗಿ ಮಾನವನ ವಾಸ್ತವ್ಯಗಳನ್ನು ಗುರುತಿಸುವುದು ಸಂಕೀರ್ಣ ಕಾರ್ಯ.

ತುಳುನಾಡಿನಲ್ಲಿ ವಾಸ್ತವ್ಯಕ್ಕೆ ಸಂಬಂಧಿಸಿ ಮೌಖಿಕ ಆಕರಗಳು ಮತ್ತು ಜಾನಪದ ಅಧ್ಯಯನಗಳು ಲಭ್ಯವಿದ್ದರೂ, ಅವು ಕೇವಲ ಸಾಹಿತ್ಯ ಅಧ್ಯಯನಗಳಿಗೆ ಮಾತ್ರ ಸೀಮಿತವಾಗಿದ್ದರಿಂದ ಅಲಕ್ಷಿತ ವರ್ಗದ ಚರಿತ್ರೆಯನ್ನು ಪುನರ್‌ನಿರ್ಮಿಸುವಲ್ಲಿ ಚಾರಿತ್ರಿಕ ಸಂಗತಿಗಳಿದ್ದರೂ ಚರಿತ್ರೆಯಾಗಿ ಮಾನ್ಯಗೊಳ್ಳುವಲ್ಲಿ ಅವುಗಳು ಆಲಕ್ಷ್ಯಕ್ಕೆ ಒಳಗಾಗಿದೆ.[21] ಜೊತೆಗೆ ಮೌಖಿಕ ಚರಿತ್ರೆಯ ಸೀಮಿತ ಅಧ್ಯಯನ ಅಲಿಖಿತ ಆಕರಗಳಲ್ಲಿ ಚಿತ್ರಿಸಲ್ಪಟ್ಟ ಜನರ ಬದುಕಿಗೂ ಲಿಖಿತ ಆಕರಗಳಲ್ಲಿ ಚಿತ್ರಿಸಲ್ಪಟ್ಟ ಜನರ ಬದುಕಿಗೂ ಅಜಗಜಾಂತರ ವ್ಯತ್ಯಾಸಗಳನ್ನು ಅನಾವರಣಗೊಳಿಸಿದೆ. ಈ ವ್ಯತ್ಯಾಸಗಳು ಆಯಾ ಸಂದರ್ಭದ ಉತ್ಪಾದನಾ ವಿಧಾನಗಳಿಗೆ ಸಂಬಂಧಿಸಿರುವುದರಿಂದ ವ್ಯವಸ್ಥಿತ ಚರಿತ್ರೆಯ ಅಧ್ಯಯನ ಮುಖ್ಯವಾಗುತ್ತದೆ. ಮೌಖಿಕ ವಿಚಾರಗಳು ಲಿಖಿತ ರೂಪದಲ್ಲಿ ದಾಖಲಾಗದಿದ್ದರೂ ಅವುಗಳು ಮೂಲನಿವಾಸಿಗಳ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿ ಸಮಕಾಲೀನವಾಗಿಯೇ ಉಳಿದುಕೊಂಡು ಬಂದಿದೆ. ಇನ್ನೊಂದೆಡೆ ತುಳುನಾಡಿನ ಮೌಖಿಕ ಆಕರಗಳು ಪ್ರಬಲ ಆರ್ಥಿಕತೆಯ ಪ್ರಭಾವಕ್ಕೆ ಒಳಗಾದರೂ ತನ್ನತನವನ್ನು ಉಳಿಸಿಕೊಂಡಿರುವುದು ಆಶ್ಚರ್ಯವಾಗಿದೆ.

ಪುರಾತತ್ವ ಆಧಾರಗಳನ್ನು ಲಕ್ಷಿಸಿಕೊಂಡು ವಾಸ್ತವ್ಯಕ್ಕೆ ಹೊಂದಿಕೊಂಡಂತೆ ಮೌಖಿಕ ಚಿಂತನೆಗಳನ್ನು ಪರಿಸ್ಫುಟಗೊಳಿಸಿದಾಗ ನೈಜ ಚರಿತ್ರೆ ಅನಾವರಣಗೊಳ್ಳುವ ಸಾಧ್ಯತೆಗಳು ಹೆಚ್ಚು. ಉದಾಹರಣೆಗೆ ತುಳುನಾಡಿನ ದಕ್ಷಿಣಭಾಗದಲ್ಲಿ ಮೂಲನಿವಾಸಿಗಳೆಂದೆನಿಸಿಕೊಂಡವರ ಕೆಡವಿ ಬಿದ್ದ ಕೋಟೆಗಳ ಪಳಿಯುಳಿಕೆಗಳು ಮಧೂರು, ಕಾಟುಕುಕ್ಕೆ, ಮಂಜೇಶ್ವರ ಮುಂತಾದೆಡೆ ಗೋಚರಕ್ಕೆ ಬಂದಿರುವುದು, ಪುತ್ತೂರಿನ ಸುತ್ತಮುತ್ತ ಕಂಡುಬರುವ ಮಣ್ಣಿನ ಮದಿಲುಗಳು ಇವರ ವಾಸ್ತವ್ಯದ ಕುರುಹುಗಳೆಂದು ಮಾನ್ಯ ಮಾಡಬಹುದಾಗಿದೆ. ವಾಸ್ತವದಲ್ಲಿ ಈ ಪ್ರದೇಶ ಕೊರಗ, ಮಾಯಿಲ, ಮುಗರ, ಬಿಲ್ಲವ, ಮುಂಡಾಲ ಮುಂತಾದ ಮೂಲನಿವಾಸಿಗಳೆಂದೆನಿಸಿದ ಸಮುದಾಯಗಳ ನೆಲೆವೀಡಾಗಿತ್ತು ಎಂಬುವುದು ಚರಿತ್ರಕಾರರ ಅಭಿಪ್ರಾಯ. ಜೊತೆಗೆ ಕನ್ಯಾನ, ಪಟ್ಟದಮೊಗರುವಿನಲ್ಲಿರುವ ಕಟ್ಟಡ ರಚನೆಯ ಪಳಿಯುಳಿಕೆಗಳು ಮಾಯಿಲರ ಕೋಟೆಗಳೆಂದೇ ಜನಜನಿತ.[22] ಈ ವಿಚಾರಗಳನ್ನು ಸಮರ್ಥನೆಯಾಗಿ ಮುಂದಿಟ್ಟಾಗ ತುಳುನಾಡಿನ ಮೇಲೆ

ಅಧಿಕಾರ ಚಲಾಯಿಸಿದ '**ಹುಬಸಿಗ**'ನ ಐತಿಹ್ಯವನ್ನು ಪರಾಮರ್ಶಿಸಬೇಕಾಗುತ್ತದೆ.[23] ಬ್ರಾಹ್ಮಣರು ತುಳುನಾಡಿನಲ್ಲಿ ವಾಸ್ತವ್ಯ ಹೂಡುವ ಪೂರ್ವದಲ್ಲಿ ಹುಬಸಿಗನೆಂಬ (ಕೊರಗ ಇಲ್ಲವೆ ಮುಗೇರ) ದೊರೆ ಈ ಪ್ರದೇಶವನ್ನು ಆಳುತ್ತಿದ್ದನು. ಹುಬಸಿಗನು ಕೊರಗ ಇಲ್ಲವೇ ಮುಗೇರ ಸಮುದಾಯದ ನಾಯಕನಿರಬಹುದೆಂಬ ವಿದ್ವಾಂಸರ ಊಹೆ ಪರಿಶೀಲಿಸಬೇಕಾದ ವಿಚಾರ. ಅವರ ಪ್ರಕಾರ ಹುಬಸಿಗನ ನಾಯಕತ್ವದಲ್ಲಿ ತುಳುನಾಡಿನ ಮೂವತ್ತೆರಡು ಗ್ರಾಮಗಳು ಕೊರಗರ ಇಲ್ಲವೇ ಮುಗೇರರ ವಾಸಸ್ಥಾನವಾಗಿತ್ತು. ಇವರೆಲ್ಲರೂ ಸಮೂಹ ಸಂಸ್ಕೃತಿಯ ಜನಗಳಾಗಿದ್ದು ತುಳುನಾಡಿನ ಮೂಲನಿವಾಸಿಗಳಾಗಿದ್ದವರು. ಈ ವಾದ ವಸಾಹತುಶಾಹಿಗಳ ಆರ್ಯ-ದ್ರಾವಿಡ ಪರಿಕಲ್ಪನೆಯನ್ನು ಸಮರ್ಥಿಸುವ ಪ್ರಕ್ರಿಯೆ ಎಂಬುವುದನ್ನು ಅಲ್ಲಗಳೆಯುವಂತಿಲ್ಲ. ಜೊತೆಗೆ ಚರಿತ್ರಕಾರ ಗುರುರಾಜ ಭಟ್ಟರು ಹುಬಸಿಗ ಮತ್ತು ಅವನ ಅನುಯಾಯಿಗಳು ಮೂಲಸಂಸ್ಕೃತಿಯ ಜನವೆಂದಿದ್ದರೂ ತುಳುನಾಡಿನಲ್ಲಿ ಆರಂಭದ ವಾಸ್ತವ್ಯ ಯಾರಿಂದ ಪ್ರಾರಂಭವಾಗಿದೆ ಎನ್ನುವುದಕ್ಕೆ ಭಿನ್ನಮತ ಇಲ್ಲದಿಲ್ಲ.

ಡಾ. ಭಾಸ್ಕರ ಆನಂದ ಸಾಲೆತ್ತೂರ್ ತುಳುವರ ಮೂಲವನ್ನು 'ತೂಳ್' ಎಂಬ ಹಳೆಗನ್ನಡದ ಪದದಂತೆ ಬಳಸಿದ್ದಾರೆ. ತೂಳು ಎಂಬ ಶಬ್ದಕ್ಕೆ ಹಳೆಗನ್ನಡದಲ್ಲಿ ಹೊಡೆದಾಡುವುದು ಎಂಬ ಅರ್ಥವಿರುವುದರಿಂದ ವಾಸ್ತವ್ಯದ ವಾರಸುದಾರಿಕೆಯನ್ನು 'ಯುದ್ಧ ಸನ್ನದ್ದತೆ'ಯಂತೆ ಕಂಡುಕೊಂಡಿದ್ದಾರೆ.[24] ತುಳುವರ ಯುದ್ಧಸನ್ನದ್ದತೆಯನ್ನು ತುಳುನಾಡಿನ ಜಾನಪದ ಆಟಗಳು ಭಿನ್ನವಾಗಿ ಅರ್ಥೈಸಿಕೊಳ್ಳುವುದರಿಂದ ಅವುಗಳ ಅವಲೋಕನ ಅನಿವಾರ್ಯ. ತುಳುವರ ವಾಸ್ತವ್ಯದ ಕಾರ್ಯಯೋಜನೆಗಳು ಯುದ್ಧಸನ್ನದ್ದವೆಂಬುವುದು ಜಾನಪದ ಕ್ರೀಡೆಗಳಿಗೆ ಭಾಗಶಃ ವಿರುದ್ಧವಾಗಿದೆ. ಚರಿತ್ರೆಯ ಕ್ರಮಬದ್ಧ ಅಧ್ಯಯನಕ್ಕೆ ಡಾ. ಭಾಸ್ಕರ ಆನಂದ ಸಾಲೆತ್ತೂರ್‌ರವರ ಅಭಿಪ್ರಾಯ ಮತ್ತು ಜಾನಪದ ಕ್ರೀಡೆಗಳ ತುಲನಾತ್ಮಕ ಅಧ್ಯಯನ ಮಾಡಬೇಕಾಗುತ್ತದೆ. ವ್ಯವಸ್ಥಿತವಾಗಿ ಬೇಸಾಯ ಪ್ರಾರಂಭವಾಗದಿರುವ ಸಂದರ್ಭ ಆಹಾರ ಸಂಗ್ರಹಿಸುವ ಕಾರ್ಯಯೋಜನೆಗಳಲ್ಲಿ ಜನರ ವರ್ತನೆ ಯುದ್ದಸನ್ನಧ್ದತೆಯಂತೆ ತೋರುವುದಾದರೂ ಅದು ಅದಕ್ಕಿಂತ ಭಿನ್ನವಾದ, ಸ್ಪರ್ಧಾತ್ಮಕ ನೆಲೆಗಟ್ಟಿನ ಮನೋಭಾವ. ಅದಾಗ್ಯೂ ಪ್ರಾಚೀನ ಸಮುದಾಯಗಳಲ್ಲಿ ವಾಸ್ತವ್ಯದ ನೆಲೆಗಳಲ್ಲಿ ಯುಧ್ದಸನ್ನದ್ದತೆಯ ಪರಿಸ್ಥಿತಿ ಸಾಮಾನ್ಯವಾಗಿ ಕಂಡುಬರುತ್ತಿದ್ದು, ಅದು ಆತ್ಮ ರಕ್ಷಣೆಯ ವಿಚಾರವನ್ನು ಒಳಗೊಂಡಿತ್ತು. ಉದಾಹರಣೆಗೆ ಸ್ವರಕ್ಷಣೆಗಾಗಿ ಪ್ರಾಣಿಗಳಿಂದ ದೂರವಿದ್ದು, ಯುದ್ಧಸನ್ನದ್ದನಂತಿರುವುದು. ಜಾನಪದ ಕ್ರೀಡೆಗಳಾದ ಅಜಕಾಯಿದರ್ಪುನಿ,[25] ತಪ್ಪಂಗಾಯಿ,[26] ಅಂಬೋಡಿ,[27] ತೂಟೆದಾರ[28] ಇತ್ಯಾದಿ ಜನಪದ ಆಟಗಳೆಲ್ಲವೂ ಯುದ್ಧಸನ್ನದ್ಧತೆಯಂತೆ ಭಾಸವಾದರೂ ಅವುಗಳು ಕೇವಲ ಮನರಂಜನೆಯ ಸಾಧನಗಳು. ಈ ಆಟಗಳು ಪ್ರಸ್ತುತ ತುಳುನಾಡಿನ ದೇವಸ್ಥಾನಗಳ,

ದೈವಸ್ಥಾನಗಳ ಆಚರಣೆಯಲ್ಲಿ ಮನರಂಜನೆಯ ಇಲ್ಲವೇ ಕಟ್ಟುಪಾಡಿನ ಆಚರಣೆಗಳಾಗಿ ಇಂದಿಗೂ ಮಹತ್ವವನ್ನು ಪಡೆದಿದೆ. ಉದಾಹರಣೆಗೆ ಪೊಳಲಿಯ ಚೆಂಡು, ಕವತ್ತಾರಿನಲ್ಲಿ ನಡೆಯುವ ಅಂಬೋಡಿಕಾಳಗ, ಕಟೀಲಿನಲ್ಲಿ ಜಾತ್ರಾ ಸಂದರ್ಭದಲ್ಲಿ ನಡೆಯುವ ತೂಟೆದಾರ, ಗ್ರಾಮ ದೈವಸ್ಥಾನಗಳಲ್ಲಿ ಕಲ್ಲು ಎತ್ತುವ ಸ್ಪರ್ಧೆ, ಕೆಡ್ಡಸದ ಆಚರಣೆ[29] ಜಾತ್ರೆಗಳ ಸಮಯದಲ್ಲಿ ನಡೆಯುವ ಬೋಂಟೆ[30] ಮುಂತಾದವುಗಳು. ಇವುಗಳನ್ನು ಚಾರಿತ್ರಿಕವಾಗಿ ಅರ್ಥೈಸಿಕೊಂಡರೆ ಪುರಾತನ ಕಾಲದ ವಾಸ್ತವ್ಯದ ಪರಿಕಲ್ಪನೆ ಹಾಗೂ ಅದರಲ್ಲಿ ಅಡಗಿರುವ ಆಹಾರ ಸಂಗ್ರಹಣ ಯೋಜನೆಗಳ ಗೂಡಾರ್ಥ ಸ್ಪಷ್ಟವಾಗುತ್ತದೆ. ಅಂತೆಯೆ ವಿಕಾಸದ ಹಂತಗಳನ್ನು ದಾಟುವ ಸಂದರ್ಭಗಳಲ್ಲಿ ಹಿಂದಿನ ಆಚಾರ, ವಿಚಾರಗಳನ್ನು ಕಟ್ಟುಪಾಡುಗಳ ರೀತಿಯಲ್ಲಿ ಮುಂದುವರೆಸಿರುವ ಸಾಧ್ಯತೆಗಳು ಸಹ ಈ ಆಚರಣೆಗಳಲ್ಲಿ ಅಂತರ್ಗತವಾಗಿರಬಹುದು. ಈ ಆಟ, ಆಚರಣೆಗಳು ಕೆಲವೊಂದು ಕೆಲವು ಸಮುದಾಯಗಳಿಗೆ ಮಾತ್ರ ಸೀಮಿತವಾಗಿರುವುದರಿಂದ ಆ ವರ್ಗದ ಭಾಗವಹಿಸುವಿಕೆ ಆ ಸಮಾಜದ ನೆಲೆಗಟ್ಟನ್ನು ಸಂಕೇತಿಸುತ್ತದೆ. ಪ್ರಸ್ತುತ ಆಚರಣೆಗಳಲ್ಲಿ ಪಾಲ್ಗೊಳ್ಳುವ ಸಮುದಾಯಗಳಲ್ಲಿ ಬುಡಕಟ್ಟಿನ ಮೂಲಾಂಶಗಳಿರುವುದರಿಂದ ಸಮಾನ ಸಂಬಂಧಗಳನ್ನು ಹೊಂದಿಕೊಂಡ ಸಮಾಜಗಳ ವಾಸ್ತವ್ಯ ಈ ಪ್ರದೇಶಗಳಲ್ಲಿ ಆಗಿರುವ ಸಾಧ್ಯತೆಗಳಿವೆ. ಈ ಬುಡಕಟ್ಟುಗಳಲ್ಲಿ ಕೆಲವು ವರ್ಗಗಳು ವಸಾಹತುಪೂರ್ವ ಮತ್ತು ವಸಾಹತುಶಾಹಿಯ ಕಾಲದಲ್ಲೂ ಕೃಷಿ ಕಾರ್ಯಗಳ ಹೊಣೆಹೊತ್ತ ಸಮುದಾಯಗಳಾಗಿ ಇಲ್ಲವೇ ಮೂಲದಾಳುಗಳಾಗಿ ಸ್ಥಿತ್ಯಂತರಕ್ಕೆ ಒಳಪಟ್ಟವುಗಳು. ಕೊರಗ, ಮಾಯಿಲ, ಮುಗರರು, ಬಿಲ್ಲವರು, ಮುಂಡಾಲರು, ಮೋಗೆರರು ಈ ಪ್ರದೇಶದ ಮೂಲನಿವಾಸಿಗಳೆಂಬ ಗುರುರಾಜಭಟ್ಟರ ಸಮರ್ಥನೆಯನ್ನು ಅರ್ಥೈಸಿಕೊಳ್ಳಬಹುದು.

ಡಾ. ಗುರುರಾಜ ಭಟ್ಟರು ತುಳುನಾಡಿನ ಮೂಲನಿವಾಸಿಗಳ ಬಗ್ಗೆ ವಾದಗಳನ್ನು ಪ್ರಸ್ತಾಪಿಸಿದ್ದು, ಅವುಗಳ ಬಗ್ಯೆ ಅಧ್ಯಯನಿಸಿ ತನ್ನ ಸಮರ್ಥನೆಗಳನ್ನು ಪ್ರತಿಪಾದಿಸುತ್ತಾ ಈ ಪ್ರದೇಶವನ್ನು ಸಾಂಪ್ರದಾಯಿಕ ಚರಿತ್ರೆಗಳಲ್ಲಿ ಗೋಪರಾಷ್ಟ್ರ, ಗೋರಾಷ್ಟ್ರ ಎಂದು ಗುರುತಿಸಿವೆ ಎಂದು ಸ್ಪಷ್ಟಿಕರೀಸುತ್ತಾರೆ. ಚರಿತ್ರಕಾರರ ಪ್ರಕಾರ ತುಳು ಎಂಬುವುದು ದೇಶವಾಚಕವು ಅಲ್ಲ, ಭಾಷಾವಾಚಕವು ಅಲ್ಲ ಬದಲಾಗಿ ತುರು ಎಂಬುವುದರ ಪರ್ಯಾಯ ಪದ. ತುಳುವರೆಂದರೆ ತುರುಕಾರರು, [31] ಗೋಪರು ಎಂಬ ತೀರ್ಮಾನಕ್ಕೆ ಒಪ್ಪುತ್ತಾರೆ. ತುಳಾಪಿನಿ ಶಬ್ದಾರ್ಥ ದೋಣಿ ನಡೆಸುವವರು, ಮುದ್ಗರರು ಇಲ್ಲವೇ ಮೋಗವೀರರು ಎಂಬ ಸಮರ್ಥನೆ ಕರಾವಳಿಯಲ್ಲಿ ಅಂಬಿಗವೃತ್ತಿ ಹಾಗೂ ಮೀನುಗಾರಿಕೆ ಆಧಾರಿತ ಆರ್ಥಿಕತೆಗಳು ಇಲ್ಲವೇ ಸಮುದಾಯಗಳು ವಾಸ್ತವ್ಯ ಹೂಡಿತ್ತೆಂಬುವುದನ್ನು ಸಮರ್ಥಿಸುತ್ತದೆ.[32] ತಲವೇರ್ ಎಂಬುವುದು ನೀರು ನಿಂತ ಜಾಗದಲ್ಲಿ ಬೇಸಾಯ ಮಾಡುವುದು ಎಂಬರ್ಥದಲ್ಲಿರುವುದರಿಂದ ಈ ಆರ್ಥಿಕತೆಯ ಜನರೂ

ಇಲ್ಲವೇ ಸಮುದಾಯದವರು ವಾಸ ಮಾಡಿರುವ ಸಾಧ್ಯತೆಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇದಲ್ಲದೇ ತುಳು ಎಂಬ ಪದವು ಕೋಮಲ, ನಮ್ರ, ಮೃದು ಎಂಬ ಶಬ್ದಗಳನ್ನು ಪ್ರತಿನಿಧಿಸುವುದರಿಂದ ತುಳುವರು ಮೃದು ಸ್ವಭಾವದವರು ಎಂದು ಅರ್ಥೈಸಿಕೊಳ್ಳಬಹುದು. ಹೀಗೆ ಗುರುರಾಜ ಭಟ್ಟರು ತುಳುನಾಡಿನ ಜನರ ಬಾಳ್ವೆಯ ಪ್ರಗತಿಯ ಮೂರು ಹಂತಗಳನ್ನು ವಿವರಿಸಿದ್ದಾರೆ. ಅವೇ ಪಾಡು, ಕುಡು ಮತ್ತು ನಾಡು. ಪಾಡಿಯಿಂದ ಅಂತ್ಯವಾಗುವ ಎಲ್ಲಾ ಹೆಸರುಗಳು ಹಟ್ಟಿಕಾರರ ವಾಸ್ತವ್ಯದ ಎಡೆಗಳು ಅರ್ಥಾತ್ ಊರು-ಹಳ್ಳಿ ಎಂಬ ಸಾಮಾನ್ಯ ಅರ್ಥವನ್ನು ಕೊಡುತ್ತದೆ. ತುಳುನಾಡಿನ ಸ್ಥಳನಾಮಗಳನ್ನು ಅಭ್ಯಸಿಸಿದ್ದಲ್ಲಿ ತುಳುವರ ವಾಸ್ತವ್ಯದ ವಾರಸುದಾರಿಕೆಗೆ ಹೊಂದಿಕೊಂಡು ಹಲವಾರು ಆರ್ಥಿಕತೆಯ ಸಮಾಜ-ಸಂಸ್ಕೃತಿಗಳು ನೆಲೆ ನಿಂತಿರಬಹುದೆಂಬ ಆಶಯವನ್ನು ಕೂಡಾ ಚರ್ಚಿಸಿದ್ದಾರೆ. ಉದಾಹರಣೆಗೆ ಕೋಲಲರು, ಮುಂಡರು, ಬಿಲ್ಲರೂ, ಕಣ್ಣರು, ಫಣಿಗಳು, ಶಂಖಕುಲದ ನಾಗರು, ತುರುಕಾರರು.[33] ಈ ಎಲ್ಲಾ ವಿಚಾರಧಾರೆಗಳು ತುಳುನಾಡಿನ ವಾಸ್ತವ್ಯದ ಬಗ್ಗೆ ಮಾಹಿತಿಯನ್ನು ನೀಡಿದರೂ ಮಾರ್ಗಪರಂಪರೆಗಳು ತುಳುನಾಡಿನ ವಾಸ್ತ್ಯವದ ಬಗ್ಗೆ ಬೇರೆಯೇ ವಿಚಾರಗಳನ್ನು ಪ್ರಸ್ತುತಪಡಿಸಿದೆ. ಪರಶುರಾಮನಿಂದ ಈ ನಾಡನ್ನು ರಾಮಭೋಜನೆಂಬ ಅರಸನು ಪಡೆದು ದೇಶವಿದೇಶಗಳಿಂದ ಬಂದ ಬ್ರಾಹ್ಮಣರಿಗೆಲ್ಲ ತುಲಾಪುರುಷಧಾನ-ತುಲಾದಾನಗಳನ್ನು ತೂಗಿಸಿದ. ಅವರು ಅವನ ಕೀರ್ತಿಯನ್ನು ಎಲ್ಲಾ ಕಡೆ ಹೆಚ್ಚಿಸಿ ತುಲಾಭಾರ ಮಾಡಿಸಿದ ರಾಜನನ್ನು ತುಲಾರಾಜ, ತುಲಾದೇಶಾಧಿಪತಿ ಎಂದು ಕರೆದರು. ಆ ಮೂಲಕ ಈ ನಾಡಿಗೆ ತುಲಾದೇಶ ಅಥವಾ ತುಳುವ ಎಂಬ ಹೆಸರು ಬಂತು.[34] ಇದನ್ನು ಸಮರ್ಥಿಸುವ ಸಾಂಪ್ರದಾಯಿಕ ಚರಿತ್ರೆಗಳು ತುಲಾಪುರುಷ ರಾಜನ ಸಮ್ಮತಿಯಿಂದ ವಾಸ್ತವ್ಯ ಹೂಡಿದ ಬ್ರಾಹ್ಮಣರನ್ನು ಈ ಪ್ರದೇಶದ ಮೂಲ ಪುರುಷರು ಎಂದಿದೆ.[35]

ತುಳುನಾಡಿನ ಸಾಂಪ್ರದಾಯಿಕ ಚರಿತ್ರೆಯ ಜಾಡಿನಲ್ಲಿ ಸಾಗಿದ ವಸಾಹತುಶಾಹಿ ಸರ್ವೇಕ್ಷಣಕಾರ ಫ್ರಾನ್ಸಿಸ್ ಬುಖಾನನು ಕೂಡಾ ಬ್ರಾಹ್ಮಣರನ್ನು ಈ ಪ್ರದೇಶದಲ್ಲಿ ವಾಸ್ತವ್ಯ ಹೂಡಿದ ಸಮುದಾಯ ಮಾತ್ರವಲ್ಲ ಭೂಮಿಯ ಒಡೆತನ ಹೊಂದಿದ್ದವರು ಎಂದಿದ್ದಾನೆ.[36] ವಸಾಹತುಶಾಹಿಯ ಆಡಳಿತಕ್ಕೆ ಸಹಯೋಗದ ಅಗತ್ಯತೆಯನ್ನು ಮನಗಂಡ ಸ್ಟರಕ್ ತನ್ನ ಮ್ಯಾನುವೆಲ್‌ನಲ್ಲಿ ಸಾಂಪ್ರದಾಯಿಕ ಚರಿತ್ರೆಯ ಆಧಾರ ಮುಂದಿಟ್ಟುಕೊಂಡು ಬ್ರಾಹ್ಮಣರೇ ತುಳುನಾಡಿನ ಮೂಲಿಗರಿರಬಹುದೆಂದು ಅಭಿಪ್ರಾಯಿಸಿದ್ದಾನೆ. ಮಾತ್ರವಲ್ಲ ವಾಸ್ತವ್ಯದ ವಾರಸುದಾರಿಕೆಯನ್ನು ಅಧ್ಯಯನಿಸಿದಾಗ ಸಾಂಪ್ರದಾಯಿಕ ಚರಿತ್ರೆಗಳು ಬ್ರಾಹ್ಮಣರಿಗೆ ಮಹತ್ವ ನೀಡಿದೆ. ಹೀಗೆ ತುಳುನಾಡಿನ ವಾಸ್ತವ್ಯದ ಪರಿಕಲ್ಪನೆಯಲ್ಲಿ ಮೂಲ ಜನಸಮುದಾಯದ ಬಗ್ಗೆ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾಗಿದೆ. ಒಟ್ಟಾರೆ ತುಳುನಾಡಿನ ವಾಸ್ತವ್ಯದ ವಾರಸುದಾರಿಕೆ

ಕೊರಗ, ಮಾಯಿಲ, ಮುಗರ, ಮೊಗೆರ, ಬಾಕುಡ, ಮಲೆಕುಡಿಯ, ಬಿಲ್ಲವ, ಒಕ್ಕಲ್ಮ, ನಾಡವ ಇತ್ಯಾದಿ ಸಮುದಾಯಗಳಿಂದ ಆರಂಭಗೊಂಡು ವಲಸಿಗ ಸ್ಥಾನಿಕ, ಬ್ರಾಹ್ಮಣ, ಸಾರಸ್ವತ ಬ್ರಾಹ್ಮಣ, ಮಾಪಿಳ್ಳೆ, ಕೊಂಕಣಿ, ಕ್ರೈಸ್ತ ಇತ್ಯಾದಿ ಸಮುದಾಯದ ವರೆಗೂ ವಿಸ್ತರಣೆಗೊಂಡಿದೆ. ಜೊತೆಗೆ ತುಳುನಾಡಿನ ಮೂಲನಿವಾಸಿಗಳ ವಾಸ್ತವ್ಯ ಅವಲಂಬನೆಯ ಹಂತದಿಂದ ವಲಸಿತ ಸಮುದಾಯಗಳೊಂದಿಗಿನ ಜತೆಗೂಡಿ ಅಧಿಕಾರ ರೂಪುಗೊಳ್ಳುವಲ್ಲಿನ ಹಂತದ ವರೆಗಿನ ಕಾರ್ಯಯೋಜನೆಗಳನ್ನು ಅವಲೋಕಿಸಿದಾಗ ವಾಸ್ತವ್ಯದ ವಾರಸುದಾರಿಕೆ ಸಂಕೀರ್ಣ ಸ್ವರೂಪವನ್ನು ಪಡೆದುಕೊಂಡಿತ್ತೆಂಬುವುದು ಸ್ಪಷ್ಟ.

ಒಟ್ಟಾರೆಯಾಗಿ ತುಳುನಾಡಿನ ವಾಸ್ತವ್ಯದ ಆರಂಭಿಕ ಚರಿತ್ರೆ ಅರೆಅಲೆಮಾರಿ, ದನಗಾಹಿ, ಮುಂದುವರೆದು ಉತ್ಪಾದನ ದೃಷ್ಟಿಯಿಂದ ಒದ್ದೆಮಣ್ಣಿನ ಬೇಸಾಯಗಾರರ ವಾಸ್ತವ್ಯ[37] ಅವರ ಕೃಷಿ ಚಟುವಟಿಕೆಗಳು ಉತ್ಪಾದನೆಗೆ ಚಾಲನೆ ನೀಡಿ ಆಹಾರ ಪಡೆಯುವ ಹಾಗೂ ಸಂಗ್ರಹಿಸುವ ಪ್ರಕ್ರಿಯೆಗಳಿಗೆ ನಾಂದಿಯಾಯಿತು. ಕೃಷಿ ಅವಲಂಬಿತ ಗುಂಪುಗಳು ಉಳುಮೆಯನ್ನು ಕಂಡುಹಿಡಿದುದರ ಫಲವಾಗಿ ಕಾಡಿನಲ್ಲಿನ ಅಲೆಮಾರಿ ಜೀವನ ಅಂತ್ಯಗೊಳಿಸಿ, ಒಂದೆಡೆ ಶಾಶ್ವತವಾಗಿ ನೆಲೆನಿಂತಿರಬಹುದು. ಮುಂದುವರೆದು ವಲಸೆ ಮತ್ತು ವೃದ್ಧಿಗೊಳ್ಳುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರ ಉತ್ಪಾದನೆಗೆ ಪೂರಕವಾಗಿರುವ ಆರ್ಥಿಕತೆಗಳು ವಿಸ್ತಾರಗೊಂಡವು. ಉತ್ಪಾದನೆ ಹೆಚ್ಚು ಮಹತ್ವವನ್ನು ಪಡೆಯುವುದರೊಂದಿಗೆ ಬೇರೆ ಬೇರೆ ಆರ್ಥಿಕತೆಗಳು ಸಾಮುದಾಯಿಕ ಗುಂಪುಗಳಾಗಿ ಒಂದು ಪ್ರದೇಶದಲ್ಲಿ ವಾಸ್ತವ್ಯ ಹೂಡಿ ಕೇರಿ, ಊರು, ಗ್ರಾಮಗಳ ರಚನೆಯಲ್ಲಿ ಪರ್ಯಾಪ್ತಗೊಂಡಿತು.

## ಬುಡಕಟ್ಟು ವಾರಸುದಾರಿಕೆಯ ಪರಿಕಲ್ಪನೆ

ಮಾನವ ಸಾಮುದಾಯಿಕವಾಗಿ ನೆಲೆನಿಲ್ಲುವ ಪೂರ್ವದಲ್ಲಿ ಅಲೆಮಾರಿ, ಅರೆಅಲೆಮಾರಿ, ಪಶುಸಂಗೋಪನೆ ಇತ್ಯಾದಿ ಘಟ್ಟಗಳನ್ನು ಹಾದುಕೊಂಡು ಬಂದನು. ಅಲೆಮಾರಿ ಘಟ್ಟದ ವಿಕಾಸ ಒಂದೆಡೆ ನೆಲೆನಿಂತು ಆಹಾರ ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳುವ ಬುಡಕಟ್ಟು ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿದೆ.[38] 'ಬುಡಕಟ್ಟು ವ್ಯವಸ್ಥೆಯ ಆರಂಭದಲ್ಲಿ ಉತ್ಪಾದನ ವಿಧಾನ ಮತ್ತು ಮಾತೃಪ್ರಧಾನ ಬಂಧುತ್ವದ ಸಂಬಂಧಗಳೊಂದಿಗೆ ಪರಸ್ಪರ ಅವಲಂಬನೆ ಇರಲಿಲ್ಲ. ಜನರ ಗುಂಪು ಆಹಾರ ಹುಡುಕುವ ಹಾಗೂ ಸಂಗ್ರಹಿಸುವ ವ್ಯವಸ್ಥೆಯಲ್ಲಿದ್ದಾಗ ಮಾತೃಪ್ರಧಾನತೆ ಬಂಧುತ್ವದ ಕಲ್ಪನೆಯಿಲ್ಲದೇ ಅಸಂಘಟಿತವಾಗಿ ಆಹಾರ ಹುಡುಕುವ ಹಾಗೂ ಸಂಗ್ರಹಿಸುವ ಆರ್ಥಿಕತೆಗೆ ಸೀಮಿತವಾಗಿತ್ತು. ಮಾತೃಪ್ರಧಾನತೆಯ ಬಂಧುತ್ವ ಎಂಬ ಮೂಲವಸ್ತು ಇದ್ದರೂ ಪ್ರಾಮುಖ್ಯತೆಯನ್ನು ಪಡೆದಿರಲಿಲ್ಲವಾದರೂ ಬಂಧುತ್ವ ಬುಡಕಟ್ಟು ಸಮುದಾಯವನ್ನು ನಿಯಂತ್ರಣ ಮಾಡುವಲ್ಲಿ ನಿರ್ಧಾರಾತ್ಮಕವಾಗಿತ್ತು.'[39] ಆಹಾರ ಪಡೆಯಲು

ಬೇಟೆಗಾರಿಕೆಯಿಂದ ಕೃಷಿಯತ್ತ ಕ್ರಮಿಸಿದಾಗ ಮಹಿಳೆಯ ಸ್ಥಾನಮಾನದಲ್ಲಿ ಏರಿಕೆಯುಂಟಾದವು. ಸರ್ವೆಸಾಮಾನ್ಯವಾಗಿ ಗಂಡು-ಹೆಣ್ಣುಗಳ ಸಾಮಾಜಿಕ ಪ್ರಾಮುಖ್ಯತೆಯು ಆರ್ಥಿಕ ಜೀವನದ ಬೆಳವಣಿಗೆಗೆ ಸಂಬಂಧಿಸಿದೆ. ಬೇಟೆಗಾರಿಕೆಗೆ ಮುನ್ನ ತಾಯಿಹಕ್ಕು ಪದ್ಧತಿ, ಬೇಟೆಗಾರಿಕೆ ಆರಂಭಗೊಂಡಾಗ ತಂದೆಹಕ್ಕು ಪದ್ಧತಿ ರೂಢಿಯಲ್ಲಿರುವುದನ್ನು ಪರಿಶೀಲಿಸಬೇಕಾಗುತ್ತದೆ.[40] ಕೃಷಿ ಸಮೃದ್ಧಿಯ ಸಂಕೇತವಾಗಿರುವುದರಿಂದ ಅದರಲ್ಲಿ ಪ್ರಧಾನವಾಗಿ ತೊಡಗಿಸಿಕೊಂಡ ಮಹಿಳೆಗೆ ಪ್ರಾಧಾನ್ಯತೆ ಸಿಕ್ಕಿ ಕೃಷಿಕ ಗುಂಪುಗಳು ಮಾತೃಪ್ರಧಾನ ಸಂಸ್ಕೃತಿಯಾಗಿ ರೂಪುಗೊಂಡಿತು. ಜೊತೆಗೆ ಮಾತೃಪ್ರಧಾನತೆಯ ಬಂಧುತ್ವದ ಪ್ರಧಾನ ಲಕ್ಷಣವಾದ 'ಬಳಿ' (ತುಳುವಿನಲ್ಲಿ ಬರಿ, ಕನ್ನಡದಲ್ಲಿ ಬಳಿ, ಗೋತ್ರ) ಹೊಂದಿದ ಗುಂಪುಗಳು ವ್ಯವಸ್ಥಿತವಾದ ನೆಲೆಗಳನ್ನು ರೂಪಿಸಿ ಊರುಗಳ ನಿರ್ಮಾಣಗೊಳಿಸಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಹೀಗೆ ಕೃಷಿಯನ್ನು ಅವಲಂಬಿಸಿದ ಸಮಾಜದಲ್ಲಿ ಮಾತೃಪ್ರಧಾನತೆಯ ಬಂಧುತ್ವ ರಾಜಕೀಯ ಮಾನದಂಡವಾಗಿ ನಿರ್ಣಾಯಕವಾಗಿತ್ತು.[41] ತುಳುನಾಡಿನಲ್ಲಿ ಹೆಣ್ಣು ಮತ್ತು ಕೃಷಿಗೆ ನೀಡಿದ ಪ್ರಾಧಾನ್ಯತೆಯ ಜೊತೆಗೆ ರೂಢಿ-ಸಂಪ್ರದಾಯಗಳ ಪ್ರಭಾವ, ಸಾಮಾಜಿಕ ರಚನೆಯ ವಾಸ್ತವ ವಿಚಾರಗಳಲ್ಲಿ ಮಾತೃಸಂತಾನತೆಯನ್ನು ಪ್ರಧಾನವಾಗಿಟ್ಟುಕೊಂಡ ಪುರುಷಕೇಂದ್ರಿತ ವ್ಯವಸ್ಥೆ, ಮಾತೃಸಂತಾನದ ರೂಢಿ-ಸಂಪ್ರದಾಯ ಮುಂತಾದವುಗಳು ವಾರಸುದಾರಿಕೆಯ ಚಿಂತನೆಗಳನ್ನು ರೂಪಾಂತರಗೊಳಿಸುವಲ್ಲಿ ಬಹುಮುಖ್ಯವಾದುದು.

ಕೃಷಿ ವಿಸ್ತಾರಗೊಂಡ ಮೇಲೆ ಮಾತೃಪ್ರಧಾನ ಕುಟುಂಬಗಳು ಈ ಆರ್ಥಿಕತೆಯ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಂಡರೂ ಅಧಿಕಾರ ಪರಿಕಲ್ಪನೆಯಲ್ಲಿ ಮಾನವ-ಭೂಮಿ ಸಂಬಂಧಗಳು ಪ್ರಧಾನವಾಯಿತೇ ಹೊರತು ಮಾತೃಸಂಸ್ಕೃತಿಯ ರೂಢಿಗಳಲ್ಲ. ಅದಾಗ್ಯೂ ಭೂಮಿಯನ್ನು ಮಾತೃ ಸಮಾನವೆಂದು ಪರಿಗಣಿಸಲ್ಪಟ್ಟ ಕಾರಣ, ಅದು ಫಲವತ್ತತೆಯ ಸಂಕೇತವಾಗಿರುವುದರಿಂದ ಸ್ತ್ರೀಯರಿಗೆ ನಿರ್ದಿಷ್ಟ ಪ್ರಾಮುಖ್ಯತೆ ದೊರಕಿತು. ಅಂತೆಯೇ ಸಾಮಾಜಿಕ ವ್ಯವಸ್ಥೆಯಲ್ಲಿ ರೂಪುಗೊಂಡ ಸಣ್ಣ ಮತ್ತು ಸ್ವಾವಲಂಬಿತ ಗ್ರಾಮ ಸಮುದಾಯಗಳ ಆಹಾರದ ಉತ್ಪಾದನಾ ಕ್ರಮ, ಆಹಾರದ ಮಿಗತೆ ಹಾಗೂ ಇದಕ್ಕೆ ಪೂರಕವಾಗಿದ್ದ ಇತರ ಚಟುವಟಿಕೆಗಳು ಸಹ ಅಧಿಕಾರ ಅಥವಾ ವಾರಸುದಾರಿಕೆ ರೂಪುಗೊಳ್ಳುವಿಕೆಯ ಆರಂಭಿಕ ಹಂತದಲ್ಲಿ ಪ್ರಭಾವ ಬೀರಿದವು.[42] ಉಳುಮೆಯ ಕೃಷಿಯಲ್ಲಿ ಮಾತೃಪ್ರಧಾನ ಬಂಧುತ್ವದ ಶ್ರಮ ಅಸಂಗತಗೊಂಡು ಸಾಮಾಜಿಕ ರಚನೆಗಳಲ್ಲಿ ಬದಲಾವಣೆಗಳಾದವು.[43] ಬಂಧುತ್ವ ಆಧಾರದಲ್ಲಿ ರೂಪಿತಗೊಂಡಿದ್ದ ಬುಡಕಟ್ಟು ಪ್ರಬಲ ಆರ್ಥಿಕತೆಯ ಪ್ರಭಾವಕ್ಕೊಳಗಾದಾಗ ಭೂಮಿಯ ಪುನರ್‌ಹಂಚಿಕೆಯನ್ನು ಸಾಂಸ್ಥೀಕರಣಗೊಳಿಸಿದವು. ಸಾಂಸ್ಥೀಕರಣಗೊಂಡ ಭೂಮಿಯ ಅವಲಂಬನೆ ತ್ರಿಸ್ತರದ ಶ್ರೇಣಿಕರಣವಾಗಿ ರೂಪಿಸಲ್ಪಟ್ಟಿತ್ತು ಉದಾಹರಣೆಗೆ ಭೂಮಿಯ ಒಡೆತನವನ್ನು ಪಡೆದ

ಸಾಮುದಾಯಿಕ ಗುಂಪುಗಳು, ಗೇಣಿಗೆ ಪಡಕೊಂಡವರು ಮತ್ತು ಭೂಮಿಯ ಉಳುಮೆಗಾರರು.[44] ಈ ಅರ್ಥ ವ್ಯವಸ್ಥೆ ಬುಡಕಟ್ಟು ಕೃಷಿ ವ್ಯವಸ್ಥೆಯಲ್ಲಿ ಒಳನುಸುಳುವ ಮೂಲಕ ಸಾಮಾಜಿಕ ಪರಿವರ್ತನೆಗೆ ನಾಂದಿ ಎಂಬುವುದು ಇತಿಹಾಸ ದಾಖಲೆಗಳ ಅಭಿಪ್ರಾಯ.[45] ತ್ರಿಸ್ತರದ ಭೂಮಿ ಹಂಚಿಕೆಯ ವ್ಯವಸ್ಥೆಯಲ್ಲಿ ಭೂಮಿಯ ಒಡೆತನದ ಹಕ್ಕನ್ನು ಕಾಯ್ದಿರಿಸಿಕೊಂಡ ಸಮುದಾಯಗಳು ಭೂಮಿಯನ್ನು ಅಧೀನ ಆರ್ಥಿಕ ಸಮುದಾಯಗಳಿಗೆ ಒಕ್ಕಲು ನೀಡಿರುವ ವ್ಯವಸ್ಥೆ ಶಾಸನಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿತಗೊಂಡಿವೆ.[46] ಆದುದರಿಂದ ಈ ಅವಧಿಯನ್ನು ಕೃಷಿ ಆರ್ಥಿಕತೆಯ ಮಹತ್ವದ ಕಾಲಘಟ್ಟವೆಂದು ಪರಿಗಣಿಸಬಹುದು. ಹೀಗೆ ಕಾಡು–ನಾಡು ಸಂಸ್ಕೃತಿಯ ಸಂಘರ್ಷಗಳಲ್ಲಿ ನಾಡಿನ ಮಾತೃಸಂಸ್ಕೃತಿಯ ಮೂಲಬೇರುಗಳಲ್ಲಿ ಬದಲಾವಣೆಯಾಗದಿದ್ದರೂ, ಕಾಲಾನುಕ್ರಮದಲ್ಲಿ ಇದು ಆರ್ಥಿಕ ರಚನೆಯ ಪುನರ್‌ವ್ಯಾಖ್ಯಾನಕ್ಕೆ ಅವಕಾಶ ನೀಡಿತು.

ಮಾನವಶಾಸ್ತ್ರಜ್ಞರು ಮಾನವನ ಬದಲಾವಣೆಯ ಹಂತವನ್ನು ಎರಡು ರೀತಿಯಲ್ಲಿ ವಿಂಗಡಿಸುತ್ತಾರೆ. ಕಬ್ಬಿಣ ಪೂರ್ವಯುಗ ಹಾಗೂ ಕಬ್ಬಿಣ ನಂತರದ ಕಾಲಘಟ್ಟ. ತುಳುನಾಡು ಕಬ್ಬಿಣಪೂರ್ವ ಕಾಲಘಟ್ಟದಲ್ಲಿ ಕಾಡುಗಳಿಂದ ಆವೃತ್ತವಾಗಿದ್ದು ಕೃಷಿಯೋಗ್ಯ ಭೂಮಿಯಾಗಿರಲಿಲ್ಲ ಎಂಬ ವಾದಕ್ಕೆ ಬಹಳಷ್ಟು ಸಮರ್ಥನೆಗಳನ್ನು ಪೂರ್ವೇತಿಹಾಸದ ಅಧ್ಯಯನಗಳಲ್ಲಿ ಕಂಡುಕೊಳ್ಳಲಾಗಿದೆ.[47] ಅಲೆಮಾರಿತನ, ಪಶುಸಂಗೋಪನೆ, ಮತ್ತು ಒದ್ದೆಮಣ್ಣಿನ ಬೇಸಾಯಕ್ಕೆ ಸೀಮಿತವಾಗಿದ್ದುಕೊಂಡು ಚಟುವಟಿಕೆಗಳನ್ನು ಮಾಡಲ್ಪಟ್ಟರೂ, ಅವುಗಳು ವಿಭಿನ್ನ ಆರ್ಥಿಕ ಬೆಳವಣಿಗೆಗೆ ಅವಕಾಶ ನೀಡಿರಲಿಲ್ಲ. ಚರಿತ್ರೆಯ ಪ್ರಾರಂಭದ ಹಂತಗಳನ್ನು ಅವಲೋಕಿಸಿದಾಗ ತುಳುನಾಡು ಸಮೃದ್ಧ ಕೃಷಿಗೆ ಯೋಗ್ಯ ಭೂಮಿಯಾಗಿರದ ಕಾರಣ ಅರೆಅಲೆಮಾರಿತನ, ಪಶುಸಂಗೋಪನೆ ಮತ್ತು ಒದ್ದೆಮಣ್ಣಿನ ಬೇಸಾಯಕ್ಕೆ ಸೀಮಿತವಾಗಿತ್ತು. ಆದುದರಿಂದ ವಿಭಿನ್ನ ಅರ್ಥಿಕ ಬೆಳವಣಿಗೆಗೆ ಅವಕಾಶವಿದ್ದಂತೆ ತೋರುವುದಿಲ್ಲ. ಹೀಗೆ ಆಹಾರ ಧಾನ್ಯಗಳನ್ನು ಹೆಚ್ಚಾಗಿ ಉತ್ಪಾದಿಸುವಂತಹ ಬೇಸಾಯ ಕ್ರಮವನ್ನು ಕೈಗೊಂಡಿರದ ಕಾರಣ ಮಿಗತೆಗೆ ಅವಕಾಶ ಇರಲಿಲ್ಲ. ಅದೊಂದು ವರ್ಗಪೂರ್ವ ಸಮಾಜವಾಗಿ ಉತ್ಪಾದನೆಗಳನ್ನು ವಶಪಡಿಸಿಕೊಳ್ಳುವುದರ ಮೂಲಕ ಸಾಮಾಜಿಕ ವರ್ಗಗಳನ್ನು ಕಟ್ಟುವ ಸಾಧ್ಯತೆಗೆ ಪೂರಕವಾಗಿರಲಿಲ್ಲ.[48] ಬುಡಕಟ್ಟುಗಳ ಸೀಮಿತ ಬೇಸಾಯ ಕ್ರಮ ಬಾಲ್ಯವಸ್ಥೆಯಲ್ಲಿರುವ ಕಾರಣ ಕಬ್ಬಿಣದ ಬಳಕೆ ತಿಳಿದಿತ್ತಾದರೂ, ಕೊಡಲಿಗಳು ಬೇಟೆ ಇಲ್ಲವೇ ಸ್ವರಕ್ಷಣೆಗೆ ಸೀಮಿತವಾಗಿತ್ತು. ಕಾಡನ್ನು ಕಡಿದು ಬಯಲು ಜಮೀನುಗಳನ್ನು ಕೃಷಿ ಆರಂಭಕ್ಕಾಗಿ ಸಿದ್ದಪಡಿಸುವ ಕೆಲಸ ಬಹಳ ಸಂಕೀರ್ಣವಾಗಿರುವುದರಿಂದ, ಕೃಷಿ ಬೆಳವಣಿಗೆ ಕುಂಠಿತಗೊಂಡು ಮಿಗತೆ ಉತ್ಪಾದನೆಗೆ ಅವಕಾಶ ನೀಡಲಿಲ್ಲ ಹಾಗೂ ತಮ್ಮ ದೈನಂದಿನ ಉಳಿವಿಗೆ

ಅಗತ್ಯವಾದುದಕ್ಕಿಂತ ಹೆಚ್ಚಿನದನ್ನು ಉತ್ಪಾದಿಸಲು ಸಾಧ್ಯವಾಗಿಲ್ಲ.[49] ಬೇಟೆ, ಆಹಾರಸಂಗ್ರಹಣೆ, ಮೀನುಗಾರಿಕೆ, ಕೃಷಿಗೋಮಾಳಗಾರಿಕೆ, ಒದ್ದೆಮಣ್ಣಿನ ಕೃಷಿಗಾರಿಕೆ ಅಧೀನ ಆರ್ಥಿಕತೆಗಳಾಗಿರುವುದರಿಂದ ಭೂಮಿಯ ಮೇಲಿನ ಒಡೆತನದ ಕಲ್ಪನೆಯನ್ನು ಹೊಂದಿರಲಿಲ್ಲ. ಪಶುಸಂಗೋಪನೆ, ಸ್ಥಳಾಂತರ ಬೇಸಾಯದಿಂದ ಕೃಷಿಯಲ್ಲಿ ವ್ಯವಸ್ಥಿತ ಕಬ್ಬಿಣದ ಉಪಯೊಗ ಪ್ರಾರಂಭವಾಗಿ ಭತ್ತದ ಬೇಸಾಯ ಮಿಗತೆಗೆ ಅವಕಾಶಮಾಡಿಕೊಟ್ಟದೆ. ಆದುದರಿಂದ ವಿಭಿನ್ನ ಆರ್ಥಿಕ ಬೆಳವಣಿಗೆಗೆ ಅವಕಾಶ, ಒಡೆತನದ ಪರಿಕಲ್ಪನೆ ಕಾಣಿಸಿಕೊಂಡರೇ ಮೇಲಿನ ವಿವರಣೆಯಿಂದ ವೇದ್ಯವಾಗುವುದೇನೆಂದರೆ ಚರಿತ್ರೆಯ ಪ್ರಾರಂಭಿಕ ಹಂತಗಳಲ್ಲಿ ವಾರಸುದಾರಿಕೆಯ ಪರಿಕಲ್ಪನೆಯ ವಿಕಾಸಕ್ಕೆ ಮೂಲವಾಗಿರುವ ಬಂಧುತ್ವ ಕೊಂಡಿಗಳು ಕೃಷಿಯನ್ನು ಜೀವನಾಧಾರವನ್ನಾಗಿಸಿದ ಬುಡಕಟ್ಟುಗಳಲ್ಲಿ ಸರ್ವೇಸಾಮಾನ್ಯವಾಗಿ ಇತ್ತು. ಮುಂದೆ ಬುಡಕಟ್ಟುಗಳ ನೆಲೆ ವಿಸ್ತಾರಗೊಂಡಾಗ ಸರಿಸಮಾನವಾಗಿ, ಕೃಷಿಯೂ ವಿಸ್ತರಣೆಗೊಂಡಾಗ ಉತ್ಪನ್ನಗಳಲ್ಲಿ ಪಾಲು ಪಡೆಯುವ ಮತ್ತು ಅದರ ಮೇಲೆ ಒಡೆತನ ಸಾಧಿಸುವ ಪರಿಕಲ್ಪನೆಯೊಂದು ಕಾಣಿಸಿಕೊಂಡಿತು. ಇದು ಬಣ ಕಾರ್ಮಿಕ ವ್ಯವಸ್ಥೆಯಲ್ಲಿ ಪರಿಕ್ರಮಣಗೊಂಡಿತು ಎಂಬುವುದು ಚರಿತ್ರಕಾರರ ಅಭಿಮತವಾಗಿರುವುದರಿಂದ ಮಿಗತೆ ಉತ್ಪಾದನೆಗೆ ಅವಕಾಶ ಮಾಡಿಕೊಟ್ಟು ಉತ್ಪಾದನೆ ಮತ್ತು ಮರುವಿತರಣೆ ಮಾಡುವಲ್ಲಿನ ಜವಬ್ದಾರಿಗಳನ್ನು ವಿಸ್ತರಿಸಿದವು.[50]

ಬುಡಕಟ್ಟು ಸಮುದಾಯದ ಬಗ್ಗೆ ಭಾರತದಲ್ಲಿ ಪ್ರಥಮ ಬಾರಿಗೆ ಅಧ್ಯಯನ ಮಾಡಿದ ಅಬ್ಬೆಡೂಭಾಯಿಸರು ಬುಡಕಟ್ಟು ವ್ಯವಸ್ಥೆಯನ್ನು ಒಂದು ಸಂಘಟಿತ ವ್ಯವಸ್ಥೆ ಎಂದು ಅಭಿಪ್ರಾಯಪಡುತ್ತಾರೆ.[51] ಬುಡಕಟ್ಟು ವ್ಯವಸ್ಥೆ ನೆಲೆನಿಂತು ಆಹಾರ ಸಂಗ್ರಹಿಸುವ ಪ್ರಕ್ರಿಯೆಯಲ್ಲಿ ಉತ್ಪಾದನೆಯಲ್ಲಿ ಪಾಲ್ಗೊಂಡು ಉತ್ಪಾದನೆ ಆರಂಭಿಸಿದಾಗ ಉತ್ಪಾದನೆ ಕೃಷಿ ವ್ಯವಸ್ಥೆಯಾಗಿ ಪರಿವರ್ತನೆಗೊಳ್ಳುವುದು ಚರಿತ್ರೆಯ ಪ್ರಾರಂಭಿಕ ಹಂತವಾಗಿರುತ್ತದೆ. ಮೋಹನಕೃಷ್ಣ ರೈಯವರ ಅಧ್ಯಯನದ ಪ್ರಕಾರ ಉತ್ಪಾದನೆ ಮಾನವ ಬದುಕಿನ ತಳಹದಿ ಮಾತ್ರವಲ್ಲ ಸಂಬಂಧ ನಿರ್ಣಯಿಸುವ ಅಂಶಗಳು ಆಗಿವೆ.[52] ಬುಡಕಟ್ಟಿಗೆ ನಾಯಕತ್ವದ ಕಲ್ಪನೆಗಳು ಅಮರಿಕೊಂಡಾಗ ಮಾತೃಪ್ರಧಾನತೆಯ ಬಂಧುತ್ವ ನಿಧಾನವಾಗಿ ಪ್ರಾಮುಖ್ಯತೆಯನ್ನು ಕಳೆದುಕೊಂಡಿರಬಹುದೆಂಬ ವಾದವನ್ನು ಇತಿಹಾಸಕಾರರು ಒಪ್ಪಿಕೊಂಡಿದ್ದಾರೆ. ಆದುದರಿಂದ ಕೃಷಿ ಕಾರ್ಯಚಟುವಟಿಕೆಗಳ ವಿಸ್ತರಣೆ, ಹೆಣ್ಣಿನ ಶ್ರಮ ಸಮಾಜ ಬದಲಾವಣೆಗೆ ಒಳಪಡುವುದನ್ನು ಸಮರ್ಥಿಸಿದೆ. ತುಳುನಾಡಿನಲ್ಲಿ ವಾಸ್ತವ್ಯ ಹೂಡಿದ ಸಾಮುದಾಯಿಕ ಸಾಮಾಜಿಕ ರಚನೆಗಳನ್ನು ವಿಮರ್ಶಿಸಿದಾಗ ಎರಡು ಅಥವಾ ಹೆಚ್ಚಿನ ಆರ್ಥಿಕತೆಗಳು ಸಂವಹನಗೊಂಡಿರುವುದನ್ನು ಕಾಣುತ್ತೇವೆ. ಸಾಮುದಾಯಿಕವಾಗಿ ಸಂವಹನಗೊಂಡ ಆರ್ಥಿಕತೆಗಳು ಪರಸ್ಪರ ಸಹಜೀವನ ನಡೆಸಿ ವಿಶಿಷ್ಟ

ಸಮಾಜ ಹಾಗೂ ಸಂಸ್ಕೃತಿಗಳಾಗಿ ರಚನೆಗೊಂಡಿದೆ.[53] ಇತಿಹಾಸದ ಪುಟಗಳಲ್ಲಿ ದಾಖಲಾಗಿರುವಂತೆ ಬುಡಕಟ್ಟುಗಳು ಸಾಮಾಜಿಕ ರಚನೆಯ ನೆಲೆಗಟ್ಟಿಗೆ ನಿಶ್ಚಿತ ರೂಪ ಕೊಡುವಲ್ಲಿ ನಿರ್ಣಾಯಕ ಪಾತ್ರವಹಿಸಿದೆ. ಇವುಗಳು ವಿವಿಧ ಆರ್ಥಿಕ ಗುಂಪುಗಳೊಂದಿಗೆ ನಿಶ್ಚಿತ ಪ್ರದೇಶದಲ್ಲಿ ನೆಲೆಗೊಂಡು ಉತ್ತಮ ಸಂವಹನ ಬೆಳೆಸಿರುವ ದಾಖಲೆಗಳಿವೆ. ಆರ್ಥಿಕ ಸಂವಹನ, ವಸ್ತುಗಳ ವಿನಿಮಯ ವ್ಯವಸ್ಥೆಯೊಂದನ್ನು ರೂಪಿಸಿ ಸಂಬಂಧ ಬೆಳೆಸಲು ಅವಕಾಶ ಮಾಡಿಕೊಟ್ಟಿತು. ಅಂತೆಯೆ ಕೃಷಿ ವಿಸ್ತರಣೆಯಿಂದ ಉತ್ಪಾದನೆ ಮಿಗತೆಗೊಂಡು ವ್ಯಾಪಾರಿ ಕೇಂದ್ರಗಳು ಸ್ಥಾಪನೆಯಾದವು. ಈ ಕೇಂದ್ರಗಳು ತಮ್ಮ ವ್ಯವಹಾರದಲ್ಲಿ ಕೃಷಿ ಪೂರಕವಾಗಿರುವ ಕಚ್ಚಾ ವಸ್ತುಗಳನ್ನು ಸಹ ಅವಲಂಬಿಸಿಕೊಂಡಿರುವುದು ಅಥವಾ ಸೇರಿಸಿಕೊಂಡಿರುವುದು ಪರಸ್ಪರ ಅನ್ಯೋನ್ಯ ಸಂಬಂಧ ಬೆಳೆಸಲು ಸಹಕರಿಸಿತು.[54] ಉದಾಹರಣೆಗೆ ತುಳುನಾಡಿನಲ್ಲಿ ಕೃಷಿವಲಯ ಮತ್ತು ಅವುಗಳೊಂದಿಗಿನ ಸಂಬಂಧ ಹೊಂದಿರುವ ಜನಸಮುದಾಯಗಳೊಂದಿಗೆ ಬಾಂಧವ್ಯ ಸಾಧಿಸಿ ಆರ್ಥಿಕತೆಯ ಮೇಲೆ ಪ್ರಭಾವ ಬೀರಿದಾಗ ಕೊಳ್ಳೆ ಹೊಡೆಯುವಿಕೆ ಕೊನೆಗೊಂಡಿರಬಹುದು. ಇದಲ್ಲದೇ ಬುಡಕಟ್ಟುಗಳು ವಿವಿಧ ಆರ್ಥಿಕತೆಯ ಗುಂಪುಗಳೊಂದಿಗೆ ನಿಶ್ಚಿತ ಪ್ರದೇಶದಲ್ಲಿ ನೆಲೆಗೊಂಡು ಉತ್ತಮ ಸಂವಹನ ಬೆಳೆಸಿರುವ ಸಾಧ್ಯತೆಗಳಿವೆ. ಆರ್ಥಿಕತೆಗಳ ಸಂವಹನ ವಸ್ತುಗಳ ವಿನಿಮಯಕ್ಕೆ ವ್ಯವಸ್ಥೆಯನ್ನಾಗಿ ರೂಪಿಸಿರುವುದರಿಂದ ಸಂಬಂಧ ಬೆಳೆಸಲು ಅವಕಾಶ ಮಾಡಿಕೊಟ್ಟಿರಬಹುದು.[55] ಆದರೆ ಈ ಬಗೆಯ ಆರ್ಥಿಕತೆಯು ಬುಡಕಟ್ಟುಗಳಿಗೆ ಸಂಪೂರ್ಣವಾಗಿ ಅಪರಿಚಿತವೇನಲ್ಲ ಎಂದು ಪೀಟರ್. ಜೆ. ಕ್ಲಾಸ್ ಅವರು ಅಭಿಪ್ರಾಯಪಡುತ್ತಾರೆ. ಅವರ ಮಾತಿನಲ್ಲಿಯೇ ಹೇಳುವುದಾದರೆ 'ತುಳುನಾಡಿನ ವಸಾಹತುಪೂರ್ವದ ಚರಿತ್ರೆಯ ಹಂತಗಳಲ್ಲಿ ಬುಡಕಟ್ಟು ಆರ್ಥಿಕತೆಗೆ ಸಂಬಂಧಿಸಿದಂತೆ ತುಳುಪಾಡ್ದನ ಹಾಗೂ ಶಾಸನಗಳಲ್ಲಿ ಉಕ್ತವಾಗಿರುವ ನೆಲೆಗಳ ವಿನ್ಯಾಸ ಕಾಡುಗಳಿಗೆ ಅಂತರ್ಗತವಾಗಿತ್ತು'.[56]

## ಶ್ರಮ ವಾರಸುದಾರಿಕೆ, ಕೃಷಿ, ಆಚರಣೆಗಳು

ಭೂಮಿ ವ್ಯವಸ್ಥಿತವಾಗಿ ಸಾಂಸ್ಥಿಕರಣಕ್ಕೆ ಒಳಪಟ್ಟಾಗ ಒಕ್ಕಲು ಪಡೆಯುವಲ್ಲಿನ ಮಾತೃಪ್ರಧಾನ ಬಂಧುತ್ವ ವ್ಯವಸ್ಥೆಯ ಜನಗಳು ಭೂಮಿಯ ಮೇಲಿನ ಅಧಿಕಾರ ಮಾತ್ರ ಪಡೆದುಕೊಂಡು ಮಾಲಕತ್ವವನ್ನು ಪಡೆಯಲು ವಿಫಲಗೊಂಡವು. ಇದು ಒಕ್ಕಲು, ಕಿಳೊಕ್ಕಲು, ಮೂಲದಾಳು, ಹೊಲೆಯಾಳು, ಹೆಣ್ಣಾಳು ಎಂಬ ರೈತಾಪಿ ಇಲ್ಲವೇ ಶ್ರಮ-ಆಧಾರಿತ ವರ್ಗದ ಉಲ್ಲೇಖಗಳಿಗೆ ಅವಕಾಶ ನೀಡಿತೆಂಬುವುದು ಚರಿತ್ರಕಾರರ ಅಭಿಮತವಾಗಿದೆ.[57] ಭೂಮಿಯನ್ನು ಸಾಂಸ್ಥಿಕರಣಗೊಳಿಸಿದ ಪರಿಣಾಮವಾಗಿ ಪ್ರಬಲ ಆರ್ಥಿಕತೆಯ ಜನರು ಉಳುಮೆ ಮಾಡಲು ಬೇಕಾದಂತಹ ಶ್ರಮಗಾರರೊಂದಿಗೆ ಆಳುವ ವರ್ಗದವರಿಂದ ಭೂಮಿಯನ್ನು ದಾನವಾಗಿ

ಪಡೆದರು.[58] ಇದರಿಂದಾಗಿ ಕೃಷಿಕಾರ್ಯದಲ್ಲಿ ತೊಡಗಿಸಿಕೊಳ್ಳುವ ಜನರ ಸಂಖ್ಯೆಯಲ್ಲಿ ಹೆಚ್ಚಳವಾಯಿತ್ತಲ್ಲದೇ ಕೃಷಿ ಭೂಮಿಗಳು ವಿಸ್ತಾರಗೊಂಡವು. ವಿಸ್ತಾರಗೊಂಡತೆಲ್ಲ ಕಾಡುಪ್ರದೇಶಗಳು ನಾಡಾಗಿ ಪರಿವರ್ತನೆಗೆ ಒಳಗಾದವು. ಈ ರೀತಿಯ ಬೆಳವಣಿಗೆಯನ್ನು ಅಳೂಪರಿಂದ ವಿಜಯನಗರ ಕಾಲದ ವರೆಗಿನ ತುಳುನಾಡಿನಲ್ಲಿ ದೊರೆತ ಶಾಸನಗಳು ಸಮರ್ಥಿಸುತ್ತದೆ. ಶಾಸನಗಳಲ್ಲಿ ಉಕ್ತವಾದಂತೆ ಕಾಡುಗಳನ್ನು ಸವರಿ ಕೃಷಿ ಭೂಮಿಯನ್ನಾಗಿ ಮಾರ್ಪಡಿಸಿದ ನಿದರ್ಶನ, ಬೆಟ್ಟಗುಡ್ಡಗಳನ್ನು ಸವರಿ ಆ ಭೂಮಿಯ ಮೇಲೆ ಸಾಮುದಾಯಿಕ ಅಧಿಕಾರ ಖಾತ್ರಿಪಡಿಸಿದ ಉಲ್ಲೇಖ ಶ್ರಮದ ವಾರಸುದಾರಿಕೆಯನ್ನು ಬಿಂಬಿಸಿವೆ.[59]

ಸಾಮಾಜಿಕ ವ್ಯವಸ್ಥೆಯಲ್ಲಾದ ಮಹತ್ತರ ಬದಲಾವಣೆ, ಬ್ರಾಹ್ಮಣರು ಸಾಮುದಾಯಿಕ ಇಲ್ಲವೇ ಬುಡಕಟ್ಟು ವ್ಯವಸ್ಥೆಗಳ ಮೇಲೆ ಸ್ಥಳೀಯವಾಗಿ ಹತೋಟಿಯನ್ನಿಡುವ ಅವಕಾಶ ಮುಂತಾದವುಗಳು ಬ್ರಹ್ಮದೇಯ ಭೂಮಿಗಳ ಸಂಖ್ಯೆಯ ಹೆಚ್ಚಳಕ್ಕೆ ಕಾರಣವಾಗಿ ಕೃಷಿ ವಿಸ್ತರಣೆಗೊಂಡಿತು. ಧಾರ್ಮಿಕ ಅಥವಾ ಸಾಮಾಜಿಕ ಸೇವೆಗೆಂದು ದಾನರೂಪದಲ್ಲಿ ಪಡೆದಿದ್ದ ಬ್ರಹ್ಮದೇಯ ಭೂಮಿಯ ಮಾಲಕತ್ವವನ್ನು ಬ್ರಾಹ್ಮಣರು ಪಡೆದುಕೊಳ್ಳಲು ಕಾರಣವಾಗಿ, ಕೃಷಿ ಭೂಮಿಗಳು ಮೂಲವರ್ಗದ ಭೂಮಿಗಳಾಗಿ ರೂಪುಗೊಂಡು ಸಾಂಸ್ಥೀಕರಣಗೊಂಡವು.[60] ಕೃಷಿ ವ್ಯವಸ್ಥೆಯಲ್ಲಿ ಮುಕ್ತಕೃಷಿ (ಭೂಮಿಯ ಒಡೆತನ) ಮತ್ತು ಸೇವಾಧಾರಿತ ಕೃಷಿ (ಉಳುಮೆಗಾರ) ಎಂಬ ಎರಡು ಗುಂಪುಗಳಾಗಿ ವಿಭಜನೆಗೊಂಡವು. ಮುಕ್ತಕೃಷಿಕ ವರ್ಗ ವಸಾಹತುಶಾಹಿ ಬಂಡವಾಳಪೂರ್ವ ಸಮಾಜದಲ್ಲಿ ಮಾರುಕಟ್ಟೆ ಕಾನೂನುಗಳ ನಿಯಂತ್ರಕ ವರ್ಗಗಳಾಗಿ, ಸೇವಾ ಆಧಾರಿತ ಕೃಷಿಕ ವರ್ಗ ಆಧೀನ ವ್ಯವಸ್ಥೆಯಾಗಿ ಊಳಿಗಮಾನ್ಯ ವ್ಯವಸ್ಥೆ ಸ್ಥಾಪನೆಯ ಕೊಂಡಿಯಾಯಿತೆಂದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಉದಾಹರಣೆಗೆ ತುಳುನಾಡಿನಲ್ಲಿ ಸೇವಾಧಾರಿತ ಕೃಷಿಕ ವರ್ಗ ಬಹುಸಂಖ್ಯಾತರಾಗಿದ್ದರೂ, ಆಡಳಿತ ವರ್ಗವಾಗದೇ ಸೇವೆ ಮತ್ತು ತೆರಿಗೆ ನೀಡುವುದು ಜೊತೆಗೆ ತಾನು ಉತ್ಪಾದಿಸಿದ ಉತ್ಪಾದನೆಗಳಲ್ಲಿ ಪ್ರಬಲ ಆರ್ಥಿಕತೆಯ ಬೇಡಿಕೆಗಳನ್ನು ಪೂರೈಸುವ ಶ್ರಮದ ವ್ಯವಸ್ಥೆಯಾಗಿ ರೂಪಿತಗೊಂಡಿತು. ಹೀಗೆ ಭೂಮಿಯ ಮೇಲಿನ ಒಡೆತನವನ್ನು ಮುಂದಿಟ್ಟುಕೊಂಡು ವಾರಸುದಾರಿಕೆಯ ಚಿಂತನೆಗಳು ಭಿನ್ನವಾಗಿ ಚಿಗುರೊಡೆದವು. ಭತ್ತ ಮತ್ತು ಅದರ ಇತರ ಪೂರಕ ಕೃಷಿ ಚಟುವಟಿಕೆಗಳಿಂದಾಗಿ ಸಮಾಜ ಶ್ರೇಣೀಕರಣಗೊಂಡು ಕಾರ್ಮಿಕ ತಜ್ಞತೆಯ ಆಧಾರದ ಮೇಲೆ ಶ್ರಮಗಳು ವಿಭಜನೆಗೊಂಡು ಶ್ರಮ ವಾರಸುದಾರಿಕೆಯನ್ನು ಹುಟ್ಟಿಹಾಕಿದವು. ಉದಾಹರಣೆಗೆ ನೇಗಿಲನ್ನು ಮಾಡುವ ಮರದ ಕೆಲಸಗಾರರು, ಕಬ್ಬಿಣದ ಮೊನೆ, ಕತ್ತಿ, ಕೊಡಲಿ ಮಾಡುವ ಲೋಹದ ಕೆಲಸಗಾರರು, ಗಾಣಿಗರು, ಶ್ರಮದ ಕೆಲಸಗಾರರು ಇತ್ಯಾದಿಗಳು. ಮುಂದೆ ಈ ಶ್ರಮವ್ಯವಸ್ಥೆಗಳು ವಂಶ-ಪಾರಂಪರ್ಯ ವ್ಯವಸ್ಥೆಗಳಾಗಿ ಮಾರ್ಪಾಡುಗೊಂಡವು. ಈ ವರ್ಗಗಳು ಭೂಮಿಯನ್ನು

ಕೃಷಿಕಾರ್ಯಕ್ಕೆ ಕೊಂಡುಕೊಳ್ಳಬಹುದಾಗಿದ್ದರೂ (ಗೇಣಿಗೆ ಇಲ್ಲವೇ ಉಳುಮೆಗೆ) ಖಾಸಗಿ ಮತ್ತು ವೈಯುಕ್ತಿಕ ಒಡೆತನಕ್ಕೆ ಅವಕಾಶವಿರಲಿಲ್ಲ.[61]

ಡಾ. ಆರ್. ಎಸ್ ಶರ್ಮರ ಮಾತಿನಲ್ಲಿ ಹೇಳುವುದಾದರೆ 'ಭತ್ತದ ಬೇಸಾಯ, ಮಿಗತೆ ಉತ್ಪನ್ನ' ಭೂಮಿಯ ಮೇಲಿನ ವಾರಸುದಾರಿಕೆ ಅಥವಾ ಒಡೆತನಗಳ ಕಲ್ಪನೆ ಸಾಮಾಜಿಕ ಸ್ಥಿತ್ಯಂತರಗಳಿಗೆ ಅವಕಾಶಮಾಡಿತು. ಈ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಅಧೀನ ಆರ್ಥಿಕ ವರ್ಗ ಭೂಮಿಯನ್ನು ಉಳುಮೆಗಾಗಿ ಪಡೆದುಕೊಂಡಿತ್ತಾದರೂ ಭೂಮಿಯ ಮೇಲೆ ಒಡೆತನವನ್ನು ಪಡೆಯಲು ಸಾಧ್ಯವಾಗಲಿಲ್ಲ.[62] ಕೂಲಿಕಾರರ ಕೊರತೆಯಿಂದಾಗಿ ಜಮೀನುಗಳಲ್ಲಿ ಬಿತ್ತನೆ ಮಾಡಲು ಸಾಧ್ಯವಾಗದೇ ಹೋದಲ್ಲಿ ಅಂಥ ಜಮೀನನ್ನು ಗೇಣಿಗೆ ಕೊಡಬಹುದು. ಈ ಬಗೆಯಲ್ಲಿ ಗೇಣಿ ವ್ಯವಸ್ಥೆ ರೂಪುಗೊಂಡಿತು. ಗೇಣಿದಾರರಲ್ಲಿ ಎರಡು ಬಗೆಯವರಿದ್ದರು. ಸ್ವಂತ ಬಿತ್ತನೆ ಬೀಜ ಹಾಗೂ ಎತ್ತುಗಳನ್ನು ಹೂಡಿದವರು ಫಸಲಿನ ಅರ್ಧ ಭಾಗವನ್ನು ತಾವೇ ಇಟ್ಟುಕೊಳ್ಳಬಹುದಿತ್ತು. ಇದ್ಯಾವುದೂ ಇಲ್ಲದೇ ಕೇವಲ ದೈಹಿಕ ಶ್ರಮವನ್ನು ತೊಡಗಿಸುತ್ತಿದ್ದ ಕರ್ಮಕಾರರು ಫಸಲಿನ ಕಾಲುಭಾಗ ಉಳಿಸಿಕೊಳ್ಳಬಹುದಾಗಿತ್ತು. ಇದೇ ತೆರನಾಗಿ ತುಳುನಾಡಿನ ಗೇಣಿದಾರರು ಭೂಮಿಯಲ್ಲಿ ಕೃಷಿ ಮಾಡಿಕೊಳ್ಳಲು ಅವಕಾಶ ಪಡೆದಿರಬಹುದು ಮಾತ್ರವಲ್ಲ ದೈಹಿಕ ಶ್ರಮದಲ್ಲಿ ತೊಡಗುವವರಿಗೆ ಉತ್ಪಾದನೆಯಲ್ಲಿ ಅವರಿಗೆ ಸಂದಾಯವಾಗುವ ಭಾಗವನ್ನು ಮೀಸಲಿಡಲಾಗುತ್ತಿತ್ತು. ಈ ರೀತಿ ಪಾಲು ಪಡೆಯುವವರನ್ನು ಕೃಷಿ ಕಾರ್ಮಿಕರು ಎಂಬರ್ಥದಲ್ಲಿ ಪರಿಗಣಿಸಲಾಗುತ್ತಿತ್ತು.

ಜಮೀನನ್ನು ಗೇಣಿಗೆ ಕೊಡುವ ಬಗ್ಗೆ ಕೌಟಿಲ್ಯನ ಅಭಿಪ್ರಾಯ. ಎರಡು ಬಗೆಯ ಗೇಣಿದಾರರ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಸ್ವಂತ ಬೀಜ ಮತ್ತು ಎತ್ತುಗಳನ್ನು ಹೂಡಿದವರು ಫಸಲಿನಲ್ಲಿ ಪಾಲು ಪಡೆಯುವ ಅಧಿಕಾರವನ್ನು ಪಡೆದುಕೊಂಡಿದ್ದರು. ಭತ್ತದ ಕೃಷಿ ವಿಸ್ತರಣೆಗೊಂಡತೆಲ್ಲ ವೃತ್ತಿ ಪರಿಣತಿ ಇಲ್ಲಿ ಶ್ರಮ ಆಧಾರಿತವಾಗಿ ಸಮುದಾಯಗಳು ಜಾತಿ ನೆಲೆಯಲ್ಲಿ ಸ್ಥಿತ್ಯಂತರಗೊಂಡು ಸಮಾಜ ಶ್ರೇಣೀಕರಣಕ್ಕೆ ಒಳಗಾಯಿತು. ಈ ವಿಶೇಷ ಪರಿಣತಿಯ ವರ್ಗದ ರೂಪಿಸುವಿಕೆಯಿಂದ ಸಮುದಾಯದ ಅನನ್ಯತೆ ಕೊನೆಗೊಂಡು ಜಾತಿ ಆಧಾರಿತ ವಾರಸುದಾರಿಕೆಯು ವೃತ್ತಿ ಆಧಾರಿತವಾಗಿಯೂ ಬಲಗೊಂಡಿತು. ಹೀಗೆ ಬುಡಕಟ್ಟು ಸಮುದಾಯದ ಅನನ್ಯತೆ ಕ್ಷೀಣಿಸಿ ಸಮುದಾಯಗಳು ವೃತ್ತಿಆಧಾರಿತ ಜಾತಿಗಳಾಗಿ ಪರಿವರ್ತನೆಗೊಂಡವು.[63] ಜಾತಿ ಆಧಾರಿತ ಸಾಮಾಜಿಕ ಶ್ರೇಣೀಕರಣದ ಕಂದರಗಳು ಭೂಮಿಯ ಒಡೆತನದ ಪರಿಕಲ್ಪನೆಯಲ್ಲಿ ಬದಲಾವಣೆಯನ್ನು ತಂದಿತು.

ತುಳುನಾಡಿನಲ್ಲಿ ಕೃಷಿಭೂಮಿಯನ್ನು ಬಾಳು (ಪಾಲು) ಎಂದು ಕರೆಯಲಾಗುತ್ತದೆ.[64] ಕನ್ನಡದ ಬಾಳು ತುಳುವಿನಲ್ಲಿ ಪಾಲು ಎಂಬ ಶಬ್ದಾರ್ಥವಾಗಿದೆ. ಇದು ಬೇರೆ ಬೇರೆ ವ್ಯಕ್ತಿಗಳು

ಭೂಮಿಯನ್ನು ಹೊಂದಿದ್ದ ಬಗ್ಗೆ ಮಾಹಿತಿ ಕೊಡುತ್ತದೆ. "ಬಾಳು" ಶಬ್ದ ಶಾಸನಗಳಲ್ಲಿ ವಿಪುಲವಾಗಿ ಉಲ್ಲೇಖಿತವಾಗಿರುವುದರಿಂದ ಕುಟುಂಬಗಳ ಅಥವಾ ವ್ಯಕ್ತಿಗಳ ಭೂಸ್ವತ್ತನ್ನು ಸೂಚಿಸುತ್ತದೆ.[೮] ಬಾಳು, ಬಾಳಿಕೆ ಎಂಬ ಬೇರೆ ಬೇರೆ ಶಬ್ದಗಳು ಬಳಕೆಯಲ್ಲಿದ್ದು ಕೃಷಿ ಭೂಮಿಯ ವಿಸ್ತಾರಕ್ಕೆ ಸಂಬಂಧಿಸಿದುದಾಗಿದೆ. ಕೃಷಿ ಭೂಮಿಯಲ್ಲಿ ಮೂರು ವಿಧ. ಬಯಲು, ಮಜಲು, ಬೆಟ್ಟು. ಪೂರ್ವಜರಿಂದ ಬಂದ ಭೂಮಿಯನ್ನು ಮೂಲದ ಬಾಳು ಎಂದು ಕರೆಯುತ್ತಾರೆ. ಹೀಗಾಗಿ ತುಳುನಾಡಿನ ಜನರ ಜೀವನವು ಕೃಷಿಯನ್ನೆ ಅವಲಂಬಿಸಿದೆ ಮಾತ್ರವಲ್ಲ ಇಲ್ಲಿನ ಚರಿತ್ರೆ ವಿಕಾಸಗೊಳ್ಳುವಲ್ಲಿ ಕೃಷಿ ಬಹಳ ಪ್ರಾಮುಖ್ಯತೆಯನ್ನು ಪಡೆದಿತ್ತು. ತುಳುನಾಡಿನಲ್ಲಿ ಕೃಷಿಯನ್ನು ಜೀವನೋಪಾಯಕ್ಕಾಗಿ ಒಪ್ಪಿಕೊಂಡ ಸಮುದಾಯಗಳು ಕೃಷಿಯನ್ನು ಅಧಿಕಾರದ ಸಾಧನವನ್ನಾಗಿ ವಿನ್ಯಾಸಗೊಳಿಸಿದ್ದರಿಂದ ಇಲ್ಲಿನ ವಾರಸುದಾರಿಕೆಯ ಅನನ್ಯತೆಗಳು ಕೃಷಿ ಉತ್ಪದನಾ ವಿಧಾನಗಳ ಜೊತೆ ನೇರ ಸಂಬಂಧವನ್ನು ಹೊಂದಿದೆ. ಜೊತೆಗೆ ಕೃಷಿ ಅವಲಂಬಿತ ಉತ್ಪಾದನ ವಿಧಾನಗಳು ಜನಸಮುದಾಯಗಳ ಸಂಬಂಧದ ಸ್ವರೂಪ ನಿರ್ಧರಿಸಿರುವುದನ್ನು ಕಾಣಬಹುದು. ತುಳುನಾಡಿನ ಕೃಷಿ ಉತ್ಪಾದನೆಯ ಸುತ್ತಮುತ್ತ ಇರುವ ಆಚರಣೆಗಳು, ಆಚರಣೆಗಳಲ್ಲಿ ಒಳಗೊಳ್ಳುವ ಸಮುದಾಯಗಳು, ಕಾಲಘಟ್ಟದಲ್ಲಿ ವಲಸೆ ಪ್ರಕ್ರಿಯೆಗಳಿಂದಾದ ಸಂಪರ್ಕ–ಸ್ಥಿತ್ಯಂತರಗಳು, ಊಳಿಗಮಾನ್ಯ ವ್ಯವಸ್ಥೆಯ ನಿರ್ಮಾಣ ಇತ್ಯಾದಿಗಳು ವಾರಸಾ ಅಧಿಕಾರದಲ್ಲಿ ಪ್ರಧಾನ ಭೂಮಿಕೆಯನ್ನು ನಿರ್ವಹಿಸಿದೆ. ಮಾತ್ರವಲ್ಲ ಕೃಷಿಯ ಉತ್ಪಾದನೆಗೆ ಅನುಗುಣವಾಗಿ ವಾರಸುದಾರಿಕೆ ಅನೂಚಾನವಾಗಿ ಮುಂದುವರೆದು ವಸಾಹತುಪೂರ್ವದವರೆಗೆ ಯಥಾಸ್ಥಿತಿಯನ್ನು ಕಾಯ್ದುಕೊಂಡಿತ್ತು.

ತುಳುನಾಡಿನ ವಾರಸುದಾರಿಕೆಯ ಕಲ್ಪನೆಯಲ್ಲಿ ಕೃಷಿ, ನಿರ್ದಿಷ್ಟ ಭೌಗೋಳಿಕ ವ್ಯವಸ್ಥೆ, ಕೃಷಿ ಉತ್ಪಾದನೆಯ ಅವಲಂಬನೆಯ ಅನಿವಾರ್ಯತೆ, ಸಮಾಜದಲ್ಲಿನ ಅಧಿಕಾರ ರಚನೆ, ಸಾಮಾಜಿಕ, ಧಾರ್ಮಿಕ, ರಾಜಕೀಯ ವ್ಯವಸ್ಥೆಗಳು ಸಹ ವಾರಸುದಾರಿಕೆಯ ಚಿಂತನೆಗಳು ರೂಪುಗೊಳ್ಳುವಲ್ಲಿ ಮಹತ್ವದ ಕೊಡುಗೆಯನ್ನು ನೀಡಿವೆ. ಆದುದರಿಂದ ತುಳುನಾಡಿನ ಕೃಷಿ ಅಧಿಕಾರದ ರಚನೆಯಲ್ಲಿ ಸಾಮಂತರು ಅಥವಾ ಶ್ರೀಮಂತ ವರ್ಗ ರಾಜಕೀಯ ಅಧಿಕಾರಗಳನ್ನು ಹೊಂದಿದ್ದರೆ, ಬ್ರಾಹ್ಮಣರು ಧಾರ್ಮಿಕ ಅಧಿಕಾರಗಳನ್ನು ಹೊಂದಿದ್ದು ಜಾತ್ಯಾತೀತ ಸಮಾಜದ ಮೇಲ್ಪುದಿಯಲ್ಲಿ ನಿಲ್ಲುತ್ತಾರೆ. ಉಳಿದ ಸಮುದಾಯಗಳು ಭಾವನಾತ್ಮಕ ಅಧಿಕಾರೀ ಸಂಬಂಧಗಳನ್ನು ಹೊಂದಿದ್ದು, ಸುಖೀ ರಾಜ್ಯದ ಕಲ್ಪನೆಯನ್ನು ಹೊಂದಿತ್ತು ಎಂಬ ಅಭಿಪ್ರಾಯವಿದೆ. ಉದಾಹರಣೆಗೆ ತುಳುನಾಡಿನ ಸೀಮೆ, ಮಾಗಣೆ, ಗ್ರಾಮ, ಗುತ್ತು ಮುಂತಾದ ಆಡಳಿತ ಘಟಕಗಳು ವಸಾಹತು ಆಡಳಿತ ಪ್ರವೇಶ ಪಡೆಯುವಲ್ಲಿಯ ವರೆಗೆ ಹೆಚ್ಚಿನ ಅಧಿಕಾರ ಹೊಂದಿದ್ದವು ಮಾತ್ರವಲ್ಲ ಒಂದು ರೀತಿಯ ಸ್ವಾಯತ್ತ ಆಡಳಿತ ಘಟಕಗಳಾಗಿ

ಕಾರ್ಯನಿರ್ವಹಿಸುತ್ತಿದ್ದವು.[66] ದುಡಿಯುವ ವರ್ಗ ಇತರರಿಗಾಗಿ ದುಡಿಯುತ್ತಲೇ ಇರಬೇಕೆನ್ನುವ ತೀರ್ಮಾನವನ್ನು ಅಧಿಕಾರ ಸಂಬಂಧಗೊಳಿಸಿರುವುದು, ವೃತ್ತಿ ಆಧಾರದಲ್ಲಿ ರೂಪುಗೊಂಡಿದ್ದ ಸಮಾಜ ಕ್ರಮೇಣ ವರ್ಣ ವ್ಯವಸ್ಥೆಗೆ ಪರಿವರ್ತನೆಗೊಂಡು ನಂತರ ಜಾತಿ ವ್ಯವಸ್ಥೆಗೆ ಪರಿವರ್ತನೆಗೊಂಡಿರುವುದು. ಈ ಮೂರು ವ್ಯವಸ್ಥೆಯಲ್ಲೂ ಮೇಲ್ವರ್ಗ ಮೇಲ್ವರ್ಗವಾಗಿ, ಕೆಳವರ್ಗ ಕೆಳವರ್ಗವಾಗಿ ಇದ್ದು ವಸಾಹತುಪೂರ್ವ, ವಸಾಹತು ಕಾಲದಲ್ಲೂ ಈ ಪರಿಸ್ಥಿತಿ ಮುಂದುವರೆದವು. ಮೇಲ್ವರ್ಗಗಳು ಸಾಮಾಜಿಕ ಪರಿವರ್ತನೆಗೆ ಒಳಗಾಗದಿರುವ ಮೂಲಕಾರಣವೆಂದರೆ ಬ್ರಾಹ್ಮಣ, ಕ್ಷತ್ರಿಯರು ಅಲ್ಪಸಂಖ್ಯಾಕರಾಗಿ ವೈಶ್ಯ, ಶೂದ್ರರನ್ನು ಹತೋಟಿಯಲ್ಲಿಡುವ ಚೌಕಟ್ಟು ಅನಿವಾರ್ಯವಾಗಿಸಿದ್ದು ಸ್ಪಷ್ಟ, ಆದರೆ ವಸಾಹತೋತ್ತರ ಅದರಲ್ಲೂ ತುಳುನಾಡಿನಲ್ಲಿ ಭೂಸುಧಾರಣೆ ಜಾರಿಗೆ ಬರುವ ವರೆಗೂ ಈ ರೀತಿಯ ವಿಲೇಜ್ ರಿಪಬ್ಲಿಕ್ ಯಥಾಸ್ಥಿಯನ್ನು ಕಾಯ್ದುಕೊಂಡಿತ್ತು.

ಪ್ರಸ್ತುತ ಬದಲಾದ ಪರಿಸ್ಥಿಯಲ್ಲೂ ಮೇಲ್ವರ್ಗಗಳು ತಾವು ಗಳಿಸಿದ ಬಂಡವಾಳವನ್ನು ವಿನಿಯೋಗಿಸುವುದರ ಮೂಲಕ ಹಳೆಯ ವಾರಸ ಅಧಿಕಾರಗಳನ್ನು ಪಡೆಯುವ ಪೈಪೋಟಿ ನಡೆಸುತ್ತಿವೆ. ಗುತ್ತು, ಗರಡಿ, ದೈವಸ್ಥಾನ, ದೇವಸ್ಥಾನ, ತರವಾಡು, ಮೂಲಮನೆಗಳ ಜೀರ್ಣೋದ್ಧಾರ, ಧರ್ಮನೇಮ, ಆಯನಗಳ ಅಚರಣೆಗಳಿಗೆ ಹೂಡಿಕೆ ಮಾಡಿ, ತಾವು ಕಳೆದುಕೊಂಡಿದ್ದ ಅಧಿಕಾರವನ್ನು ಮತ್ತು ಸಾಂಸ್ಕೃತಿಕ ಅಧಿಕಾರವನ್ನು ಮರಳಿ ಗಳಿಸುವ ಪ್ರಯತ್ನಗಳನ್ನು ಮಾಡುತ್ತಿವೆ. ಕಾರಣ ವಸಾಹತುಪೂರ್ವದ ಈ ವ್ಯವಸ್ಥೆಯಲ್ಲಿ ಆಧಿಕಾರ ಪ್ರಾಪ್ತವಾಗುವುದು ಸಾಮುದಾಯಿಕ ಭೂಮಿಯ ಒಡೆತನ ಇದ್ದಾಗ ಮಾತ್ರ. ಸಮುದಾಯದ ಕೆಳಸ್ತರದಲ್ಲಿ ಯಾರೂ ಭೂಮಿಯನ್ನು ಹಾಗೂ ಉತ್ಪಾದನ ಸಾಧನಗಳನ್ನು ಹೊಂದುವಂತಿರಲಿಲ್ಲ.[67] ಆದುದರಿಂದ ಅಧಿಕಾರ ವಂಚಿತ ಸಮಾಜದ ಕೆಳವರ್ಗದ ಜನರು ಸಮಾಜದ ನಿರ್ಲಕ್ಷ್ಯಕ್ಕೆ ಒಳಪಟ್ಟು ಮೇಲ್ವರ್ಗದ ಆಶೋತ್ತರಗಳನ್ನು ಈಡೇರಿಸುವ ಸಾಧನಗಳಾಗಿ ತಮ್ಮ ಇರುವಿಕೆಯನ್ನು ಗುರುತಿಸಿಕೊಳ್ಳಬೇಕಾಯಿತು. ತುಳುನಾಡಿನಲ್ಲಿ ಈ ರೀತಿಯ ಬೆಳವಣಿಗೆಯನ್ನು ಗ್ರಾಮ ಸಾಮರಸ್ಯವೆಂದು ಕಂಡುಕೊಳ್ಳಲಾಗಿದೆ.[68]

ತುಳುನಾಡಿನ ಸಮಾಜ ರಚನೆಯ ಆಯಾಮಗಳನ್ನು ಪರಿಶೀಲಿಸಿದಾಗ ಅಧೀನ ಆರ್ಥಿಕತೆಗಳು ಪ್ರಬಲ ಆರ್ಥಿಕತೆಗಳೊಂದಿಗೆ ಪರಸ್ಪರ ಸಂವಹನಗೊಂಡರೂ ಏಕರೂಪಿಯಾದ ಸಮಾಜ ಹಾಗೂ ಸಂಸ್ಕೃತಿ ರೂಪುಗೊಳ್ಳಲು ಅವಕಾಶವಿರಲಿಲ್ಲ.[69] ಸಂಕ್ಷಿಪ್ತವಾಗಿ ಹೇಳುವುದಾದರೆ ವಾರಸುದಾರಿಕೆಯ ಕಲ್ಪನೆಗಳು ಇವುಗಳ ಸುತ್ತ ಹೆಣೆಯಲ್ಪಟ್ಟವೆ.[70] ತುಳುನಾಡಿನ ಸಾಮಾನ್ಯಶಕೆ ಏಳರಿಂದ ಒಂಬತ್ತನೆಯ ಶತಮಾನದ ಶಾಸನಗಳನ್ನು ಪರಿಶೀಲಿಸಿದಾಗ ಕೃಷಿ ನೆಲೆಗಳು ಹೆಚ್ಚಾಗಿ ಭೂಮಿಯ ಮೇಲಿನ ಅವಲಂಬನೆ

ವೃದ್ಧಿಯಾಗಿರುವುದು ಖಾತ್ರಿಯಾಗುತ್ತದೆ.[71] ಕೃಷಿಭೂಮಿ ವಿಸ್ತರಣೆಗೊಂಡಂತೆಲ್ಲ ಕಾಡುಸಮಾಜದ ರಚನೆಯು ಶಿಥಿಲಗೊಂಡು ಅಳಿವಿನ ಅಂಚಿಗೆ ಅಥವಾ ಅವಸಾನದತ್ತ ಮುಖಮಾಡಿತು. ಇದಕ್ಕೆ ಅನುಗುಣವಾಗಿ ಕಾಡುಸಮಾಜ ರಚನೆಯ ವ್ಯವಸ್ಥೆಗಳು ರಚನಾತ್ಮಕ ಮತ್ತು ಸಾಂಸ್ಥಿಕ ಬದಲಾವಣೆಗೊಳಪಟ್ಟವು.[72] ಜೊತೆಗೆ ಕೃಷಿಭೂಮಿ ವಿಸ್ತರಣೆಯ ಸಾಮಾಜಿಕ ರಚನೆಯ ಸ್ವರೂಪದಲ್ಲಿ ಮೂಲಭೂತ ಬದಲಾವಣೆ ತರುವುದರೊಂದಿಗೆ ನೂತನ ಅರ್ಥವ್ಯವಸ್ಥೆಯೊಂದರ ವಿಕಾಸಕ್ಕೆ ಕಾರಣವಾಯಿತು. ಈ ನೂತನ ಅರ್ಥವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳು ತಮ್ಮ ಮೂಲ ಚಟುವಟಿಕೆಗಳನ್ನು ಉಳಿಸಿಕೊಳ್ಳುವ ಅಥವಾ ನೂತನ ವ್ಯವಸ್ಥೆಗೆ ಹೊಂದಿಕೊಳ್ಳುವ ಪ್ರಯತ್ನಗಳನ್ನು ಮಾಡಬೇಕಾಯಿತು. ಈ ಪ್ರಯತ್ನದಲ್ಲಿ ಕೆಲವು ಸಮುದಾಯಗಳು ಮೂಲ ಆಸ್ತಿತ್ವವನ್ನು ಕಳೆದುಕೊಂಡರೆ ಇನ್ನು ಕೆಲವು ಸಮುದಾಯಗಳು ಆಸ್ತಿತ್ವಕ್ಕಾಗಿ ತಾವು ಅವಲಂಬಿಸಿಕೊಂಡಿದ್ದ ಪರಂಪರಾಗತ ಕಲೆಯನ್ನು ಮುಂದುವರೆಸಿಕೊಂಡು ಸಧ್ಯಂತರಗೊಂಡವು.[73]

ತುಳು ಪ್ರಾದೇಶಿಕತೆಯನ್ನು ಗಣನೆಗೆ ತೆಗೆದುಕೊಂಡಾಗ ಈ ಪ್ರದೇಶದಲ್ಲಿ ವಾಸವಾಗಿದ್ದ ಜನಪ್ರಭೇಧಗಳ ಜೀವನ, ವಾಸ್ತವತೆ, ಜನಗಳು ಹುಟ್ಟುಹಾಕಿದ ದೇಸೀ ಪರಂಪರೆಗಳು, ಪ್ರಬಲ ಸಮಾಜ ಸಂಸ್ಕೃತಿ ಅಧೀನ ಸಮಾಜ ಸಂಸ್ಕೃತಿಗಳನ್ನು ತನ್ನ ಪ್ರಭಾವಕ್ಕೆ ಒಳಪಡಿಸಿರುವ ಚಾಕಚಕ್ಯತೆಗಳನ್ನು ಕಾಣಲು ಸಾಧ್ಯ. ತುಳುನಾಡಿನ ಅಧೀನ ಆರ್ಥಿಕತೆಗಳ ಮೇಲೆ ಪ್ರಬಲ ಆರ್ಥಿಕತೆಯ ಮಾರ್ಗಪರಂಪರೆಗಳೊಂದಿಗಿನ ಪ್ರಭಾವ ಹಾಗೂ ಸಂಬಂಧಗಳ ಕಾರ್ಯಯೋಜನೆಗಳಿಂದ ರೂಪುಗೊಳ್ಳುವಲ್ಲಿನ ಸಮಾಜ–ಸಂಸ್ಕೃತಿಯ ವಾರಸುದಾರಿಕೆಗಳು ಭಿನ್ನರೂಪ ಪಡೆದುಕೊಳ್ಳಲು ಕಾರಣವಾಗಿವೆ. ಜನಪದರು ಬಳಸುತ್ತಿದ್ದ ಹಾಗೂ ಬಳಸುತ್ತಿರುವ ಡೋಲು, ದುಡಿ, ಕಹಳೆ ಮುಂತಾದ ಪರಿಕರಗಳು, ವಾರ್ಷಿಕಾವರ್ತನ, ಜೀವನಾವರ್ತನ ಆಚರಣೆಗಳನ್ನು ಜೀವಂತವಾಗಿರಿಸಿ ಅದನ್ನು ಮುಂದುವರೆಸುತ್ತಿರುವ ಜನ ಸಮುದಾಯಗಳನ್ನು ಅವಲೋಕಿಸಿದಾಗ ಇವುಗಳೆಲ್ಲ ಒಂದೊಮ್ಮೆ ಕ್ಷಾತ್ರ ವರ್ಗಗಳಾಗಿದ್ದು, ಕಾಲಘಟ್ಟದಲ್ಲಿ ಅನನ್ಯತೆಗಳನ್ನು ಕಳೆದುಕೊಂಡು ಪ್ರಬಲ ಆರ್ಥಿಕ ವ್ಯವಸ್ಥೆಗೆ ಸಮರ್ಪಿಸಿಕೊಂಡಿದ್ದವುಗಳು ಎಂದಾಗಿದ್ದಲ್ಲಿ ತುಳುನಾಡಿನ ಸಾಮಾಜಿಕ ರಚನೆಯು ಆರ್ಥಿಕ ಮತ್ತು ರಾಜಕೀಯ ಮಾನದಂಡಗಳ ಮೂಲಕ ರೂಪಿಸಲ್ಪಟ್ಟವೆ ಎಂಬುವುದಾಗಿ ಪರಿಗಣಿಸಬೇಕಾಗುತ್ತದೆ.

ಪ್ರಬಲ ಆರ್ಥಿಕತೆಯ ಸಂಸರ್ಗದಿಂದ ಆಧೀನ ಆರ್ಥಿಕತೆಯ ಪ್ರಭಾವಿಗಳು ಅಧಿಕಾರ ಪಡೆದು, ಅಶಕ್ತರು ಕೇವಲ ಆಚರಣೆಗಳಿಗೆ ಸೀಮಿತರಾಗಿ ಇಲ್ಲವೇ ಆಚರಣೆಯ ಮಾಧ್ಯಮರಾಗಿ ನಾಟಕೀಯ ಅಧಿಕಾರ ಪಡೆದಿರಬಹುದು. ಈ ತೆರನಾದ ವ್ಯವಸ್ಥೆಗಳನ್ನು ತುಳುನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳಾದ ಅಗೆಲು, ಕೋಲ, ನೇಮ, ಉತ್ಸವ, ಜಾತ್ರೆ,

ಆಯನ, ಧರ್ಮನೇಮ ಮುಂತಾದ ಕಟ್ಟುಪಾಡುಗಳಲ್ಲಿ ಬಿಂಬಿಸುವ ಶಿಷ್ಟ ಮತ್ತು ಪರಿಶಿಷ್ಟ ಆರಾಧನೆಗಳ ಶ್ರೇಣಿಕೃತ ಅಧಿಕಾರ ಚಲಾವಣೆಯಲ್ಲಿ ನೋಡಬಹುದು.[74] ತುಳುನಾಡಿನ ದೈವಾಚರಣೆಯಲ್ಲಿರುವ ಕೆಲವೊಂದು ಶಾಸ್ತ್ರವಿಧಿಗಳು, ರೂಢಿ-ಸಂಪ್ರದಾಯಗಳು, ಬಳಸುವ ಉಡುಗೆ ತೊಡುಗೆಗಳು, ಆಭರಣಗಳು ಈ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಅವೈದಿಕ ಸಂಸ್ಕೃತಿಯ ಹಬ್ಬದಂತಹ ಆಚರಣೆಗಳು, ಗ್ರಾಮದೇವತೆಯ ಆರಾಧನೆ.[75] ಸಮಾಜದ ಬೆಳವಣಿಗೆಯ ಮೊದಲ ಹಂತದಲ್ಲಿ ಮಾತೃವೇ ಧರ್ಮದ ಕೇಂದ್ರಸ್ಥಾನದಲ್ಲಿದವಳು. ಆಹಾರದ ಸಂಗ್ರಹಣೆ, ಉತ್ಪಾದನೆ ಸ್ತ್ರೀಯ ಕರ್ತವ್ಯವಾಗಿತ್ತು. ಇದರಿಂದ ಸ್ತ್ರೀಯ ಸ್ಥಾನಮಾನ ಹೆಚ್ಚಿತ್ತಲ್ಲದೇ, ಮಾನ್ಯತೆ ಅವಳನ್ನು ದೈವತ್ವಕ್ಕೆ ಏರಿಸಿತು.

ಭಾರತದಲ್ಲಿ ಸ್ತ್ರೀಯ ಮಾನ್ಯತೆಯು ಕೃಷಿಯ ಆರಂಭದ ಹಂತದೊಡನೆ ಸಂಬಂಧ ಹೊಂದಿದೆ. ತುಳುನಾಡಿನ ಶಾಕ್ತ ಆಚರಣೆಗಳು ಪ್ರಧಾನವಾಗಿ ಕೃಷಿಯ ಉತ್ಪನ್ನಗಳ ಸಮೃದ್ಧಿಗಾಗಿ ಹುಟ್ಟಿಕೊಂಡಿದೆ. ಉದಾಹರಣೆಗೆ ಮಾರಿಹಬ್ಬ,[76] ತುಳುನಾಡಿನಲ್ಲಿ ಸ್ತ್ರೀಶಕ್ತಿ ಪ್ರಾಬಲ್ಯ ಪಡೆದ ಕಾರಣ ಶಕ್ತಿ ಆರಾಧನೆ ಹೆಚ್ಚು ಪ್ರಚಾರಗೊಂಡು ಶಾಶ್ವತವಾಗಿ ನೆಲೆಯಾಯಿತು. ತುಳುನಾಡಿನ ಪರಿಸರ, ಕೃಷಿ, ಧಾರ್ಮಿಕತೆ, ನೈಸರ್ಗಿಕ ಸಮತೋಲನೆಯಂತಹ ಕಲ್ಪನೆಗಳು ಜನರನ್ನು ಬಹಳವಾಗಿ ಆಕರ್ಷಿಸಿರುವುದರಿಂದ ಮಾರಿಯಮ್ಮನ ಆರಾಧನೆಗೆ ಮೂಲಕಾರಣ. ಮಾರಿಜಾತ್ರೆ ಮೂಲತಃ ದಲಿತರಿಂದ ಉಗಮ ಪಡೆದಿದೆ. ಶೂದ್ರ, ಮಾದಿಗ, ದಲಿತರಲ್ಲಿ ಮುಖ್ಯವಾಗಿ ಬೈರರು, ರಾಣೇಯರು ಈ ಕ್ಷೇತ್ರದಲ್ಲಿ ದುಡಿಯುವವರಾಗಿದ್ದಾರೆ. ಪ್ರಸ್ತುತ ಆಯಾಯ ಸಮುದಾಯಗಳು ಅವರವರ ಶೈಲಿಯಲ್ಲಿ ಪೂಜೆ ಮಾಡುತ್ತಾರೆ. ಕೆಲವು ಮಾರಿಯಮ್ಮ ದೈವಸ್ಥಾನಗಳು ವೈದಿಕೀಕರಣಗೊಂಡಿವೆ. ಉದಾಹರಣೆಗೆ ಉರ್ವದ ಮಾರಿಯಮ್ಮ, ಕಡಬದ ದುರ್ಗಪರಮೇಶ್ವರಿ. ಇದಲ್ಲದೇ ವಸಾಹತುಪೂರ್ವದಲ್ಲಿ ಇವು ಪ್ರಮುಖ ಜನಪದ ನ್ಯಾಯದ ಕಟ್ಟೆಗಳಾಗಿ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿದೆ. ಗ್ರಾಮ ದೇವತೆಯ ಪರಿಕಲ್ಪನೆ, ಸಿರಿ ಆಚರಣೆ, ಉಳ್ಳಾಲ್ತಿ ಆಚರಣೆ ಮುಂತಾದವುಗಳು ತುಳುನಾಡಿನ ಪ್ರಮುಖ ಕೃಷಿ ಆರಾಧನ ಸಂಪ್ರದಾಯಗಳು.

ಇದಲ್ಲದೇ ಕಂಬಳ ಆರಾಧನೆಯ ಬಗ್ಗೆ ವಿಶ್ಲೇಷಣೆ ಮಾಡಿದಾಗ ಈ ಕ್ರೀಡೆಗೆ ಸಂಬಂಧಿಸಿದ ಗದ್ದೆಯ ಮೊದಲ ಉಲ್ಲೇಖ 15ನೇ ಶತಮಾನದ ಶಾಸನದಲ್ಲಿ ಸಿಗುತ್ತದೆ. ಕಂಬಳವು ಕೇವಲ ಮನೋರಂಜನೆಯ ಕೋಣಗಳ ಓಟವಾಗಿರದೇ ಊಳಿಗಮಾನ್ಯ ಸಮೀಕರಣದ ಹೇಳಿಕೆ ಮತ್ತು ಮನೆತನಗಳ ಶಕ್ತಿ, ಗೌರವಗಳ ಯರ್ಥಾತೆಯ ಘೋಷಣೆಯಾಗಿತ್ತು. ತುಳುನಾಡಿನ ಊಳಿಗಮಾನ್ಯ ವಾತವರಣದ ಸಾಮಾಜಿಕ-ರಾಜಕೀಯ ಅಧಿಕಾರದ ಪರಿಣಾಮಕಾರಿ ಸಂಯೋಜಿತ ವಿದ್ಯುಕ್ತ ಆಚರಣೆ. ಶ್ರೇಣಿಕೃತ ವ್ಯವಸ್ಥೆಯಲ್ಲಿ

ಕೆಳಗಿನವನು ಮೇಲಿನವನಿಗೆ ಗೌರವ ಸೂಚಿಸುವ ಆಚರಣೆ. ಮನೆತನದ ಶಕ್ತಿ ಗೌರವಗಳ ಯಥಾರ್ಥತೆಯ ಘೋಷಣೆ. ಸ್ಥಳೀಯ ಅಧಿಕಾರ ವಿನ್ಯಾಸಕ್ಕೆ ದೃಡೀಕರಣ ಮತ್ತು ಶಾಸನಬದ್ಧತೆಗಳನ್ನು ಪಡೆಯುವ ಪ್ರಕ್ರಿಯೆಯಾಗಿದೆ. ಒಂದೆಡೆ ಕಲೆತು ಸಾಮೂಹಿಕ ಭೋಜನ ಮಾಡುವ ಕ್ರಮ, ಹೆಂಗಳೆಯರ ನೃತ್ಯ, ಶಕ್ತಿದೇವತೆಗಳಿಗೆ ರಕ್ತತರ್ಪಣ ನೀಡಿ ಸಂಪ್ರೀತಿಗೊಳಿಸುವ ಆಚರಣೆಗಳನ್ನು ಪರೀಶೀಲಿಸಿದಾಗ ಸಾಮಾಜಿಕ ರಚನೆ ಆರಂಭಿಕ ಹಂತದಿಂದ ಪಲ್ಲಟಗೊಂಡಿರುವುದನ್ನು ಕಾಣಬಹುದಾಗಿದೆ.[77]

ತುಳುನಾಡಿನ ಧಾರ್ಮಿಕ ಆಚರಣೆಗಳು ಸಾಮಾಜಿಕ ವ್ಯವಸ್ಥೆಗಳ ಮೇಲೆ ಪ್ರಭಾವ ಬೀರಿರುವುದರಿಂದ ಸಮಾಜದ ತಾತ್ವಿಕ ಚೌಕಟ್ಟು ಧಾರ್ಮಿಕ ಆಚರಣೆಗಳ ಹಿಡಿತಕ್ಕೆ ಬಂದುದು ಮಾತ್ರವಲ್ಲದೇ ಸಾಮಾಜಿಕ ವ್ಯವಸ್ಥೆಗೆ ಧಾರ್ಮಿಕ ಆಚರಣೆಗಳ ಸೀಮಾರೇಖೆ ಎಳೆದಿರಬಹುದು.[78] ಧಾರ್ಮಿಕ ಆಚರಣೆಗಳ ಕುರಿತಾಗಿರುವ ಸಂದರ್ಭಗಳನ್ನು ನಂಬಿಕೆಯ ಪ್ರಶ್ನೆಯಾಗಿಸುವುದರ ಬದಲು ತುಳುವರ ಬದುಕಿನ ವಿವಿಧ ಮಜಲುಗಳನ್ನು ಪರಿಚಯಿಸಿದ್ದೇ ಆದಲ್ಲಿ ಅವುಗಳಲ್ಲಿರುವ ಪ್ರತಿಕ್ರಿಯೆಗಳನ್ನು ನೋಡಬಹುದು.

ತುಳುನಾಡಿನ ಕೆಳವರ್ಗದ ಜನರು ಧಾರ್ಮಿಕ ಆಚರಣೆಗಳನ್ನು ವೃತ್ತಿಯನ್ನಾಗಿರಿಸಿ ಮೇಲ್ವರ್ಗದ ವಿರುದ್ಧದ ಧ್ವನಿಯೇರಿಸಿದರೂ ಅವರ ಪ್ರಾತಿನಿಧ್ಯದಲ್ಲೆ ಆಚರಣೆಗಳು ನಡೆಯುವುದನ್ನು ವಿಶ್ಲೇಷಿಸಬೇಕಾಗಿದೆ. ಮೇಲ್ವರ್ಗದವರು ಇದೇ ಧಾರ್ಮಿಕ ಆಚರಣೆಗಳನ್ನು ತನ್ನ ಅಧಿಕಾರ ಸವಲತ್ತುಗಳನ್ನು ಕಾಯ್ದುಕೊಳ್ಳುವ ಸಾಧನವಾಗಿಸಿ ತಮ್ಮ ಅಧಿಕಾರವನ್ನು ಯಥಾವತ್ತಾಗಿ ಮುಂದುವರೆಸಿಕೊಂಡು ಬಂದರು. ಇದು ಸಾಮಾಜಿಕ ಸಂಬಂಧವಾಗಿರದೇ ಶ್ರೀಮಂತ ವರ್ಗದ ಸಾಂಸ್ಕೃತಿಕ ರಾಜಕಾರಣವೆಂದು ತಿಳಿಯಬೇಕಾಗುತ್ತದೆ.[79] ಮಾತ್ರವಲ್ಲ ಕೆಳವರ್ಗದ ವಾರಸ ಅಧಿಕಾರಗಳು ಅರ್ಥ ಕಳೆದುಕೊಂಡು ಕೇವಲ ಆಚರಣೆಗಳಿಗೆ ಸೀಮಿತವಾಗಿರುವುದು ಚರ್ಚೆಗೆ ಒಳಪಡಬೇಕಾದ ವಿಚಾರ. ಈ ಪ್ರಕ್ರಿಯೆಗಳನ್ನು ಗಮನಿಸಿದಾಗ ದಕ್ಷಿಣ ಭಾರತವನ್ನು ಒಳಗೊಂಡಂತೆ ತುಳುನಾಡಿನ ಜನಸಮುದಾಯಗಳು ವಲಸೆ ಬಂದ ಜನಸಮುದಾಯಗಳೊಂದಿಗೆ ಹೊಂದಿರುವ ಚಲನಾತ್ಮಕತೆಯನ್ನು ವಿಶ್ಲೇಷಿಸಬೇಕಾಗುತ್ತದೆ.[80]

**ಪ್ರಭಾವಿ ಆರ್ಥಿಕತೆ, ಸಾಮಾಜಿಕ ಮನರ್‌ರಚನೆ, ವಾರಸುದಾರಿಕೆ**

ದಕ್ಷಿಣಭಾರತಕ್ಕೆ ಕಾಲಿರಿಸಿದ ಕಬ್ಬಿಣದ ಬಳಕೆಯನ್ನರಿತ್ತಿದ್ದ ಜನಾಂಗ ಸಾಂಸ್ಕೃತಿಕ ಪ್ರಗತಿಯ ದಾರಿಯಲ್ಲಿ ಮೈಲಿಗಲ್ಲನ್ನು ನಿರ್ಮಿಸಿದರೆಂಬುವುದು ಚರಿತ್ರಕಾರರ ವಾದವಾದರೂ ರೋಮಿಲಾ ಥಾಪರರ ಪ್ರಕಾರ ದಕ್ಷಿಣಭಾರತದಲ್ಲಿ ಕಬ್ಬಿಣದ ಉಪಯೋಗ ಪೂರ್ವೇತಿಹಾಸ ಕಾಲದಲ್ಲಿಯೇ ಚಾಲ್ತಿಯಲ್ಲಿತ್ತು. ಪ್ರಭಾವಿ ಆರ್ಥಿಕತೆಯ ವಲಸೆಯಿಂದಾಗಿ ಕಬ್ಬಿಣದ ಉಪಯೋಗ ಮತ್ತು ಕೃಷಿ ವ್ಯವಸ್ಥೆಯನ್ನು ಅನುಸರಿಸಿ ಈ ಪ್ರದೇಶದಲ್ಲಿ ಈಗಾಗಲೇ ಅಧಿಕಾರ

ಸ್ಥಾಪಿಸಿದ್ದ ಮೂಲನಿವಾಸಿಗಳ ಇರುವಿಕೆಯೊಂದಿಗೆ ಹೇಗೆ ತಳಕು ಹಾಕಿದೆ ಎಂಬುವುದನ್ನು ಪರಿಶೀಲಿಸಬೇಕಾಗುತ್ತದೆ. ಪಿ. ಗಣಪಯ್ಯ ಭಟ್ಟರ ಅಭಿಮತದಂತೆ ಮಾರ್ಗಪರಂಪರೆಯ ಪ್ರಕಾರ ಕಬ್ಬಿಣ ಯುಗದ ಜನರು ಹೆಚ್ಚು ಸತ್ವಶಾಲಿಗಳಾಗಿದ್ದು, ತಮ್ಮ ಜೀವನ ಕ್ರಮವನ್ನು ಪ್ರಗತಿದಾಯಕವಾಗಿ ರೂಪಿಸಿದ್ದಲ್ಲದೇ ಸಮಾಜವು ನಾಗರೀಕತೆಯ ಹಾದಿಯಲ್ಲಿ ಮುನ್ನಡೆಯುವಂತೆ ಮಾಡುವುದರಲ್ಲಿ ಸಫಲರಾದರು ಇದಕ್ಕೆ ಸಂಬಂಧಿಸಿದಂತೆ ಅಕ್ಷರಸ್ತ ನಾಗರೀಕತೆ ಇಲ್ಲವೇ ಪರಶುರಾಮನ ಐತಿಹ್ಯದ ಲಿಖಿತ ಆಕರಗಳು, ಮಾರ್ಗ ಪರಂಪರೆಯ ಸಾಂಪ್ರದಾಯಿಕ ಚರಿತ್ರೆಯ ಆಕರಗಳು, ಹಾಗೂ ಶಾಸನಗಳು ಸೀಮಿತ ಅಧ್ಯಯನಕ್ಕೊಳಪಟ್ಟಿರುವುದರಿಂದ ಪುನರ್‌ವಿಮರ್ಶೆಗೆ ಒಳಪಡಿಸಬೇಕೆಂಬುವುದು ಚರಿತ್ರಕಾರರ ಅಭಿಪ್ರಾಯವಾಗಿದೆ. ಜೊತೆಗೆ ತುಳುನಾಡಿನ ಸಾಮುದಾಯಿಕ ಸಮಾಜದ ಮೇಲೆ ಪ್ರಬಲ ಆರ್ಥಿಕತೆಯ ಪ್ರಭಾವಿ ಗುಂಪುಗಳು ಪ್ರಭಾವ ಬೀರಿ ಅಧಿಕಾರ ನಡೆಸಿರುವುದನ್ನು ಪರಿಗಣಿಸಬೇಕಾಗುತ್ತದೆ.[81] ಪ್ರಭಾವಿ ಆರ್ಥಿಕತೆಗಳ ವಾರಸುದಾರಿಕೆ ಪರಶುರಾಮನ ಐತಿಹ್ಯದ[82] ಮೂಲ ವಿಚಾರಗಳನ್ನು ಪರಾಮರ್ಶಿಸಬೇಕಾಗುತ್ತದೆ.

"ತುಳುನಾಡಿನಲ್ಲಿ ಬ್ರಾಹ್ಮಣರು ಪರಶುರಾಮನಿಂದ ಭೂಮಿಯನ್ನು ದಾನವಾಗಿ ಪಡೆಯುವ ಕಾರ್ಯಯೋಜನೆಗಳನ್ನು ಪ್ರಭಾವಿಯಾಗಿ ಚಾಲ್ತಿಯಲ್ಲಿರುವ ಪರಶುರಾಮನ ಐತಿಹ್ಯದೊಂದಿಗೆ ಸಮೀಕರಿಸಿದಲ್ಲಿ ಬ್ರಾಹ್ಮಣರ ವಾಸ್ತವ್ಯದ ಬಗೆಗಿನ ವಾರಸುದಾರಿಕೆಯನ್ನು ವಿಶ್ಲೇಷಣೆಗೆ ಒಳಪಡಿಸಬೇಕಾಗುತ್ತದೆ. ಈ ವಾಸ್ತವ್ಯದ ಬಗೆಗಿನ ವಿಶ್ಲೇಷಣೆ ಈ ರೀತಿ ಇದೆ. ಪ್ರಕೃತಿಯನ್ನು ಮಾನವ ಒಗ್ಗಿಸಿಕೊಳ್ಳಲು ಹೆಣಗಾಡುವ ಮಾನವರ ಪ್ರಯತ್ನ. ಜೀವನಾವರ್ತನ ಮತ್ತು ವಾರ್ಷಿಕಾವರ್ತನದ ಆಚರಣೆಗಳಲ್ಲಿ ಬಳಸಲಾಗುವ ವಾದ್ಯ, ಸಮ್ಮೇಳ, ಡೋಲು ಮತ್ತಿತರ ವಾದನ ಸಾಮಾಗ್ರಿಗಳನ್ನು ಗಮನಿಸಬೇಕು. ಇವು ನಿಯತವಾದ ಶಬ್ದವನ್ನುಂಟು ಮಾಡುವುದರ ಮೂಲಕ ಪ್ರಕೃತಿಯ ಮಧ್ಯೆ ಮಾನವನಿಗೆ ಅಗತ್ಯವಾದ ಒಂದು ಬಗೆಯ ಅಮೂರ್ತವಾದ ಮತ್ತು ಅಲೌಕಿಕವಾದ ವಾತವರಣವನ್ನು ಉಂಟುಮಾಡುತ್ತದೆ. ಆಚರಣ ಸೀಮೆಯನ್ನು ನಿರ್ಮಿಸುತ್ತದೆ. ಇಂತಹ ಸ್ವನಿರ್ಮಿತ ವಿನ್ಯಾಸಗಳೊಳಗೆ ಮಾತ್ರ ಮಾನವ ಕ್ರಿಯಾಶೀಲನಾಗುತ್ತಾನೆ.

ಕೊರಗ ಜನಾಂಗದಲ್ಲಿ ಉಪಲಬ್ದವಿರುವ ಕತೆಯೊಂದರ ಪ್ರಕಾರ ಸೃಷ್ಟಿಯ ಆದಿಯಲ್ಲಿ ನೀರೆ ತುಂಬಿದ್ದು, ಅಲ್ಲಿ ಒಂದು ಡೋಲು ಕಾಣಿಸಿಕೊಂಡಿತು. ಸಾಂಪ್ರದಾಯಿಕ ಚರಿತ್ರೆಯಲ್ಲಿ ಉಪಲಬ್ದವಿರುವ ಪರಶುರಾಮನ ಕಥೆಯ ಪ್ರಕಾರ ಎಲ್ಲೆಲ್ಲೂ ನೀರು ತುಂಬಿದ ಜಾಗವನ್ನು ಕೊಡಲಿ ಎಸೆದು ದೂರ ಮಾಡಿ ಭೂಭಾಗವನ್ನು ಪರಿವರ್ತಿಸಿದರ ಸಂಕೇತವೇನೆಂದರೆ, ಬಿಳಿಮಲೆಯವರು ಅರ್ಥೈಸಿದಂತೆ ಅವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸುವ ಸಂಕೇತ. ಬ್ರಾಹ್ಮಣರ

ವಲಸೆಯ ಪೂರ್ವದಲ್ಲಿ ಅವ್ಯವಸ್ಥಿತವಾಗಿದ್ದ ತುಳುನಾಡು ಬ್ರಾಹ್ಮಣರ ವಾಸ್ತವ್ಯದೊಂದಿಗೆ ವ್ಯವಸ್ಥಿತಗೊಂಡಿದೆ ಎಂಬುವುದು ಇಲ್ಲಿನ ವಾದ." ಮೂಲಕ ಸೃಷ್ಟಿಗೊಂಡು ಈ ನೆಲದಲ್ಲಿ ಗಟ್ಟಿಗೊಂಡಾಗ ಅಧೀನ ಆರ್ಥಿಕತೆಗಳು ಭೂಮಿ ಅಧಿಕಾರ ರಚನೆಯಲ್ಲಿ ಜತೆಗೂಡಿ ಪಾಲು ಪಡೆದುಕೊಂಡರೂ ಕಾಲಘಟ್ಟದಲ್ಲಿ ಶೋಷಣೆಗೆ ಒಳಗಾಗಿ ಗುಲಾಮಗಿರಿಗೆ ತಳ್ಳಲ್ಪಟ್ಟಿರಬಹುದು.[83]

ಚಾರಿತ್ರಿಕವಾಗಿ ಕಬ್ಬಿಣದ ವ್ಯವಸ್ಥಿತ ಉಪಯೋಗದಿಂದ ಆರ್ಥಿಕ ವ್ಯವಸ್ಥೆ ಹೆಚ್ಚು ಗರಿಗೆದರಿ ಕಬ್ಬಿಣ ಬಳಸುವ ಜನರಿಂದ ಸಂಸ್ಕೃತಿ ಆರಂಭವಾಗಿರಬಹುದೆಂದು ಅಂದಾಜಿಸಿದರೆ ಪರಶುರಾಮನ ಐತಿಹ್ಯವನ್ನು ಮುಂದಿಟ್ಟುಕೊಂಡು ವಲಸಿತ ಪ್ರಭಾವಿ ಆರ್ಥಿಕತೆಯ ಸಾಂಸ್ಕೃತಿಕ ವಲಯಗಳನ್ನು ಗುರುತಿಸಿಕೊಳ್ಳುವಾಗ ಬಹುಸಂಖ್ಯಾಕವಾದ ಅಥವಾ ಪ್ರಬಲ ಸಮುದಾಯದ ಸಂಸ್ಕೃತಿಯನ್ನು ಪ್ರಧಾನಸಂಸ್ಕೃತಿ ಎಂದು ಗುರುತಿಸಿಕೊಳ್ಳಬೇಕೆ, ಇಲ್ಲವೇ ವಲಸಿತ ಆರ್ಥಿಕತೆಯ ಸಂಸ್ಕೃತಿಯನ್ನು ಪ್ರಧಾನಸಂಸ್ಕೃತಿ ಎಂದು ಪರಿಗಣಿಸಬೇಕೆ ಎಂಬ ಜಿಜ್ಞಾಸೆ ಮೂಡುವುದು ಸಹಜ. ಆದರೆ ಯಾವುದಾದರೂ ಒಂದನ್ನು 'ಪ್ರಧಾನಸಂಸ್ಕೃತಿ' ಎಂದು ಘೋಷಿಸಿಕೊಂಡರೆ ಏಕಧೋರಣೆಯ ಅಪಾಯಗಳಿರುವುದರಿಂದ ಹಲವಾರು ತೊಡಕುಗಳನ್ನು ಎದುರಿಸಬೇಕಾಗುತ್ತದೆ ಎಂಬುವುದು ನಿರ್ವಿವಾದ. ತುಳುನಾಡಿನ ಆಚಾರ-ವಿಚಾರ ಉಳಿಗಮಾನ್ಯ ಲಕ್ಷಣಗಳನ್ನು ಒಳಗೊಂಡಿರುವುದರಿಂದ ತುಳುಸಂಸ್ಕೃತಿ ಕೂಡಾ ಊಳಿಗಮಾನ್ಯ ವ್ಯವಸ್ಥೆಯಡಿ ವಿಕಾಸಗೊಂಡಿರುವುದನ್ನು ನೋಡಬಹುದು. ತುಳುನಾಡಿನ ಜಾತಿ ಆಧಾರಿತ ಶ್ರೇಣಿಕೃತ ಸಮಾಜದ ಒಳಗಡೆ ಬದುಕುವ ವಿವಿಧ ಜನಪದರ ಬದುಕಿಗೆ ಸಂಬಂಧಪಟ್ಟಂತೆ ಅದರದ್ದೇ ಆದ ಆಚಾರ-ವಿಚಾರಗಳನ್ನು ಪರಿಶೀಲಿಸಬೇಕಾಗುತ್ತದೆ. ಈ ಆಚಾರ-ವಿಚಾರಗಳು ಭಾಷೆ ಆಥಾವ ಸಂಸ್ಕೃತಿ ಅನ್ನುವ ಒಂದು ಕೇಂದ್ರದಲ್ಲಿ ಇರುತ್ತದೆ ಎಂಬ ಪೂರ್ವಕಲ್ಪನೆಯಿಂದಲೇ ಪ್ರಾದೇಶಿಕ ಅಧ್ಯಯನಕ್ಕೆ ತೊಡಗಿದರೆ ಈ ಎಲ್ಲಾ ಆಚಾರ-ವಿಚಾರಗಳು ಒಂದು ನಿರ್ದಿಷ್ಟ ಸ್ವರೂಪದ ಉತ್ಪಾದನ ವಿಧಾನದಲ್ಲಿ ವಿನ್ಯಾಸಗೊಳ್ಳುತ್ತದೆ.

ಪ್ರಸಿದ್ದ ಚರಿತ್ರಕಾರ ಡಾ. ಆರ್.ಎಸ್ ಶರ್ಮರ ಪ್ರಕಾರ ಊಳಿಗಮಾನ್ಯತೆಯ ಹುಟ್ಟಿಗೆ ಪ್ರಮುಖ ಕಾರಣವೆಂದರೆ ಬ್ರಾಹ್ಮಣರು, ಧಾರ್ಮಿಕ ಸಂಘ ಸಂಸ್ಥೆಗಳು ಹಾಗೂ ಸಾರ್ವಜನಿಕ ಅಧಿಕಾರಿಗಳಿಗೆ ನೀಡುತ್ತಿದ್ದ ಮಿತಿಮೀರಿದ ಭೂಮಿಯ ದಾನಗಳು. ಈ ವ್ಯಾಖ್ಯಾನಗಳು ಸಾಮಾಜಿಕ ಬಿಕ್ಕಟ್ಟು, ನಗರಗಳ ಅವನತಿ, ನಾಣ್ಯಗಳ ಚಲಾವಣೆಯಲ್ಲಿನ ಇಳಿಮುಖ ಮುಂತಾದ ವಿಚಾರಗಳ ಬಗ್ಗೆ ಚರ್ಚೆ ಪ್ರಾರಂಭಿಸುತ್ತದೆ. ಭೂಮಿಗೆ ಸಂಬಂಧಿಸಿದ ವಿಚಾರಗಳು, ಕೃಷಿ ಆರ್ಥಿಕತೆ, ಭೂಮಾಲಿಕರು, ಹೆಚ್ಚುವರಿ ಉತ್ಪಾಧನೆ, ರಾಜಪ್ರಭುತ್ವದ ಆಸ್ತಿತ್ವ ಮತ್ತು ವಿಸ್ತರಣೆಯ ದೃಷ್ಟಿಯಿಂದ ನೀಡಿದ ಮಿತಿಮೀರಿದ ದಾನಗಳು, ಹೊಸ ಅರ್ಥ ವ್ಯವಸ್ಥೆಯೊಂದರ

ಹುಟ್ಟಿಗೆ ಕಾರಣವಾಯಿತು. ಅದು ಶ್ರೇಣಿಕೃತ ಸಮಾಜ ವ್ಯವಸ್ಥೆಗೆ ಪೂರಕವಾಗಿದ್ದರಿಂದ ರಾಜಕೀಯ ಮತ್ತು ಧಾರ್ಮಿಕ ಅಧಿಕಾರಗಳನ್ನು ಹೊಂದಿದ್ದ ಸಮಾಜದ ಮೇಲ್ವರ್ಗದ ಜನರಿಗೆ ದಾನ ನೀಡುವ ವ್ಯವಸ್ಥೆಯಿಂದಾಗಿ ಸಂಪತ್ತು ಮತ್ತು ಸವಲತ್ತುಗಳನ್ನು ಪಡೆಯುವಂತಾಯಿತು. ಇದರಿಂದಾಗಿ ಸ್ಥಳೀಯ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳ ಮೇಲೆ ನೇರ ನಿಯಂತ್ರಣ ಸಾಧಿಸಿ ಸ್ಥಳೀಯ ವಾರಸುದಾರರಾಗಿ ಕಾಣಿಸಿಕೊಂಡರು. ಈ ವ್ಯವಸ್ಥೆಯಲ್ಲಿ ಸಮಾಜದ ಕೆಳಸ್ತರದ ಜನರು ತಾವು ಉತ್ಪಾದಿಸಿದ ಸಂಪತ್ತಿನ ಒಂದು ಭಾಗವನ್ನು ಮಾತ್ರ ತೆಗೆದುಕೊಳ್ಳಬೇಕೆಂಬ ನಿಯಮವನ್ನು ರೂಪಿಸಲಾಯಿತು. ಪ್ರಭುತ್ವದ ದೃಷ್ಟಿಯಿಂದ ಹೆಚ್ಚುವರಿ ಉತ್ಪಾದನೆಯಾಗಿದ್ದು, ಉತ್ಪಾದಿಸಿದವನೇ ಅದನ್ನು ಮರುಪಡೆಯುತ್ತಾನೆಂಬುವುದು ಸ್ಪಷ್ಟ. ಈ ವ್ಯವಸ್ಥೆಯಲ್ಲಿ ದುಡಿಯುವ ವರ್ಗದ ಶ್ರಮಕ್ಕೆ ಬೆಲೆಯಿರುತ್ತಿರಲಿಲ್ಲ. ವಿವಿಧ ಉತ್ಪಾದಕ ವರ್ಗಗಳು ದುಡಿದ ಸಂಪತ್ತನ್ನು ಮಧ್ಯವರ್ತಿಗಳ ಮೂಲಕ ಅರಸನಿಗೆ ನೀಡಬೇಕಾಗಿತ್ತು. ಈ ರೀತಿ ಕ್ರೋಢಿಕರಿಸಲ್ಪಟ್ಟ ಸಂಪತ್ತನ್ನು ದೇವಾಲಯಗಳಿಗೆ, ಬ್ರಾಹ್ಮಣರಿಗೆ ಹಾಗೂ ಇನ್ನಿತರ ಅಧಿಕಾರಿ ವರ್ಗದವರಿಗೆ ನೀಡಲಾಗುತ್ತಿತ್ತು. ಈ ವ್ಯವಸ್ಥೆಯಿಂದ ಅನುತ್ಪಾದಕ ವರ್ಗಗಳು ಉತ್ಪಾದಕ ವರ್ಗಗಳ ಉತ್ಪಾದನೆಯ ಲಾಭವನ್ನು ಪಡೆದುಕೊಳ್ಳುವಂತಾಯಿತು. ದೇವಾಲಯಗಳು ಮತ್ತು ಬ್ರಾಹ್ಮಣರಿಗೆ ದಾನವನ್ನು ನೀಡುವ ಸಂದರ್ಭದಲ್ಲಿ ದಾನಕ್ಕೆ ಧಾರ್ಮಿಕ ಮಹತ್ವವನ್ನು ನೀಡಲಾಯಿತು. ಅದೊಂದು ಆರ್ಥಿಕ ಚಟುವಟಿಕೆಯಾಗಿ, ಧಾರ್ಮಿಕ ಆಚರಣೆಯಾಗಿ ಪರಿವರ್ತನೆಗೊಂಡಿತು. ಉದಾಹರಣೆಗೆ ದೇವಾಲಯಗಳಿಗೆ ಭೂಮಿಯನ್ನು ಉಂಬಳಿಯಾಗಿ ನೀಡುವುದು. ಬ್ರಾಹ್ಮಣರಿಗೆ ದಾನವಾಗಿ ನೀಡುವ ಭೂಮಿಯನ್ನು ಬ್ರಹ್ಮದೇಯ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು.[84] ಧಾರ್ಮಿಕ ಚಟುವಟಿಕೆಗಳ ಮೂಲಕ ಬ್ರಾಹ್ಮಣ ವರ್ಗ ಅತ್ಯಂತ ಪ್ರಭಾವಿ ವರ್ಗವಾಗಿ ರೂಪುಗೊಂಡಿತು. ದೇವಾಲಯ ಮತ್ತು ಮಠಗಳ ನಿರ್ಮಾಣ ಕಾರ್ಯ ಬಿರುಸಿನಿಂದ ನಡೆದವು. ದಾನವಾಗಿ ಸಿಕ್ಕಿದ ಭೂಮಿಯ ಆಡಳಿತವೂ ಬ್ರಾಹ್ಮಣರಿಗೆ ಸೇರಿತ್ತು. ದೇವಾಲಯಗಳು ಆಡಳಿತ ಕೇಂದ್ರಗಳಂತೆ ಕಾರ್ಯನಿರ್ವಹಿಸಿದವು. ಬ್ರಾಹ್ಮಣರಿಗೆ ಭೂಮಿಯನ್ನು ದಾನವಾಗಿ ನೀಡಿರುವುದು ಹೊಸ ಭೂಮಾಲಿಕ ಮಧ್ಯವರ್ತಿಗಳ ಹುಟ್ಟಿಗೂ ಕಾರಣವಾಯಿತು. ದಾನದ ರೂಪದಲ್ಲಿ ಭೂಮಿಯನ್ನು ಪಡೆದು ಭೂಮಾಲಿಕ ಮಧ್ಯವರ್ತಿಗಳಾಗಿ ಪರಿವರ್ತನೆಗೊಂಡವರನ್ನು ಮಹಾಜನರೆಂದು ಕರೆಯಲಾಗಿದೆ.[85] ತೆರಿಗೆಗಳನ್ನು ಸಂಗ್ರಹಿಸುವುದು, ಭೂಮಿಯನ್ನು ದತ್ತಿ ನೀಡುವುದು, ಕೆರೆಗಳನ್ನು ನಿರ್ಮಿಸುವುದು, ಧಾರ್ಮಿಕ ಮತ್ತು ಶೈಕ್ಷಣಿಕ ಕೆಲಸ ಕಾರ್ಯಗಳನ್ನು ಮಾಡುವುದು ಮುಂತಾದ ಕೆಲಸಗಳಲ್ಲಿ ಮಹಾಜನರು ಜವಾಬ್ದಾರಿಯನ್ನು ವಹಿಸಿಕೊಂಡರು. ಹಳ್ಳಿಗಳ ಪ್ರತಿನಿಧಿಗಳಾಗಿ ಆಯ್ಕೆಗೊಂಡು ಕೇಂದ್ರಪ್ರಭುತ್ವ ಮತ್ತು ರೈತರ ನಡುವಿನ ಮಧ್ಯವರ್ತಿಗಳಾಗಿ ಅಧಿಕಾರ ಚಲಾಯಿಸಿದರು. ಇದರಿಂದಾಗಿ ಮೂಲ

ಕೃಷಿಕರು ತಮ್ಮ ಪ್ರಾತಿನಿಧ್ಯವನ್ನು ಕಳೆದುಕೊಳ್ಳಬೇಕಾಯಿತು. ಹೀಗೆ ಭೂಮಾಲಿಕ ಮಧ್ಯವರ್ತಿಗಳು ಒಂದು ಸಂಕೀರ್ಣ ಸಮಾಜ ಮತ್ತು ರಾಜಕಾರಣವನ್ನು ಹುಟ್ಟುಹಾಕುವಲ್ಲಿ ಸಫಲರಾದರು.[86] ಮುಂದುವರೆದು ಈ ಸಮುದಾಯಗಳು ಕಾಲಕ್ರಮೇಣ ಸಾಮುದಾಯಿಕವಾಗಿ ಭೂಮಿಯ ಒಡೆತನವನ್ನು ಪಡೆದು ವಂಶಪಾರಂಪರ್ಯವಾಗಿ ಅಧಿಕಾರವನ್ನು ಮುಂದುವರೆಸಿರುವ ಉಲ್ಲೇಖಗಳನ್ನು ಶಾಸನಗಳಲ್ಲಿ ಕಾಣಬಹುದು.[87]

ತುಳುನಾಡಿನ ಚರಿತ್ರೆಯಲ್ಲಿ ಬ್ರಾಹ್ಮಣರ ಪ್ರಭಾವಕ್ಕಿಂತ ಮುಂಚೆಯೂ ಹಲವಾರು ಸಾಮುದಾಯಿಕ ಆರ್ಥಿಕತೆಗಳು ಅಧಿಕಾರ ಚಲಾವಣೆಯೊಂದಿಗೆ ಪರಸ್ಪರ ಸಹಜೀವನ ನಡೆಸಿದ ಸಂದರ್ಭಗಳು ಮೌಖಿಕವಾಗಿ ಪ್ರತಿಪಾದಿಸಲ್ಪಟ್ಟಿದೆಯಲ್ಲದೇ ಆಕರಗಳ ಸಮರ್ಥನೆಗಳೊಂದಿಗೆ ಚರಿತ್ರೆಯಲ್ಲೂ ಪ್ರಸ್ತಾಪಗೊಂಡಿದೆ. ಉದಾಹರಣೆಗೆ ಕೆಲವು ಪಾಡ್ದನಗಳು ಮೋಗವೀರರು ತಂಗಿಯ ಹಾಗೂ ಬಿಲ್ಲವರೂ ಅಕ್ಕನ ಮಕ್ಕಳು ಎಂದು ಸ್ಪಷ್ಟವಾಗಿ ಹೇಳುತ್ತವೆ. ಸಂಖ್ಯಾಬಲದಿಂದ ಬಹುಸಂಖ್ಯಾತರಾದ ಒಕ್ಕಲ್ಮರು ಮತ್ತು ಬಿಲ್ಲವರು, ಮೋಗೆರರು ಅಕ್ಕತಂಗಿಯ ಮಕ್ಕಳೆಂಬ ನಂಬಿಕೆಯೂ ಇದೆ.[88] ಇದಲ್ಲದೇ ತುಳುನಾಡಿನಲ್ಲಿ ವಾಸ್ತವ್ಯ ಹೂಡಿದ ಹೆಚ್ಚಿನ ಸಮುದಾಯಗಳು ಸಮಾನ ಬಳಿಗಳನ್ನು ಹಂಚಿಕೊಂಡಿರುವುದರಿಂದ ಸಾಮಾನ್ಯವಾದ ಒಂದು ಮೂಲಸ್ಥಾನ ಇರಬಹುದೆಂದು ಚರಿತ್ರಕಾರರು ಅಭಿಪ್ರಾಯಪಡುತ್ತಾರೆ.[89]

ಅಳೂಪರ ಆಳ್ವಿಕೆಯಿಂದ ಆರಂಭಗೊಂಡು ವಸಾಹತುಶಾಹಿ ಕಾಲದ ಆಳ್ವಿಕೆಯ ವರೆಗಿನ ಬದಲಾವಣೆಗಳನ್ನು ಗಮನಿಸಿದಾಗ ತುಳುನಾಡಿನ ಸಮುದಾಯಗಳು ಜಾತಿ ವ್ಯವಸ್ಥೆ, ಅಧಿಕಾರ, ಸಂಪತ್ತು ಹಾಗೂ ಸವಲತ್ತುಗಳನ್ನು ಅವಲಂಬಿಸಿಕೊಂಡಿರುವುದರಿಂದ ಸಮಾಜದ ರಚನೆ ಜಟಿಲವಾಗಿದ್ದು ಬಹುರೂಪತೆಯನ್ನು ಪಡೆದುಕೊಂಡಿತು. ಜಾತಿ ವ್ಯವಸ್ಥೆ, ಆಚಾರ ವಿಚಾರಗಳಲ್ಲಿನ ಸಾಮಾಜಿಕ ಭಿನ್ನತೆಗಳು, ನಂಬಿಕೆ, ಭೌಗೋಳಿಕತೆ ಇಲ್ಲಿನ ವ್ಯವಸ್ಥೆಗಳನ್ನು ವಿಶಿಷ್ಟವಾಗಿಸಿದೆ ಮಾತ್ರವಲ್ಲದೇ ಪಂಗಡಗಳು ಹಾಗೂ ಉಪಪಂಗಡಗಳು ಸಂಕೀರ್ಣಗೊಂಡು ಶ್ರೇಣಿಕೃತ ಸಮಾಜ ನಿರ್ಮಾಣಕ್ಕೆ ಅವಕಾಶ ಮಾಡಿಕೊಟ್ಟಿತು.[90] ಬ್ರಾಹ್ಮಣರು ದಾನವಾಗಿ ಪಡೆದ ದೇವಾಲಯಗಳ ಭೂಮಿಗಳನ್ನು ಕೇಡಿಲ್ಲದೇ ಪಾಲಿಸುವಲ್ಲಿ ರಾಜರೂ, ಸಂಘಗಳು, ಜನಸಾಮಾನ್ಯರೂ ಏಕಚಿತ್ತರಾಗಿರುವುದನ್ನು ಗಮನಿಸಿದಾಗ ಹಾಗೂ ತುಳುನಾಡಿನ ವಸಾಹತುಪೂರ್ವದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯವಾಗಿ ಗ್ರಾಮದ ಗುತ್ತುಗಳ ಪ್ರಭಾವಲಯಗಳು ವಾರಸುದಾರಿಕೆಯ ಅಂಗಗಳಾಗಿ ಕಾರ್ಯನಿರ್ವಹಿಸಿದೆ. ಈ ನಿಟ್ಟಿನಲ್ಲಿ ಈ ರೀತಿಯ ಬೆಳವಣಿಗೆಗಳನ್ನು ಅವಲೋಕಿಸಿದಾಗ ಗುತ್ತಿನ ದೈವಗಳನ್ನು ಒಳಗೊಂಡತೆ ರಕ್ಷಕ ದೈವಗಳು-ಗುತ್ತಿನ ಯಜಮಾನರಿಗೆ ಸರಿಸಮಾನವಾಗಿ ಗ್ರಾಮದೈವಗಳ ನೆಲೆಯಲ್ಲಿ ನೆಲೆಗೊಂಡಿದ್ದು, ಗುತ್ತುಗಳ ಮಾರ್ಗದರ್ಶಿಗಳಾಗಿ ಮತ್ತು ಊರಿನ ಧಾರ್ಮಿಕ

ಮಾರ್ಗದರ್ಶಕರಾಗಿ ಬ್ರಾಹ್ಮಣರು ನೆಲೆಗೊಂಡರು. ಜೊತೆಗೆ ಗ್ರಾಮದ ದೇವಸ್ಥಾನಗಳು ಮತ್ತು ದೈವಸ್ಥಾನಗಳು ಕೃಷಿ ಅಧಿಕಾರದ ಸುತ್ತ ಪ್ರಭಾವಿಸಿದವು. ರಾಜಪ್ರಭುತ್ವದ ಆಡಳಿತ ಈ ಸಾಂಸ್ಥಿಕ ಅಧಿಕಾರಗಳನ್ನು ವಾರಸಾ ಅಧಿಕಾರವನ್ನಾಗಿ ಮಾನ್ಯಮಾಡಿ ಅವುಗಳ ಯಥಾಸ್ಥಿತಿ ಕಾಪಿಟ್ಟಿರುವುದನ್ನು ಅರ್ಥೈಸಿಕೊಳ್ಳಬಹುದು.

ತುಳುನಾಡಿನ ಆಡಳಿತ ವಲಯಗಳಾದ ಕುಟುಂಬ (ತರವಾಡು) ಗುತ್ತು, ಊರು, ಮಾಗಣೆ, ಸೀಮೆ, ನಾಡು, ರಾಜ್ಯದ ನೆಲೆಗಟ್ಟುಗಳು ಇದೇ ತೆರನಾದ ಸಾಂಸ್ಥಿಕ ರಚನೆಯನ್ನು ಹೊಂದಿಕೊಂಡಿತ್ತು. ವಸಾಹತು ಆಳ್ವಿಕೆ ತುಳುನಾಡಿಗೆ ಪ್ರವೇಶ ಪಡೆಯುವಲ್ಲಿಯವರೆಗೆ ಈ ಸಾಂಸ್ಥಿಕ ರಚನೆಗಳು ಹೆಚ್ಚಿನ ಅಧಿಕಾರಗಳನ್ನು ಪಡೆದುಕೊಂಡಿದ್ದವು ಮಾತ್ರವಲ್ಲ ಕೃಷಿ ಅಧಿಕಾರದ ಸುತ್ತ ಸಮಾಜ ರಚನೆಯ ಸಂದರ್ಭದಲ್ಲಿ ಜಾತಿಗಳು ಪಂಗಡಸದೃಶ್ಯ ಸಂಘಟನೆಗಳಿಂದ ಬೆಳೆದು ವಿಕಾಸಗೊಂಡಿರುವುದನ್ನು ನೋಡಬಹುದು. ಸೀಮೆ, ಮಾಗಣೆಗಳಲ್ಲಿ ಜೈನರು ಅಧಿಕಾರಿಗಳಾಗಿದ್ದರೆ, ಗ್ರಾಮ ಮತ್ತು ಗುತ್ತುಗಳಲ್ಲಿ ಒಕ್ಕಲ್ಮರು ಇಲ್ಲವೇ ಕೃಷಿ ಅಧಿಕಾರ ಹೊಂದಿರುವ ಇತರ ಸಮುದಾಯಗಳ ಪ್ರಭಾವಿಗಳು ಮುಖ್ಯಸ್ಥರಾಗಿದ್ದರು. ಬ್ರಾಹ್ಮಣರು ಧಾರ್ಮಿಕ ಆಚರಣೆಗಳ ಮೂಲಕ ಎಲ್ಲವನ್ನು ಹತೋಟಿಯಲ್ಲಿಟ್ಟರು. ಉಳಿದ ಜಾತಿವರ್ಗಗಳ ಸ್ಥಾನಮಾನ, ರೀತಿ ನೀತಿ, ಅವುಗಳ ನಡುವಿನ ಸಂಬಂಧ ಒಳ, ಹೊರ ವ್ಯವಸ್ಥೆಯ ರೂಪುರೇಷೆಗಳನ್ನು ನಿರ್ಧರಿಸುವಲ್ಲಿ ಬ್ರಾಹ್ಮಣರನ್ನು ಒಳಗೊಂಡಂತೆ ಈ ಮೇಲ್ವರ್ಗಗದ ಸಮುದಾಯಗಳು ಅಧಿಕಾರವನ್ನು ಪಡೆದುಕೊಂಡವು.

## ಸಂಸ್ಕೃತಿ–ವಾರಸುದಾರಿಕೆ

ವಾರಸುದಾರಿಕೆ ರೂಪುಗೊಳ್ಳುವ ಹಂತದಲ್ಲಿ ಸಮಾಜ, ಸಂಸ್ಕೃತಿ, ನಾಗರೀಕತೆಗಳು ಬಹಳ ಮುಖ್ಯವಾಗುತ್ತದೆ. ಸಮಾಜಗಳ ವಿಕಾಸ ಸಂಸ್ಕೃತಿ ಮತ್ತು ನಾಗರೀಕತೆಗಳ ಬೆಳವಣಿಗೆಗೆ ಅನುವು ಮಾಡಿಕೊಡುತ್ತದೆ. ಸಂಸ್ಕೃತಿ ಮಾನವ ನಿರ್ಮಿತ ವ್ಯವಸ್ಥೆಗಳಿಂದ ಮಾನ್ಯತೆ ಪಡೆದು ಸಾಮಾಜಿಕ ಅಂತರ್ ಸಂಬಂಧಗಳಿಂದ ಸಂಲಗ್ನಗೊಂಡು ಸಮಾಜ ಜೀವನದ ಮಾದರಿಗಳ ಉಲ್ಲೇಖ ನೀಡುತ್ತದೆ. ನಾಗರೀಕತೆ ಬಹಳಷ್ಟು ಸಂಕೀರ್ಣ ವಿಷಯ ಆಗಿರುವುದರಿಂದ ವಿಸ್ತಾರ ಪ್ರದೇಶದ ಹರವನ್ನು ಹೊಂದಿರುತ್ತದೆ. ಸಂಸ್ಕೃತಿ ತನ್ನ ಬಹುಮುಖ ಲಕ್ಷಣಗಳಿಂದಾಗಿ ಮೋಹಕ ಶಬ್ದವಾಗಿದ್ದು ಯಥಾರ್ಥವಾಗಿ ಅದೊಂದು ಅಡಕು ಚೀಲದ ಹಾಗೇ ಜೀವನದ ಪೂರ್ಣಶ್ರೇಣಿಯನ್ನು ಒಳಗೊಳ್ಳುತ್ತದೆ. ಕೃಷಿ ವಿಧಾನಗಳು ಮತ್ತು ಅವುಗಳಿಗೆ ಸಂಬಂಧಿಸಿದ ತಾಂತ್ರಿಕತೆಗಳು ಹಾಗೂ ಐತಿಹ್ಯಗಳು, ಕುಟುಂಬ ರಚನೆಗಳು ಮತ್ತು ಅವುಗಳನ್ನು ಒಟ್ಟಿಗಿರಿಸಿರುವ ಲೇಪಗಳು, ಅವುಗಳನ್ನು ನಿರಾಕರಿಸಿರುವ ಶಕ್ತಿಗಳು, ತೊಟ್ಟಿಲಿನಿಂದ ಸಮಾಧಿಯ ವರೆಗಿನ ಜೀವನವನ್ನು ತುಯ್ದಾಡಿಸುವ ಸಾಮಾಜಿಕ ಪದ್ಧತಿಗಳು, ನಂಬಿಕೆಗಳು

ಮತ್ತು ಉತ್ಸವಗಳು ಅಥವಾ ಆಚರಣೆಗಳು, ಕ್ರೀಡೆ, ಪಂದ್ಯಗಳು ಮತ್ತು ಜೀವನಶೈಲಿಯ ವಿವರಗಳು ಅಥವಾ ಅದನ್ನು ಮಾಡುವ ಹಾಗೂ ನಿಯಂತ್ರಿಸುವ ಯೋಚನೆಗಳು-ಎಲ್ಲವೂ ಅದರೊಳಗಿವೆ.[91] ಆದುದರಿಂದ ಸಂಸ್ಕೃತಿಯ ರಚನೆ ಈ ಪ್ರದೇಶದಲ್ಲಿ ವಾಸ್ತವ್ಯ ಹೂಡಿದ ಎಲ್ಲಾ ಸಮುದಾಯಗಳ ಭೂಮಿಕೆ ಪ್ರಮುಖ ಪಾತ್ರವಹಿಸಿದ್ದರಿಂದ ತುಳುನಾಡಿನ ಸಂಸ್ಕೃತಿಯ ಮೇಲೆ ಯಾವುದೇ ಒಂದು ಸಮುದಾಯ ಏಕಸ್ವಾಮ್ಯದ ಹಕ್ಕನ್ನು ಮಂಡಿಸುವಂತಿಲ್ಲ. ಈ ಪ್ರದೇಶದ ಸಂಸ್ಕೃತಿ ರೂಪುಗೊಳ್ಳುವಲ್ಲಿ ಒಕ್ಕಲು, ಬಿಲ್ಲವ, ಮೊಗವೀರ, ಬ್ರಾಹ್ಮಣ, ಜೈನ ಗುಂಪುಗಳು, ಕೊರಗ, ಮತ್ತಿತ್ತರ ದಲಿತ ಸಮುದಾಯಗಳು ತುಳುವ ಪ್ರಪಂಚದ ರೂಪುವಿಕೆಗೆ ತಮ್ಮ ಅಮೂಲ್ಯ ಒಳಸೇರಿಕೆಗಳನ್ನು ಕೊಡುಗೆಯಾಗಿ ನೀಡಿದ್ದರಿಂದ ಮಾತ್ರವಲ್ಲ ಮುಂದುವರೆದು ಹಲವು ತುಳುವೇತರ ಅಂಗಭಾಗದವರು ಕೂಡಾ ಈ ಪ್ರದೇಶದ ಸಾಂಸ್ಕೃತಿಕ ಸ್ವರೂಪವನ್ನು ಸಮೃದ್ಧಗೊಳಿಸುವಲ್ಲಿ ತಮ್ಮ ಕೊಡುಗೆಗಳನ್ನು ನೀಡಿದ್ದಾರೆ. ಧಾರ್ಮಿಕ ನಂಬಿಕೆಮತ್ತು ಆಚರಣೆಗಳು, ದೇವರು ಮತ್ತು ದೇವರುಗಳನ್ನು ಒಲಿಸಿಕೊಂಡು ವಾರಸುದಾರಿಕೆಯನ್ನು ಸಾಂಸ್ಥೀಕರಣಗೊಳಿಸುವ ವೈಯುಕ್ತಿಕ ಮತ್ತು ಸಾಮೂಹಿಕ ಪ್ರಯತ್ನಗಳಾಗಿವೆ. ಜ್ಞಾನದಾಹ, ಸೌಂದರ್ಯಪ್ರಜ್ಞೆ, ಅನುಭವ, ಅವಿಷ್ಕಾರ ಇತ್ಯಾದಿ ಹೊಸ ಸೃಷ್ಟಿಗಳಿಗೆ ಅವಕಾಶ ಮಾಡಿಕೊಟ್ಟವು. ಇವುಗಳು ಮಾನವ ಜೀವನದ ವಿಕಾಸದ ಹಂತಗಳಲ್ಲಿ ಸಂಕೀರ್ಣಗೊಂಡು ಅವನ ಜೀವನ ನಿರ್ವಹಣೆಯ ಅನಿವಾರ್ಯತೆಗಳನ್ನು ಪೂರೈಸುವುದಕ್ಕಾಗಿ ವಸ್ತು ವಿಷಯಗಳು ಜನ್ಮತಾಳಿದವು. ಹೀಗಾಗಿ ಮಾನವನ ಅಂತರಂಗದ ಪಕ್ವತೆ ಹಾಗೂ ಅಂತರಿಕ ಜೀವನ ವ್ಯವಸ್ಥೆಯನ್ನು ಸಂಸ್ಕೃತಿ ಎಂದು ತಿಳಿಯಲಾಗುತ್ತದೆ.[92] ಒಟ್ಟಿನಲ್ಲಿ ಸಂಸ್ಕೃತಿ ಮತ್ತು ನಾಗರೀಕತೆಗಳು ಸೌಂದರ್ಯಪ್ರಜ್ಞೆ, ಧಾರ್ಮಿಕ ನಂಬಿಕೆ, ಸಾಮಾಜಿಕ ವಿಭಾಗ ಹಾಗೂ ವಿಭಿನ್ನ ಜಾಡಿನಲ್ಲಿರುವ ಅಧಿಕಾರ ರೂಪುಗೊಳ್ಳುವ ವ್ಯವಸ್ಥೆ ಇತ್ಯಾದಿಗಳನ್ನು ಸಂಕೇತಿಸುತ್ತದೆ. ಸಮಾಜಗಳು ಚಲನಶೀಲವಾಗಿರುವುದರಿಂದ ಸಮಾಜ, ಸಂಸ್ಕೃತಿ ಏಕಮುಖವಾಗಿರುವುದಿಲ್ಲ, ಅಲ್ಲದೇ ಯಾವುದೇ ಸಾಮಾಜಿಕ ರಚನೆ ತನ್ನಿಂದ ತಾನೇ ಸರಳವೂ ಆಗಿರುವುದಿಲ್ಲ. ಆದುದರಿಂದ ವಿವಿಧ ಸಮಾಜಗಳ ಸಂವಹನದಿಂದ ರೂಪಿತವಾದ ನಾಗರೀಕತೆ ಮತ್ತು ಸಂಸ್ಕೃತಿಗಳನ್ನು ಸಾಮಾನ್ಯ ಅರ್ಥಗಳಲ್ಲಿ ಪರಿಕಲ್ಪಿಸಿದಾಗ ಭಿನ್ನ ಚಿತ್ರಣಗಳನ್ನು ಪ್ರತಿಬಿಂಬಿಸುತ್ತವೆ.[93] ತುಳುನಾಡಿನ ಸಂಸ್ಕೃತಿ ವಿಶ್ಲೇಷಣೆಯ ವ್ಯಾಪ್ತಿಯಲ್ಲಿ ಬರುವ ಬಹುಮುಖ್ಯವಾದ ವಿಷಯವೇನೆಂದರೆ ವೈದಿಕ ಮತ್ತು ಅವೈದಿಕದ ಕಲ್ಪನೆ. ಪ್ರಧಾನ-ಅಧೀನ, ಮೇಲು-ಕೀಳು, ಶಿಷ್ಟ-ಪರಿಶಿಷ್ಟ, ದೇಶೀ-ಮಾರ್ಗ ಎಂಬ ತಳಹದಿಯ ಮೇಲೆ ಸಮಾಜ ನಿಂತಿರುವುದರಿಂದ ಸಮಾನತೆಯ ಮಾತುಗಳು ಹಿಂದಿನಿಂದಲೂ ಇದ್ದ ಶೋಷಣೆಗಳ ಮೂಲಕ ಯಜಮಾನಿಕೆಯ ಅಧಿಕಾರಗಳನ್ನು ಅಧಿಕೃತಗೊಳಿಸುವ ಕೆಲಸಗಳಷ್ಟೇ ಆಗಿರುವುದನ್ನು

ಗಮನಿಸಬೇಕಾಗುತ್ತದೆ.[94] ಆದುದರಿಂದ ತುಳುನಾಡು ಎಂದು ಕರೆಯಿಸಿಕೊಳ್ಳುವ ಭೂಪ್ರದೇಶದಲ್ಲಿ ವಾಸಿಸುತ್ತಿರುವ ತುಳುವರೆಲ್ಲರೂ ಒಂದೇ ರೀತಿಯ ಜೀವನಕ್ರಮ ರೂಢಿಸಿಕೊಂಡಿದ್ದಾರೆ ಎನ್ನುವ ಹೇಳಿಕೆ ಸರಿಯಲ್ಲ. ತುಳು ಸಂಸ್ಕೃತಿ ಎಂದಾಗ ತುಳು ಭಾಷೆ ಮಾತಾನಾಡುವರ ಸಂಸ್ಕೃತಿ ಎಂದು ಹೇಳಲು ಸಾಧ್ಯವಾಗುವುದಿಲ್ಲ. ತುಳು ಭಾಷೆ ಮಾತನಾಡುವ ಜನರು ಒಂದೇ ರೀತಿಯ ಜೀವನ ಕ್ರಮವನ್ನು ರೂಢಿಸಿಕೊಂಡಿಲ್ಲ ಬದಲಾಗಿ ಬೇರೆ ಬೇರೆ ಆಧಾರಗಳ ಮೇಲೆ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗುರುತಿಸಿಕೊಂಡಿದೆ ಎಂಬುವುದು ಚರಿತ್ರಕಾರರ ಅಭಿಮತವಾಗಿದೆ.[95]

## ---ಕೊನೆಟಿಪ್ಪಣಿ---

[1] ರೋಮಿಲಾ ಥಾಪರ್, ದ. ಪೆಂಗ್ವಿನ್ ಹಿಸ್ಟರಿ ಅಫ್ ಅರ್ಲಿ ಇಂಡಿಯಾ, ಹೊಸದೆಹಲಿ: ಪೆಂಗ್ವಿನ್, 2002, ಪುಟಗಳು 69–71.

[2] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲ್ಯೆಟ್ ಇನ್ ಟ್ರಾನ್ಸಿಷನ್ 1801–1970.

[3] ಅಮೃತ ಸೋಮೇಶ್ವರ, ತುಳು ಪಾಡ್ದನ ಸಂಪುಟ, ಪ್ರಸರಾಂಗ ಕನ್ನಡ ವಿ. ವಿ ಹಂಪಿ; 1997. ಬಳಿ, ಬಂಧುತ್ವದ ಕಲ್ಪನೆ, ಮಾತೃಪ್ರಧಾನತೆ ತುಳುನಾಡಿನ ಸಮಾಜ ರಚನೆಯ ವಿಶೇಷತೆ. ಒಂದೇ ಸಮುದಾಯವಾಗಿದ್ದ ಜನ ಭಿನ್ನ ಕಸುಬುಗಳನ್ನು ರೂಢಿಸಿಕೊಂಡ ಉದಾಹರಣೆಗಳು ಪಾಡ್ದನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

[4] ವಾಮನ ನಂದಾವರ, ಕೊಡಿಪು, ಸಂಪಾದನೆ, ವಿಶ್ವ ತುಳು ಸಮ್ಮೇಳನೊ ನೆಂಪು ಸಂಚಿ ಉಜಿರೆ; 2009. ಪುಟಗಳು 100–102; ಜಾತಿನಿಷ್ಠ ಮತ್ತು ಶ್ರೇಣಿಕೃತ ಸಮಾಜ ವ್ಯವಸ್ಥೆಯಲ್ಲಿ ಸಮಾನತೆ, ನಿರಾಂತಕವಾದ ಹೊಕ್ಕು ಬಳಕೆ ಹಾಗೂ ಸಹಪಂಕ್ತಿಗಳನ್ನು ನಿರೀಕ್ಷಿಸುವಂತಿಲ್ಲ ಎಂಬ ವಾದವನ್ನು ತುಳುಸಮಾಜದ ರಚನೆಗೆ ಸಂಬಂಧಿಸಿ ಸಮರ್ಥಿಸಿಕೊಂಡಿದ್ದಾರೆ.

[5] ಸ್ಯೆಯ್ಯದ್ ಅಬ್ದುಲ್ ಬಾರಿ, ನಾನ್ ಅಗ್ರೇರಿಯನ್ ಟಾಕ್ಸೇಷನ್ ಇನ್ ಕರ್ನಾಟಕ ಅಂಡರ್ ವಿಜಯನಗರ 1376–1565. ಅಪ್ರಕಟಿತ ಸಂಶೋಧನಾ ಪ್ರಬಂಧ, 1988 ಮಂ. ವಿ. ವಿ; ವಿಜಯ ಕುಮಾರ್ ಠಾಕೂರ್- ಹಿಸ್ಟಾರಿಯಾಗ್ರಫಿ ಆಫ್ ಇಂಡಿಯನ್ ಫ್ಯೂಡಲಿಸಂ; ಡಿ.ಎನ್.ಝಾ–ದ ಫ್ಯೂಡಲ್ ಆರ್ಡರ್. ಭಾರತೀಯ ಊಳಿಗಮಾನ್ಯ ವ್ಯವಸ್ಥೆಯ ವಿಶ್ಲೇಷಣೆ ಮಾಡಿದ ಪ್ರಮುಖ ಚಿಂತಕರು.

[6] ಕೇಶವನ್ ವೇಲುತಾಟ್, ದ ಅರ್ಲಿ ಮಿಡಿವಲ್ ಇನ್ ಸೌತ್ ಇಂಡಿಯ ಒಕ್ಸಪರ್ಡ ಯುನಿವರ್ಸಿಟಿ ಪ್ರೆಸ್, ಹೊಸದೆಹಲಿ: 2009, ಪುಟ 93.

[7] ಮೋಹನಕೃಷ್ಣ ರೈ, ತುಳುನಾಡು ಕನ್ನಡ ನುಡಿ, ಹಂಪಿ: ವಿ.ವಿ ಪ್ರಸರಾಂಗ, 2011, ಪುಟಗಳು 78–150.

[8] ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, ದೆಹಲಿ: ಕಲ್ಪಾಸ್ ಪಬ್ಲಿಕೇಷನ್ಸ್, 2005.

[9] ಸೌತ್ ಇಂಡಿಯಾ. ಇನ್‌ಸ್ಕ್ರಿಪ್ಷನ್ಸ್, ಸಂಪುಟ 7, ಸಂಖ್ಯೆ 252, 262; ಉದಾಹರಣೆಗೆ ಮೂಲ್ಕಿಯ ದುಗ್ಗಣ ಸಾವಂತ 3000; ನಾಡು, ಸೀಮೆ, ಮಾಗಣೆ, ಗುತ್ತುಗಳನ್ನು ಆಳುಗಳ ಸಂಖ್ಯೆಯ ಮೂಲಕ ಗುರುತಿಸಿರುವುದು. (ಮುಂದೆ ಸೌ.ಇ.ಇ ಎಂಬುದಾಗಿ)

[10] ಪಿ. ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಉಡುಪಿ; 1975, ಪುಟ 158.

[11] ಇನವಳ್ಳಿ ಬಳ್ಳಾಲನು ಹರೇಕಳ ಸಾವಿರ ಸೀಮೆಯನ್ನು ಆಳುತ್ತಿದ್ದ. ಪಾವೂರು, ಹರೇಕಳ, ಕೋಟೆತಡಿ, ಕೋಟಾರೆ (ಕೋಟ್ರಗುತ್ತು) ಪಟ್ಟಮೊಗರು, ಡೆಬ್ಬೆಲಿ, ಸಂಪೈಗಡಿ, ಕಡೆಂಜ ಪರಾರಿ, ಕಳ್ಳಿಮಾರು, ಮಾಗಂದಡಿ, ಮತ್ತು ಅಂಬ್ಲಮೊಗರು ಅವನ ಆಳ್ವಿಕೆಗೆ ಒಳಪಟ್ಟ ಪ್ರಮುಖ ಗುತ್ತುಗಳಾಗಿದ್ದವು.

[12] ಪಿ.ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಕಲ್ಯಾಣಪುರ 1975. ಪುಟಗಳು 158–159; ಗುರುರಾಜ ಭಟ್ಟರು ತುಳುನಾಡಿನ ಗುತ್ತುಮನೆತನಗಳ ಬಗ್ಗೆ ವಿಸ್ತೃತ ಮಾಹಿತಿ ನೀಡಿದ್ದಾರೆ. ಪಾಡ್ದನಗಳನ್ನು ಅವಲೋಕಿಸಿದಾಗ ವಸಾಹತುಪೂರ್ವದ ವ್ಯವಸ್ಥೆಗಳಲ್ಲಿ ಗುತ್ತುಮನೆತನಗಳು ಕೃಷಿ ಅಧಿಕಾರ ಹೊಂದಿದ್ದ ಎಲ್ಲಾ ಸಮುದಾಯಗಳಲ್ಲಿ ಅಸ್ತಿತ್ವದಲ್ಲಿದ್ದನ್ನು ಗುರುತಿಸಿವೆ. ರಮಾನಾಥ ಕೋಟೆಕಾರ್, ತುಳುನಾಡಿನ ಬಿಲ್ಲವರು ಒಂದು ಅಧ್ಯಯನ, ಸುಂದರಿ ಪ್ರಕಾಶನ, ಕೋಟೆಕಾರ್: 2012, ಪುಟಗಳು 164–187; ತುಳುನಾಡಿನ ಬೇರೆ ಬೇರೆ ಕೃಷಿಕ ಸಮುದಾಯದ ಮನೆತನಗಳು ಸಹ ಗುತ್ತು ಮಾದರಿಯಲ್ಲಿ ಅಧಿಕಾರ ನಡೆಸಿದ ಮಾಹಿತಿಗಳನ್ನು ಕಾರ್ಯಕ್ಷೇತ್ರದ ಮೂಲಕ ಕಲೆಹಾಕಿದ್ದಾರೆ.

[13] ಪಿ.ಗಣಪಯ್ಯ ಭಟ್, ತೌಳವ, ಸಿಂಧೂರ ಪ್ರಕಾಶನ ಮೂಡಬಿದಿರೆ, 1997 ಪುಟ 17.

[14] ಪಿ. ಗಣಪಯ್ಯ ಭಟ್, ತೌಳವ, ಸಿಂಧೂರ ಪ್ರಕಾಶನ ಮೂಡಬಿದಿರೆ, 1997 ಪುಟ 14. ಪರ್ಸಸ್ಪೆಕ್‌ಟಿವ್ಸ ಆನ್ ದಕ್ಷಿಣಕನ್ನಡ ಆಂಡ್ ಕೊಡಗು, ದಶಮಾನೋತ್ಸವ ಸ್ಮರಣ ಸಂಚಿಕೆ ಮಂ.ವಿ.ವಿ 1991.

[15] ವಸಂತ ಶೆಟ್ಟಿ ಬಿ, ದಕ್ಷಿಣ ಕನ್ನಡದಲ್ಲಿ ನೂತನ ಶಿಲಾಯುಗ, ಇತಿಹಾಸ ದರ್ಶನ, ಸಂಪುಟ 2, 1987 ಪುಟಗಳು 34–35; ಪಿ. ಗಣಪಯ್ಯ ಭಟ್, ತೌಳವ, ಸಿಂಧೂರ ಪ್ರಕಾಶನ ಮೂಡಬಿದಿರೆ, 1997 ಪುಟಗಳು 14–18.

[16] ರೋಮಿಲಾ ಥಾಪರ್, ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002, ಪುಟ 96.

[17] ಗುರುಕ್ಕಳ್ ರಾಜನ್, ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ. ಎಚ್. ಸಿ. 2004 ಪುಟ 66.

[18] ಪರ್ಸಸ್ಪೆಕ್‌ಟಿವ್ಸ ಆನ್ ದಕ್ಷಿಣಕನ್ನಡ ಆಂಡ್ ಕೊಡಗು, ದಶಮಾನೋತ್ಸವ ಸ್ಮರಣ ಸಂಚಿಕೆ ಮಂಗಳೂರು ವಿಶ್ವವಿದ್ಯಾನಿಲಯ 1991.

---

19 ರೋಮಿಲಾ ಥಾಪರ್, ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002, ಪುಟಗಳು 94–95.

20 ಪಿ. ಗಣಪಯ್ಯ ಭಟ್, ತೌಳವ, ಸಿಂಧೂರ ಪ್ರಕಾಶನ ಮೂಡಬಿದಿರೆ, 1997 ಪುಟ 20.

21 ಮೋಹನಕೃಷ್ಣ ರೈ ಕೆ., ತುಳು ಸಂಸ್ಕೃತಿ ಚತುರ್‌ಮುಖಿ ಅಧ್ಯಯನ, ಪ್ರಸಾರಾಂಗ, ಕನ್ನಡ. ವಿ. ವಿ ಹಂಪಿ 1999, ಪುಟಗಳು 1–21.

22 ಸುಬ್ಬಣ ರೈ ಎ., ದಕ್ಷಿಣಕನ್ನಡ ಜಿಲ್ಲೆಯ ಐತಿಹ್ಯಗಳು, ಮಾಣಿ ಜೂನಿಯರ್ ಛೇಂಬರ್ ಮಾಣಿ, 1994. ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಹಿಂದೆ ವಾಸ್ತವವಾಗಿ ನಡೆದದ್ದೆ ಎಂಬುವುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿಡುವ ಗದ್ಯರೂಪದ ನಿರೂಪಣೆಯಾಗಿದೆ.

23 ಉಪ್ಪಂಗಳ ರಾಮಭಟ್ಟ., ವೇಲಾಪುರ ಮಹಾತ್ಮೆ, ಉಡುಪಿ, 2002: ಪುಟಗಳು 20–21; ಅಭಯಕುಮಾರ್ ಕೌಕ್ರಾಡಿ, ಮುಗೇರರು ಜನಾಂಗ, ಜಾನಪದೀಯ ಅಧ್ಯಯನ, 1997. ವಾಸುದೇವನ್ ಸಿ, ದಿ.ಕೊರಗಾಸ್–ದ ಫರ್ಗಟನ್ ಲಾಟ್, ದಿ. ಪ್ರಿಮಿಟವ್ ಟ್ರೈಬ್ ಆಫ್ ತುಳುನಾಡು, ತ್ರಿಚೂರ್ 1998.

24 ಸಾಲೆತ್ತೂರ್ ಬಿ.ಎ., ಏನ್ಸ್ಯಂಟ್ ಕರ್ನಾಟಕ; ಹಿಸ್ಟರಿ ಆಫ್ ತುಳುವ, ಒರಿಯೆಂಟ್ ಬುಕ್ ಎಜೆನ್ಸಿ ಪೂನಾ, 1936. ಅವರ ಬರವಣಿಗೆ ಸ್ವಾತಂತ್ರ ಹೋರಾಟದ ಸಂದರ್ಭದಲ್ಲಿ ಬರೆದಿರುವುದರಿಂದ ಆ ಸಂದರ್ಭದ ರಾಷ್ಟ್ರೀಯವಾದಿ ಚರಿತ್ರಕಾರರಂತೆ ತುಳುವರನ್ನು ಹೋರಾಟಗಾರರೆಂಬ ವಾದವನ್ನು ಪ್ರತಿಪಾದಿಸಿರಬಹುದು.

25 ಮೂರು ಸುಲಿದ ತೆಂಗಿನಕಾಯಿಯನ್ನು ತಲಾ ಒಂದೊಂದರಂತೆ ದೈವಸ್ಥಾನದ ಮುಂಭಾಗದಲ್ಲಿ ಗಡಿ ಹಿಡಿದವರು ನಿಂತಿರುವ ಯುವಕರ ಹತ್ತಿರ ಗಾಳಿಯಲ್ಲಿ ಹಾರಿಸುತ್ತಾರೆ. ಯುವಕರು ಆ ಕಾಯಿಯನ್ನು ಹಿಡಿದು ದೈವಸ್ಥಾನಕ್ಕೆ ಒಂದು ಪ್ರದಕ್ಷಿಣೆ ಬರಬೇಕು. ಈ ರೀತಿ ಪ್ರದಕ್ಷಿಣೆ ಬರುವಾಗ ಕಾಯಿಗಳು ಒಬ್ಬರಿಂದ ಒಬ್ಬರಿಗೆ ಬದಲಾಗುತ್ತಿರುತ್ತದೆ. ಧ್ವಜಸ್ತಂಭದ ಮುಂಭಾಗಕ್ಕೆ ಬರುವಾಗ ಯಾರ ಕೈಯಲ್ಲಿ ತೆಂಗಿನಕಾಯಿ ಇರುವುದೋ ಅವರು ಆ ಕಾಯಿಯನ್ನು ಒಡೆಯುತ್ತಾರೆ.

26 ಧಾರ್ಮಿಕ ಕ್ಷೇತ್ರಗಳಲ್ಲಿ ಉತ್ಸವದ ವೇಳೆ ನಡೆಯುವ ಸ್ಪರ್ಧೆಗಳಲ್ಲಿ ಮುಖ್ಯವಾದುದು. ಸುಲಿದ ತೆಂಗಿನಕಾಯಿಯ ಹೊರಮೈಯನ್ನು ನುಣುಪುಗೊಳಿಸಿ ತೆಂಗಿನ ಎಣ್ಣೆಯಲ್ಲಿ ಮುಳುಗಿಸಿಡುತ್ತಾರೆ. ಬಲಿಷ್ಠ ಯುವಕನೊಬ್ಬನು ಧ್ವಜಸ್ತಂಭದ ಮುಂದೆ ಮೊಣಕಾಲಿನಲ್ಲಿ ಕುಳಿತು ಎಣ್ಣೆಯಲ್ಲಿ ಮುಳುಗಿಸಿ ಇಟ್ಟ ತೆಂಗಿನಕಾಯಿಯನ್ನು ನೆಲಕ್ಕೆ ಅದುಮಿ ಇಡುತ್ತಾನೆ. ಸ್ಪರ್ಧೆಯಲ್ಲಿ ಭಾಗವಹಿಸುವ ಇತರ ಯುವಕರು ಸುತ್ತಲೂ ನೆರೆದು ನೆಲದಲ್ಲಿ ಅದುಮಿ ಇಟ್ಟಿರುವ ಕಾಯಿಯನ್ನು ತಪ್ಪಿಸಿ ಮೇಲೆತ್ತಬೇಕು, ಈ ರೀತಿ ಕಾಯಿಯನ್ನು ಯಾರು ಮೇಲೆತ್ತುತ್ತಾನೋ ಅವನು ಸ್ಪರ್ಧೆಯ ವಿಜಯಿ.

27 ಷ.ಶೆಟ್ಟರ್ ಶಂಗಂ ತಮಿಳಗಂ ಮತ್ತು ಕನ್ನಡನಾಡು–ನುಡಿ, ಪುಟಗಳು 133–147. ಬಿಲ್ಲು ವಿದ್ಯೆಯಲ್ಲಿ ಪ್ರವೀಣರಾಗಿದ್ದ ಜನಾಂಗದ ಬಗ್ಗೆ ಸಂಗಂ ಸಾಹಿತ್ಯ ಉಲ್ಲೇಖಿಸುತ್ತದೆ. ದಕ್ಷಿಣಭಾರತದ ಕೆಲವೊಂದು ಸಮುದಾಯಗಳಲ್ಲಿ ಮುಖ್ಯವಾಗಿ ತುಳುವದ ಬಿಲ್ಲವ ಸಮುದಾಯವು ಬಿಲ್ಲು ವಿದ್ಯೆ (ತುಳು ಭಾಷೆಯಲ್ಲಿ 'ಪಗರಿ') ಯಲ್ಲಿ ಪಾರಂಗತರು ಎಂಬ ವಿಚಾರ ಮೌಖಿಕ ಸಾಹಿತ್ಯಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಉದಾಹರಣೆ ಕೋಟಿಚೆನ್ನಯ್ಯಯರು ಪಗರಿ ವಿದ್ಯೆಯಲ್ಲಿ ನಿಷ್ಣಾತರು. ಇದನ್ನು ನೆನಪಿಸುವ ಜನಪದ ಆಟಗಳು ಚಾಲ್ತಿಯಲ್ಲಿವೆ. ಮಾತ್ರವಲ್ಲ ಕೋಟಿಚೆನ್ನಯ್ಯರ ಗರಡಿಯಲ್ಲಿ ಜರಗುವ 'ಸಾದಗೋ' ಉತ್ಸವ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಇವುಗಳೆಲ್ಲ ಇಂದು ವಾರ್ಷಿಕವಾಗಿ ಉತ್ಸವ ರೀತಿಯಲ್ಲಿ ಗರಡಿಗಳಲ್ಲಿ ಜರಗುತ್ತಿವೆ. ಜೊತೆಗೆ ಆಲಡೆಯ ಕ್ಷೇತ್ರಗಳಲ್ಲಿ ನಡೆಯುವ ಅಂಬೊಡಿ ಉತ್ಸವಗಳಲ್ಲಿ ಈಗಲೂ ಎರಡು ಗುತ್ತುಗಳ ಮೂಲದಾಳುಗಳು ಹೋರಾಡುವ ಆಚರಣೆ ಇದೆ. ಪಾಡ್ದನಗಳಲ್ಲಿ ಅಂಬೊಡಿ ಕಳಗಳಲ್ಲಿ ಸಾಮಾನ್ಯವಾಗಿ ಮುಂಡಾಲ ವರ್ಗದವರು ಎರಡು ಗುಂಪುಗಳಾಗಿ ಬಡಿಗೆಯಲ್ಲಿ ಅಣುಕು ಹೋರಾಟ ಮಾಡುತ್ತಾರೆ. ಆದರೆ ಕಳದಲ್ಲಿ ನಡೆಯುವ ಹೋರಾಟ ಬಡಿಗೆಯದ್ದು. ಕವತ್ತಾರಿನಲ್ಲಿ ಜಾತ್ರೆ ಮುಕ್ತಾಯ ಕೂಡಾ ಅಂಬೋಡಿ ಜಾತ್ರೆ ಸಂಪನ್ನಗೊಂಡ ನಂತರವೇ ಮುಗಿಯುತ್ತದೆ. ಮುಂಡಾಲರು, ಬಾಕುಡರು ದೈವಗಳ ಪಾತ್ರಿಗಳಾಗಿ, ಅರ್ಚಕರಾಗಿ ಮತ್ತು ಮೂಲದವರಾಗಿ ಕೃಷಿ ಕಾರ್ಯದಲ್ಲಿ ತೊಡಗಿಸಿಕೊಂಡವರಾಗಿದ್ದಾರೆ. ಕವತಾರಿನಲ್ಲಿ ಅಂಬೋಡಿ ನಡೆಯುವ ಗದ್ದೆಗೆ ಅಂಬೋಡಿಮಾರ್ ಎಂದು ಕರೆಯುತ್ತಾರೆ. ಅಂಬು ಎಂದರೆ ಬಾಣ, ಇಡಿ ಅಂದರೆ ಚುಚ್ಚು. ಬೇಟೆ ಆರ್ಥಿಕತೆಯ ಸಮುದಾಯದ ಅನನ್ಯತೆ–ತುಳುನಾಡಿನಲ್ಲಿ ಬಹುಸಂಖ್ಯಾತ ಬಿಲ್ಲವರು ಬಿಲ್ಲು ವಿದ್ಯೆಯಲ್ಲಿ ಪ್ರವೀಣರೆಂಬ ಪ್ರತೀತಿ ಇದೆ. ಉದಾಹರಣೆಗೆ ಬಿಲ್ಲವರು ಕೋಟಿಚೆನ್ನಯ, ಕಾಂತಬಾರೆ–ಬುಧಬಾರೆಯರನ್ನು ಸಾಂಸ್ಕೃತಿಕ ನಾಯಕರೆಂದು ಪ್ರತಿಪಾದಿಸಿರುವುದಲ್ಲದೇ ಗರಡಿಗಳಲ್ಲಿ ವೀರರ ಆರಾಧನೆ ಹೇಳಿಕೆಗಳನ್ನು ಸಮರ್ಥಿಸುತ್ತದೆ. ಊರಿನ ಪಾಳೆಯಗಾರ ತನ್ನ ನಿಗದಿತ ಸ್ಥಳದ ನಿಗದಿತ ಆಸನದಲ್ಲಿ ಕುಳಿತು ವೀಕ್ಷಿಸುತ್ತಾನೆ. ಮುಂಡಾಲ ವರ್ಗದ ದೈವ ಕೋಟೆದ ಬಬ್ಬು ದೈವ ಮಾಧ್ಯಮನ ಮೂಲಕ ತನ್ನ ಗುಡಿಯಿಂದ ಇಲ್ಲಿಗೆ ಬಂದು ಅಂಬೊಡಿಯನ್ನು ವೀಕ್ಷಿಸುತ್ತಾನೆ.

28 ಅಮೃತ ಸೋಮೆಶ್ವರ, ಅಬ್ಬಕ್ಕ ಸಂಕಥನ, ಸಂಪಾದನ ಗ್ರಂಥ, ಉಳ್ಳಾಲ; 2011, ಪುಟ 319;

ತೆಂಗಿನ ಗರಿಗಳಿಂದ ಮಾಡಿದ ಕಟ್ಟುಗಳನ್ನು ಬೆಂಕಿಯಿಂದ ಉರಿಸಿ ಹೊಡೆದಾಡುವ ಸಂಪ್ರದಾಯ. ಈ ಯುದ್ಧ ಕೌಶಲ್ಯ ಪೋರ್ಚುಗೀಸ್ ಮತ್ತು ಅಬ್ಬಕ್ಕನ ಸಂದರ್ಭದ ಯುದ್ಧ ಸಮಯದಲ್ಲಿ ಪ್ರಯೋಗಿಸಲಾಗಿತ್ತು ಎಂಬ ಉಲ್ಲೇಖಗಳಿವೆ.

29 ಫೆಬ್ರವರಿ ತಿಂಗಳಿನಲ್ಲಿ ಬರುವ ತುಳುವರ ಮೂರು ದಿನದ ಆಚರಣೆ-ಭೂಮಿ ರಜಸ್ವಲೆಯಾಗುವ ದಿನಗಳೆಂದು ಕರೆಯುವ ವಾಡಿಕೆ ಇದೆ. ಈ ಸಂದರ್ಭಗಳಲ್ಲಿ ಭೂಮಿಯ ಮೇಲೆ ಯಾವುದೇ ರೀತಿಯ ಕೃಷಿ ಹತ್ಯಾರಗಳನ್ನು ಬಳಸುವಂತಿಲ್ಲ.

30 ತುಳುನಾಡಿನಲ್ಲಿ ಕೃಷಿ ಕಾರ್ಯ ಆರಂಭವಾಗುವುದಕ್ಕಿಂತ ಮುಂಚೆ ಕಾಡು ಪ್ರಾಣಿಗಳ ಉಪಟಳವನ್ನು ಕಡಿಮೆ ಮಾಡುವ ನೆಲೆಯಲ್ಲಿ ಈ ಆಚರಣೆಯ ಚಾಲಿಯಲ್ಲಿದೆ.

31 ಷ. ಶೆಟ್ಟರ್, ಶಂಗಂ-ತಮಿಳಗಂ ಮತ್ತು ಕನ್ನಡನಾಡು-ನುಡಿ, ಪುಟ 139.

32 ಗುರುರಾಜ ಭಟ್, ತುಳುನಾಡು, 2009. ಪುಟಗಳು 20-33, 45.

33 ಗುರುರಾಜ ಭಟ್, ತುಳುನಾಡು 2009. ಪುಟಗಳು 20-33, 45.

34 ಶೈಲಾ ಟಿ ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶನ ಬೆಂಗಳೂರು 2002 ಪುಟ 6.

35 ಗುರುರಾಜ ಭಟ್, ತುಳುನಾಡು, 2009. ಪುಟ 12; ವಿವೇಕ ರೈ ಬಿ.ಎ ತುಳು ಸಾಹಿತ್ಯ ಚರಿತ್ರೆ, ಪುಟ 9.

36 ಫ್ರಾನ್ಸಿಸ್ ಬುಖಾನನ್, ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, ಪುಟಗಳು 213-214.

37 ಪಿ.ಗುರುರಾಜ ಭಟ್, ತುಳುನಾಡು, ಉಡುಪಿ, 2009 ಪುಟಗಳು 7-19.

38 ಎ.ಎಸ್ ಪ್ರಭಾಕರ, ಆಧಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ 2006.

39 ಎ.ಎಸ್ ಪ್ರಭಾಕರ, ಆಧಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ-2006.

40 ದೇವಿಪ್ರಸಾದ ಚಟ್ಟೋಪಾದ್ಯಾಯ, ಲೋಕಾಯತ, ಸಂಗ್ರಹಾನುವಾದ ಜಿ. ರಾಮಕೃಷ್ಣ, ಬೆಂಗಳೂರು 2011, ಪುಟಗಳು 174-175.

41 ಅ. ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟಗಳು 132-133.

42 ಶೈಲಾ ಟಿ, ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶನ ಬೆಂಗಳೂರು 2002.

43 ರಾಜನ್ ಗುರುಕ್ಕಳ್ ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ, ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್. ಸಿ 2004, ಪುಟ 76.

44 ರಾಜನ್ ಗುರುಕ್ಕಳ್ ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ, ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್.ಸಿ 2004 ಪುಟ 76.

45 ಸಧ್ಯಂತರಗೊಂಡ ಸಮುದಾಯಗಳು ಎಲ್ಲಾ ವಿಧದ ಆರ್ಥಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಿರುವ ವಿಚಾರಗಳು.

46 ರೋಮಿಲಾ ಥಾಪರ್,ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002, ಪುಟ 74.

47 ಪಿ. ಗಣಪಯ್ಯ ಭಟ್, ತೌಳವ, ಸಿಂಧೂರ ಪ್ರಕಾಶನ ಮೂಡಬಿದಿರೆ, 1997ಪುಟ 20.

48 ಆರ್.ಎಸ್ ಶರ್ಮ ಪ್ರಾಚೀನ ಭಾರತದಲ್ಲಿ ಶೂದ್ರರು, ಕನ್ನಡ ಅವೃತ್ತಿ, ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು.2006 ಪುಟ 171.

49 ಆರ್. ಎಸ್ ಶರ್ಮ, ಪ್ರಾಚೀನ ಭಾರತದಲ್ಲಿ ಶೂದ್ರರು ಕನ್ನಡ ಅವೃತ್ತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು-1, ಎರಡನೇ ಮುದ್ರಣ 2006, ಪುಟ 66.

50 ಆರ್.ಎಸ್ ಶರ್ಮ, ಮೆಟಿರಿಯಲ್ ಕಲ್ಚರ್ ಅಂಡ್ ಸೋಷಲ್ ಪಾರ್ಮಶನ್ ಇನ್ ಎನಿಶಿಯಂಟ್ ಇಂಡಿಯಾ.

51 ಎ.ಎಸ್ ಪ್ರಭಾಕರ., ಆಧಿವಾಸಿ ಆಖ್ಯಾನ, ಸಮುದಾಯ ಅಧ್ಯಯನಕ್ಕೊಂದು ಆಕರ, ಸಂಪಾದನ ಗ್ರಂಥ 2006 ಸಿದ್ಧಾರ್ಥ ಪ್ರಕಾಶನ.

52 ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ ಕನ್ನಡ ವಿ.ವಿ ಹಂಪಿ, 2004 ಪುಟಗಳು 15-17.

53 ರಾಜನ್ ಗುರುಕ್ಕಳ್ ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್. ಸಿ 2004. ಪುಟಗಳು 65-66.

54 ಎ.ಎಸ್ ಪ್ರಭಾಕರ ಆಧಿವಾಸಿ ಆಖ್ಯಾನ-ಸಮುದಾಯ ಅಧ್ಯಯನಕ್ಕೊಂದು ಆಕರ (ಸಂ) 2006, ಸಿದ್ಧಾರ್ಥ ಪ್ರಕಾಶನ.

55 ರೋಮಿಲಾ ಥಾಪರ್, ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002, ಪುಟಗಳು 80-81.

56 ಪೀಟರ್.ಜೆ. ಕ್ಲಾಸ್., ತುಳುವ ದರ್ಶನ ಅನುವಾದ ನಾವಡ ಎ.ವಿ, ಸುಭಾಶ್ಚಂದ್ರ ಕುಂದಾಪುರ, 1987.

57 ಶ್ಯಾಮ್ ಭಟ್ಟ, ಸೌತ್ ಕೆನರಾ 1799-1860, ನ್ಯೂದಿಲ್ಲಿ 1998. ಪುಟ 85. ಮೂಲವರ್ಗದ ಆಸ್ತಿ ಎಂದರೆ ಪಿತ್ರಾರ್ಜಿತ ವಂಶಪಾರಂಪರ್ಯ ಆಸ್ತಿ. ಮೂಲವರ್ಗ ಸಂಸ್ಕೃತದ ಮೂಲ್ ಶಬ್ದದಿಂದ ಬಂದಿದೆ.

58 ಕೆ. ವಿ ರಮೇಶ, ತುಳುನಾಡಿನ ಇತಿಹಾಸ, ಉಡುಪಿ 1969. ಪುಟ 135.

59 ಸೌ.ಇ.ಇ ಸಂ.7, ನಂಬ್ರ 215, 288, 319, 342, 344,385.
ಎ.ಆರ್.ಎಸ.ಐ.ಇ 1928-29 ನಂ 69, 1977-1978 ನಂ 163, 1978-1979 ನಂ 175.

60 ಜಗದೀಶ ಶೆಟ್ಟಿ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ.

61 ಇಂಡಿಯನ್ ಆಂಟಿಕ್ವೇರಿ, 1910 ಪುಟ 193.

62 ಆರ್, ಎಸ್ ಶರ್ಮ, ಪ್ರಾಚೀನ ಭಾರತದಲ್ಲಿ ಶೂದ್ರರು, ಕನ್ನಡ ಅವೃತ್ತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು-1, ಎರಡನೇ ಮುದ್ರಣ 2006, ಪುಟಗಳು 85-90.

63 ಸೈಯ್ಯದ್ ಅಬ್ದುಲ್ ಬಾರಿ,ನಾನ್ ಅಗ್ರೇರಿಯನ್ ಟ್ಯಾಕ್ಸೇಷನ್ ಇನ್ ಕರ್ನಾಟಕ ಅಂಡರ್ ವಿಜಯನಗರ 1376-1565, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ, 1988. ಶ್ರಮ ಆಧಾರಿತವಾಗಿ ಒಂದೇ ಸಮುದಾಯ 5 ವೃತ್ತಿ ಆಧಾರಿತ ಜಾತಿಗಳಾಗಿ ರೂಪುಗೊಂಡಿರುವ ಕಲ್ಲುರ್ಟಿ ಪಾಡ್ದನವನ್ನು ವಿಶ್ಲೇಷಿಸಿದ್ದಾರೆ. ಪುಟಗಳು 79, 85-87.

64 ಕನ್ನಡದ ಬಾಳು ತುಳುವಿನಲ್ಲಿ ಪಾಲು ಎಂಬ ಶಬ್ದಾರ್ಥವಾಗಿದೆ. ಉದಾ: ಅಣ್ಣೆರೆಪಾಲು, ಗುಡ್ಡುಪಾಲು, ನಾರ್ಣಸೆಟ್ಟಿಪಾಲು-ಇದು ಬೇರೆ ಬೇರೆ ವ್ಯಕ್ತಿಗಳು ಭೂಮಿಯನ್ನು ಹೊಂದಿದ್ದ ಬಗ್ಗೆ ಮಾಹಿತಿ ಕೊಡುತ್ತದೆ.

65 ಕೆ. ವಿ ರಮೇಶ, ತುಳುನಾಡಿನ ಇತಿಹಾಸ, ರಾ.ಕ.ಗೊ.ಪೈ ಸಂಶೋಧನ ಕೇಂದ್ರ ಉಡುಪಿ; 1968, ಪುಟ 73. ಪಿ. ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಇಸ್ಟರಿ ಅಂಡ್ ಕಲ್ಚರ್, ಉಡುಪಿ, ಕಲ್ಯಾಣಪುರ 1975 ಪುಟ 198; ಬಾಳು, ಬಾಳಿಕೆ ಎಂಬ ಬೇರೆ ಬೇರೆ ಶಬ್ದಗಳು ಬಳಕೆಯಲ್ಲಿದ್ದು ಕೃಷಿ ಭೂಮಿಯ ವಿಸ್ತಾರಕ್ಕೆ ಸಂಬಂಧಿಸಿದುದಾಗಿದೆ. ಕೃಷಿ ಭೂಮಿಯಲ್ಲಿ ಮೂರು ವಿಧ. ಬಯಲು, ಮಜಲು, ಬೆಟ್ಟು. ಪೂರ್ವಜರಿಂದ ಬಂದ ಭೂಮಿಯನ್ನು ಮೂಲದ ಬಾಳು ಎಂದು ಕರೆಯುತ್ತಾರೆ.

66 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ. ಸಾ. ಪ ಬೆಂಗಳೂರು, 2004. ಅಜಲಿನ ವ್ಯವಸ್ಥೆ-ಒಂದು ಗ್ರಾಮದ, ಮಾಗಣೆಯ, ಸೀಮೆಯ ನಿತ್ಯ ವ್ಯವಹಾರಗಳಿಗೆ ಸಂಬಂಧಪಟ್ಟಂತಹ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಘಟಕ ಅಜಲು. ಗ್ರಾಮದ ಅಧಿಕಾರದ ಒಟ್ಟು ಘಟಕವನ್ನು ಅಜಲು ಎಂದು ಕರೆಯುತ್ತಿದ್ದರು. ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪ್ರಸಾರಾಂಗ ಕ.ವಿ.ವಿ ಹಂಪಿ; 1999, ಪುಟ 25;

67 ಕಾರ್ಯಕ್ಷೇತ್ರದ ಮಾಹಿತಿ: ದೇವಸ್ಥಾನಗಳಲ್ಲಿ ನಡೆಯುವ ಕಳಶ ಸ್ನಾನದ ವಿದಿ-ವಿಧಾನ, ಜವಬ್ದಾರಿ ಇಲ್ಲವೇ ಭೂಮಿಯ ಒಡೆತನವನ್ನು ಪಡೆಯುವ ಪ್ರಕ್ರಿಯೆಗಳಲ್ಲಿ ಒಂದು. ವಾದಿರಾಜ ಉಪಾಧ್ಯಾಯ ಕೊಲೆಕಾಡಿಯವರ ಪ್ರಕಾರ ವರ್ತಮಾನದಲ್ಲಿ ಭೂಮಿಯ ಒಡೆತನ ಪಡೆಯುವ ಪ್ರಕ್ರಿಯೆಗಳಲ್ಲಿ ಈ ವಿಧಿ-ವಿಧಾನಗಳು ಪ್ರಾಮುಖ್ಯತೆಯನ್ನು ಕಳೆದುಕೊಂಡು ನೇಪಥ್ಯಕ್ಕೆ ಸರಿದಿವೆ.

68 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು, 2004; ಪುಟಗಳು 25-34.

69 ತುಳುನಾಡಿನಲ್ಲಿ ಈ ಬೆಳವಣಿಗೆಗಳನ್ನು ಚರ್ಚಿಸಿದಾಗ ಪ್ರಬಲ ಆರ್ಥಿಕತೆಯ ಪ್ರಭಾವದಿಂದಾಗಿ ಭೂಮಿಯ ಮೇಲೆ ಸಾಮುದಾಯಿಕ ಅಧಿಕಾರ ಹೊಂದಿದ್ದ ಸಮುದಾಯಗಳೆಲ್ಲ ಆಧೀನ ಆರ್ಥಿಕತೆಗಳಾಗಿ ಪರಿವರ್ತನೆಗೊಂಡಿರುವ ಸಾಧ್ಯತೆಗಳನ್ನು ಅಲ್ಲಗಳೆಯುವ ಹಾಗಿಲ್ಲ.

70 ರೋಮಿಲಾ ಥಾಪರ್, ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002, ಪುಟ 70.

71 ಶೈಲಾ ಟಿ, ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶನ ಬೆಂಗಳೂರು 2002; ಎ. ಆರ್ ಸಂಖ್ಯೆ 296, 1931-32., ವಡ್ಡರ್ಸೆ ಶಾಸನ; ತುಳುನಾಡಿನಲ್ಲಿ ಕೃಷಿ ಭೂಮಿಯ ಮೇಲೆ ಒಕ್ಕಲುಗಳು, ಬ್ರಾಹ್ಮಣರ ನೆಲೆಗಳ ವಾಸ್ತವ್ಯದ ಬಗ್ಗೆ ಉಲ್ಲೇಖಿಸುವ ಪ್ರಾಚೀನ ಶಾಸನ.

72 ಪಿ. ಗುರುರಾಜ ಭಟ್, ತುಳುನಾಡು, 2009., ಪುಟಗಳು 20-33.

73 ರಾಜನ್ ಗುರುಕ್ಕಳ್ ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್.ಸಿ 2004 ಪುಟಗಳು 74-75.

74 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪ್ರಸಾರಾಂಗ ಕ.ವಿ.ವಿ ಹಂಪಿ 1999, ಪುಟಗಳು 9-10

75 ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, 2005, ಅಂಕಿತ ಪ್ರಕಾಶನ ಬೆಂಗಳೂರು. ಪುಟಗಳು 17–18.

76 ಸುಬ್ರಮಣಿ ಜೆ. ತುಳುನಾಡಿನ ಮಾರಿಯಮ್ಮ, ಆರಾಧನೆಯ ಸ್ವರೂಪ ಮತ್ತು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಸಂಶೋಧನ ಪ್ರಬಂಧ, 2008, ಮಂ.ವಿ.ವಿ; ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು ಪುಟಗಳು 182–183.

77 ರಾಜನ್ ಗುರುಕ್ಕಳ್, ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್. ಸಿ 2004 ಪುಟಗಳು 74–75.

78 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟ 41.

79 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟ 42.

80 ಷ-ಶೆಟ್ಟರ್, ಶಂಗಂ, ತಮಿಳಗಂ ಮತ್ತು ಕನ್ನಡ ನಾಡು–ನುಡಿ ಪುಟಗಳು 116–123.

ಆರ್ ಎಸ್ ಶರ್ಮ, ಮೆಟಿರಿಯಲ್ ಕಲ್ಚರ್ ಎಂಡ್ ಸೋಶಲ್ ಪಾರ್ಮೇಶನ್ ಇನ್ ಎನಿಶಿಯಂಟ್ ಇಂಡಿಯಾ, ಪುಟ 65. ಪಿ.ಗಣಪಯ್ಯ ಭಟ್, ತೌಳವ, ಪುಟ 20. ಅ.ಸುಂದರ ಮೆಗಾಲಿಥಿಕ್ಸ್ ಇನ್‌ವೆಸ್ಟರ್ನ್ ಕೋಸ್ಟ್ ಅಂಡ್ ಘಾಟ್ ರೀಜನ್ಸ ಒಫ್ ಕರ್ನಾಟಕ, ಪುಟಗಳು 80–81. ರೋಮಿಲಾ ಥಾಪರ್, ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002.

82 ಪುರುಷೋತ್ತಮ ಬಿಳಿಮಲೆ ಕರಾವಳಿ ಜಾನಪದ, ಶಾರದ ಪ್ರೆಸ್ ಮಂಗಳೂರು, 1990, ಪುಟ 159. ಐತಿಹ್ಯ-ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ, ಹಿಂದೆ ವಾಸ್ತವವಾಗಿ ನಡೆದದ್ದೆ ಎಂಬುವುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿಡುವ ಗದ್ಯರೂಪದ ನಿರೂಪಣೆ.

83 ಆರ್.ಎಸ್ ಶರ್ಮ., ಪ್ರಾಚೀನ ಭಾರತದಲ್ಲಿ ಶೂದ್ರರು ಕನ್ನಡ ಅವೃತ್ತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು–1, ಎರಡನೇ ಮುದ್ರಣ 2006, 172–173.

84 ಶೈಲಾ ಟಿ. ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು 2002, ಪುಟ 170.

85 ವಸಂತ ಶೆಟ್ಟಿ ಬಿ., ಬ್ರಹ್ಮಾವರದ ಇತಿಹಾಸ, 1988 ಬ್ರಹ್ಮಾವರ, ಪುಟಗಳು 6–7.

86 ಮೋಹನಕೃಷ್ಣ ರೈ, ಚರಿತ್ರೆ ಕಥನ, ಬಳ್ಳಾರಿ, 2009, ಪುಟಗಳು 20–21.

87 ಜಗದೀಶ ಶೆಟ್ಟಿ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ ಪುಟಗಳು 100–106.

ಸೌ.ಇ.ಇ ಸಂ.7 ನಂ 185, 362.ಎ.ಆರ್.ಎಸ.ಐ.ಈ 1929–30 ನಂ 590.

88 ಪಿ.ಗುರುರಾಜ ಭಟ್, ತುಳುನಾಡು 2009, ಪುಟ 43.ಅ. ಬಾಲಕೃಷ್ಣ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟಗಳು 132–133.

89 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ, ಪುಟಗಳು 25–26.

ಅ. ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಗಡೆ ಸಮಗ್ರ ಸಾಹಿತ್ಯ, ಪುಟಗಳು 132–133.

ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 2004 ಪುಟ 151.

90 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟಗಳು 24–25.

91 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ. 2011, ರಾ.ಕ.ಗೊ.ಪೈ ಸಂಶೋಧನ ಕೇಂದ್ರ ಉಡುಪಿ, ಪುಟಗಳು 30–31.

92 ಸುಬ್ಬಣ ರೈ ಎ., ದಕ್ಷಿಣಕನ್ನಡ ಜಿಲ್ಲೆಯ ಐತಿಹ್ಯಗಳು, ಮಾಣಿ ಜೂನಿಯರ್ ಛೇಂಬರ್ ಮಾಣಿ, 1994, ಪುಟ 2.

93 ರೋಮಿಲಾ ಥಾಪರ್ ದ. ಪೆಂಗ್ವಿನ್ ಹಿಸ್ಟರಿ ಅಪ್ ಅರ್ಲಿ ಇಂಡಿಯಾ, ಹೊಸದೆಹಲಿ; ಪೆಂಗ್ವಿನ್, 2002, ಪುಟಗಳು 70–71; ವಿವೇಕ ರೈ ಬಿ.ಎ, ತುಳು ಸಾಹಿತ್ಯ ಚರಿತ್ರೆ ಸಂಪಾದನಾ ಗ್ರಂಥ ಕನ್ನಡ ವಿ.ವಿ ಹಂಪಿ ಪ್ರಸಾರಾಂಗ, 2010 ಪುಟ 4.

94 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪ್ರಸರಾಂಗ ಕನ್ನಡ. ವಿ.ವಿ ಹಂಪಿ, 1999 ಪುಟಗಳು 7–8.

95 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟ 7.

---------

## ತುಳುನಾಡಿನ ಪ್ರಭಾವಿ ಸಮುದಾಯಗಳು ಮತ್ತು ವಾರಸುದಾರಿಕೆ

ಮಾನವನ ಜೀವನಾಧಾರದ ಸ್ವರೂಪ, ಮಾನಸಿಕ ಭಾವನೆ, ಆರ್ಥಿಕತೆ, ತಾಂತ್ರಿಕತೆ, ದುಡಿತದ ಪ್ರಾಕಾರಗಳು ಇವುಗಳನ್ನು ಸಾಂಸ್ಥಿಕರಿಸುವ ಕಾರ್ಯಯೋಜನೆಗಳು ಮತ್ತು ಸಂಪತ್ತಿನ ಹಂಚಿಕೆಯ ವಿಧಾನಗಳು ವಾರಸುದಾರಿಕೆ ಪರಿಕಲ್ಪನೆ ಅಧ್ಯಯನದಲ್ಲಿ ಮುಂಚೂಣಿಯ ವಿಚಾರಗಳಾಗಿರುವುದರಿಂದ ಇದು ಪ್ರಭಾವಿ ಸಮುದಾಯಗಳ ವಾರಸುದಾರಿಕೆಯ ಹಲವಾರು ಮಗ್ಗುಲುಗಳನ್ನು ತೆರೆದಿಟ್ಟಿರುವುದರ ಜೊತೆಗೆ ಕೆಲವೊಂದು ಪ್ರಶ್ನೆಗಳನ್ನು ಹುಟ್ಟುಹಾಕಿವೆ. ವಿವಿಧ ಆರ್ಥಿಕತೆಗಳನ್ನು ಒಳಗೊಂಡ ಗುಂಪುಗಳು ತಮ್ಮ ಅಗತ್ಯತೆಗಳನ್ನು ಪೂರೈಸುವುದಕ್ಕೋಸ್ಕರ ಪರಸ್ಪರ ಸಂವಹನಗಳನ್ನು ಮಾಡಿಕೊಂಡವಾದರೂ ಪ್ರಬಲ ಆರ್ಥಿಕತೆಯ ಗುಂಪುಗಳು ದುರ್ಬಲ ಆರ್ಥಿಕತೆಯ ಗುಂಪುಗಳ ಮೇಲೆ ಯಜಮಾನಿಕೆಯನ್ನು ಸಾಂಸ್ಕೃತಿಕ ವ್ಯವಸ್ಥೆಯ ಮೂಲಕ ಸಾಂಸ್ಥಿಕರಣಗೊಳಿಸಿದ ಬಗೆ ಹೇಗೆ? ಸಮಾಜ ರಚನೆಯ ಚರಿತ್ರೆಯು ಯಾಕಾಗಿ ಕಾಲ ಕಾಲಕ್ಕೆ ಪರಿವರ್ತನೆಗೆ ಒಳಪಟ್ಟಿತ್ತು ಮತ್ತು ಮಾನವನ ಸೀಮಿತ ಲೌಕಿಕ ನೆಲೆಗಟ್ಟಿನಲ್ಲಿರುವ ಜ್ಞಾನಗಳನ್ನು ತಾನೂ ವಾಸಿಸುತ್ತಿರುವ ಪರಿಸರ ವ್ಯವಸ್ಥೆಗೆ ಹೊಂದಿಕ್ಕೊಳುವಂತೆ ಮಾರ್ಪಡಿಸಿರುವ ಔಚಿತ್ಯಗಳೇನು? ಮುಂತಾದ ಪ್ರಶ್ನೆಗಳು ಉದ್ಭವಿಸಿವೆ.

ವಾರಸುದಾರಿಕೆ ರೂಪುಗೊಳ್ಳುವಲ್ಲಿ ದುರ್ಬಲ ಸಮುದಾಯಗಳು ಪ್ರಬಲ ಆರ್ಥಿಕತೆಯ ಅವಶ್ಯಕತೆಗಳನ್ನು ಪೂರೈಸುವ ಕೇಂದ್ರಗಳಾಗಿ ಮಾರ್ಪಟ್ಟು ಭೂಮಿಯ ಒಡೆತನ ಮತ್ತು ಅಧಿಕಾರ ವಿಶಿಷ್ಟ ರೂಪು ಪಡೆದುಕೊಂಡಿತು. ಪ್ರಬಲ ಆರ್ಥಿಕತೆಯ ರಾಜಕೀಯ ಚಿಂತನೆಗಳು ಬಂಧುತ್ವ ವ್ಯವಸ್ಥೆಯ ಅಧಿಕಾರದ ಮಜಲುಗಳನ್ನೂ ತನ್ನ ಕಕ್ಷೆಯೊಳಗೆ ಇಲ್ಲವೇ ಪರಿಧಿಯೊಳಗೆ ತೆಗೆದುಕೊಂಡಿತು. ಅಂತೆಯೇ ತುಳುನಾಡಿನ ಸಾಂಸ್ಕೃತಿಕ ಆಚರಣೆಗಳ ಅಂತಸ್ತುಗಳನ್ನು ಅಳೆಯುವ ಮಾನದಂಡಗಳಾಗಿ ಯಜಮಾನಿಕೆ ಸಂಸ್ಕೃತಿ ರೂಪುಗೊಂಡಿತು. ಜೊತೆಗೆ ಬಂಧುತ್ವ ಆಧಾರಿತ ಉತ್ಪಾದನೆ ಮತ್ತು ವಸ್ತುಗಳ ವಿನಿಮಯದ ಮೇಲಿನ ಸಂಬಂಧಗಳು ಸಾಂಸ್ಕೃತಿಕ ಆಚರಣೆಗಳಲ್ಲಿ ಪಾಲು ಪಡೆಯುವುದರೊಂದಿಗೆ ತುಳುನಾಡು ವಿಶಿಷ್ಟ ಸಾಂಸ್ಕೃತಿಕ ವಲಯವಾಗಿ ರೂಪುಗೊಳ್ಳಲು ಕಾರಣವಾಯಿತು. ಆರಾಧನೆಗಳ ನೆಲೆಗಟ್ಟಿನಲ್ಲಿ ಯಜಮಾನಿಕೆ ಸ್ಥಾಪಿಸಿದ ಪ್ರಬಲ ಸಮುದಾಯಗಳು ಭೂಮಿಯ ಮೇಲಿನ ಹಕ್ಕಿನಲ್ಲಿ ಪಾಲು ಪಡಕೊಂಡವು. ವಸ್ತುಗಳ ವಿನಿಮಯ ಹಾಗೂ ಸೇವೆಗಳ ವಿನಿಮಯ ತೋರಿಕೆಗೆ ಮಾದರಿ ಸಮಾಜ ನಿರ್ಮಾಣವಾಗಿದೆಯೆಂದು ಬಿಂಬಿಸಿ ಈ ಕಾರ್ಯಯೋಜನೆಯಲ್ಲಿ ಯಾವುದೇ ಆಕಾಂಕ್ಷೆ ಅಥವಾ ಲಾಭ ಇಲ್ಲವೆಂಬುದನ್ನು ಮನದಟ್ಟು ಮಾಡುವಲ್ಲಿ ಸಫಲವಾಯಿತು.

ತುಳುನಾಡಿನಲ್ಲಿ ವಾಸ್ತವ್ಯ ಹೂಡಿರುವ ಜನಸಮುದಾಯಗಳಾದ ಕೊರಗ, ಮಾಯಿಲ, ಬಾಕುಡ, ಹೊಲೆಯ, ಮೋಗೆರ, ಮೊಗವೀರ, ಬಿಲ್ಲವ, ಒಕ್ಕಲು ಇತ್ಯಾದಿಗಳ ರಚನೆ

ಮಾತೃಪ್ರಧಾನ ಬಂಧುತ್ವದ ಆಧಾರದಲ್ಲಿ ಸರಳವಾಗಿ ರೂಪಿಸಲ್ಪಟ್ಟು, ಅಧಿಕಾರ ನಡೆಸಿದವುಗಳು ಎಂಬುವುದು ಇತಿಹಾಸ ತಳೆದ ನಿರ್ಧಾರವಾಗಿದೆ.[1] ಆದರೆ ಈ ಸಮುದಾಯಗಳು ಪ್ರಭಾವಿ ಆರ್ಥಿಕತೆಯ ಹಿಡಿತದಿಂದ ನಲುಗಿ, ಅಧಿಕಾರ ಕಳೆದುಕೊಂಡವು ಎಂಬುವುದು ಸಹ ಚಾರಿತ್ರಿಕವಾಗಿ ಸಾಬೀತುಪಡಿಸಲಾಗಿದೆ.[2] ಮಾತ್ರವಲ್ಲ ಪ್ರಬಲ ಆರ್ಥಿಕ ವ್ಯವಸ್ಥೆಯು ಭೂಮಿಯ ಮೇಲಿನ ಅಧಿಕಾರ ಸ್ಥಾಪಿಸಿದಾಗಿನಿಂದ ಸಾಮಾಜಿಕ ಸ್ಥಿತ್ಯಂತರಗಳು ನಡೆದು ಒಟ್ಟು ಸಮುದಾಯ ವಿಸ್ತಾರವಾದ ಜಮೀನುಗಳನ್ನು ಪಡೆದುಕೊಂಡಿತು.[3]

ತುಳುನಾಡಿನ ಸಾಮಾಜಿಕ ರಚನೆಯು ಮಾತೃಪ್ರಧಾನ ಆರ್ಥಿಕ ಉತ್ಪಾದನೆ ಮತ್ತು ತಾಂತ್ರಿಕತೆಯ ಆಧಾರದಲ್ಲಿ ಬಹುಮುಖ್ಯ ಎನಿಸಿಕೊಂಡರೂ, ಪ್ರಬಲ ಆರ್ಥಿಕತೆಯ ಸಂಪತ್ತಿನ ಕ್ರೋಡಿಕರಣ ಮತ್ತು ಮರುಹಂಚುವಿಕೆಯಿಂದ ಸಾಮಾಜಿಕ ಸಂಬಂಧಗಳು ವಿಸ್ತಾರಗೊಂಡು ತೆರಿಗೆ ಮತ್ತು ಭೂಧಾನದಂತಹ ವ್ಯವಸ್ಥೆಗಳು ಕ್ರಮಬದ್ಧಗೊಂಡಿದ್ದರಿಂದ ಸಮಾಜದ ರಚನೆಯ ಸ್ವರೂಪ ನಿರ್ಧರಿಸುವಿಕೆಯಲ್ಲಿ ಪ್ರಮುಖ ಪಾತ್ರವಹಿಸಿದವು. ಆದರೆ ರಾಜನ್ ಗುರುಕ್ಕಳ್ ಹೇಳುವಂತೆ ಈ ವ್ಯವಸ್ಥೆಯನ್ನು ಊಳಿಗಮಾನ್ಯ ಎಂದಾಗಲಿ ಅಥವಾ ಅದರ ಉತ್ಪಾದನ ವಿಧಾನಗಳನ್ನು ಉಳಿಗಮಾನ್ಯ ವ್ಯವಸ್ಥೆಗೆ ಹೊಂದಿಕೊಳ್ಳುವ ವಿಧಾನಗಳೆಂದು ಪರಿಗಣಿಸಲು ಸಾಧ್ಯವಿಲ್ಲ. ಒಂದು ವೇಳೆ ಈ ರೀತಿ ಪರಿಗಣಿಸಿದರೂ ವಿಸ್ತೃತ ಅರ್ಥದಲ್ಲಿ ಸಮಾಜವನ್ನು 'ಊಳಿಗಮಾನ್ಯ ಸಮಾಜ' ಎಂದು ಒಪ್ಪಬೇಕಾಗಿಲ್ಲವಾದುದರಿಂದ ತುಳುನಾಡಿನ ಸಮಾಜ ವಿನಿಮಯ ಮೌಲ್ಯದ ಆಧ್ಯತೆಯ ಬದಲಾಗಿ ವಿನಿಯೋಗ ಮೌಲ್ಯಕ್ಕೆ ಆಧ್ಯತೆ ನೀಡಿರುವುದು ಸ್ಪಷ್ಟ.[4] ಈ ಪ್ರಕ್ರಿಯೆಗಳು ಸಮುದಾಯಗಳ ಅಧಿಕಾರದ ರಚನೆಯ ನೆಲೆಯಲ್ಲಿ ಬದಲಾವಣೆಗಳನ್ನು ತರುವುದರ ಜೊತೆಗೆ ಅಧಿಕಾರ ಚಲಾಯಿಸುವ ಕುಟುಂಬದ ಶ್ರೇಣೀಕೃತ ವ್ಯವಸ್ಥೆಯನ್ನು ಸರಳಗೊಳಿಸುವಲ್ಲಿ ಮಹತ್ತರ ಪಾತ್ರ ನಿಭಾಯಿಸಿತು. ನಿಧಾನವಾಗಿ ಒಂದು ಕುಟುಂಬಕ್ಕೆ ಮಾತ್ರ ಸೀಮಿತವಾಗಿದ್ದ ಮಾತೃಪ್ರಧಾನ ಬಂಧುತ್ವ ವ್ಯವಸ್ಥೆ ಪರಿವರ್ತನೆಗೊಂಡು ಗ್ರಾಮವ್ಯವಸ್ಥೆಯ ಭಾಗವಾಗಿ ರೂಪುಗೊಂಡಿತು.[5] ಜೊತೆಗೆ ಅಧಿಕಾರ ರಚನೆಯ ಅಗತ್ಯತೆಗಳಿಗೆ ಹೊಂದಿಕೊಳ್ಳುವ ರೀತಿಯಲ್ಲಿ ಸಮುದಾಯದ ಬಂಧುತ್ವ ವ್ಯವಸ್ಥೆಯನ್ನು ಸಾಂಸ್ಕೃತಿಕವಾಗಿಯೂ ಆರಾಧನಾ ನೆಲೆಯಲ್ಲಿ ರೂಪುಗೊಳಿಸಲಾಯಿತು.[6] ಈ ರೀತಿಯ ವ್ಯವಸ್ಥೆಯಿಂದ ಈ ಭಾಗದ ಅಧೀನ ಆರ್ಥಿಕತೆಯ ಉಳುಮೆ ಭೂಮಿ ಸ್ವಾಧೀನಕೊಳಪಟ್ಟಾಗ ಇಲ್ಲವೇ ಬಂಧುತ್ವ ವ್ಯವಸ್ಥೆಯ ಮುಖ್ಯಸ್ಥರು ಪ್ರಲೋಭನೆಗೆ ಒಳಗಾದಾಗ ಸಾಮುದಾಯಿಕ ದುಡಿಮೆಯನ್ನು ಸಮಷ್ಟಿಯ ಒಳಿತಿಗಾಗಿ ಅಣಿಗೊಳಿಸಲು ಸಾಧ್ಯವಿದ್ದರೂ ಇದನ್ನು ಸ್ವಹಿತ ಸಾಧನೆಗಾಗಿ ಬಳಸಿಕೊಂಡಿದ್ದರಿಂದ ಮುಂದೊಂದು ಬಾರಿ ಹಲವಾರು ಸಾಮುದಾಯಿಕ ವಾರಸುದಾರಿಕ ಕೇಂದ್ರಗಳು ಹುಟ್ಟಿಕೊಳ್ಳಲು ಕಾರಣವಾಯಿತು.[7] ಈಗಾಗಲೇ ಗ್ರಾಮಗಳಿಗೆ ವಿಸ್ತಾರಗೊಂಡಿದ್ದ

ಮಾತೃಪ್ರಧಾನ ವ್ಯವಸ್ಥೆಯು ತನ್ನ ನೆಲೆಯನ್ನು ಹಳ್ಳಿಗಳಿಗೂ ವಿಸ್ತರಿಸಿ ಶ್ರೇಣಿಕೃತ ಹಳ್ಳಿಗಳ ರಚನೆಯಲ್ಲಿ ಪರಿಕ್ರಮಣಗೊಂಡಿತು. ಇದಕ್ಕೆ ಸಾದೃಶ್ಯವಾಗಿ ಇಲ್ಲವೇ ಸಮಾನಾಂತರವಾಗಿ ತುಳುನಾಡಿನ ಆರಾಧನ ವ್ಯವಸ್ಥೆಯೂ ರೂಪುಗೊಂಡಿತು.[8] ಈ ಬೆಳವಣಿಗೆಯು ಸಂಪತ್ತಿನ ಸಮಾನ ಹಂಚಿಕೆಗೆ ಅವಕಾಶ ನೀಡದೇ ಕೆಲವೇ ಗುಂಪು ಅಥವಾ ಬಣಗಳಲ್ಲಿ ಕೇಂದ್ರೀಕರಣಗೊಳ್ಳುವಂತೆ ಮಾಡಿತು.[9] ಪ್ರಭಾವಿ ಸಮುದಾಯಗಳ ಪ್ರಭಾವದಿಂದ ದುರ್ಬಲ ವರ್ಗದ ಪ್ರಭಾವಿ ಗುಂಪುಗಳಿಗೆ ತಮ್ಮ ಅನನ್ಯತೆಗಳನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಇದ್ದಾಗ ತಮಗೆ ಸೇರಿದ ಸೀಮಿತ ಅಧಿಕಾರಗಳನ್ನು ಕಾನೂನು ಪರಿಧಿಯೊಳಗೆ ನಿರ್ಬಂಧಿಸಿ ತುಳುನಾಡಿನ ಆಡಳಿತಾತ್ಮಕ ವ್ಯವಸ್ಥೆಗಳನ್ನು ಸಾಂಸ್ಕೃತಿಕ ಮತ್ತು ಧಾರ್ಮಿಕ ಆಚರಣೆಗಳ ಪಡಿಯಚ್ಚಿನಲ್ಲಿ ರೂಪಿಸಿಕೊಂಡಿರುವ ಸಾಧ್ಯತೆಗಳ ಬಗ್ಗೆ ತಜ್ಞರು ಅನುಮಾನಿಸಿದ್ದಾರೆ.

ವಸಾಹತುಪೂರ್ವದ ತುಳುನಾಡಿನಲ್ಲಿ ಬಹುಸಂಖ್ಯಾತ ಸಮುದಾಯಗಳು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿಕೊಂಡಿದ್ದು, ಅದುವೇ ಅವರ ಜೀವನದ ಪ್ರಮುಖ ಮೂಲಾಧಾರವಾಗಿತ್ತು.[10] ವಸಾಹತುಶಾಹಿ ಸರ್ವೇಕ್ಷಣೆಗಳು ಹೇಳುವಂತೆ ತುಳುನಾಡಿನ ಈ ಪ್ರದೇಶ ಕೃಷಿ ಅವಲಂಬಿತ ಪ್ರದೇಶವಾಗಿದ್ದು, ಅದು ಅವರ ಉದ್ಯಮವಾಗಿತ್ತು.[11] ಕೃಷಿ ಅಧಿಕಾರ ವ್ಯವಸ್ಥೆಯ ರಚನೆ ಗೋಚರಕ್ಕೆ ಬಂದಾಗಿನಿಂದ ಭೂಮಿಯ ಒಡೆತನವೆಂಬುವುದು ಸಾಮಾಜಿಕ ರಚನೆಯ ಪ್ರಧಾನ ಮೂಲಾಂಶವಾಗುವುದರ ಜೊತೆಗೆ ಸಂಬಂಧಗಳ ಸಂಕೀರ್ಣತೆಯ ಲಾಂಛನವಾಗಿಯೂ ಪರಿವರ್ತನೆಗೊಂಡಿತು. ಈ ಸಂಕೀರ್ಣತೆ ಮುಂದೊಂದು ಬಾರಿ ಶ್ರೇಣಿಕೃತ ಸಮಾಜ ರಚನೆಯ ಮೂಲಾಂಶವಾಗಿ ಉಚ್ಚ-ನೀಚ, ಬಡವ-ಶ್ರೀಮಂತರೆಂಬ ಶ್ರೇಯಾಂಕಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಉತ್ಕೃಷ್ಟ-ನಿಕೃಷ್ಟ ಸ್ವರೂಪದ ಭೂಮಿಗಳು ಕೆಲವೊಂದು ಸಂದರ್ಭಗಳಲ್ಲಿ ಸಾಮಾಜಿಕ ಸಂಬಂಧ ನಿರ್ಣಯಿಸುವ ಅಂಶಗಳಾಗಿ ಮಾರ್ಪಟ್ಟವು.[12] ಈ ಮೇಲಿನ ವಿವರಣೆಗಳಿಗೆ ಸಂಬಂಧಿಸಿದ ಸಮರ್ಥನೆಗಳನ್ನು ವಿಭಿನ್ನ ಶಾಸನಗಳು ಮತ್ತು ಚಾರಿತ್ರಿಕ ಗ್ರಂಥಗಳಲ್ಲಿ ಕಾಣಬಹುದು. ಆದರೆ ಶಾಸನಗಳು ಒಂದೇ ತೆರನಾದ ವಿವರಣೆಗಳನ್ನು ನೀಡುವುದಿಲ್ಲ. ಅಳೂಪರ ಕಾಲದ ಶಾಸನಗಳು ಭೂಮಿ ಒಡೆತನಗಳ ಬಗ್ಗೆ ಹೆಚ್ಚು ಮಹತ್ವ ಕೊಟ್ಟಿಲ್ಲವಾದರೂ, ಕೃಷಿ ಕಾರ್ಯಕ್ಕೆ ಸಂಬಂಧಿಸಿದ ಉಲ್ಲೇಖಗಳನ್ನು ಸ್ಪಷ್ಟವಾಗಿ ನೀಡುತ್ತವೆ. ಸಾಮಾನ್ಯಶಕೆ ಏಳನೇ ಶತಮಾನದ ಮಧ್ಯಭಾಗಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಕೃಷಿ ಚಟುವಟಿಕೆಗಳು ವಿಸ್ತಾರಗೊಂಡು ಹೊಸತಾದ ಕೃಷಿ ಅವಲಂಬಿತ ಆರ್ಥಿಕತೆಯ ಹುಟ್ಟಿಗೆ ಕಾರಣವಾಯಿತೆಂಬ ವಿವರಣೆಯನ್ನು ಕಾಣಬಹುದು.[13]

ಕೃಷಿ ವಿಸ್ತರಣೆಯನ್ನು ಹಲವಾರು ಉದ್ದೇಶ ಸಾಧನೆಗಾಗಿ ಮಾಡಲಾಯಿತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಕೃಷಿ ಅವಲಂಬಿತ ಆರ್ಥಿಕತೆಯ ವಿಸ್ತರಣೆ ಮತ್ತು ಹೊಸ ಹೊಸ ಭೂಮಿಗಳನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತನೆ ಮಾಡಲು ಉತ್ತೇಜನ. ಈ ಕಾರಣಕ್ಕಾಗಿಯೇ ಹೊಸತಾಗಿ ಕೃಷಿಯೋಗ್ಯಗೊಂಡ ಭೂಮಿಗಳ ಮೇಲೆ ನಿಗದಿತ ವರ್ಷಗಳ ವರೆಗೆ ತೆರಿಗೆ ಮನ್ನಾ ಮಾಡಿದ ಉದಾಹರಣೆಗಳನ್ನು ಕಾಣಬಹುದಾಗಿದೆ. ಕೃಷಿ ಭೂಮಿಯ ವಿಸ್ತರಣೆ ಭೂಮಿಯ ಒಡೆತನವನ್ನು ಪಡೆದು ಸೇವೆಗಳನ್ನು ಒದಗಿಸುವ ಸಂಸ್ಥೆಗಳ ವಿಸ್ತರಣೆಗೆ ಅನುವು ಮಾಡಿಕೊಟ್ಟಿತು. ಈ ಸೇವಾ ಸಂಸ್ಥೆಗಳು ಭೂಮಿಯ ಒಡೆತನವನ್ನು ತಮ್ಮಲ್ಲಿ ಇಟ್ಟುಕೊಳ್ಳುವುದರ ಜೊತೆಗೆ ಭೂಮಿಯ ಅಧಿಕಾರ ಹೊಂದುವ ಇತರ ವ್ಯಕ್ತಿಗಳಿಗೆ ಹಣಕಾಸು ಮತ್ತು ನೈತಿಕ ಸಹಕಾರವನ್ನು ನೀಡಿದವು. ಪ್ರಬಲ ಆರ್ಥಿಕತೆ ಈ ಸೇವಾಸಂಸ್ಥೆಗಳನ್ನು ಮುಂದಿಟ್ಟುಕೊಂಡು ರಾಜನೊಂದಿಗೆ ಭೂಮಿಯ ಒಡೆತನದ ಪಾಲು ಪಡಕೊಂಡವು. ಆದರೆ ಕೆಲವು ಸಂದರ್ಭಗಳಲ್ಲಿ ರಾಜನಿಗಿದ್ದ ಭೂಮಿಯ ಮೇಲಿನ ಹಿಡಿತ ತೆರಿಗೆ ಸಂಗ್ರಹಣೆಗೆ ಮಾತ್ರ ಸೀಮಿತವಾಗಿತ್ತು. ನೈಜ ಒಡೆತನ ಸೇವಾಸಂಸ್ಥೆಗಳು, ಪ್ರಬಲ ಆರ್ಥಿಕತೆ ಮತ್ತು ಭೂಮಿಯನ್ನು ಹೊಂದಿದ ಇತರ ವ್ಯಕ್ತಿಗಳಲ್ಲಿ ಹಂಚಿಕೆಯಾಗಿತ್ತು. ಕಾಡು ಮತ್ತು ಬಂಜರುಭೂಮಿಗಳು ಕೃಷಿಯೋಗ್ಯ ಭೂಮಿಯಾಗಿ ಪರಿವರ್ತನೆಗೊಂಡಿರುವುದು ಆಡಳಿತ ವ್ಯವಸ್ಥೆಯ ಆದಾಯವನ್ನು ಹೆಚ್ಚಿಸುವಲ್ಲಿ ಸಹಕಾರಿಯಾಯಿತ್ತಲ್ಲದೇ ಅದರ ಪ್ರಭಾವಲಯಗಳು ವಿಸ್ತರಿಸುವಲ್ಲಿಯೂ ಸಹಾಯ ಮಾಡಿತು. ಜೊತೆಗೆ ವಿಭಿನ್ನ ಸಮುದಾಯಗಳಿಗೆ ಉದ್ಯೋಗ ಭದ್ರತೆಯನ್ನು ಒದಗಿಸಿಕೊಟ್ಟಿತು. ಒಟ್ಟಾರೆಯಾಗಿ ಆ ಕಾಲದ ಆರ್ಥಿಕ-ಸಾಮಾಜಿಕ ವ್ಯವಸ್ಥೆಗಳನ್ನು ಅವಲೋಕಿಸಿದಾಗ ಕಂಡು ಬರುವ ಪ್ರಮುಖ ಅಂಶಗಳೆಂದರೆ ರಾಜ್ಯದ ಪ್ರಭಾವಲಯಗಳ ವಿಸ್ತರಣೆ, ಭೂಮಿಯ ಒಡೆತನ ಮತ್ತು ಹಕ್ಕು ಸ್ಥಾಪಿಸುವ ಯೋಜನೆಗಳು, ಜೀವನ ಶೈಲಿಯ ಬದಲಾವಣೆ, ಜೊತೆಗೆ ಕೆಲವು ಚಾರಿತ್ರಿಕ ಬದಲಾವಣೆಗಳಾಗಿರುವುದು ಶಾಸನಗಳಿಂದ ವೇದ್ಯವಾಗುತ್ತದೆ.

ವಿಜಯನಗರ ಕಾಲದ ಶಾಸನಗಳು ಬೆಟ್ಟಗುಡ್ಡಗಳನ್ನು ಕಡಿದು ಭೂಮಿಯನ್ನು ಹದಗೊಳಿಸಿ ಗದ್ದೆಗಳನ್ನು ರಚನೆ ಮಾಡಿರುವುದು. ನದಿ ಬದಿಯಲ್ಲಿರುವ ಬಂಜರುಭೂಮಿಗಳನ್ನು ಕೃಷಿ ಯೋಗ್ಯ ಭೂಮಿಗಳನ್ನಾಗಿ ಪರಿವರ್ತಿಸಿರುವುದು ಇತ್ಯಾದಿಗಳ ಬಗ್ಗೆ ಉಲ್ಲೇಖಗಳನ್ನು ನೀಡಿವೆ.[14] ಆ ಕಾಲದಲ್ಲಿ ಕೃಷಿ ಭೂಮಿಯ ವಿಸ್ತರಣೆ ತ್ವರಿತಗೊಂಡಿರುವುದಲ್ಲದೇ, ಸಾಮಾಜಿಕ ನೆಲೆಗಳಲ್ಲಿ ಜನಸಮುದಾಯಗಳ ಸಂಚಲನೆಯ ಜೊತೆಗೆ ಈ ಪ್ರದೇಶದಲ್ಲಿ ವಾಸ್ತವ್ಯ ಹೂಡಿದ ಪ್ರಭಾವಿ ಸಮುದಾಯಗಳು ಕೃಷಿ ಭೂಮಿಯನ್ನು ಪಡೆದುದರ ಬಗ್ಗೆಯೂ ಶಾಸನಗಳಲ್ಲಿ ಉಲ್ಲೇಖಗಳಿವೆ.[15] ಈ ಪರಿವರ್ತನೆ

ಕೃಷಿ ರಂಗದಲ್ಲಿ ಮಾತ್ರವಲ್ಲದೇ ಕೃಷಿಯೇತರ ಕ್ಷೇತ್ರದಲ್ಲೂ ಆಗಿರುವುದಲ್ಲದೇ, ಬಹಳಷ್ಟು ಸಂಖ್ಯೆಯ ಪ್ರಭಾವಿ ಸಮುದಾಯಗಳು ವಲಸೆ ಬಂದು ವಾಸ್ತವ್ಯ ಹೂಡಿ ಭೂಮಿಯ ಒಡೆತನ ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ.[16] ಹೀಗೆ ಕಾಡು ಕಡಿಯುವುದರಿಂದ ಕೃಷಿ ಭೂಮಿಯಲ್ಲಾದ ವಿಸ್ತರಣೆ, ವಿಸ್ತಾರಗೊಂಡಿರುವ ಭೂಮಿಯಲ್ಲಿನ ಕೃಷಿ ಚಟುವಟಿಕೆಗಳು, ಕೃಷಿ ಚಟುವಟಿಕೆಗಳಿಂದಾದ ಭೂಮಿಯ ಮೇಲಿನ ಹಕ್ಕುಗಳು, ಆ ಹಕ್ಕುಗಳನ್ನು ಪಡೆಯುವವರ ಶ್ರೇಯಾಂಕ, ಮಾನ-ಮರ್ಯಾದೆಗಳು, ಅಂತಸ್ತು ಇತ್ಯಾದಿ, ವಸಾಹತುಪೂರ್ವದ ವಾರಸುದಾರಿಕೆ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ. ಮುಖ್ಯವಾಗಿ ಭೂಮಿಯನ್ನು ಹೊಂದುವ ಸಮುದಾಯಗಳು, ಆ ಸಮುದಾಯಗಳಿಗೆ ರಾಜ್ಯ ನೀಡಿರುವ ನೈತಿಕ ಬೆಂಬಲ ಮುಂತಾದವುಗಳು ಒಡೆತನವನ್ನು ಪಡೆಯಲು ಸಹಕಾರಿಯಾಯಿತ್ತಲ್ಲದೇ ವಾರಸುದಾರಿಕೆಯ ಹಕ್ಕನ್ನು ಪಡೆದು ಸ್ಥಾಪಿಸಿಕೊಳ್ಳಲು ಅನುವು ಮಾಡಿಕೊಟ್ಟಿತು.

ವಸಾಹತುಪೂರ್ವದ ಸಾಮಾಜಿಕ ರಚನೆಯಲ್ಲಿ ಕೃಷಿಭೂಮಿ ಮತ್ತು ಅದರ ಮೇಲಿನ ವಾರಸುದಾರಿಕೆಗಳು ಅಧಿಕಾರಸ್ಥರ ಮತ್ತು ಅವರ ಅವಲಂಬಿತರ ಸುತ್ತ ಹೆಣೆಯಲ್ಪಟ್ಟಿರುವುದರಿಂದ ಕೃಷಿಕ, ಭೂಮಿ ಮತ್ತು ಅಧಿಕಾರ ಒಂದಕ್ಕೊಂದು ಪೂರಕವಾಗಿ ಸಂಬಂಧ ಇಟ್ಟುಕೊಂಡಿದ್ದವು. ಕೃಷಿ ಅವಲಂಬಿತ ಆರ್ಥಿಕತೆಯಲ್ಲಿ ವಾಸ್ತವ್ಯ ಹೂಡಿರುವ ಸಮುದಾಯಗಳು ವಿವಿಧ ಮಾದರಿಗಳಲ್ಲಿ ಭೂಮಿಯನ್ನು ಹಂಚಿಕೆ ಮಾಡಿಕೊಂಡಿರುವುದು, ಭೂಮಿ ಹಂಚಿಕೊಳ್ಳುವ ನ್ಯಾಯಬದ್ಧ ಅಧಿಕಾರಗಳು, ಅಧಿಕಾರಗಳನ್ನು ಮಾನ್ಯ ಮಾಡುವಲ್ಲಿನ ವ್ಯವಸ್ಥೆ, ಅಧಿಕಾರವನ್ನು ಹೊಂದಿರುವ ಸೆಗ್ಮೆಂಟು(ಪರಿಧಿ)ಗಳು ಮತ್ತು ಕೃಷಿ ಅವಲಂಬಿತ ವರ್ಗಗಳ ಸೆಗ್ಮೆಂಟು(ಪರಿಧಿ)ಗಳ ನಡುವಿನ ಸಂಬಂಧಗಳನ್ನು ವಾರಸುದಾರಿಕೆಯ ನಿರ್ಧಾರಕ್ಕೆ ಪರಿಗಣಿಸುವುದು ಅತ್ಯವಶ್ಯವಾಗಿದೆ ಎಂಬುವುದು ಚರಿತ್ರಕಾರರ ಅಭಿಪ್ರಾಯವಾಗಿದೆ.[17]

## ಭೂಮಿಯ ಒಡೆತನದಲ್ಲಿ ಬ್ರಾಹ್ಮಣರ ಪಾರಮ್ಯತೆ

ವಸಾಹತುಪೂರ್ವದ ಕಾಲದ ಭೂಮಿಯ ಒಡೆತನಕ್ಕೆ ಸಂಬಂಧಿಸಿದಂತೆ ಹಲವಾರು ವರ್ಗಗಳ ನಡುವೆ ಪೈಪೋಟಿ ನಡೆದಿದ್ದು, ಕೆಲವು ವರ್ಗಗಳು ಪಾರಮ್ಯತೆ ಸಾಧಿಸಿದ್ದವು. ಅವುಗಳಲ್ಲಿ ಮುಖ್ಯವಾದುದೆಂದರೆ ಬ್ರಾಹ್ಮಣವರ್ಗ. ಭೂಒಡೆತನವು ಸಹಜವಾಗಿಯೇ ಅಧಿಕಾರದ ಸ್ಥಾನಮಾನವನ್ನು ಆ ಕಾಲಘಟ್ಟದಲ್ಲಿ ನೀಡಿತೆಂಬುವುದು ಸಾಂಪ್ರದಾಯಿಕ ಚರಿತ್ರೆ, ಶಾಸನಗಳು ಹಾಗೂ ಅಲಿಖಿತ ಆಕರಗಳಿಂದ ತಿಳಿದುಕೊಳ್ಳಬಹುದು.[18] ಚರಿತ್ರೆಯ ಮೂಲಗಳ ಪ್ರಕಾರ ಬ್ರಾಹ್ಮಣರು ತುಳುನಾಡಿನ ನಿಜವಾದ ಮೂಲನಿವಾಸಿಗಳಲ್ಲ. ಬದಲಿಗೆ ವಲಸಿಗ ವರ್ಗವಾಗಿದೆ. ಆದರೆ ಅವರು ತಮ್ಮ ವಲಸೆಯ ಇತಿಹಾಸದ ಮೂಲ ಸ್ವರೂಪವನ್ನೆ ಬದಲಾಯಿಸುವ ಪ್ರಯತ್ನದಲ್ಲಿ ತೊಡಗಿದರಲ್ಲದೇ ಇಲ್ಲಿನ ಮೂಲನಿವಾಸಿಗಳಿಗೆ ವಲಸಿಗ ಪಟ್ಟ ಕಟ್ಟಿ ತಾವೇ

ಮೂಲನಿವಾಸಿಗಳೆಂಬಂತೆ ತೋರ್ಪಡಿಸಿ, ಅದನ್ನು ಸಾಮಾಜಿಕ ವ್ಯವಸ್ಥೆಯ ನಂಬುಗೆಯ ಸಂಪ್ರದಾಯವನ್ನಾಗಿ ಪರಿವರ್ತಿಸಿದರು ಎಂಬುವುದು ಚರಿತ್ರಕಾರರ ಅಭಿಪ್ರಾಯವಾಗಿದೆ.[19] ಈ ರೀತಿಯ ಕಾರ್ಯಯೋಜನೆಗಳು ಪ್ರಬಲ ವರ್ಗಗಳು ತನ್ನದಲ್ಲದ ವಾರಸುದಾರಿಕೆಯನ್ನು ಹೇಗೆ ತನ್ನದಾಗಿಸುವ ಪ್ರಯತ್ನಗಳನ್ನು ಕ್ರಮಬದ್ಧಗೊಳಿಸಿತು ಎಂಬುವುದಕ್ಕೆ ಸಾಕ್ಷಿಯಾಗಿದೆ.

ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಪರಶುರಾಮ ಐತಿಹ್ಯ ಈ ಪ್ರದೇಶದ ಸೃಷ್ಟಿ, ಜನಜೀವನ, ಇಲ್ಲಿನ ಭೂಒಡೆತನ, ವಾರಸುದಾರಿಕೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ವಿವರಣೆ ನೀಡುತ್ತಿದೆಯಾದರೂ, ಹಲವಾರು ವೈರುಧ್ಯಗಳಿಂದ ಕೂಡಿದೆ. ಪರಶುರಾಮ ಸೃಷ್ಟಿಯ ಐತಿಹ್ಯದ ಒಂದು ವಾದದ ಪ್ರಕಾರ ತುಳುನಾಡು ಪರಶುರಾಮ ಸೃಷ್ಟಿಯ ಪೂರ್ವದಲ್ಲಿ ಅಬ್ರಾಹ್ಮಣ್ಯ ಪ್ರದೇಶವಾಗಿತ್ತು. ಈ ಅಬ್ರಾಹ್ಮಣ್ಯ ಪ್ರದೇಶಕ್ಕೆ ವಲಸೆ ಬಂದ ಬ್ರಾಹ್ಮಣರು ನೆಲೆಗೊಳ್ಳದೇ ತಮ್ಮದೇ ಕಾರಣಕ್ಕಾಗಿ ಹಿಂದೇಟು ಹಾಕಿದಾಗ, ಕ್ರೋಧಗೊಂಡ ಪರಶುರಾಮ ಸ್ಥಳೀಯ ಮೀನುಗಾರರಿಗೆ ದೀಕ್ಷೆ ಕೊಟ್ಟು ಬ್ರಾಹ್ಮಣರನ್ನಾಗಿ ಪರಿವರ್ತಿಸಿ ತಾನು ಸೃಷ್ಟಿಸಿದ ಭೂಮಿಯಲ್ಲಿ ಜೀವಿಸಲು ಅನುವು ಮಾಡಿ ಕೊಟ್ಟಿದ್ದಾನೆ.[20] ಆದರೆ ಚರಿತ್ರೆಯ ಇನ್ನೊಂದು ವಾದದ ಪ್ರಕಾರ ತುಳುನಾಡು ಪರಶುರಾಮ ಸೃಷ್ಟಿಸಿದ ಭೂಮಿ, ಈ ರೀತಿಯಲ್ಲಿ ಪರಿವರ್ತಿತ ಬ್ರಾಹ್ಮಣರ ಭೂಮಿ ಮಾರ್ಪಾಡುಗೊಂಡಾಗ ಮಯೂರಶರ್ಮನೆಂಬ ರಾಜನು ನಿಜವಾದ ಬ್ರಾಹ್ಮಣರನ್ನು ಪುನರ್ ವ್ಯವಸ್ಥಾಪನೆಗೊಳಿಸಿ ಬ್ರಾಹ್ಮಣ ಭೂಮಿಯಾಗಿ ಪರಿವರ್ತಿಸಿದನು. ಅದಾಗ್ಯೂ ಮಯೂರಶರ್ಮನೇ ಅಹಿಛತ್ರದಿಂದ ಬ್ರಾಹ್ಮಣರನ್ನು ಕರೆದು ಆಸರೆ ನೀಡಿ ಈ ಪ್ರದೇಶವನ್ನು ಬ್ರಾಹ್ಮಣರ ವಾಸ್ತವ್ಯದ ಪ್ರದೇಶವನ್ನಾಗಿ ಪುನರ್‌ರೂಪಿಸಿದ ಎಂಬುವುದಕ್ಕೆ ಚರಿತ್ರೆಯ ಯಾವ ದಾಖಲೆಗಳು ಸ್ಪಷ್ಟವಾಗಿ ತೀರ್ಮಾನ ನೀಡುವುದಿಲ್ಲ[21] ಐತಿಹ್ಯದ ಈ ಎರಡು ವಾದಗಳು ಇಲ್ಲಿನ ಮೂಲನಿವಾಸಿಗಳು ಮತ್ತು ಬ್ರಾಹ್ಮಣರ ಬಗ್ಗೆ ಸ್ಪಷ್ಟ ಮಾಹಿತಿ ನೀಡದಿರುವುದು ಇಲ್ಲಿನ ಭೂಒಡೆತನ ಮತ್ತು ಅದರಲ್ಲಿ ಬ್ರಾಹ್ಮಣರ ಪಾತ್ರಕ್ಕೆ ಸಂಬಂಧಿಸಿದಂತೆ ಹಲವಾರು ಅಸ್ಪಷ್ಟ ವಾದಗಳನ್ನು ಹುಟ್ಟುಹಾಕಿವೆ. ಪರಶುರಾಮನಿಂದ ಮತಾಂತರಗೊಂಡು ಬ್ರಾಹ್ಮಣರಾದ ಸ್ಥಳೀಯ ಮೀನುಗಾರರು ಮಯೂರಶರ್ಮ ಕರೆತಂದ ಬ್ರಾಹ್ಮಣರಿಗೆ ವಿರುದ್ಧವಾಗಿ, ತನ್ಮೂಲಕ ತುಳುನಾಡಿನ ರಾಜತ್ವದ ವಿರುದ್ಧ ದಂಗೆ ಏದ್ದರು, ಈ ದಂಗೆಕೋರರರನ್ನು ಪರಶುರಾಮ ಶಿಕ್ಷಿಸದೇ 'ಸಾಂಕೇತ ಪದ್ಧತಿ'ಯ ಮೂಲಕ ನಾಗೂರು, ಮಟ್ಟು, ಕುಶಸ್ಥಳಿ, ಸ್ವಸ್ತಿಗಳನ್ನು ನೀಡಿ ಸಾಂತ್ವನಗೊಳಿಸಿದನೆಂಬ ಅಭಿಪ್ರಾಯಗಳೂ ಪ್ರಚಲಿತದಲ್ಲಿವೆ. ಆದರೆ ದೀಕ್ಷೆ ಪಡೆದ ಬ್ರಾಹ್ಮಣರಾದ ಸ್ಥಳೀಯ ಮೀನುಗಾರರು ಶೂದ್ರರಾಗಿಯೇ ಬಾಳಬೇಕಾಯಿತಲ್ಲದೇ ವಲಸಿಗ ಬ್ರಾಹ್ಮಣರ ಮಟ್ಟಕ್ಕೆ ಏರದಾದರು.[22] ವಲಸಿಗ ಬ್ರಾಹ್ಮಣರ ವರ್ಗಗಳು ನಿಧಾನವಾಗಿ ಭೂಮಿಯ ಒಡೆತನ ಮತ್ತು ಅಧಿಕಾರ ಹೊಂದುವ ವಾರಸುದಾರಿಕೆಯ ಪ್ರಕ್ರಿಯೆಗಳಲ್ಲಿ ತೊಡಗಿ, ಇಲ್ಲಿನ

ಮೂಲನಿವಾಸಿಗಳನ್ನು ಹಿಂದಿಕ್ಕಿ ಇತಿಹಾಸದ ಭಾಗವಾಗಿ ಸೇರಿಕೊಂಡರು. 'ಪರಶುರಾಮನ ಸೃಷ್ಟಿ'ಯ ಈ ಕಥಾನಕ ಸಾಂಪ್ರದಾಯಿಕ ಚರಿತ್ರೆಯಲ್ಲಿ ಮಿಳಿತಗೊಂಡಿತ್ತಾದರೂ, ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾಗಿಯೂ ಪರಿಗಣಿಸಲ್ಪಡುವ ಸಂಪ್ರದಾಯವೊಂದು ಹುಟ್ಟಿಕೊಂಡಿತ್ತು.[23]

ಮಯೂರಶರ್ಮ ಮತ್ತು ಬ್ರಾಹ್ಮಣರ ವಲಸೆಗೆ ಸಂಬಂಧಿಸಿದ ಚರಿತ್ರೆ ಏನೇ ಇದ್ದರೂ ಬ್ರಾಹ್ಮಣರು ಒಮ್ಮೆಲೆ ವಲಸೆ ಬಂದವರಾಗಿರದೇ ನಾನಾ ಕಾಲಘಟ್ಟಗಳಲ್ಲಿ ಈ ಪ್ರಕ್ರಿಯೆಯಲ್ಲಿ ತೊಡಗುತ್ತಾರೆ. ಸಾಮಾನ್ಯಶಕೆ ಸುಮಾರು ನಾಲ್ಕನೇ ಶತಮಾನದ ಶಾಸನಗಳಲ್ಲಿ ಉಲ್ಲೇಖವಿರುವ ತುಳುನಾಡಿನ ಸನಿಹದ ತಾಳಗುಂದದ ಕುಪ್ಪತ್ತೂರಿನ ಅಗ್ರಹಾರಗಳು ಈ ವಾದವನ್ನು ಸಮರ್ಥಿಸುತ್ತವೆಯಲ್ಲದೇ, ಈ ರೀತಿ ಬಂದ ಬ್ರಾಹ್ಮಣರು ಶಿವಮೊಗ್ಗದ ಆಸುಪಾಸಿನಲ್ಲಿ ನೆಲೆಗೊಂಡರೆಂಬ ವಾದವನ್ನು ಮಂಡಿಸುತ್ತದೆ.[24] ಪರಶುರಾಮನ ಸೃಷ್ಟಿಯಿಂದ ಭೂಮಿ ಪಡೆದುಕೊಳ್ಳುವ ಐತಿಹ್ಯವು ಕೇವಲ ಈ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೇ ಕೇರಳದಿಂದ ಗುಜರಾತ್ ವರೆಗಿನ ಪಶ್ಚಿಮ ಕರಾವಳಿಯ ಉದ್ದಕ್ಕೂ ಪಸರಿಸಿದ್ದು, ವಿಭಿನ್ನ ರೂಪವನ್ನು ಹೊಂದಿದೆ ಮಾತ್ರವಲ್ಲ ಪ್ರಬಲ ಆರ್ಥಿಕತೆಯ ಸಾಂಸ್ಕೃತಿಕ ಹಾಗೂ ರಾಜಕೀಯ ಉಪಕರಣಗಳಾಗಿ ಪ್ರಸ್ತುತತೆಗೆ ಕುಂದುಂಟಾಗದಂತೆ ಎಚ್ಚರ ವಹಿಸಿಕೊಂಡು ಬಂದಿದೆ.[25] ದಕ್ಷಿಣಭಾರತಕ್ಕೆ ಸಂಬಂಧಿಸಿದಂತೆ ದೊರೆತ ಸಾಮಾನ್ಯಶಕೆ ಏಳನೇ ಮತ್ತು ಸಾಮಾನ್ಯಶಕೆ ಎಂಟನೇ ಶತಮಾನದ ಶಾಸನಗಳಲ್ಲಿ ಈ ಮೇಲಿನ ವಿಚಾರಗಳ ಉಲ್ಲೇಖವನ್ನು ಕಾಣುವುದರ ಜೊತೆಗೆ ಮೂಲ ಪ್ರಶ್ನೆಯಾದ ಸಮಾಜದ ವಿಭಿನ್ನ ವರ್ಗಗಳು ಭೂಮಿಯ ಮೇಲಿನ ಅಧಿಕಾರವನ್ನು ಪಡೆದುಕೊಂಡು ಹೇಗೆ ಮುಂದುವರೆಸಿಕೊಂಡು ಬಂದವು ಎಂಬುವುದರ ಬಗ್ಗೆ ವಿವರಣೆಯನ್ನು ಕಾಣಬಹುದು. ಬ್ರಾಹ್ಮಣರ ವಲಸೆಯಿಂದಾಗಿ ಮೂಲ ವಾಸ್ತವ್ಯಗಾರರ ಜೀವನ ವ್ಯವಸ್ಥೆಯಲ್ಲಿ ಹೇಗೆ ಬದಲಾವಣೆಗಳಾದವು ಮತ್ತು ಅವರ ಮೇಲೆ ಆಧಿಕಾರ ಸ್ಥಾಪಿಸಿರುವ ಕಾರ್ಯಯೋಜನೆಗಳು ಹೇಗೆ ಕಾರ್ಯಗತಗೊಂಡವು ಎಂಬುವುದು ಸಹ ಈ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಉದಾಹರಣೆಗೆ **ಕುಟ್ಟಿನಿಕ್ಕಿ** ಭೂಮಿಯ ಪೂರ್ವದ ವಾರಸುದಾರರನ್ನು ಬದಲಾಯಿಸುವುದು ಅಂತೆಯೇ **ಮುನ್ ಪೆರಾರ್ರೈ ಮಾರಿ** ಹೊಸತಾಗಿ ಭೂಮಿ ಪಡೆದುಕೊಂಡವರು ಪೂರ್ವದ ವಾರಸುದಾರರನ್ನು ತೆರವು ಮಾಡಿರುವುದು.[26] ಆದರೆ ಕೆಲವು ಸಂದರ್ಭಗಳಲ್ಲಿ ಪೂರ್ವದ ಇಲ್ಲವೇ ಮೂಲ ವಾರಸುದಾರರನ್ನು ತೆರವುಗೊಳಿಸಿಲ್ಲವಾದರೂ ಬದಲಾಗಿ ಭೂಮಿಯ ಮೇಲೆ ಅವರಿಗಿದ್ದ ಅಧಿಕಾರದಲ್ಲಿ ವ್ಯತ್ಯಯವಾಗಿರುವುದನ್ನು ಕಾಣಬಹುದು.

## ಪರಶುರಾಮ ಸೃಷ್ಟಿಯ ವಾರಸುದಾರಿಕ ಅಭಿಮತ

ಕ್ರಿ.ಶಕ ಏಳನೇ ಶತಮಾನದಿಂದ ಹದಿನೈದನೇ ಶತಮಾನದ ವರೆಗಿನ ಶಾಸನಗಳ ಪ್ರಕಾರ ಭೂಒಡೆತನವನ್ನು ಸ್ಥಾಪಿಸುವ ಬ್ರಾಹ್ಮಣರ ಪ್ರಯತ್ನಗಳು ನಿರಂತರವಾಗಿ ಸಾಗಿತು. ಇವರ ಈ ಪ್ರಯತ್ನಗಳಿಗೆ ಪರಶುರಾಮನ ಐತಿಹ್ಯ ಇಂಬು ನೀಡಿದರೆ, ಶಾಸನಕ್ಕನುಗುಣವಾಗಿ ರಾಜನ ಆಡಳಿತ ಮತ್ತು ಆತನ ಪ್ರಭಾವಲಯಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನಗಳು ಇತಿಹಾಸದಲ್ಲಿ ಮಾಡಲ್ಪಟ್ಟಿತ್ತು. ಜೊತೆಗೆ ಸಾಂಪ್ರದಾಯಿಕ ಚರಿತ್ರೆಗಳಲ್ಲೂ ದಾಖಲಾಗಿರುವ ಬ್ರಾಹ್ಮಣರ ಭೂಮಿಯ ಮೇಲಿನ ಹಕ್ಕು ಬಾಧ್ಯತೆಗಳನ್ನು ಪಡೆಯುವ ಯಶಸ್ಸು ಹಾಗೂ 'ಪರಶುರಾಮಸೃಷ್ಟಿ'ಯ ಐತಿಹ್ಯಗಳ ನಡುವೆ ಒಂದು ಬಗೆಯ ಸಂಬಂಧ ಏರ್ಪಡಿಸುವ, ತನ್ಮೂಲಕ ಇತಿಹಾಸಕ್ಕೆ ಸ್ಪಷ್ಟ ರೂಪು ನೀಡುವ ಕಾರ್ಯ ನಡೆಯಿತು. ಸಂಕ್ಷಿಪ್ತವಾಗಿ ಹೇಳುವುದಾದರೆ ಪರಶುರಾಮ ಸೃಷ್ಟಿಯ ಐತಿಹ್ಯ ಭೂಮಿಯ ಒಡೆತನವನ್ನು ಸಮರ್ಥಿಸುವ ಪರಂಪರೆಯನ್ನು ಉದ್ದಿಷ್ಟಗೊಳಿಸಿತು.[27] ತುಳುನಾಡಿನ ಬ್ರಾಹ್ಮಣರ ವಾಸ್ತವ್ಯಕ್ಕೆ ಸಂಬಂಧಿಸಿದಂತೆ ಹಲವು ಭಿನ್ನ ಅಭಿಪ್ರಾಯಗಳಿದ್ದರೂ, ಕೇರಳದ ಬ್ರಾಹ್ಮಣರ ನೆಲೆಗಳಂತೆ ತುಳುನಾಡಿನಲ್ಲಿಯೂ ಆ ಬಗೆಯ ಪ್ರಕ್ರಿಯೆ ನಡೆದಿದೆ ಎಂಬ ಇತಿಹಾಸತಜ್ಞರ ಅಭಿಪ್ರಾಯಗಳನ್ನು ಆಧುನಿಕ ಇತಿಹಾಸ ಒಪ್ಪಿಕೊಂಡಿದೆ. ಕೇಶವನ್ ವೇಲುತಾಟರು ಹೇಳಿದಂತೆ ಕೇರಳದೊಂದಿಗಿನ ಸಾಂಸ್ಕೃತಿಕ ಸಂಬಂಧ ಹಾಗೂ ಇತಿಹಾಸದಲ್ಲಿ ತದ್ರೂಪದ ದೃಶ್ಯಗಳಿರುವುದರಿಂದ ತುಳುನಾಡಿನಲ್ಲಿಯೂ ಕೇರಳದಂತೆ ಬ್ರಾಹ್ಮಣರ ನೆಲೆ ನಿಶ್ಚಿತವಾಗಿ ಆಗಿದೆ.[28]

ಸಾಂಪ್ರದಾಯಿಕ ಚರಿತ್ರೆಯ ಪ್ರಕಾರ ವಲಸಿಗ ಬ್ರಾಹ್ಮಣರು ಆರಂಭದಲ್ಲಿ ಕೇರಳದಲ್ಲಿ ಅರವತ್ತನಾಲ್ಕು ಗ್ರಾಮಗಳನ್ನೂ, ತುಳುನಾಡಿನಲ್ಲಿ ಮೂವತ್ತೆರಡು ಗ್ರಾಮಗಳನ್ನು ಪರಶುರಾಮನಿಂದ ಪಡೆದುಕೊಂಡು ನೆಲೆಗೊಂಡರು. ಗ್ರಾಮಪದ್ಧತಿಯಲ್ಲಿ ಉಲ್ಲೇಖಿತ ತುಳುನಾಡಿನ ಮೂವತ್ತೆರಡು ಗ್ರಾಮಗಳು ವರ್ತಮಾನದಲ್ಲೂ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಬ್ರಾಹ್ಮಣರ ಸುಪರ್ಧಿಯಲ್ಲಿ ಇರುವುದಲ್ಲದೇ ಕೇರಳದ ಬ್ರಾಹ್ಮಣರೊಂದಿಗೆ ಸಾಮಾಜಿಕ, ಧಾರ್ಮಿಕ ಹಾಗೂ ಇತರ ಕ್ಷೇತ್ರಗಳಲ್ಲಿ ಸಂವಹನ ಬೆಳೆಸಿಕೊಂಡಿದೆ. ಮಾತ್ರವಲ್ಲ ಕೃಷಿ ಭೂಮಿಯ ವಿಸ್ತರಣೆಯಿಂದ ಬ್ರಾಹ್ಮಣರ ನೆಲೆಗಳು ತಮ್ಮ ಸಾಂಸ್ಕೃತಿಕ ಸಂಬಂಧಗಳನ್ನು ಬಳಸಿಕೊಂಡು ಕೇರಳದ ನಾಯರ್‌ಗಳನ್ನು ಕೃಷಿ ಕಾರ್ಯದ ಉಸ್ತುವಾರಿಗೆ ಆಹ್ವಾನಿಸಿರುವ ಬಗ್ಗೆ ಇತಿಹಾಸ ತನ್ನದೇ ಆದ ನಿಲುವನ್ನು ವ್ಯಕ್ತಪಡಿಸಿದೆ.[29] ವಲಸಿಗ ಬ್ರಾಹ್ಮಣರ ಪ್ರಭಾವಕ್ಕೆ ಒಳಪಟ್ಟ ಮೂಲನಿವಾಸಿಗಳು ಕಾಲದ ಅಗತ್ಯತೆಗಳಿಗೆ

ಅನುಗುಣವಾಗಿ ಪ್ರಬಲ ಸಂಸ್ಕೃತಿಯನ್ನು ಒಪ್ಪಿ ಅನುಸರಿಸುವ ಇಲ್ಲವೇ ವಿರೋಧ ವ್ಯಕ್ತಪಡಿಸಿ ತಿರಸ್ಕರಿಸಿರುವ–ಎರಡು ಪ್ರಯತ್ನಗಳು ಸಾಗಿತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[30]

ತುಳುನಾಡಿನ ಸಾಂಪ್ರದಾಯಿಕ ಚರಿತ್ರೆಗಳೆಂದು ಮಾನ್ಯತೆ ಪಡೆದಿರುವ ಗ್ರಾಮಪದ್ಧತಿ, ಸ್ಕಂದಪುರಾಣ ಹಾಗೂ ಸಹ್ಯಾದ್ರಿಖಂಡ, ಕಾಲ ಕಾಲಕ್ಕೆ ವಿಷಯ ವ್ಯಾಖ್ಯಾನಗೊಂಡು ಬ್ರಾಹ್ಮಣರ ಶ್ರೇಷ್ಠತೆ, ಅನನ್ಯತೆ ಹಾಗೂ ವಿಶೇಷಾಧಿಕಾರಗಳನ್ನು ಕಾಪಾಡಿಕೊಂಡು ಬಂತು. ಪರಶುರಾಮನ ಸೃಷ್ಟಿಯಿಂದ ಭೂಮಿ ಪಡೆದುಕೊಂಡು ವಾಸ್ತವ್ಯ ಹೂಡಿರುವ ಬ್ರಾಹ್ಮಣರು ಈ ಪ್ರದೇಶದಲ್ಲಿ ನಿಧಾನವಾಗಿ ಭದ್ರಗೊಂಡು ವಿಜಯನಗರದ ಆಡಳಿತದ ಅವಧಿಯಲ್ಲಿ ಮೂಲ ನಿವಾಸಿಗಳ ಮೇಲೆ ಪ್ರಭಾವ ಬೀರಿರುವುದರ ಜೊತೆಗೆ ಆಡಳಿತದಲ್ಲಿ ಕೈಯಾಡಿಸಲು ಆರಂಭಿಸಿದರು. ಆದರೆ ಬ್ರಾಹ್ಮಣರ ವಲಸೆಪೂರ್ವದಲ್ಲಿ ತುಳುನಾಡಿನಲ್ಲಿ ಅಧಿಕಾರ ನಡೆಸಿ ನೆಲೆಯಾಗಿದ್ದ ಬಲಾಢ್ಯರಾಗಿದ್ದ ಹುಬಸಿಗ ಮತ್ತು ಅವನ ಅನುಯಾಯಿಗಳಿಂದ ವಲಸಿಗ ಬ್ರಾಹ್ಮಣರ ವಿರುದ್ಧ ಸಂಘರ್ಷ ಇಲ್ಲವೇ ಅಧಿಕಾರಕ್ಕಾಗಿ ಅಂದೋಲನ ಪ್ರಾರಂಭಗೊಂಡಿತು. ಈ ಹೋರಾಟದಲ್ಲಿ ಮೂಲನಿವಾಸಿಗಳ ವಿಫಲತೆಯೆ ಹೆಚ್ಚು. ಉದಾಹರಣೆಗೆ ಸುಮಾರು ಏಳು ಬುಡಕಟ್ಟು ಜನಾಂಗಗಳಾದ; ಬಕ್ಕ, ಬಾಕುಡ, ಮೇರ, ಗೊಡ್ಡ, ಬಿಲ್ಲ, ಹಸಳ್ವ, ಕೊರಗರು ಬ್ರಾಹ್ಮಣರೊಂದಿಗೆ ಹೋರಾಡಿ ಸೋಲು ಅನುಭವಿಸಬೇಕಾಯಿತು. ಇದರಿಂದಾಗಿ ಮೂಲನಿವಾಸಿ ಬುಡಕಟ್ಟು ಜನಾಂಗಗಳ ಸುಮಾರು ಮೂವತ್ತೆರಡು ವಾಸ್ತವ್ಯದ ನೆಲೆಗಳು ಸುಲಭವಾಗಿ ಬ್ರಾಹ್ಮಣರ ವಶವಾಗಿ ಅವರ ಪ್ರಧಾನ ನೆಲೆಗಳಾಗಿ ಮಾರ್ಪಾಡುಗೊಂಡವು.[31] ಇತಿಹಾಸ ಈ ಘಟನೆಗೆ ಸಂಬಂಧಿಸಿದಂತೆ ಗ್ರಾಮಪದ್ಧತಿಯ ಕೊನೆಭಾಗದಲ್ಲಿ ಉಲ್ಲೇಖವಿದ್ದು, ಮೂವತ್ತೆರಡು ಬ್ರಾಹ್ಮಣ ಕುಟುಂಬಗಳು ಈ ಪ್ರದೇಶದಲ್ಲಿ ನೆಲೆ ನಿಂತು, ಮೂವತ್ತೆರಡು ಹಳ್ಳಿಗಳಲ್ಲಿ ಪ್ರಭಾವ ವಿಸ್ತರಿಸಿಕೊಂಡರು.

ಪರಶುರಾಮ ಸೃಷ್ಟಿಯ ಐತಿಹ್ಯ, ಸಾಂಪ್ರದಾಯಿಕ ಚರಿತ್ರೆಗಳು, ಕ್ಷೇತ್ರಮಹಾತ್ಮೆ ಮತ್ತು ಪಾಡ್ದನಗಳಲ್ಲಿ ಉಲ್ಲೇಖಿಸಲ್ಪಟ್ಟ ಈ ಪ್ರದೇಶದ ಸಾಂಸ್ಕೃತಿಕ ವಿವರಣೆಗಳನ್ನು ಪರಿಶೀಲಿಸಿದಾಗ ವಲಸಿಗ ಬ್ರಾಹ್ಮಣರು ಪ್ರಬಲ ಸಂಸ್ಕೃತಿಯ ಜನಸಮುದಾಯಗಳಾಗಿ ಪರಿವರ್ತನೆಗೊಂಡು, ಇಲ್ಲಿನ ಅರಸರ ಮೇಲೆ ಪ್ರಭಾವ ಬೀರಿ ಅವರ ಸಹಾಯದಿಂದ ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ವಿಶೇಷ ಸ್ಥಾನಮಾನ, ಅಂತಸ್ತು ಹಾಗೂ ಅಧಿಕಾರವನ್ನು ಹೊಂದಿ, ಭೂಮಿಯನ್ನು ಪಡೆದು ಭೂಮಿಯ ವಾರಸುದಾರಿಕೆಯನ್ನು ಸ್ಥಾಪಿಸಿಕೊಂಡರು.[32] ಆದರೆ ವಸಾಹತುಶಾಹಿ ಇತಿಹಾಸ ಬರವಣಿಗೆಗಳಲ್ಲಿ ಇದನ್ನು ಭಿನ್ನರೂಪವಾಗಿ ಚಿತ್ರಿಸಲಾಗಿದೆ. ಬುಖಾನನ ಪ್ರಕಾರ ಬ್ರಾಹ್ಮಣರು ಈ ದೇಶದ ನೈಜ ಒಡೆಯರು ಮಾತ್ರವಲ್ಲ ತುಳುನಾಡನ್ನು ಪರಶುರಾಮನು ಬ್ರಾಹ್ಮಣರಿಗೋಸ್ಕರವೇ ಸೃಷ್ಟಿಸಿದ್ದಾನೆ.[33]. ಈ ಬಗೆಯ ಇತಿಹಾಸದ

ಮರುವ್ಯಾಖ್ಯಾನವು ಬ್ರಾಹ್ಮಣರು 'ಪರಶುರಾಮನ ಸೃಷ್ಟಿ'ಯಿಂದ ಭೂಮಿ ಪಡೆದಿದ್ದಾರೆ ಎಂಬ ಐತಿಹ್ಯವನ್ನು ಬಲಪಡಿಸಿದೆಯಲ್ಲದೇ, ವಸಾಹತುಶಾಹಿ ಇತಿಹಾಸದಲ್ಲೂ ಕೂಡಾ ಬ್ರಾಹ್ಮಣರೇ ನಿಜವಾದ ಭೂಮಿಯ ವಾರಸುದಾರರು ಎಂದು ಅಭಿವ್ಯಕ್ತಗೊಂಡಿತು.[34]

ಬ್ರಾಹ್ಮಣರ ವಲಸೆಯ ಚರಿತ್ರೆಗೆ ಸಂಬಂಧಿಸಿದಂತೆ ಹಲವಾರು ಸಂಶೋಧನೆಗಳು ಮಾಡಲ್ಪಟ್ಟರೂ ಪ್ರಖ್ಯಾತ ಚರಿತ್ರಕಾರರಾದ ವೀಣಾದಾಸ್‌ರ ಸಂಶೋಧನೆಯ ತೀರ್ಮಾನಗಳು ಬುದ್ಧಿಜೀವಿಗಳ ಬರವಣಿಗೆಗಳಲ್ಲಿ ಹೆಚ್ಚು ಚರ್ಚಿತವಾಗಿದೆ. ಅಂತೆಯೇ ಪಶ್ಚಿಮ ಕರಾವಳಿಯ ಭೂಭಾಗಗಳು, ಭೌಗೋಳಿಕ ರಚನೆ, ಮಾನವನ ವಾಸ್ತವ್ಯದ ಪರಿಕಲ್ಪನೆ ಪರಶುರಾಮನ ಸೃಷ್ಟಿಯೊಂದಿಗೆ ಸಮೀಕರಣಗೊಂಡು ಅವುಗಳ ಬಗ್ಗೆ ಸಾಕಷ್ಟು ಅಧ್ಯಯನಗಳು ಮಾಡಲ್ಪಟ್ಟಿವೆ. ಅಧ್ಯಯನಗಳ ಪ್ರಕಾರ ಒಂದು ಪ್ರದೇಶದ ಚರಿತ್ರೆ ರಚನೆಗೊಳ್ಳುವಲ್ಲಿ ಅನೇಕ ಅಂಶಗಳು ಪ್ರೇರಣೆಗಳಾಗುತ್ತವೆ. ತುಳುನಾಡಿನ ಚರಿತ್ರೆ ರೂಪುಗೊಳ್ಳುವ ಪ್ರೇರಣೆಗಳಲ್ಲಿ ಪರಶುರಾಮ ಐತಿಹ್ಯವೂ ಒಂದು, ಮಾತ್ರವಲ್ಲ ಬಹಳಷ್ಟು ಮೌಲ್ಯಗಳು ಈ ಪ್ರದೇಶದ ಚರಿತ್ರೆಯೊಂದಿಗೆ ಸಂಬಂಧಗಳನ್ನು ಬೆಳೆಸಿಕೊಂಡಿವೆ. ಪರಶುರಾಮ ಸೃಷ್ಟಿಯ ಐತಿಹ್ಯದ ಪ್ರಕಾರ ತುಳುನಾಡಿನಲ್ಲಿ ಪ್ರಭಾವಿ ಆರ್ಥಿಕತೆಯ ಜನಸಮುದಾಯಗಳು, ಅದರಲ್ಲೂ ಬ್ರಾಹ್ಮಣವರ್ಗ ತಮ್ಮ ವಾಸ್ತವ್ಯವನ್ನು ಚಾರಿತ್ರಿಕಗೊಳಿಸುವ ನಿಟ್ಟಿನಲ್ಲಿ ಪರಶುರಾಮ ಸೃಷ್ಟಿಯ ಕಥಾನಕವನ್ನು ರೂಪಿಸಿದೆಯಲ್ಲದೇ ವಾಸ್ತವ್ಯದ ಅಧಿಕಾರ ದ್ಯೋತಕವಾಗಿ ಈ ಭೂಭಾಗವನ್ನು ಪರಶುರಾಮ ಸೃಷ್ಟಿಯ ಚರಿತ್ರೆಯಾಗಿ ಮಾನ್ಯಗೊಳಿಸಿರುವುದನ್ನು ಕಾಣಬಹುದು.[35] ಆದುದರಿಂದ ತುಳುನಾಡಿನ ಇತಿಹಾಸವನ್ನು ಅಧ್ಯಯನ ಮಾಡುವಲ್ಲಿ ಪರಶುರಾಮನ ಸೃಷ್ಟಿಯ ವಾರಸುದಾರಿಕೆಯ ಅಭಿಮತವನ್ನು ಪರಿಗಣಿಸದಿದ್ದರೇ ಅರ್ಥಪೂರ್ಣವಾಗಿರುವುದಿಲ್ಲ.[36] ತುಳುನಾಡನ್ನಾಳಿದ ರಾಜರುಗಳ ಸಮ್ಮತಿಯಿಂದಾಗಿದ್ದಲ್ಲಿ ಬ್ರಾಹ್ಮಣರ ವಾಸ್ತವ್ಯ ಈಗಾಗಲೇ ವ್ಯವಸ್ಥೆಗೊಂಡಿದ್ದ 'ಪ್ರಭಾವಿ ಆರ್ಥಿಕತೆಯ ಭಾಗವಾಗಿ ಪರಿಗಣಿಸಲ್ಪಟ್ಟವು' ಎಂಬುವುದು ಕೆಲವು ಚರಿತ್ರಕಾರರು ಅಭಿಪ್ರಾಯಿಸಿದ್ದಾರೆ. ತುಳುನಾಡಿನಲ್ಲಿ ವಾಸ್ತವ್ಯ ಹೂಡಿದ ಬ್ರಾಹ್ಮಣರು ಭೂಮಿಯ ಒಡೆತನ ಪಡೆಯುವ ಪ್ರಕ್ರಿಯೆಗಳನ್ನು ತಮಗೆ ಸರಿಕಂಡ ವ್ಯವಸ್ಥೆಗೆ ಹೊಂದಿಸುವುದರ ಜೊತೆಗೆ ಅವರ ಮಾರ್ಗಪರಂಪರೆಯನ್ನು ವಾಸ್ತವ್ಯ ಹೂಡಿರುವ ಭೌಗೋಳಿಕ ವ್ಯವಸ್ಥೆಗೆ ಪರಿವರ್ತಿಸಿರುವುದನ್ನು ಪುರಾಣ, ಸ್ಥಳಮಹಾತ್ಮೆ, ಐತಿಹ್ಯ ಮುಂತಾದವುಗಳಲ್ಲಿ ಕಾಣಬಹುದು.[37] ತುಳುನಾಡಿನ ಸಾಂಪ್ರದಾಯಿಕ ಚರಿತ್ರೆಯ ಕೊಂಡಿಗಳಾದ ಪುರಾಣ, ಉಪಪುರಾಣ, ಸ್ಥಳಪುರಾಣ, ತೀರ್ಥಪುರಾಣ, ಜಾತಿಪುರಾಣ, ಸ್ಥಳಮಹಾತ್ಮೆ, ಆಶ್ಚರ್ಯವೆಂಬಂತೆ ಇಲ್ಲಿನ ಅಲಿಖಿತ ಮೌಖಿಕ ಚರಿತ್ರೆ ಮುಂತಾದವುಗಳು ಮಾರ್ಗಪರಂಪರೆಯ ಚರಿತ್ರಾ ಸಂಬಂಧ ಬೆಳೆಸಿರುವುದು ಬ್ರಾಹ್ಮಣರು ಭೂಮಿಯ ಒಡೆತನ ಮತ್ತು ಅಧಿಕಾರ ಹೊಂದುವಲ್ಲಿ ಅನುಕೂಲ ಮಾಡಿಕೊಟ್ಟಿದೆ. ಉದಾಹರಣೆಗೆ ಈ ರೀತಿಯ ಬೆಳವಣಿಗೆಗಳಿಗೆ

ಇಂಬು ಕೊಡುವಂತೆ ಪ್ರಾಚೀನ ಭಾರತದ ಪ್ರಾಕೃತ ಭಾಷೆಯಲ್ಲಿದ್ದ ಪುರಾಣಗಳು ಬ್ರಾಹ್ಮಣರಿಂದಾಗಿ ಸಂಸ್ಕೃತಕ್ಕೆ ಬರಹರೂಪದಲ್ಲಿ ತರ್ಜುಮೆಗೊಂಡು ಚರಿತ್ರೆಯ ಮೂಲಗಳಾಗಿ ಇಲ್ಲವೇ ಇತಿಹಾಸದ ಪ್ರಜ್ಞೆಗಳಾಗಿ ಪರಿಗಣಿಸಲ್ಪಟ್ಟವು. ಈ ಭಾಷಾಂತರ ಬ್ರಾಹ್ಮಣರ ಜ್ಞಾನದ ವಾರಸುದಾರಿಕ ಸ್ಥಾಪನೆಯ ಉದ್ದೇಶಕ್ಕೆ ಹೆಚ್ಚು ಬಲ ತಂದುಕೊಟ್ಟಿತು. ಇದು ಮುಂದೊಂದು ಭಾರಿ ಆಡಳಿತ–ಅಧಿಕಾರ ವ್ಯವಸ್ಥೆಯಲ್ಲಿಯೂ ಸಾಕಷ್ಟು ಪರಿವರ್ತನೆ ಉಂಟುಮಾಡುವಲ್ಲಿ ಕಾರಣವಾಯಿತು. ಹೀಗೆ ಬ್ರಾಹ್ಮಣರ ಹಿತಾಸಕ್ತಿಗಳಿಗೆ ಅನುಗುಣವಾಗಿ ಮಾರ್ಗಪರಂಪರೆಯ ಕಾರ್ಯಯೋಜನೆಗಳು ರೂಪುಗೊಂಡು ರಾಜ್ಯದ ಮೂಲಭೂತ ಸ್ವರೂಪದಲ್ಲಿ ಬದಲಾವಣೆ ತಂದಿತ್ತೆಂದು ಐತಿಹಾಸಿಕವಾಗಿ ವಿಶ್ಲೇಷಿಸಲಾಗಿದೆ.[38] ಸಂಕ್ಷಿಪ್ತವಾಗಿ ಹೇಳುವುದಾದರೆ ಬರಹರೂಪದ ಪುರಾಣ, ಸಾಹಿತ್ಯಗಳು ಮತ್ತು ವಂಶಾವಳಿಗಳು ಆರ್ಥಿಕ ಬದಲಾವಣೆಯ ಸಂಕೇತಗಳಾಗಿ, ಚರಿತ್ರೆ ಬರಹ ರೂಪಕ್ಕೆ ಇಳಿದಿರುವುದರಿಂದ ಆ ಕಾಲದ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳು ಪಲ್ಲಟಗೊಂಡವು.

ತುಳುನಾಡಿನ ಚರಿತ್ರೆಯನ್ನು ಅವಲೋಕಿಸಿದಾಗ ಬ್ರಾಹ್ಮಣರಿಗೆ ಭೂಮಿಯನ್ನು ದಾನವನ್ನಾಗಿ ನೀಡುವ ಸಂಪ್ರದಾಯಗಳು ಸಾಮಾನ್ಯಶಕೆ ಏಳನೇ ಶತಮಾನದಲ್ಲಿ ಪ್ರಾರಂಭಗೊಂಡವು. ವಿಜಯನಗರ ಆಡಳಿತದ ಕಾಲಾವಧಿಯಲ್ಲಿ ಭೂಮಿಯ ದಾನದ ಪ್ರಕ್ರಿಯೆಗಳು ಹೆಚ್ಚು ಮಹತ್ವ ಪಡೆದಿರುವುದನ್ನು ದಾನಶಾಸನಗಳಿಂದ ಸಮರ್ಥಿಸಿಕೊಳ್ಳಬಹುದು.[39] ಈ ವಿಚಾರ ಇನ್ನಷ್ಟು ಪುಷ್ಟಿಗೊಳ್ಳುವುದು ಸಾಮಾನ್ಯಶಕೆ ಆರನೇ ಶತಮಾನದಿಂದ ಹದಿನಾರನೇ ಶತಮಾನದ ವರೆಗೆ ತುಳುನಾಡನ್ನಾಳಿದ ರಾಜವಂಶಗಳ ಚರಿತ್ರೆಗೆ ಪರಶುರಾಮ ಮತ್ತು ಅವನ ಸುತ್ತಲಿರುವ ಪ್ರಭಾವಲಯಗಳಲ್ಲಿ ಸೇರ್ಪಡೆಯಾಗಿ ಭದ್ರವಾಗಿ ಮೊಹರಾಗಿದೆ.[40] ಚರಿತ್ರಕಾರರು ಶಾಸನಗಳ ಉಲ್ಲೇಖ ಆಧರಿಸಿ ತುಳುನಾಡು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಾಗ ಬ್ರಾಹ್ಮಣರ ವಲಸೆ ಗಣನೀಯವಾಗಿತ್ತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಾಮಾನ್ಯಶಕೆ ಸುಮಾರು ಆರರಿಂದ ಸಾಮಾನ್ಯಶಕೆ ಹತ್ತನೇ ಶತಮಾನಗಳ ಮಧ್ಯೆ ಈ ಪ್ರದೇಶ ಬ್ರಾಹ್ಮಣರ ವಾಸ್ತವ್ಯದಿಂದ ಪ್ರಭಾವಕ್ಕೆ ಒಳಗಾಗಿ ಭತ್ತದ ಕೃಷಿ ವ್ಯವಸಾಯ ಸಮಾಜವನ್ನು ವರ್ಗ ವಿನ್ಯಾಸವುಳ್ಳ ಸಮಾಜವಾಗಿ ಪರಿವರ್ತಿಸಿರುವುದರಿಂದ ಈ ಕಾಲವನ್ನು ಸಮಾಜ ಪದರುಗೊಳ್ಳುವಿಕೆ, ಶ್ರೇಣಿಕರಣ ಮತ್ತು ವಾರಸುದಾರಿಕೆಯ ಚಿಂತನೆಗೆ ಸಂಬಂಧಿಸಿದ ತಿರುವಿನ ಕಾಲಘಟ್ಟ ಎಂದು ವ್ಯಾಖ್ಯಾನಿತವಾಗಿದೆ.[41] ಜೊತೆಗೆ ಸಂಘರ್ಷದ ಜೀವನ ನಡೆಸಿ ಅವಾಸ ನಿರ್ಮಿಸಿ ನೆಲೆಯಾಗಿದ್ದ ಪಂಗಡಗಳು ಇದೇ ಬ್ರಾಹ್ಮಣರ ಪ್ರಭಾವಕ್ಕೆ ಒಳಗಾದಾಗ ಊಳಿಗಮಾನ್ಯ ಪದ್ಧತಿ, ಭೂಮಾಲಿಕತನ–ಮಧ್ಯವರ್ತಿ ವ್ಯವಸ್ಥೆ, ದಾನ, ಧರ್ಮ ಇತ್ಯಾದಿ ಚಿಂತನೆಗಳನ್ನು ಒಳಗೊಂಡ ಉತ್ಪಾದನ ವ್ಯವಸ್ಥೆಯಲ್ಲಿ ಸಾಕಷ್ಟು ಸ್ಥಿತ್ಯಂತರವಾಗಿ ಶ್ರೇಣಿಕೃತ ಸಮಾಜ ವ್ಯವಸ್ಥೆಯ ಅಡಿಪಾಯವನ್ನು ಇನ್ನಷ್ಟು ಗಟ್ಟಿಗೊಳಿಸಿತು.[42]

ತುಳುನಾಡಿನ ವಸಾಹತುಪೂರ್ವದ ಅವಧಿಯಲ್ಲಿ ರೂಪುಗೊಂಡ ದೈವಸ್ಥಾನ, ದೇವಸ್ಥಾನ, ಮಠ, ಬಸದಿಯ ಆಡಳಿತದ ಪರಿಧಿಗಳಿಗೆ ಒಳಪಡುವ ಇಲ್ಲವೇ ಅವುಗಳಿಂದ ಹೊರಗಿದ್ದುಕೊಂಡು, ಸಮಾನಾಂತರವಾಗಿ ರೂಪುಗೊಂಡ ವ್ಯವಸ್ಥೆಗಳನ್ನು ಪರಿಶೀಲಿಸಿದಾಗ ವಿವಿಧ ಕಸುಬುಗಳು, ಕೃಷಿ ಅಥವಾ ವೃತ್ತಿ ಆಧಾರಿತ ಚಟುವಟಿಕೆಗಳು ಮತ್ತು ನೈಪುಣ್ಯತೆಗಳು ಸಮುದಾಯಗಳ ಸ್ಥಾನಮಾನ ನಿರ್ಧರಿಸುವಲ್ಲಿ ಮಹತ್ತರ ಪಾತ್ರ ನಿರ್ವಹಿಸಿದವು.[43] ತುಳುನಾಡಿನ ವಂಶಾವಳಿಗಳು, ಸ್ಥಳೀಯ ಪುರಾಣಗಳು, ಮಾರ್ಗಪರಂಪರೆಯ ಪುರಾಣಗಳೊಂದಿಗೆ ಸಹಚರ್ಯೆ ಹೊಂದಿದ್ದರಿಂದ ಸ್ಥಳೀಯ ಪ್ರಭಾವಿ ಸಮುದಾಯದ ಚರಿತ್ರೆಗಳು ಅರಸು ಮನೆತನಗಳ ಚರಿತ್ರೆಯೊಳಗೆ ಸಮೀಕರಿಸಲ್ಪಟ್ಟವು. ಹುದುಗಿಸಿರುವ ಚರಿತ್ರೆಯಲ್ಲಿನ ಸಂಪ್ರದಾಯಗಳು, ಸ್ಥಳಪುರಾಣ ಹಾಗೂ ಕ್ಷೇತ್ರಮಹಾತ್ಮೆಗಳಿಂದ ಪ್ರಬಲ ಆರ್ಥಿಕತೆಯ ಸಮಾಜಗಳ ಸೃಷ್ಟಿಯಾಗಿ ಅಧೀನ ಆರ್ಥಿಕತೆಗಳನ್ನು ಹತೋಟಿಯಲ್ಲಿಡುವ ಮತ್ತು ಅವುಗಳ ಮೇಲೆ ಅಧಿಕಾರ ಚಲಾಯಿಸಲು ವ್ಯವಸ್ಥೆಗೊಳಿಸಿದ ಸಾಧನಗಳಾಗಿ ಮಾರ್ಪಟ್ಟವು. ಹೀಗೆ ಮಾರ್ಗಪರಂಪರೆಯ ಪುರಾಣಗಳು ಸ್ಥಳೀಯ ಸಮಾಜದ ಸಂಸ್ಕೃತಿಯನ್ನು ಪ್ರಬಲ ಸಂಸ್ಕೃತಿಯೊಂದಿಗೆ ಏಕರೂಪಗೊಳಿಸಿ ಕೆಲವೊಂದು ಪುರಾಣಗಳ ಮೂಲಕ ಮುಂದಿನ ತಲೆಮಾರುಗಳಗೆ ದಾಟಿಸಿಬಿಡುತ್ತಾರೆ. ರಾಜ್ಯದ ಉಗಮ, ರಾಜ, ಋಷಿ ಪರಂಪರೆಯ ಅವಕಾಶವಾದಿತನದೊಂದಿಗೆ ಬ್ರಾಹ್ಮಣರು ಸಮಾಜದ ಕೇಂದ್ರವ್ಯವಸ್ಥೆಗಳಾಗಿ ರೂಪುಗೊಳ್ಳುವ ಹಂತವು ತುಳುನಾಡಿನಲ್ಲಿ ಅಧಿಕಾರ ಪಡೆಯುವ ಕಾರ್ಯಯೋಜನೆಗಳಾಗಿ ವಿಕಾಸಗೊಂಡವು. ಪ್ರಬಲ ಸಂಸ್ಕೃತಿಯ ಆಶಯವಾಗಿ ಅಧೀನ ಆರ್ಥಿಕತೆಯ ಪ್ರಭಾವಿಗಳನ್ನು ತಮ್ಮ ಅಧಿಕಾರಕ್ಕೆ ಕುಂದುಬಾರದ ರೀತಿಯಲ್ಲಿ ಕ್ಷತ್ರಿಯತ್ವಕ್ಕೆ ಏರಿಸುವ ಪ್ರಯತ್ನಗಳಾದವು ಜೊತೆಗೆ ಭೂಮಿ ಮತ್ತು ಸಂಪತ್ತುಗಳನ್ನು ದಾನರೂಪದಲ್ಲಿ ಪಡೆದ ಬ್ರಾಹ್ಮಣ ವರ್ಗಗಳ ನೆಲೆಯೂ ಸಮಾಜದಲ್ಲಿ ಮಾನ್ಯತೆಗಳನ್ನು ಪಡೆದ ಉದಾಹರಣೆಗಳನ್ನು ಪುರಾಣಗಳ ಮೂಲಕ ಸಮರ್ಥಿಸಿಕೊಳ್ಳಬಹುದು.

ಪ್ರಾಚೀನ ಕಾಲದಲ್ಲಿ ಅಲಿಖಿತ ಹಾಗೂ ಮೌಖಿಕ ಪರಂಪರೆಗಳು ಹಾಗೂ ಪುರಾಣಗಳ ಮೂಲಕ ತನ್ನ ಧಾರ್ಮಿಕ ನೆಲೆಗಳನ್ನು ಭದ್ರಗೊಳಿಸಲು ಬ್ರಾಹ್ಮಣವರ್ಗ ಯಶಸ್ವಿಯಾಯಿತೆಂಬುವುದನ್ನು ಉಲ್ಲೇಖಿಸಲಾಗಿದೆ. ಉದಾಹರಣೆಗೆ ಬುಡಕಟ್ಟು ನಾಯಕರ ಸಮ್ಮುಖದಲ್ಲಿ ಬ್ರಾಹ್ಮಣರಿಂದಲೇ ವೇದ ಇತ್ಯಾದಿಗಳು ಪಠಿಸಲ್ಪಡುವ ಸಂಪ್ರದಾಯ ಕ್ರಮೇಣ ಈ ಕಥಾನಕಗಳು ಮಹಾಕಾವ್ಯಗಳಾಗಿ ಪರಿವರ್ತನೆಗೊಂಡರೂ ಮಹಾಕಾವ್ಯಗಳ ಉದ್ದೇಶ ಅಧಿಕಾರದ ವಾರಸುದಾರಿಕೆಯನ್ನು ನಿರ್ದೇಶಿಸುವುದಾಗಿರುವುದರಿಂದ ಇವುಗಳು ರಾಜತ್ವದ ವ್ಯವಸ್ಥೆಯಲ್ಲಿ ರಾಜನ ಎದುರಿಗೆ ಮುಖಸ್ತುತಿ ಗ್ರಂಥಗಳಾಗಿ ಮಾರ್ಪಟ್ಟವು. ಪುರಾಣಗಳನ್ನು ವಿಶ್ಲೇಷಣಾತ್ಮಕವಾಗಿ ಪರಿಶೀಲಿಸಿದಲ್ಲಿ ಸಮಾಜದ ಪ್ರಭಾವಿ ಗುಂಪುಗಳು ಪುರಾಣಗಳನ್ನು ಸೃಷ್ಟಿಸಿ ತಮ್ಮ

ಅಗತ್ಯತೆಗಳನ್ನು ಪೂರೈಸಿಕೊಳ್ಳುವ ಸಾಧ್ಯತೆಗಳು ಸ್ಪಷ್ಟವಾಗುತ್ತದೆ. ಮುಂದುವರೆದು ಮಾರ್ಗಪರಂಪರೆಯ ಆಚರಣೆಗಳನ್ನು ಅಧ್ಯಯನ ಮಾಡಿದಾಗ ಅಧಿಕಾರದಲ್ಲಿ ಪಾಲುಕೊಡಿಸುವ ವಿಧಿಗಳನ್ನು ಬ್ರಾಹ್ಮಣ ವರ್ಗವೇ ಸೃಷ್ಟಿಸಿರುವುದು ಕಂಡುಬರುತ್ತದೆ.

ತುಳುನಾಡಿನ ಸಂದರ್ಭದಲ್ಲಿನ ಮೌಖಿಕ ಆಕರಗಳು ಅಧುನಿಕಪೂರ್ವ ಸಮಾಜದ ಚರಿತ್ರೆಯ ಜಾಗೃತ ಆಕರಗಳಾಗಿದ್ದು ಸಮಾಜದಲ್ಲಿರುವ ಬದಲಾವಣೆಗಳು ವಿಭಿನ್ನ ಕಾಲಘಟ್ಟಗಳಲ್ಲಿ ಹೇಗಾಗಿವೆ ಎಂಬುವುದನ್ನು ತಿಳಿಸುತ್ತದೆ. ಆದರೆ ಪುರಾಣ, ಚರಿತೆ, ವಂಶಾವಳಿ, ಮಹಾತ್ಮೆ ಮುಂತಾದವುಗಳು ಬರವಣಿಗೆಗೆ ಇಳಿಸಲ್ಪಟ್ಟಾಗ ಸಾಂಪ್ರದಾಯಿಕ ಚರಿತ್ರೆಯಾಗಿ ಮಾರ್ಪಾಡು ಹೊಂದಿ ಭೂಮಿಯ ಮೇಲಿನ ವಾರಸುದಾರಿಕೆಯನ್ನು ವಾಖ್ಯೀಕರಿಸಿ ಪರಿಸ್ಫುಟಗೊಳಿಸಿರುವುದು ಕಂಡುಬರುತ್ತದೆ. ಈ ಕಥಾನಕಗಳು ನಿರ್ದಿಷ್ಟ ಗುಂಪಿನ ಇಲ್ಲವೆ ಸಮಾಜದ ಬಲಿಷ್ಠ ಗುಂಪುಗಳ, ಅದರಲ್ಲೂ ಬ್ರಾಹ್ಮಣವರ್ಗದ ಉದ್ದೇಶಗಳನ್ನು ಹಾಗೇ ಕಾರ್ಯಯೋಜನೆಗಳನ್ನು ಮುಂದಿಟ್ಟು ಅಧಿಕಾರಗಳನ್ನು ನ್ಯಾಯಬದ್ಧಗೊಳಿಸುತ್ತವೆ.[44] ಇದಕ್ಕನುಗುಣವಾಗಿ ತುಳುನಾಡಿಗೆ ಬರುವ ಕೃಷಿ ಪ್ರಧಾನ ದೈವಗಳ ಪ್ರಸರಣಗಳು ಕೂಡಾ ಅಧಿಕಾರ, ಮಾನ್ಯತೆಗಳನ್ನು ಪಡೆಯುವಲ್ಲಿನ ಮತ್ತು ಜನರಿಂದ ಆರಾಧನೆಯನ್ನು ಪಡೆಯುವ ವಾಸ್ತವಿಕ ವಿಚಾರಗಳನ್ನು ವಾರಸುದಾರಿಕೆಯ ಪರಿಧಿಯಲ್ಲಿ ಅಧ್ಯಯನಿಸುವುದು ಅಗತ್ಯ ಎಂದೆನಿಸುತ್ತದೆ.[45]

## ಬ್ರಾಹ್ಮಣ ನೆಲೆ ಮತ್ತು ಕೇಂದ್ರಗಳು

ಚರಿತ್ರೆಯ ಪ್ರಕಾರ ವಸಾಹತುಪೂರ್ವದ ತುಳುನಾಡಿನಲ್ಲಿ ಬ್ರಾಹ್ಮಣರ ನೆಲೆಗಳೆಂದರೆ ಮೂವತ್ತೆರಡು ಗ್ರಾಮಗಳು ಮಾತ್ರ. ಈ ಗ್ರಾಮಗಳು ಪೂರ್ವ ಅಥವಾ ಪೂರ್ವಶೋಡಷ ಮತ್ತು ಪಶ್ಚಿಮ ಅಥವಾ ಪಶ್ಚಿಮ ಷೋಡಶ ಗ್ರಾಮಗಳೆಂದು ವಿಂಗಡಗೊಂಡಿದ್ದವು. ಬ್ರಾಹ್ಮಣರ ಕೂಡುಕಟ್ಟಿನ ದೃಷ್ಟಿಯಿಂದ ಈ ಮೂವತ್ತೆರಡು ಗ್ರಾಮಗಳನ್ನು ಎರಡು ಪಾಲು ಮಾಡಲಾಗಿದೆ. ಇವುಗಳಲ್ಲಿ ಕೋಟ ಬ್ರಾಹ್ಮಣರ ನೆಲೆಗಳ ಬಗ್ಗೆ ಶಾಸನಗಳಲ್ಲಿ ಸ್ಪಷ್ಟ ಉಲ್ಲೇಖಗಳಿರುವುದರಿಂದ ತನ್ನದೇ ಆದ ಚಾರಿತ್ರಿಕ ಛಾಪು ಮೂಡಿಸಿದೆ. ಇದು ಬ್ರಾಹ್ಮಣರ ವಲಸೆಯ ಪ್ರಮುಖ ಕೇಂದ್ರವಾಗಿತ್ತು. ಜೊತೆಗೆ ಕೋಟದಲ್ಲಿ ಬ್ರಾಹ್ಮಣರ ಹತ್ತುಸಾವಿರ ಜಗತ್ತು ಆಸ್ತಿತ್ವದಲ್ಲಿತ್ತಲ್ಲದೇ ಅದು ಪ್ರಮುಖ ರಾಜಕೀಯ ಕೇಂದ್ರವಾಗಿತ್ತು. ಕೂಟ ಮಹಾಜಗತ್ತು, ಹತ್ತುಸಾವಿರ ಸ್ವಾಯತ್ತ ರಾಜಕೀಯ ವ್ಯವಸ್ಥೆಯನ್ನು ಒಳಗೊಂಡಿದ್ದರಿಂದ ಈ ಪ್ರದೇಶದ ವ್ಯಾಪ್ತಿಯ ಪ್ರಾಂತೀಯ ರಾಜಕಾರಣದ ಉನ್ನತ ಕೇಂದ್ರವಾಗಿತ್ತು. ಗ್ರಾಮಣಿ, ಜನ್ನಿ, ಮಧ್ಯಸ್ಥ, ಭಟ್ಟ ಎಂಬ ಗ್ರಾಮಮಟ್ಟದ ಅಧಿಕಾರಿಗಳನ್ನು ಒಳಗೊಂಡಂತೆ ಬ್ರಾಹ್ಮಣರ ಹಲವಾರು ಕುಟುಂಬಗಳು ಭೂಮಿಯ ಒಡೆತನದಲ್ಲಿ ಅಗ್ರಗಣ್ಯರಾಗಿದ್ದವರು. ಹೇರಳ, ಮಯ್ಯ, ಹೊಳ್ಳ, ಬಾಸಿರಿ, ಹಂದೆ,

ಕಾರಂತ, ತುಂಗ, ಅಲ್ಸೆ ಕುಟುಂಬಗಳು ಭೂಮಿಯ ಮೇಲಿನ ಆಸ್ತಿಯ ಹಕ್ಕನ್ನು ಹೊಂದಿದ್ದರಲ್ಲದೇ ಕೋಟದ ಹನ್ನೆರಡು ಮಹಾಲಿಂಗೇಶ್ವರ ಹಾಗೂ ಇಪ್ಪತ್ತಾನಾಲ್ಕು ವಿಷ್ಣು ದೇವಾಲಯಗಳ ಉಸ್ತುವಾರಿಯನ್ನು ನೋಡಿಕೊಂಡಿದ್ದರೆಂದು ಶಾಸನಗಳು ಉಲ್ಲೇಖಿಸುತ್ತದೆ. ಸಾಲಿಗ್ರಾಮದ ನರಸಿಂಹ ದೇವಸ್ಥಾನ ಈ ಪರಿಧಿಯೊಳಗಿನ ಪ್ರಮುಖ ದೇವಸ್ಥಾನವೆಂದು ಗುರುರಾಜ ಭಟ್ಟರು ಅಭಿಪ್ರಾಯಪಟ್ಟಿದ್ದಾರೆ.[46]

ಸ್ಕಂದಪುರ ಎಂದು ಕರೆಯಲ್ಪಟಿರುವ ಕುಂದಾಪುರದ ಕಂದಾವರದ ಬ್ರಾಹ್ಮಣರ ನೆಲೆಗಳ ಬಗ್ಗೆಯೂ ಶಾಸನಗಳಲ್ಲಿ ವಿವರಣೆಗಳಿದ್ದು, ಈ ಶಾಸನಗಳು ಕ್ರಮವಾಗಿ 1358, 1409, 1433, 1456, 1467, 1476, 1522ರ ಇಸವಿಗಳಿಗೆ ಸಂಬಂಧಿಸಿದವುಗಳಾಗಿವೆ.[47] ಈ ಶಾಸನಗಳಲ್ಲಿ ಆಗ್ರಹಾರದ ಉಲ್ಲೇಖವೂ ಇದೆ. ಇವುಗಳ ಪ್ರಕಾರ ಜನಾರ್ಧನ ದೇವಾಲಯ, ಉಳ್ಳೂರು ಸುಬ್ರಮಣ್ಯ ದೇವಸ್ಥಾನದ ಜೊತೆಗೆ ಸುಮಾರು ಒಂದುನೂರು ನಾಗಬನಗಳು ಈ ಬ್ರಾಹ್ಮಣ ಕೇಂದ್ರಗಳಲ್ಲಿ ಇದ್ದವು. 1387, 1437ರ ಕೃಷ್ಣ ಮಠದ ಶಾಸನಗಳು ಮತ್ತು 1387ರ ಬಾರಕೂರು ಶಾಸನ ನಿಡಂಬೂರು ಬಳ್ಳಾಲರ ಬಗ್ಗೆ ಮಾಹಿತಿ ನೀಡುತ್ತಿದ್ದು, ಅಲುಪರ ಮತ್ತು ವಿಜಯನಗರ ಕಾಲದಲ್ಲಿ ಸ್ಥಳೀಯ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸಿದ್ದ ನಿಡಂಬೂರಿನ ಜೈನ ಮನೆತನದ ಬಳ್ಳಾಲರು ಅಧಿಕಾರದ ದೃಷ್ಟಿಯಿಂದ ಕಂದಾವರದ ಉಡುಪ ಶಿವಳ್ಳಿ ಬ್ರಾಹ್ಮಣರನ್ನು ದತ್ತಕ್ಕೆ ಪಡೆದು ಈ ಪ್ರದೇಶದ ಆಡಳಿತವನ್ನು ನಿರ್ವಹಿಸುವ ಅನಿವಾರ್ಯತೆ ಹೊಂದಬೇಕಾಯಿತು. ಕಾಲಾನುಕ್ರಮದಲ್ಲಿ ನಿಡಂಬೂರು ಕಂದಾವರದ ಉಡುಪ ಶಿವಳ್ಳಿ ಬ್ರಾಹ್ಮಣರ ಪ್ರಮುಖ ನೆಲೆಯಾಗಿ ಪರಿವರ್ತನೆಗೊಂಡಿತ್ತಲ್ಲದೇ ರಾಜಕೀಯ ಅಧಿಕಾರದ ವ್ಯವಸ್ಥೆಯಲ್ಲಿ ಪಕ್ಷನಾಥರಾಗಿ (ಬ್ರಹ್ಮಕ್ಷತ್ರೀಯರಾಗಿ) ಕಾರ್ಯನಿರ್ವಹಿಸಬೇಕಾಯಿತು.[48] ಕಿದಿಯೂರು, ಕಡೆಕಾರು, ಮೂಡನಿಡಂಬೂರು, ಕುತ್ತುಪಾಡಿ, ಕಪ್ಪೆಟ್ಟು, ಅಂಬಲಪಾಡಿ ಈ ಬಳ್ಳಾಲರ ಆಳ್ವಿಕೆಗೆ ಒಳಪಟ್ಟ ಪ್ರಮುಖ ಹಳ್ಳಿಗಳು.[49]

ಅಜಪುರ ಎಂದು ಖ್ಯಾತವೆತ್ತ ಬ್ರಾಹ್ಮಣರ ನೆಲೆ ಬ್ರಹ್ಮಾವರದ ಭೂದಾನಗಳ ಶಾಸನಗಳಲ್ಲಿಯೂ ಇದರ ಬಗ್ಗೆ ಉಲ್ಲೇಖವಿದೆ.[50] ವಾರಂಬಳ್ಳಿ, ಉಂಗುರಪಳ್ಳಿಗಳು ಅಜಪುರದ ಎರಡು ವಿಭಾಗಗಳಾಗಿದ್ದು ಅವುಗಳು ಕೇರಳದೊಂದಿಗೆ ಸಂಬಂಧ ಹೊಂದಿದ್ದವು. ಗ್ರಾಮಾಡಳಿತದ ಪ್ರಮುಖ ಕೇಂದ್ರವಾಗಿದ್ದ ಅಜಪುರದಲ್ಲಿ ಗ್ರಾಮ ಸಾಸಿರ್ವರ ಉಲ್ಲೇಖ (ಎಲ್ಲಾ ಜನರಿಗೆ ಸಂಬಂಧಿಸಿದ ಆಡಳಿತ ಸಭೆ) ಮಹಾಜನರ ಸಭೆಯ (ಬ್ರಾಹ್ಮಣರಿಗೆ ಸಂಬಂಧಿಸಿದ ಆಡಳಿತ ವ್ಯವಸ್ಥೆ) ಉಲ್ಲೇಖಗಳು ಅದೊಂದು ಬ್ರಾಹ್ಮಣರ ಕೇಂದ್ರವಾಗಿತ್ತೆಂದು, ವಿವಿಧ ಮನೆತನಗಳಿಗೆ ಸಂಬಂಧಿಸಿದ ನೂರೆರಡು ಜನರನ್ನು ಹೊಂದಿದ ಸಭೆ ಬ್ರಹ್ಮಾವರದ ಆಡಳಿತವನ್ನು ನೋಡಿಕೊಳ್ಳುತ್ತಿತ್ತೆಂದು ತಿಳಿಯಬಹುದಾಗಿದೆ. ಹೀಗೆ ಬ್ರಹ್ಮಾವರದ ಒಟ್ಟು

ಆಡಳಿತ ವ್ಯವಸ್ಥೆಯಲ್ಲಿ ಎರಡು ಬಗೆಯ ಆಡಳಿತ ಸಭೆಗಳು ಕಾರ್ಯನಿರ್ವಹಿಸುತ್ತಿದ್ದುದು ಸ್ಪಷ್ಟ.[51] ಚಾಂತಾರು, ವಾರಂಬಳ್ಳಿಗಳಲ್ಲಿ ಗ್ರಾಮಿಣಿಗಳ ಅಧಿಕಾರ, ಹೇರಂಜೆಯಲ್ಲಿ ಮೂವರು ಪ್ರಮುಖ ಜನನಿಗಳ ಅಧಿವಾಸಗಳ ಉಲ್ಲೇಖಗಳಿರುವುದರಿಂದ ಇಲ್ಲಿನ ಬ್ರಾಹ್ಮಣರು ರಾಜಕೀಯವಾಗಿಯೂ ಪ್ರಬಲರು ಎಂಬುವುದನ್ನು ಒಪ್ಪಿಕೊಳ್ಳಬಹುದು.[52] ವರ್ಕಾಡಿ ಪಶ್ಚಿಮ ಷೋಡಶ ಬ್ರಾಹ್ಮಣ ನೆಲೆಗಳ ಕೂಡುಕಟ್ಟಿನ ಪ್ರಧಾನ ಕೇಂದ್ರವಾಗಿತ್ತು. ಈ ಪ್ರಾಂತ್ಯಕ್ಕೆ ಸೇರಿದ ಕಾವಿ ಸುಬ್ರಮಣ್ಯ ದೇವಸ್ಥಾನದಲ್ಲಿ ಹದಿನಾರು ಕಂಬಗಳಿದ್ದು ಇದು ಹದಿನಾರು ಬ್ರಾಹ್ಮಣ ನೆಲೆಗಳ ನ್ಯಾಯತೀರ್ಮಾನಕ್ಕೆ ಸಂಬಂಧಿಸಿದ ನ್ಯಾಯಪೀಠವಾಗಿತ್ತು. ಇದಲ್ಲದೇ ವಿಟ್ಲ ಅರಸರಿಗೆ ಸಂಬಂಧಪಟ್ಟ ಎರಡು ಶಾಸನಗಳು ಕೂಟಾತ್ತಾಜೆ, ಕಣಂತೂರು ಗ್ರಾಮಗಳ ದೈವಗಳೊಂದಿಗಿನ ಸಂಬಂಧಗಳ ಬಗ್ಗೆ ಮಹತ್ವದ ಮಾಹಿತಿಗಳನ್ನು ನೀಡಿವೆ. ಶಾಸನಗಳ ಪ್ರಕಾರ ವರ್ಕಾಡಿ ಮಾಗಣೆ ಇಲ್ಲಿನ ಆಡಳಿತದ ಕೆಳಹಂತದ ಘಟಕವಾಗಿಯೂ, ಮಾಗಣೆ ರಾಜಕಾರಣದ ಕೇಂದ್ರವಾಗಿಯೂ ಕಾರ್ಯನಿರ್ವಹಿಸಿತು, ಮಾತ್ರವಲ್ಲ ಇಲ್ಲಿ ವಾಸ್ತವ್ಯ ಇದ್ದ ಬ್ರಾಹ್ಮಣರು ಆಡಳಿತಾತ್ಮಕವಾಗಿ ಬಲಾಢ್ಯರಾಗಿದ್ದರಲ್ಲದೇ ನ್ಯಾಯ ತೀರ್ಮಾನಗಳಲ್ಲೂ ಪ್ರಮುಖ ಪಾತ್ರವಹಿಸಿದ್ದರು.[53]

ಹದಿನಾಲ್ಕನೇ ಶತಮಾನಕ್ಕೆ ಸಂಬಂಧಿಸಿದ ಭಾವಪ್ರಕಾಶಿಕದಲ್ಲಿ ಉಲ್ಲೇಖಿಸಲ್ಪಟ್ಟಿರುವ ಕರವೂರು, ಮಂಜನಾಡಿ, ಉಚ್ಚಿಲ, ಮುನ್ನೂರು, ತಲಪಾಡಿ, ಮಡ್ಯಾರು ಕೃಷಿ ಪ್ರದೇಶಗಳಾಗಿದ್ದು, ಬ್ರಾಹ್ಮಣ ಠರಾವಣೆಯ ಕೇಂದ್ರವಾಗಿದ್ದವು. ಗ್ರಾಮಣಿ, ಜನ್ನಿ, ಅಧಿವಾಸ ಮತ್ತು ಬಲ್ಲಾಳರು ಗ್ರಾಮದ ಅಧಿಕಾರಿಗಳಾಗಿದ್ದು ಭೂಮಿಯ ಮೇಲಿನ ಒಡೆತನದ ಹಕ್ಕನ್ನು ಹೊಂದಿದ್ದರು. ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಈ ಬ್ರಾಹ್ಮಣರ ನೆಲೆಗಳಿಗೆ ಹೊಂದಿಕೊಂಡಂತೆ ಮಂಜನಾಡಿ ಬೀಡಿಗೆ ಮಹತ್ವದ ಗೌರವಾದರಗಳಿದ್ದವು. ಒಂದೊಮ್ಮೆ ಇದು ಜೈನಬಳ್ಳಾಲರ ಆಳ್ವಿಕೆಗೆ ಒಳಪಟ್ಟಿದ್ದರೂ, ಜೈನರು ನಿರ್ವಂಶಗೊಂಡಾಗ ಈ ಬೀಡಿನ ಅಧಿಕಾರವನ್ನು ಮದ್ವಚಾರ್ಯರ ಕಾಲಘಟ್ಟದಲ್ಲಿ ಜೈನರ ಸುಪರ್ಧಿಗೊಳಪಟ್ಟಿದ್ದ ಮಂಜನಾಡಿ ವಿಷ್ಣುಮೂರ್ತಿ ದೇವಸ್ಥಾನದ ಪ್ರಧಾನ ಅರ್ಚಕ ಶಿವಳ್ಳಿ ಬ್ರಾಹ್ಮಣರಿಗೆ ದತ್ತಕ ಹಕ್ಕಿನೊಂದಿಗೆ ಅಧಿಕಾರವನ್ನು ಹಸ್ತಾಂತರಿಸಲಾಯಿತು ಎಂಬ ಪ್ರತೀತಿ ಇದೆ. ಹತ್ತೊಂಬತ್ತನೇ ಶತಮಾನದ ಆರಂಭದಲ್ಲಿ ಮಂಜನಾಡಿ ಬೀಡು ಪುನಃಹ ನಿರ್ವಂಶಗೊಂಡಾಗ ಮುನ್ನೂರಿನ ಬ್ರಾಹ್ಮಣರ ನೆಲೆಯಿಂದ ದತ್ತಕ್ಕೆ ಪಡೆದುಕೊಂಡು ಬೀಡಿನ ಅಧಿಕಾರವನ್ನು ಮುಂದುವರೆಸಲಾಯಿತು. ಈ ಬೀಡಿನ ಮುಖ್ಯಸ್ಥನಾಗುವವನು ಮಂಜನಾಡಿ ವಿಷ್ಣುಮೂರ್ತಿ ದೇವಸ್ಥಾನದಲ್ಲಿ ಗಡಿ ಪಟ್ಟ ಪಡೆದು ರಾಮಬಳ್ಳಾಲನೆಂದು ನಾಮಾಂಕಿತಗೊಳ್ಳುತ್ತಿದ್ದನೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[54]

ಸ್ಥಳೀಯ ಅರಸು ಮನೆತನದೊಂದಿಗೆ ಸಂಬಂಧ ಹೊಂದಿರುವ ಪಾಡಿಮೊಗರು ಶಿವಳ್ಳಿ ಬ್ರಾಹ್ಮಣರ ಕೇಂದ್ರವಾಗಿತ್ತು. ನ್ಯಾಯ ತೀರ್ಮಾನಕ್ಕೆ ಇದು ಹೆಸರುವಾಸಿಯಾಗಿದ್ದರಿಂದ ಮಾಯಿಪ್ಪಾಡಿ ಅರಸರ ವ್ಯಾಪ್ತಿಗೊಳಪಟ್ಟ ವ್ಯಾಜ್ಯಗಳನ್ನು ಇಲ್ಲಿ ಪರಿಹರಿಸಲಾಗುತ್ತಿತ್ತು. ಇಲ್ಲಿನ ಬ್ರಾಹ್ಮಣ ಕುಟುಂಬಗಳು ಭೂಮಿಯ ಒಡೆತನಗಳನ್ನು ಹೊಂದಿರುವುದರಿಂದ ಗ್ರಾಮ ಗಣ್ಯರಲ್ಲಿ ಪ್ರಮುಖರಾಗಿದ್ದರು. ಬೇಳ, ಅರಿಕ್ಕಾಡಿ, ಮಟಂಪಾಡಿ, ಆದೂರುಗಳನ್ನು ಒಳಗೊಂಡಿರುವ ಮೊಗ್ರಾಲ್ ನಾಯ್ಕಾಪು ಮಹಾಲಿಂಗೇಶ್ವರ ಮತ್ತು ಮೊಗೆಬೈಲಿನಲ್ಲಿ ಶಂಕರನಾರಾಯಣ ದೇವಸ್ಥಾನಗಳನ್ನು ಒಳಗೊಂಡಿದ್ದಲ್ಲದೇ ಹದಿನೈದನೇ ಶತಮಾನಕ್ಕೆ ಸಂಬಂಧಿಸಿದ ಅನಂತಪುರದ ತುಳುಶಾಸನ ದೇವಸ್ಥಾನಕ್ಕೆ ದತ್ತಿ ನೀಡಿದ ವಿಚಾರಗಳ ಬಗ್ಗೆ ಉಲ್ಲೇಖವನ್ನು ನೀಡುತ್ತವೆ. ಗ್ರಾಮ ಮಟ್ಟದ ಅಧಿಕಾರ ಹೊಂದಿರುವ ಪಾಡಿಮೊಗರು ಜನ್ಮಿಗಳು ಭೂಮಿಯ ಒಡೆತನವನ್ನು ಹೊಂದಿದ್ದರು.

ಕಾವುಮಠ, ಕೂಡ್ಲು ಅಥವಾ ಕೂಡಾಲು ಮಧ್ವ ವಿಜಯದಲ್ಲಿ ಉಲ್ಲೇಖಿತ ಬ್ರಾಹ್ಮಣರ ಕೇಂದ್ರವಾಗಿತ್ತು. ಕೂಡ್ಲು ಜಮೀನುದಾರಿ ಕುಟುಂಬವಾಗಿರುವುದರಿಂದ ಗ್ರಾಮ ಮಟ್ಟದ ಅಧಿಕಾರಿ ವರ್ಗಗಳನ್ನು ಹೊಂದಿತ್ತು. ಬಾರಿಕ್ಕಾಡಿ ವಿಷ್ಣುಮೂರ್ತಿ, ಶಾಸ್ತಾವು, ಅಜ್ಜಾವರ ಮಹಿಷಮರ್ದಿನಿ, ಅನ್ನಪಾಡಿಯ ವಿಷ್ಣು, ಶಿವ ದೇವಸ್ಥಾನಗಳಲ್ಲದೇ ಹಲವಾರು ದೈವಸ್ಥಾನಗಳು ಈ ಕುಟುಂಬದ ಆಡಳಿತಕ್ಕೆ ಒಳಪಟ್ಟಿದ್ದವು. ನೆಲ್ಲಿ, ಬಳ್ಪ, ಉಪ್ಪಂಗಳ, ಊರಂಗಳ, ಪಾವೂರು, ಕನ್ನಕೊರೊಡಿ, ಕೊಡ್ಯಮೆ, ಮಾವೂರು, ಮಿತ್ತನಾಡುಗಳು ಉಬರಂಗಳದ ಶಾಖೆಗಳಾಗಿ ಭೂಮಿಯ ಮೇಲಿನ ಒಡೆತನವನ್ನು ಇಟ್ಟುಕೊಂಡಿದ್ದರ ಜೊತೆಗೆ ಮಿತ್ತನಾಡಿನ ಪಾರ್ವತಿ, ಈಶ್ವರ, ದುರ್ಗಾಪರಮೇಶ್ವರಿ, ಮಹಿಷಮರ್ದಿನಿ, ವಿಷ್ಣುಮೂರ್ತಿ ದೇವಸ್ಥಾನಗಳು ಇದರ ಅಧಿಕಾರಕೊಳಪಟ್ಟಿದ್ದವು.

ಅಳೂಪರ ಕಾಲದಲ್ಲಿ ಶಿವಳ್ಳಿ ಪ್ರಮುಖ ಬ್ರಾಹ್ಮಣ ಕೇಂದ್ರವಾಗಿ ರೂಪುಗೊಂಡರೆ, ಹನ್ನೆರಡನೇ ಶತಮಾನದಲ್ಲಿ ಬ್ರಹ್ಮಾವರ, ನೀಲಾವರಗಳು ಪ್ರಮುಖ ಬ್ರಾಹ್ಮಣ ಅಗ್ರಹಾರಗಳಾಗಿ ಮಾರ್ಪಟ್ಟವು. ಸಗ್ರಿ, ಇಂದ್ರಾಳಿ, ಗುಂಡಿಬೈಲು, ಪುತ್ತೂರು, ಪೇರಂಪಳ್ಳಿ, ನಿಡಂಪಳ್ಳಿ, ನಯಂಪಳ್ಳಿ, ಕಿದಿಯೂರು, ಪಡುಮಣೂರು, ಕೊಡವೂರು, ಉದ್ಯಾವರ, ಕೊರಂಗ್ರಪಾಡಿ, ಚಿಟ್ಪಾಡಿ, ಬೈಲೂರು, ಪಣಿಯಾಡಿ ರಜತಪೀಠದ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ಶಿವಳ್ಳಿ ಎಂಬ ಹೆಸರಿನಿಂದ ಪ್ರಾಮುಖ್ಯತೆಯನ್ನು ಪಡೆದಿತ್ತು.[55] ಶಾಸನಗಳಲ್ಲಿ ಶಿವಳ್ಳಿಯ ಮೂರುಸಾವಿರ ಬ್ರಾಹ್ಮಣರ ಬಗ್ಗೆ ಮಾತ್ರವಲ್ಲದೇ ಇನ್ನು ಹಲವಾರು ಕುಟುಂಬಗಳ ಬಗ್ಗೆ ಉಲ್ಲೇಖಗಳಿವೆ.[56] ಶಿವಳ್ಳಿಯಲ್ಲಿ ಮೂರು ವರ್ಗದ ಬ್ರಾಹ್ಮಣ ದರ್ಜೆಗಳಿದ್ದು ಮೊದಲ ಎರಡು ವರ್ಗಗಳು ಭೂಮಿಯ ಒಡೆತನವನ್ನು ಪಡೆದುಕೊಂಡಿದ್ದವು. ಶಿವಳ್ಳಿಯಲ್ಲಿ ಕಂಡುಬರುವ ಸುಮಾರು ಹತ್ತು

ದೇವಸ್ಥಾನಗಳು ಬ್ರಾಹ್ಮಣರ ಪ್ರಾಬಲ್ಯದ ಸಂಕೇತಗಳಾಗಿದ್ದವು.[57] ಮೂರನೇವರ್ಗ ಬ್ರಾಹ್ಮಣ್ಯಕ್ಕೆ ಮತಾಂತರಗೊಂಡ ಅಧೀನ ಸಂಸ್ಕೃತಿಯ ಜನಸಮುದಾಯ.ಈ ವರ್ಗ ಭೂಮಿಯ ಮೇಲೆ ಯಾವುದೇ ಅಧಿಕಾರವನ್ನು ಅಥವಾ ಒಡೆತನವನ್ನು ಹೊಂದಿರಲಿಲ್ಲ. ಶಿವಳ್ಳಿಯ ಅಷ್ಟಮಠಗಳನ್ನು ಒಳಗೊಂಡ ದೇವಸ್ಥಾನಗಳು ಅಪಾರ ಭೂಮಿಯ ಒಡೆತನವನ್ನು ಹೊಂದಿತ್ತಲ್ಲದೇ ವಿಜಯನಗರದ ಕಾಲದಲ್ಲಿ ರಾಜಕೀಯವಾಗಿಯೂ ಪ್ರಭಾವಿಯಾಗಿದ್ದವು. ರಜತಪೀಠವೆಂದು ಪ್ರಸಿದ್ಧಿಯಾಗಿರುವ ಉಡುಪಿ ಬೌದ್ದ ಮತ್ತು ಶೈವ ಕೇಂದ್ರಗಳಾಗಿದ್ದು ಕಾಲಕ್ರಮೇಣ ಮಾಧ್ವರ ಪ್ರಭಾವಕ್ಕೆ ಒಳಪಟ್ಟಿತ್ತೆಂದು ಇತಿಹಾಸ ಮೂಲಗಳು ಸ್ಪಷ್ಟಪಡಿಸುತ್ತವೆ.[58] ಅದರಲ್ಲೂ ಮುಖ್ಯವಾಗಿ ಹತ್ತು-ಹನ್ನೊಂದನೇ ಶತಮಾನಗಳ ನೀಲಾವರ ಶಾಸನಗಳು ಇದನ್ನು ಉಲ್ಲೇಖಿಸುತ್ತವೆ. ನೂರಕ್ಕೂ ಹೆಚ್ಚು ಕುಟುಂಬಗಳನ್ನು ಹೊಂದಿದ್ದ ನೀಲಾವರದಲ್ಲಿ ಜಗತ್ತು ಮುನ್ನೂರು ಮಹಾಜನರ ಉಲ್ಲೇಖವಿದೆ. ನೀಲಾವರದ ಮಹಿಷಮರ್ದಿನಿ ಪ್ರಮುಖ ದೇವಸ್ಥಾನವಾಗಿಯೂ, ರಾಜಕೀಯವಾಗಿಯೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು.

ನೀರುಮಾರ್ಗ ಬ್ರಾಹ್ಮಣರ ಪ್ರಮುಖ ನೆಲೆಯಾಗಿದ್ದು, ಮಣೂರಿನ ಸುಬ್ರಾಯ ದೇವಸ್ಥಾನ ಸೀಮೆ ದೇವಸ್ಥಾನವಾಗಿ ಬಳ್ಳಾಲರ ಆಳ್ವಿಕೆಗೆ ಒಳಪಟ್ಟಿತ್ತು. ಎರಡು ಅಪ್ರಕಟಿತ ಶಾಸನಗಳಲ್ಲಿ ಉಲ್ಲೇಖಿತಗೊಂಡಿರುವ ತೆನಕಾಳ ಕಾಸರಗೋಡಿನ ಮಂಜೆಶ್ವರದಲ್ಲಿದ್ದು ಗ್ರಾಮ ಮಟ್ಟದ ಅಧಿಕಾರಗಳನ್ನು ಹೊಂದಿಕೊಂಡಿರುವ ಬ್ರಾಹ್ಮಣ ನೆಲೆಯಾಗಿದೆ. ಅಭಿಪ್ರಾಯವೊಂದು ಉಡುಪಿ ಸಮೀಪದ ಇನ್ನ ಗ್ರಾಮವೇ ತೆನಕಳವೆಂದು ತಿಳಿಸುತ್ತದೆ.[59] ಮಾಧ್ವರ ಪ್ರಭಾವಿರುವ ಕಣ್ವತೀರ್ಥ ಮತ್ತು ಕಟ್ಟತ್ತಿಲದಲ್ಲಿ ಉಡುಪಿಗೆ ಸಂಬಂಧಿಸಿದ ಮಠವಿದ್ದು, ಮಂಕುಡೆ ವಿಷ್ಣುಮೂರ್ತಿ, ಮಂಚಿಯ ಗೋಪಾಲಕೃಷ್ಣ ನ್ಯಾಯತೀರ್ಮಾನ ಮಾಡುವ ಪ್ರಮುಖ ದೇವಸ್ಥಾನವಾಗಿದ್ದವು. ಕೊಳ್ನಾಡು ನಾರಳಾತ್ತಾಯ ದೈವದ ಕಾರಣಿಕ ಸ್ಥಳವಾಗಿದ್ದು ಮಾಧ್ವ ಪ್ರಭಾವಕ್ಕೆ ಒಳಗಾಗಿತ್ತು.ಮಂಚಿಯ ಕೊಳವಿನಾಡು ಬ್ರಾಹ್ಮಣರ ಪ್ರಮುಖ ನೆಲೆಯಾಗಿತ್ತು ಮಾತ್ರವಲ್ಲ ಗ್ರಾಮಗಣ್ಯರಾಗಿ ಬ್ರಾಹ್ಮಣರು ಭೂಮಿಯ ಒಡೆತನವನ್ನು ಹೊಂದಿದ್ದರು ಜೊತೆಗೆ ನ್ಯಾಯ ತೀರ್ಮಾನದ ಕೇಂದ್ರವು ಆಗಿತ್ತು. ಸಿಮಂತೂರಿನ ಬ್ರಾಹ್ಮಣರು ಹದಿಮೂರನೇ ಶತಮಾನದ ದೊಡ್ಡ ಭೂಮಾಲಕರಾಗಿ ಮುಲ್ಕಿ ಸಾಮಂತರ ಪುರೋಹಿತರಾಗಿ ಸೇವೆ ಸಲ್ಲಿಸಿದ್ದವರು. ಸಿಮಂತೂರು, ಎಳತ್ತೂರು, ಪುನರೂರು, ಮಾನಂಪಾಡಿ, ಕೀಲ್ಪಾಡಿ ಗ್ರಾಮಗಳ ಅಧಿಕಾರ ಹೊಂದಿ ಆಧಿಜನಾರ್ದನ ದೇವಸ್ಥಾನದ ಜವಾಬ್ದಾರಿಯನ್ನು ಹೊಂದಿರುವುದರಿಂದ ಇಲ್ಲಿನ ಬ್ರಾಹ್ಮಣರು ನ್ಯಾಯ ತೀರ್ಮಾನ ಮಾಡುವಲ್ಲಿ ಪ್ರಮುಖರಾಗಿದ್ದರು.[60] ಅಜೆಕಾರು ಸಮೀಪದ ಮರ್ಣೆ ಬ್ರಾಹ್ಮಣರ ಕೇಂದ್ರವಾಗಿತ್ತೆಂದು ಹೇಳಲಾಗಿದೆಯಾದರೂ ಹೆಚ್ಚಿನ ಆಧಾರಗಳು ಲಭ್ಯವಿಲ್ಲ.[61]

ಪೂರ್ವದ ಹದಿನಾರು ಗ್ರಾಮಗಳಲ್ಲಿ ಶ್ರೀಪಾಡಿ ಬ್ರಾಹ್ಮಣರ ಕೂಡುಕಟ್ಟಿನ ನೆಲೆಯಾಗಿತ್ತು. ಗ್ರಾಮಮಟ್ಟದ ಅಧಿಕಾರಿಗಳಾಗಿದ್ದ ಬ್ರಾಹ್ಮಣರು ಭೂಮಿಯ ಒಡೆತನವನ್ನು ಹೊಂದಿದ್ದರು. ಪಂಜಮಹಾಲಿಂಗೇಶ್ವರ ದೇವಸ್ಥಾನ ಹದಿನಾರು ಸ್ತಂಭಗಳ ವಿಶೇಷತೆಯನ್ನು ಹೊಂದಿದ್ದು ಅದು ಹದಿನಾರು ಗ್ರಾಮಗಳ ವಾದ-ವಿವಾದಗಳನ್ನು ಆಲಿಸುತ್ತಿದ್ದ ಕೇಂದ್ರವಾಗಿತ್ತೆಂಬುವುದರ ಸಂಕೇತವಾಗಿತ್ತು.ಅಜ್ಜಿಬೆಟ್ಟು, ಇರ್ವತ್ತೂರು, ಮೂಡುಪಡುಕೋಡಿ, ಚೆನ್ನೈತೋಡಿ, ಪಿಲಿಮೊಗರು ಮತ್ತು ಪಿಲಾತಬೆಟ್ಟು ಶ್ರೀಪಾಡಿಯ ವ್ಯಾಪ್ತಿಗೊಳಪಟ್ಟಿತ್ತು. ಬೆಳ್ತಂಗಡಿ ತಾಲೂಕಿನಲ್ಲಿರುವ ವೊಡಿಲವೂ ಬ್ರಾಹ್ಮಣ ನೆಲೆಯಾಗಿದ್ದು ಅಧಿವಾಸ, ಭಟ್ಟ ಮತ್ತು ಗ್ರಾಮಣಿಗಳು ಗ್ರಾಮಾಧಿಕಾರಿಗಳಾಗಿ ಅಧಿಕಾರ ನಿರ್ವಹಿಸಿ, ಗ್ರಾಮಗಣ್ಯರಾಗಿದ್ದುಕೊಂಡು ಭೂಮಿಯ ಒಡೆತನವನ್ನು ಇಟ್ಟುಕೊಂಡಿದ್ದರು. ಕಾಲೀಯ ಬಳ್ಳಾಲರ ಆಳ್ವಿಕೆಗೆ ಒಳಪಟ್ಟ ನಾಳ ಬ್ರಾಹ್ಮಣರ ಕೇಂದ್ರವಾಗಿತ್ತು.[62] ಗ್ರಾಮಗಣ್ಯರಾಗಿ ಕೆಳಹಂತದ ಅಧಿಕಾರದಲ್ಲಿ ಪಾಲುಪಡೆದುಕೊಂಡು, ವಂಶಪಾರಂಪರ್ಯ ಪಟೇಲರಾಗಿ ಕರಾಯದ ಬ್ರಾಹ್ಮಣ ಕುಟುಂಬಗಳು ಅಧಿಕಾರ ನಡೆಸಿವೆಯಲ್ಲದೇ ಭೂಮಿಯ ಹಕ್ಕನ್ನು ಪಡೆದುಕೊಂಡಿದ್ದರು.[63] ಕುಡುಮನ್ನಾಯರೆಂದೇ ಪ್ರಸಿದ್ದರಾಗಿರುವ ಉಜಿರೆಯ ಬ್ರಾಹ್ಮಣರುಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ.[64] ಅಜಿಲರ ಅಳ್ವಿಕೆಗೆ ಒಳಪಟ್ಟ ಕಾರಂದೂರು[65] ಹಾಗೂ ಕಾರಿಂಜ ಹತ್ತಿರದ ಕಾವಳದಲ್ಲಿ ಬ್ರಾಹ್ಮಣರು ಗ್ರಾಮಾಧಿಕಾರಿಗಳಾಗಿ ಭೂಮಿಯ ಒಡೆತನವನ್ನು ಹೊಂದಿದ್ದರು. ಕಾವಳಮೂಡೂರು, ಪಡೂರು, ದೇವಸ್ಯಮೂಡೂರು ಮತ್ತು ಪಡೂರು ವ್ಯಾಪ್ತಿಗೊಳಪಟ್ಟ ಪ್ರದೇಶಗಳ ದೇವಸ್ಥಾನಗಳಲ್ಲಿ ಇವರು ಅಧಿಕಾರ ಹೊಂದಿದ್ದರು. ಕಾರಿಂಜೇಶ್ವರದ ಹತ್ತಿರ ಮಧ್ವಾಚಾರ್ಯರಿಂದ ಪ್ರತಿಷ್ಠಾಪಿಸಲ್ಪಟ್ಟ ಮಹಿಷಮರ್ದಿನಿ ದೇವಸ್ಥಾನ ಬ್ರಾಹ್ಮಣರ ಮೇಲುಸ್ತುವಾರಿಯಲ್ಲಿದ್ದರಿಂದ ಧಾರ್ಮಿಕವಾಗಿ ಈ ಪ್ರದೇಶದ ಮೇಲೆ ಬ್ರಾಹ್ಮಣರು ಪ್ರಭಾವ ಹೊಂದಿದ್ದರು.[66] ಕುಂಜೀಮಾರ್ಗವೆಂದು ಕರೆಯಲ್ಪಟ್ಟಿರುವ ಬಂದಾರಿನಲ್ಲಿ ಬ್ರಾಹ್ಮಣ ನೆಲೆಗಳು ಸ್ಥಾಪನೆಗೊಂಡು ಸುತ್ತಲಿನ ದೇವಸ್ಥಾನಗಳ ಉಸ್ತುವಾರಿಯ ಜೊತೆಗೆ ಗ್ರಾಮದ ಪಟೇಲರಾಗಿ ಭೂಮಿಯ ಮೇಲೆ ಅವರು ಅಧಿಕಾರ ಚಲಾಯಿಸಿದರು.[67] ತಿರುವನಂತಪುರದ ಪ್ರಸಿದ್ದ ಅನಂತಪದ್ಮನಾಭ ದೇವಸ್ಥಾನದ ಅರ್ಚಕ ವೃತ್ತಿಯಲ್ಲಿರುವ ಕೊಕ್ಕಡದ ಬ್ರಾಹ್ಮಣರು ಗ್ರಾಮಮಟ್ಟದ ಅಧಿಕಾರಿಗಳಾಗಿಯೂ ಕರ್ತವ್ಯ ನಿರ್ವಹಿಸಿದ್ದರು. ನೇರಂಕಿ ಮಠದೊಂದಿಗೆ ನೇರ ಸಂಬಂಧ ಇಟ್ಟುಕೊಂಡಿರುವ ರಾಮಕುಂಜ ಮಧ್ವಚಾರ್ಯರ ಪ್ರಭಾವಲಯಕ್ಕೆ ಸೇರ್ಪಡೆಗೊಂಡ ಬ್ರಾಹ್ಮಣ ನೆಲೆಯಾಗಿದೆ.[68]ಮುರುಳ್ಯ, ಪೊಲಿಂಕಜೆ, ಕೇರ್ಪಟ ಎಡಮಂಗಲದಲ್ಲಿ ಪ್ರಭಾವಿಯಾಗಿರುವ ಪುಡೆ ಬ್ರಾಹ್ಮಣರು ಗ್ರಾಮಮಟ್ಟದ ಅಧಿಕಾರಿಗಳಾಗಿ ಭೂಮಿಯ ಒಡೆತನವನ್ನು ಇಟ್ಟುಕೊಂಡಿದ್ದರು.[69] ರಾಜಮನೆತನಗಳಿಂದ ಭೂಮಿಯನ್ನು ದಾನವಾಗಿ ಪಡೆದ

ಮೊರಜ ಬ್ರಾಹ್ಮಣರು ಬಳ್ಪದ ಸುತ್ತಮುತ್ತ ಪ್ರಭಾವ ಬೆಳೆಸಿಕೊಂಡವರಲ್ಲದೇ ಕುಕ್ಕೆಸುಬ್ರಮಣ್ಯ ದೇವಸ್ಥಾನದ ಜೊತೆಗೆ ಅಧಿಕಾರೀ ಸಂಬಂಧವನ್ನು ಹೊಂದಿದ್ದರು.[70] ಬಂಟ್ವಾಳ ತಾಲೂಕಿನ ಇಡ್ಕಿದು ಗ್ರಾಮಮಟ್ಟದ ಅಧಿಕಾರವನ್ನು ಪಡೆದ ಬ್ರಾಹ್ಮಣ ನೆಲೆಯಾಗಿರುವುದರಿಂದ ಅಲ್ಲಿನ ಗ್ರಾಮ ದೇವಸ್ಥಾನಗಳು ಅವರ ಉಸ್ತುವಾರಿಯಲ್ಲಿಯೇ ಕಾರ್ಯನಿರ್ವಹಿಸುತ್ತಿದ್ದವು. ಪುತ್ತೂರು ತಾಲೂಕಿನ ಪರಂಜೆ ಹಾಗೂ ಕೆಮ್ಮಿಂಜೆಗಳು ಬ್ರಾಹ್ಮಣರ ನೆಲೆಗಳಾಗಿದ್ದರೂ ಅದಕ್ಕೆ ಸಂಬಂಧಿಸಿದಂತೆ ಯಾವುದೇ ಮಹತ್ವದ ದಾಖಲೆಗಳು ಸಿಗುವುದಿಲ್ಲ. ಪಂಚಲಿಂಗೇಶ್ವರ ದೇವಸ್ಥಾನವಿರುವುದರಿಂದ ಐವರನಾಡು ಎಂಬ ಹೆಸರು ಪಡೆದುಕೊಂಡ ಅಯಿರ್ನಾಡು ಬ್ರಾಹ್ಮಣರ ಕೇಂದ್ರವಾಗಿತ್ತು. ಗ್ರಾಮ ಮಟ್ಟದ ಅಧಿಕಾರಿಗಳಾಗಿ ನೆಲೆಯಾಗಿದ್ದ ಮೇಲಿನ ಬ್ರಾಹ್ಮಣರ ನೆಲೆಗಳಲ್ಲಿ ಪರಶುರಾಮ ಸಂಪ್ರದಾಯಸ್ತ ಮತ್ತು ಮಾಧ್ವ ಸಂಪ್ರದಾಯಸ್ತ ಎಂಬ ಎರಡು ವಿಭಾಗಗಳಿದ್ದವು. ವಿಜಯನಗರ ಅರಸರ ಕಾಲದಲ್ಲಿ ಶಿವಳ್ಳಿ, ಕೋಟ, ನೀಲಾವರ, ಅಜಪುರ, ಕಂದಾವರಗಳು ಉಚ್ಛ್ರಾಯತೆಯನ್ನು ಪಡೆದು ರಾಜಕೀಯ ಕೃಪಾಶ್ರಯದಿಂದ ಬ್ರಾಹ್ಮಣರು ಫಲವತ್ತಾದ ಕೃಷಿ ಭೂಮಿಯನ್ನು ಪಡೆದುಕೊಂಡರಲ್ಲದೇ ಉನ್ನತ ಅಧಿಕಾರ ಹಾಗೂ ಪ್ರಭಾವಗಳನ್ನು ಹೊಂದಿ ಭದ್ರ ನೆಲೆಗಳಾಗಿ ರೂಪುಗೊಂಡವು. ವಿಜಯನಗರ ಕಾಲದ ಶಾಸನಗಳು ಬ್ರಾಹ್ಮಣರ ವರ್ಗಗಳು ಸರ್ವಮಾನ್ಯ, ಅಷ್ಟಭೋಗದ ಭೂಮಿಗಳನ್ನು ಪಡೆದ ಬಗ್ಗೆ ಮಾಹಿತಿ ನೀಡುತ್ತವೆ.[71] ಇದಲ್ಲದೇ ಮೂವತ್ತೆರಡು ಬ್ರಾಹ್ಮಣ ನೆಲೆಗಳಲ್ಲಿ ಮೂವತ್ತೆರಡು ಅಗ್ರಹಾರಗಳಿದ್ದು ಈ ಅಗ್ರಹಾರಗಳ ಅಧಿಕಾರವು ಸಹ ಬ್ರಾಹ್ಮಣರ ಕೈಯಲ್ಲಿತ್ತು.

ಬ್ರಾಹ್ಮಣತ್ವಕ್ಕೆ ಸಂಬಂಧಿಸಿದ ಒಳಜಗಳಗಳು ಮತ್ತು ಭೂಮಿಯನ್ನು ಪಡೆದುಕೊಳ್ಳುವಲ್ಲಿನ ರಾಜಕೀಯ ವಾದ-ವಿವಾದಗಳ ಬಗ್ಗೆ ಸ್ಕಂದಪುರಾಣ ಮತ್ತು ಸಹ್ಯಾದ್ರಿಖಂಡಗಳಲ್ಲಿ ವಿವರಿಸಲ್ಪಟ್ಟಿದೆ. ಬಹಿಷ್ಕೃತ ಬ್ರಾಹ್ಮಣರನ್ನು ಸಂತೈಸುವ ಸಲುವಾಗಿ ಪರಶುರಾಮ ಕೂಡಾಲಕ, ಪಡಿಕ, ಮಟ್ಟಿ ಮತ್ತು ನಾಗೋರ್‌ಗಳನ್ನು ಬ್ರಾಹ್ಮಣರಿಗೆ ನೀಡಿದ ಎಂದು ಅವುಗಳು ಉಲ್ಲೇಖಿಸುತ್ತವೆ. ಮಧ್ವರ ಕಾಲದಲ್ಲಿ ಉಡುಪಿಯ ಅಷ್ಟಮಠಗಳನ್ನು ಸ್ಥಾಪಿಸುವ ಮೂಲಕ ಬ್ರಾಹ್ಮಣರನ್ನು ಸಂಘಟಿಸುವ ಕೆಲಸ ನಡೆದು ಬ್ರಾಹ್ಮಣರು ತತ್ವದ ಆಧಾರದಲ್ಲಿ ಧ್ರುವೀಕರಣಗೊಂಡರು. ಪರಶುರಾಮ ಸೃಷ್ಟಿಯ ದಂತಕಥೆಗಳ ನಂತರದ ಕಾಲಘಟ್ಟದಲ್ಲಿ ಬಹಿಷ್ಕೃತರಾದ ಬ್ರಾಹ್ಮಣರು ಮಧ್ವಚಾರ್ಯ ಹಾಗೂ ವಾದಿರಾಜರ ಪ್ರಭಾವಕ್ಕೆ ಒಳಪಟ್ಟು ಅಥವಾ ಒತ್ತಾಸೆಗೆ ಒಳಗಾಗಿ ವೈಷ್ಣವರಾದರು.[72] ರಾಜಾಶ್ರಯದ ಫಲವಾಗಿ ಫಲವತ್ತಾದ ಕೃಷಿ ಭೂಮಿಯೂ ಬ್ರಾಹ್ಮಣರ ಮಾಲಕತ್ವಕ್ಕೆ ಸೇರ್ಪಡೆಗೊಂಡಿತು. ಆಯಕಟ್ಟಿನ ಸ್ಥಳಗಳಲ್ಲಿ ದೇವಸ್ಥಾನಗಳನ್ನು ನಿರ್ಮಾಣ ಮಾಡಿ ಪೌರೋಹಿತ್ಯದ ಪ್ರಭಾವಲಯಗಳ ಮೂಲಕ ಭೂಮಿಯ ಮೇಲಿನ ಹತೋಟಿಯನ್ನು ವಿಸ್ತಾರಗೊಳಿಸಿದರು. ಸ್ಥಳಪುರಾಣಗಳ ಸೃಷ್ಟಿಯೊಂದಿಗೆ

ಭೂಮಿಯೂ ಬ್ರಾಹ್ಮಣರ ವಾರಸುದಾರಿಕೆಯ ಕೇಂದ್ರಗಳಾದವು. ತುಳುನಾಡಿನ ಆದಿಮ ಶ್ರದ್ಧಾಕ್ಷೇತ್ರಗಳು ಬ್ರಾಹ್ಮಣರ ಅಧಿಕಾರದ ಕಾರಸ್ಥಾನಗಳಾಗಿ ಪರಿವರ್ತನೆಗೊಂಡವು. ತುಳು ಶ್ರದ್ಧಾಕ್ಷೇತ್ರಗಳ ಚರಿತ್ರೆಗಳು ಬರೆಯಲ್ಪಟ್ಟು ಸಮಾಜದಲ್ಲಿ ಬ್ರಾಹ್ಮಣರ ಸ್ಥಾನಮಾನಗಳು ಹೆಚ್ಚಿದವು. ಬ್ರಾಹ್ಮಣರ ಸಂಸರ್ಗದಿಂದ ಸ್ಥಳಪುರಾಣಗಳ ಮೂಲಕವಾಗಿ ಶ್ರದ್ಧಾಕ್ಷೇತ್ರಗಳ ಚರಿತ್ರೆಗಳನ್ನು ಯುಗಗಳಿಗೆ ಕೊಂಡೊಯ್ಯಲಾಯಿತು.[73] ತುಳುನಾಡಿನಲ್ಲಿ ಒಂದೊಮ್ಮೆ ಆದಿಮ ಇಲ್ಲವೇ ಭೌದ್ಧಪೂಜಾ ಕೇಂದ್ರಗಳಾಗಿದ್ದು, ಬೌದ್ಧ ಸಂಸ್ಕೃತಿಯ ತಾಣಗಳಾಗಿ ಮಾರ್ಪಟ್ಟಿದ್ದ ಸ್ಥಳಗಳೆಲ್ಲವೂ ಪರಶುರಾಮ ಸ್ಥಾಪಿತ ಇಲ್ಲವೇ ಖರಾಸುರ ಪೂಜಿತವೆಂದು ಬಿಂಬಿಸಲ್ಪಟ್ಟವು.[74] ಭೂಮಿಯನ್ನು ಆಳುವ ವರ್ಗದಿಂದ ಬ್ರಾಹ್ಮಣರು ದಾನವಾಗಿ ಪಡೆದರೆ ಅದನ್ನು ವಿರೋಧಿಸಿದ ಸಮುದಾಯ ಕೃಷಿ ಭೂಮಿಯನ್ನು ಕಳೆದುಕೊಂಡು ಪ್ರಬಲ ಆರ್ಥಿಕತೆಯ ಸೇವಕ ಇಲ್ಲವೇ ಕೂಲಿಯಾಳುಗಳಾಗಿ ಸಾಮಾಜಿಕ ಪರಿವರ್ತನೆ ಹೊಂದಿದರು.[75] ಬ್ರಾಹ್ಮಣರು ಸಾಮಾಜಿಕ ಸ್ಥಾನಮಾನ ಮತ್ತು ಭೂಮಿಯ ಒಡೆತನ ಪಡೆಯಲು ಮುಂದಿಟ್ಟ ಸಮರ್ಥನೆಗಳಿಗೆ ಕೃಷಿ ಚಟುವಟಿಕೆಗಳಲ್ಲಿ ನಿರತರಾದ ಪ್ರಭಾವಿ ವರ್ಗದ ಬೆಂಬಲ ಸಿಕ್ಕಿದ್ದರಿಂದ ತಮ್ಮ ಕಾರ್ಯಗಳಲ್ಲಿ ಯಶಸ್ವಿಗೊಂಡರು. ಜೊತೆಗೆ ರಾಜ್ಯದ ಅಥವಾ ಆಡಳಿತ ವರ್ಗದ ಸಹಕಾರವೂ ಸಿಕ್ಕಿರುವುದರಿಂದ ಕೃಷಿಉತ್ಪನ್ನಗಳು ಬ್ರಾಹ್ಮಣರ ಹಿಡಿತಕ್ಕೆ ಬಂದವು.[76] ಹೀಗೆ ಸಮಾಜದ ಪ್ರಭಾವಿ ವರ್ಗಗಳ ಅಧಿಕಾರ ಮತ್ತು ಭೂಮಿಯ ಒಡೆತನಕ್ಕಾಗಿ ಪರಸ್ಪರ ಸಹಕಾರ ನೀಡಿ ಅದರಲ್ಲಿ ಯಶ ಪಡೆದ ಘಟನೆಗಳು ಚರಿತ್ರೆಯಲ್ಲಿ ದಾಖಲುಗೊಂಡಿವೆ. ಭೂಮಿಯ ಒಡೆತನದ ವಹಿವಾಟಿನ ಕಂಠಸ್ಥ ವಾಗ್ದಾನಗಳು ಬರಹರೂಪಕ್ಕೆ ಇಳಿದು ಶಾಸನಗಳಲ್ಲಿ ಉಲ್ಲೇಖಿತಗೊಂಡು ಚರಿತ್ರೆಯಲ್ಲಿ ಅಧಿಕೃತ ದಾಖಲೆಗಳಾಗಿ ರೂಪಿತಗೊಂಡವು. ಇದು ಶೈವ ಮತ್ತು ಮಾಧ್ವರ ಪ್ರಭಾವದಿಂದ ದೇವಸ್ಥಾನಗಳ ಕ್ಷೇತ್ರಮಹಾತ್ಮೆಗಳಲ್ಲಿ ಪ್ರಸ್ತಾಪಿಸಲ್ಪಟ್ಟು ನ್ಯಾಯಬದ್ಧಗೊಂಡವಲ್ಲದೇ ತಾಮ್ರ, ಶಿಲಾಶಾಸನಗಳಲ್ಲಿ ದಾಖಲಾಗಿ ಅಧಿಕೃತಗೊಂಡು ಸಮರ್ಥನೆಗೆ ಒಳಪಟ್ಟವು. ಜೊತೆಗೆ ಇದು ದೇವಸ್ಥಾನಗಳ ಒಳಾಧಿಕಾರವನ್ನು ಪಡೆಯಲು ಭೂಮಿಕೆಯಾಯಿತು. ತುಳುನಾಡಿನ ಸುಮಾರು ಮೂವತ್ತೆರಡು ಕೃಷಿಹಳ್ಳಿಗಳ ಮೇಲಿನ ಹಿಡಿತ, ಊರಿನ ದೈವಸ್ಥಾನ, ದೇವಸ್ಥಾನಗಳ ಮೇಲಿನ ಅರ್ಚಕತನದ ಉಸ್ತುವಾರಿ ಇತ್ಯಾದಿಗಳು ಕಾಲಕ್ರಮೇಣ ಆಯಾ ಪ್ರದೇಶಗಳ ಮೇಲೆ ಹತೋಟಿ ಸಾಧಿಸಲು ಅನುವು ಮಾಡಿಕೊಟ್ಟು ಬ್ರಾಹ್ಮಣರು ಆರ್ಥಿಕವಾಗಿ ಬಲಾಢ್ಯಗೊಳ್ಳುವಂತೆ ಮಾಡಿತು, ಮಾತ್ರವಲ್ಲ ತುಳುನಾಡು ನಂಬಿದ ದೇವರುಗಳ ಅವತಾರ ಇತಿಹಾಸವನ್ನು ಸೃಷ್ಟಿಸಿ ಬ್ರಾಹ್ಮಣರು ತಮ್ಮ ಸ್ಥಿತಿಯನ್ನು ಔನ್ನತ್ಯಕೇರಿಸಿದರಲ್ಲದೇ ಅಧೀನ ಸಂಸ್ಕೃತಿಯ ಜನರನ್ನು ಆ ಅವತಾರಗಳ ನಂಬಿಕೆಗೆ ಒಳಪಡಿಸಿದರು.

ಬ್ರಾಹ್ಮಣರ ಔನ್ನತ್ಯ ಮತ್ತು ಅಧೀನ ಸಂಸ್ಕೃತಿಯ ಸ್ಥಿತಿಗತಿ ಉಳಿಗಮಾನ್ಯ ವ್ಯವಸ್ಥೆಯ ಪ್ರಾರಂಭದ ಹೆಜ್ಜೆಯಾಯಿತ್ತಲ್ಲದೇ ಬ್ರಾಹ್ಮಣ ಪ್ರಭಾವಿ ಸ್ವಾಯತ್ತ ಹಳ್ಳಿಗಳ ನಿರ್ಮಾಣಕ್ಕೆ ಎಡೆ ಮಾಡಿಕೊಟ್ಟಿತು. ಇದಲ್ಲದೇ ಸಮಾಜದಲ್ಲಿ ತಮ್ಮ ಅಸ್ತಿತ್ವ, ಘನತೆಗಳನ್ನು ಉಳಿಸಿ ವಿತರಿಸುವ ಸಲುವಾಗಿ ಅಧೀನ ಆರ್ಥಿಕತೆಯ ಜನರನ್ನು ಓಲೈಸಿ ಇಲ್ಲವೇ ಶಾಪಗ್ರಸ್ಥರನ್ನಾಗಿಸಿ ಹೀನಸ್ಥಿತಿಗೆ ತಳ್ಳಿ ಸಾಮಾಜಿಕ ಸಂಬಂಧವೊಂದರ ಸೃಷ್ಟಿಗೆ ಅಡಿಪಾಯ ಹಾಕಿದರು. ಈ ಪರಿಸ್ಥಿತಿಯಲ್ಲಿ ಅಧೀನ ಆರ್ಥಿಕತೆಯ ಬಹುಸಂಖ್ಯಾತ ಸಮುದಾಯಗಳು ಆಳುಗಳಾಗಿ, ಬ್ರಾಹ್ಮಣರುಗಳು ಯಜಮಾನರಾಗಿ ರೂಪುಗೊಂಡರು. ಬ್ರಾಹ್ಮಣರ ಪ್ರಭಾವಕೊಳಪಟ್ಟು ರೂಪುಗೊಂಡ ಹಳ್ಳಿಗಳಲ್ಲಿ ರಾಜ್ಯಾಡಳಿತದ ಹಿಡಿತವೂ ಸಹ ಸಡಿಲಗೊಂಡಿತು. ಅಧಿಕಾರ ಹಿಡಿಯುವ ಸಂದರ್ಭಗಳಲ್ಲಿ ಗ್ರಾಮ, ಮಾಗಣೆ ಹಾಗೂ ಸೀಮೆ ದೇವಸ್ಥಾನ, ದೈವಸ್ಥಾನಗಳಲ್ಲಿ ಬ್ರಾಹ್ಮಣರ ಮುಖೇನ ಪೂಜಾಸಂಪ್ರದಾಯಗಳನ್ನು ಮಾಡಿಸುವುದು, ಧರ್ಮನೇಮಗಳನ್ನು ನಡೆಸುವುದು ಇತ್ಯಾದಿಗಳ ಮೂಲಕ ತಮ್ಮ ಅಧಿಕಾರವನ್ನು ಮಾನ್ಯತೆಗೊಳಿಸುವ ತಂತ್ರಗಳು ಬ್ರಾಹ್ಮಣರನ್ನು ಇನ್ನಷ್ಟು ಬಲಪಡಿಸಿತು. ಬ್ರಾಹ್ಮಣರ ಜೊತೆಗೆ ಅಧೀನ ಆರ್ಥಿಕತೆಗಳ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಪ್ರಭಾವಿ ಒಕ್ಕಲುಗಳೂ ಅಧಿಕಾರ ಕೇಂದ್ರಗಳಾಗಿ ಮಾರ್ಪಾಟ್ಟು ಬ್ರಾಹ್ಮಣೇತರರ ಮೇಲೆ ನಿಯಂತ್ರಣ ಸಾಧಿಸಿ ಅಧಿಕಾರ ಪಡೆದುಕೊಂಡರು. ಹೀಗೆ ತುಳುನಾಡಿನಲ್ಲಿ ಅಧೀನ ಆರ್ಥಿಕತೆಗಳ ವಾರಸುದಾರಿಕಾ ವ್ಯವಸ್ಥೆಗಳು ಪ್ರಬಲ ಆರ್ಥಿಕತೆಯ ಹಿಡಿತಕ್ಕೆ ಬಂದು ವಾರಸುದಾರಿಕಾ ಪರಿಕಲ್ಪನೆ ಮೂಲಭೂತ ಬದಲಾವಣೆಗೆ ಒಳಗಾಗಿ ಸ್ಥಳಾಂತರಗೊಂಡಿತು, ಇಲ್ಲವೇ ಪ್ರಬಲರ ವಾರಸುದಾರಿಕೆ ಆಧೀನರ ಹಕ್ಕುಗಳನ್ನು ನಿರ್ಣಯಿಸುವ ಉಪಕರಣಗಳಾಗಿ ರೂಪುಗೊಂಡವು.[77]

## ಬ್ರಾಹ್ಮಣರ ವಲಸೆಯ ಕಾರಣಗಳು

ವಾಸ್ತವವಾಗಿ ಬ್ರಾಹ್ಮಣರ ವಲಸೆಗೆ ಸಂಬಂಧಿಸಿದಂತೆ ಚರಿತ್ರಕಾರರು ಹಲವು ಕಾರಣಗಳನ್ನು ವ್ಯಕ್ತಪಡಿಸಿದ್ದಾರೆ. ಅದರಲ್ಲಿ ಮುಖ್ಯವಾದುದು ಉತ್ತರ ಭಾರತದಲ್ಲಿ ಮುಸ್ಲಿಂ ಪ್ರಭಾವದ ತೀವ್ರತೆಯಿಂದ ಈ ಜನ ಸಂಕಷ್ಟಗೊಳಗಾಗಿ ದಕ್ಷಿಣದ ಭಾರತಕ್ಕೆ ವಲಸೆ ಬಂದರೆಂಬುದು. ಕೃಷಿ ಸಾಮಾಜಿಕ ಚರಿತ್ರೆಯ ಪ್ರಮುಖ ಚರಿತ್ರಕಾರರಾದ ಮೋರ್‌ಲಾಂಡ್ (1929) ಇರ್ಫಾನ್ ಹಬೀಬ್ (1963) ಸ್ಟೋಕ್ಸ್ (1978) ಅವರುಗಳ ಪ್ರಕಾರ ಬ್ರಾಹ್ಮಣರ ವಲಸೆ ಹಾಗೂ ಅವರ ನೆಲೆಗಳು ವಿಂದ್ಯದ ಕೆಳಗೆ ಸುಮಾರು ಹತ್ತನೇ ಶತಮಾನದಿಂದೀಚೆ ಹೆಚ್ಚುಗೊಂಡಿರುವುದನ್ನು ಪರಿಶೀಲಿಸಿದಾಗ ಉತ್ತರಭಾರತದ ರಾಜಕೀಯ ಮತ್ತು ಬದಲಾದ ಪರಿಸ್ಥಿತಿಗಳ ಒತ್ತಡ ವಲಸೆಗೆ ಕಾರಣವೆಂಬುವುದನ್ನು ತಳ್ಳಿ ಹಾಕುವಂತಿಲ್ಲ. ಮಾತ್ರವಲ್ಲ ಉತ್ತರಭಾರತದಲ್ಲಿನ ರಾಜಕೀಯ ವಿಪ್ಲವಗಳಿಂದಾಗಿ ಪಂಜಾಬ, ಗುಜರಾತ್, ಜಮ್ಮು-

ಕಾಶ್ಮೀರದಲ್ಲಿ ವಾಸ್ತವ್ಯವಾಗಿದ್ದ ಬ್ರಾಹ್ಮಣರ ಗುಂಪುಗಳು ಪೂರ್ವಾಭಿಮುಖವಾಗಿ ಮುಂದುವರೆದು ಯುಕ್ತಕಂಡ ಪ್ರದೇಶಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ಮೋರ್‌ಲ್ಯಾಂಡ್ ಅವರು ಬ್ರಾಹ್ಮಣರು ಯಾವುದೇ ಪ್ರದೇಶವಾಗಿಬಹುದು ಆ ಪ್ರದೇಶದಲ್ಲಿ ವಾಸ್ತವ್ಯ ಹೂಡಿದಂದಿನಿಂದ ಭೂಮಿಯ ಹತೋಟಿ ಮತ್ತು ಅಧಿಕಾರದ ರಚನೆ ಈ ಜನಸಮುದಾಯಗಳ ವಲಸೆ ಹಾಗೂ ಸಾಮಾಜಿಕ ಸಂರಚನೆಗಳ ರೂಪುಗೊಳ್ಳುವಿಕೆಯೊಂದಿಗೆ ಏಕತಾನತೆಗಳನ್ನು ಹೊಂದಿ ಸಾಮಾಜಿಕ, ರಾಜಕೀಯ ಸಂಬಂಧಗಳು ನಿರ್ಧರಿಸಲ್ಪಟ್ಟವು ಎಂದು ಅಭಿಪ್ರಾಯಿಸಿದ್ದಾರೆ.[78]

ಸಾಮಾನ್ಯಶಕೆ ಹತ್ತನೇ ಶತಮಾನದಿಂದ ಹದಿನೇಳನೇ ಶತಮಾನದ ವರೆಗಿನ ಮುಸ್ಲಿಂ ದಾಳಿ ಮತ್ತು ಅದರಿಂದಾಗಿ ಬ್ರಾಹ್ಮಣ ಚದುರುವಿಕೆಯ ಬಗ್ಗೆ ಲಾಯ್ಲೆ ಎಂಬ ಚರಿತ್ರೆಕಾರ ಈ ರೀತಿ ಬರೆಯುತ್ತಾನೆ–ಉತ್ತರಭಾರತದಲ್ಲಿ ಮುಸಲ್ಮಾನರ ದಾಳಿಯಿಂದಾಗಿ ರಾಜಕೀಯ ವ್ಯವಸ್ಥೆ ಹಾಗೂ ಅಧಿಕಾರ ಸಂಸ್ಥೆಗಳು ಕಿತ್ತೊಗೆಯಲ್ಪಟ್ಟು ಪ್ರಮುಖ ಪಟ್ಟಣಗಳು ನಿರ್ಜನಗೊಂಡವು. ಪ್ರಬಲ ಆರ್ಥಿಕತೆಯಾಗಿದ್ದ ಬ್ರಾಹ್ಮಣ ವರ್ಗಗಳು ರಾಜಾಶ್ರಯ ತಪ್ಪಿ ಅಲೆದಾಟಕ್ಕೆ ಶುರುಮಾಡಿದವು. ಅಲೆದಾಡಿ ಜೀವನೋಪಾಯಕ್ಕೆ ವಲಸೆ ಬರುವುದರೊಂದಿಗೆ ವಿಂಧ್ಯಪ್ರದೇಶವನ್ನು ದಾಟಿದರು. ಹೀಗೆ ವಿಂಧ್ಯವನ್ನು ದಾಟಿದ ಜನಸಮುದಾಯಗಳು ದಕ್ಷಿಣ ಭಾರತದ ಸುರಕ್ಷಿತ ಆಯ್ದ ಸ್ಥಳಗಳಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿಕೊಂಡರು. ನಿರ್ವಸಿತಗೊಂಡ ಈ ಜನಸಮುದಾಯಗಳು ಮೂಲಸ್ಥಾನಗಳಲ್ಲಿ ತಾವು ಆರಾಧಿಸುತ್ತಿದ್ದ ದೇವತಾಮೂರ್ತಿಗಳನ್ನು ತಮ್ಮೊಂದಿಗೆ ತೆಗೆದುಕೊಂಡು ಬಂದಿದ್ದರಲ್ಲದೇ ಕಾಲಾನುಕ್ರಮದಲ್ಲಿ ದೇವಾಲಯಗಳನ್ನು ರಚನೆ ಮಾಡಿ ದೇವತಾ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದಾರೆ.[79] ಈ ರೀತಿಯ ಬೆಳವಣಿಗೆಗಳಿಂದ ವಲಸಿಗ ಬ್ರಾಹ್ಮಣರು ತಮ್ಮ ವಲಸೆಪೂರ್ವದ ಅನನ್ಯತೆಗಳನ್ನು ಕಾಪಾಡಿಕೊಳ್ಳಲು ಈ ಪ್ರದೇಶದಲ್ಲಿ ತಮ್ಮದೇ ಆದ ಪರಿಕಲ್ಪನೆಗಳನ್ನು ಅಂದರೆ ಈ ಹೊಸ ವಾರಸುದಾರಿಕೆಯನ್ನು ಹುಟ್ಟುಹಾಕಿದರು ಮಾತ್ರವಲ್ಲ ಅದರಲ್ಲಿ ಯಶಸ್ವಿಯಾದರು.[80]

ತುಳುನಾಡಿನ ಸಾಂಪ್ರದಾಯಿಕ ಚರಿತ್ರೆ ಮತ್ತು ಗ್ರಾಮಪದ್ಧತಿಯಲ್ಲಿ ಬ್ರಾಹ್ಮಣರ ವಲಸೆಯ ಕಾಲಕ್ಕೆ ಸಂಬಂಧಿಸಿದಂತೆ ನಿಖರ ಮಾಹಿತಿ ಇಲ್ಲದಿದ್ದರೂ ಆ ಘಟನೆಗಳು ಮಾತ್ರ ಕ್ರಮಬದ್ಧವಾಗಿ ಹಾಗೂ ವಿಶ್ಲೇಷಣಾತ್ಮಕವಾಗಿ ವಿವರಿಸಲ್ಪಟ್ಟಿವೆ. ಆದಾಗ್ಯೂ ಈ ಕಾಲಘಟ್ಟವನ್ನು ನಿಗದಿಪಡಿಸುವ ಪ್ರಯತ್ನಗಳು ಇಲ್ಲದಿಲ್ಲ. ಬ್ರಾಹ್ಮಣರ ನೆಲೆಯ ಚರಿತ್ರೆ ಗ್ರಾಮಪದ್ಧತಿಯಲ್ಲಿ ಬರಹ ರೂಪಕ್ಕೆ ಇಳಿಸಿದ್ದು ಕ್ರಿ.ಶ ಹದಿನೈದನೇ ಶತಮಾನದಲ್ಲಿ ಎಂದು ಚರಿತ್ರೆಕಾರರು ವಾದಿಸಿದ್ದಾರೆ. ಗ್ರಾಮಪದ್ಧತಿ ಮೂಲತಃ ಏಕರೂಪದಲ್ಲಿದ್ದರೂ, ಅವುಗಳಲ್ಲಿನ ಚಾರಿತ್ರಿಕ ವಿಚಾರಗಳು ಹಾಗೂ ಘಟನೆಗಳು ವಿಭಿನ್ನ ಕಾಲದಲ್ಲಿ ಸೇರ್ಪಡೆಯಾಗಿರುವುದರಿಂದ ಕೌಟಿಲ್ಯನ

ಅರ್ಥಶಾಸ್ತ್ರದಂತೆ ಯಾವ ಕಾಲಘಟ್ಟದಲ್ಲಿ ಯಾವುದನ್ನು ಬರೆಯಲಾಗಿದೆ ಎಂಬ ನಿಖರ ಮಾಹಿತಿ ದೊರೆಯುವುದಿಲ್ಲ. ಆದರೆ ಗ್ರಾಮಪದ್ಧತಿಯಲ್ಲಿ ಉಲ್ಲೇಖಿತ ಮೂವತ್ತೆರಡು ಗ್ರಾಮಗಳಲ್ಲಿ ಹೆಚ್ಚಿನವು ಇಂದಿಗೂ ಬ್ರಾಹ್ಮಣರ ಸುಪರ್ಧಿಯಲ್ಲಿ ಇರುವುದಲ್ಲದೆ ಸಾಂಸ್ಕೃತಿಕವಾಗಿ ಒಂದಕ್ಕೊಂದು ಬೆಸೆದುಕೊಂಡಿದೆ. ಅಂತೆಯೆ ಗ್ರಾಮಪದ್ಧತಿ, ಸ್ಕಂದಪುರಾಣ, ಸಹ್ಯಾದ್ರಿಖಂಡಗಳಲ್ಲಿ ಬ್ರಾಹ್ಮಣರ ನೆಲೆಗಳ ಬಗ್ಗೆ ಹಲವಾರು ಮಾಹಿತಿಗಳನ್ನು ಆಧಾರ ಸಮೇತವಾಗಿ ಪಡೆದರೂ ಸ್ಪಷ್ಟ ಚಿತ್ರಣ ಸಿಗುವುದಿಲ್ಲ. ಈ ನಿಟ್ಟಿನಲ್ಲಿ ಅಧ್ಯಯನ ಮಾಡಿದ ಚರಿತ್ರಕಾರರ ಅಭಿಮತದಂತೆ ಗ್ರಾಮಪದ್ಧತಿಯ ಪಠ್ಯ ಸಾಮಾನ್ಯಶಕೆ ಹದಿನೈದನೇ ಶತಮಾನದಲ್ಲಿ ನಿರ್ಮಾಣಗೊಂಡು ಕಾಲಕಾಲಕ್ಕೆ ಮರುವಾಖ್ಯಾನಗೊಂಡು ಬರವಣಿಗೆಗೆ ಒಳಪಟ್ಟ ಸಾಂಪ್ರದಾಯಿಕ ಚರಿತ್ರೆಯಾಗಿದೆ.[81]

ಬಿ.ಎ ಸಾಲೆತ್ತೂರರ ಅಭಿಪ್ರಾಯದಂತೆ ತುಳುನಾಡಿನಲ್ಲಿ ಲಭ್ಯವಿರುವ ಗ್ರಾಮಪದ್ಧತಿ ವಿಭಿನ್ನ ಪಠ್ಯಗಳನ್ನು ಹೊಂದಿದೆ. ಬ್ರಾಹ್ಮಣರ ನೆಲೆಯ ಸಾಂಪ್ರದಾಯಿಕ ಚರಿತ್ರೆ ಮತ್ತು ಪುರಾಣಗಳು ಚರಿತ್ರೆಯ ಮೂಲಗಳಾಗಿ ಯೋಗ್ಯ ಆಕರಗಳಲ್ಲ. ಆದರೆ ಚರಿತ್ರಕಾರರಾದ ಪರಾಜಿತರ್, ಡಿ.ಸಿ.ಸರ್ಕಾರ್‌ರವರು ಪುರಾಣಗಳಲ್ಲೂ ಮೌಲ್ಯಯುಕ್ತ ವಿಚಾರಗಳಿರುವುದರಿಂದ ಚರಿತ್ರೆಯ ಆಕರಗಳಾಗಿ ಮಾನ್ಯಮಾಡಬಹುದು ಎಂದಿದ್ದಾರೆ. ಮಾತ್ರವಲ್ಲ ಕಂಠಸ್ಥವಾಗಿದ್ದ ಪುರಾಣಗಳು ಕಾಲಕ್ರಮೇಣ ಲಿಖಿತ ರೂಪ ಪಡೆಯುವುದರೊಂದಿಗೆ ಚಾರಿತ್ರಿಕ ಸ್ವಬೋಧವನ್ನು ಪಡೆದಿರಬಹುದೆಂದು ಅಭಿಪ್ರಾಯಪಡುತ್ತಾರೆ.[82]

### ಶಾಸನಗಳ ದಾಖಲೆಗಳಲ್ಲಿ ಬ್ರಾಹ್ಮಣರು ಮತ್ತು ಅವರ ವಾಸ್ತವ್ಯ

ತುಳುನಾಡಿನ ಸಂಸ್ಕೃತಿಯ ಹಲವಾರು ಆಯಾಮಗಳೊಂದಿಗೆ ಗುರುತಿಸಿಕೊಂಡ ವಲಸಿಗ ಬ್ರಾಹ್ಮಣರು ಇದರಿಂದಾಗಿ ವಾಸ್ತವ್ಯಕ್ಕೆ ವ್ಯವಸ್ಥಿತ ನೆಲೆ ಪಡೆದುಕೊಂಡಿದ್ದರು. ಸಾಮಾನ್ಯಶಕೆ ಸುಮಾರು ಹತ್ತನೇ ಶತಮಾನದಿಂದ ಈಚೆಗೆ ಸಂಬಂಧಿಸಿದ ಶಾಸನಗಳಲ್ಲಿ ಬ್ರಾಹ್ಮಣರ ವಲಸೆ, ತುಳುನಾಡಿನ ಸಂಸ್ಕೃತಿಯೊಂದಿಗಿನ ಒಡನಾಟ, ಹಾಗೂ ಅವರ ಕುಟುಂಬಪದ್ಧತಿಯ ಬಗ್ಗೆ ಮಾಹಿತಿ ನೀಡಿವೆ.[83] ಜೊತೆಗೆ ಇಲ್ಲಿನ ಸಾಮಾಜಿಕರಲ್ಲಿ ಬ್ರಾಹ್ಮಣರು ಸರ್ವಶ್ರೇಷ್ಠರು ಮಾತ್ರವಲ್ಲ ಅಂತಸ್ತು ಮತ್ತು ಸ್ಥಾನಮಾನಗಳಲ್ಲಿ ಗುರುತಿಸಿಕೊಂಡು ನ್ಯಾಯಿಕ ಮತ್ತು ಧಾರ್ಮಿಕವಾಗಿ ರಾಜನ ನಂತರದ ಸ್ಥಾನಿಗರಾಗಿ ನ್ಯಾಯಪಾಲಕರೆಂದು ಮಾನ್ಯ ಮಾಡಲ್ಪಟ್ಟರೆಂಬ ವಿವರಣೆಯು ಕಾಣಸಿಗುತ್ತದೆ.[84] ವಸಾಹತುಶಾಹಿಯ ಕಾಲಘಟ್ಟದಲ್ಲೂ ಈ ಚಾರಿತ್ರಿಕ ವಿಶ್ಲೇಷಣೆ ಬುಖಾನನ್ ಮತ್ತು ಮುನ್ರೋರ ಬರಹ ಮತ್ತು ಪತ್ರಗಳಲ್ಲಿ ಉಲ್ಲೇಖಿತಗೊಂಡಿವೆ. ಬ್ರಾಹ್ಮಣರು ಸರ್ವಶ್ರೇಷ್ಠರು ಹಾಗೂ ಅಂತಸ್ತು, ಸ್ಥಾನಮಾನ ಮತ್ತು ವಿಶೇಷಾಧಿಕಾರ ಇತ್ಯಾದಿಗಳಲ್ಲೂ ಅವರು ಉನ್ನತವಾಗಿದ್ದರು. ಯಾವುದೇ ವಿಚಾರಗಳನ್ನು ನಿರ್ಧರಿಸುವಲ್ಲಿ ಬಹುಮುಖ್ಯರು ಜೊತೆಗೆ

ಭೂಮಿಯ ವಾರಸುದಾರಿಕಾ ಅಧಿಕಾರವನ್ನು ಪಡೆದುಕೊಂಡಿದ್ದರೆಂದು ಅವರು ಅಭಿಪ್ರಾಯಪಟ್ಟಿದ್ದಾರೆ.[85]

ಐತಿಹಾಸಿಕವಾಗಿ ತುಳುನಾಡು ವಿಜಯನಗರದ ಆಳ್ವಿಕೆಗೆ ಒಳಪಟ್ಟ ನಂತರದ ಕಾಲಘಟ್ಟದಲ್ಲಿ ಬ್ರಾಹ್ಮಣರ ಸ್ಥಾನಮಾನಗಳು ಉನ್ನತಿಗೊಂಡು ನೆಲೆಗಳು ವಿಸ್ತಾರಗೊಂಡವು.[86] ಗುತ್ತು, ಊರು, ಗ್ರಾಮ, ಮಾಗಣೆ, ಸೀಮೆಗಳ ಕಂದಾಯದ ಅಧಿಕಾರದಲ್ಲಿ ಭೂಮಿಯ ವಿಸ್ತಾರತೆಗೆ ಅನುಗುಣವಾಗಿ, ಆ ಕಾಲದ ನೌಕರಶಾಹಿಗಳಾಗಿ ಶ್ರೇಣಿಕೃತ ಅಧಿಕಾರದಲ್ಲಿ ಪಾಲು ಪಡೆದುಕೊಂಡಿದ್ದರು. ಬ್ರಾಹ್ಮಣರ ವಾಸ್ತವ್ಯ ಈ ಪ್ರದೇಶದ ಅಧಿಕಾರ ವ್ಯವಸ್ಥೆಗಳನ್ನು ಸ್ಥಿತ್ಯಂತರಕೊಳಪಡಿಸಿತ್ತಲ್ಲದೇ ಸಾಂಸ್ಕೃತಿಕವಾಗಿ ಹಾಗೂ ಆಡಳಿತಾತ್ಮಕವಾಗಿ ಈ ಪ್ರದೇಶವನ್ನು ಸಂಘಟಿಸಿತು. ಭಟ್ಟರು, ಅಗ್ರಹಾರಿಗಳು, ಸ್ಮಾರ್ತರು, ಸಭಾಪತಿಗಳು, ಪಂಡಿತರು, ಪ್ರಭುಗಳು, ತಂತ್ರಿಗಳು, ಗ್ರಾಮಣಿಗಳು, ಅಧಿವಾಸಗಳು, ಪಕ್ಷನಾಥರು ಮತ್ತು ಜನ್ನಿಗಳೆಂಬ ನಾಮದೇಯದೊಂದಿಗೆ ಬ್ರಾಹ್ಮಣರು ಆಡಳಿತದಲ್ಲಿ ಪಾಲುದಾರರಾದರು.[87] ಈ ಪ್ರದೇಶ ಸ್ಥಳೀಯವಾಗಿ ಸುಮಾರು ನೂರಕ್ಕೂ ಮಿಕ್ಕಿ ಬಳ್ಳಾಲರ ಸುಪರ್ದಿಗೊಳಪಟ್ಟು ಆಡಳಿತಾತ್ಮಕ ಘಟಕಗಳಾಗಿ ಮರುರೂಪಿಸಲ್ಪಟ್ಟಿತ್ತು. ನಲವತ್ನಾಡು, ಕೆಲನಾಡು ನಾಡುಗಳಾಗಿ, ಬೈಂದೂರು, ಭಟ್ಕಳಗಳು ಬೀಡುಗಳಾಗಿ, ಕದ್ರಿ, ಕಾರ್ಕಳ ದೀವಾನ ಸ್ಥಾನಗಳಾಗಿ, ಬಾರಕೂರು, ಮಂಗಳೂರು ಸಿಂಹಾಸನಗಳಾಗಿ ಅಧಿಕಾರಸ್ಥಗೊಂಡ ಬೆಳವಣಿಗೆಯನ್ನು ಗಮನಿಸಿದಾಗ ರಾಜಕೀಯವಾಗಿ ತುಳುನಾಡು ಬ್ರಾಹ್ಮಣರ ವಲಸೆಯಿಂದಾಗಿ ಸ್ಥಿತ್ಯಂತರಕ್ಕೆ ಒಳಪಟ್ಟಿರುವುದು ಸ್ಪಷ್ಟ.[88] ಇದಕ್ಕೆ ಹೊಂದಿಕೊಂಡು ಹಲವಾರು ಹೊಸ ಹೊಸ ಕಟ್ಟುಕಟ್ಟಳೆಗಳು ರೂಪಿಸಲ್ಪಟ್ಟು ಅಧಿಕಾರ ಪಡೆದುಕೊಳ್ಳುವ ಕಾರ್ಯಚಿಂತನೆಗಳು ಆರಂಭಗೊಂಡವು. ಜೊತೆಗೆ ಕೆಲವೊಂದು ನಿಯಮಗಳು ಕಾರ್ಯರೂಪಕ್ಕೆ ಬಂದು ಬ್ರಾಹ್ಮಣರ ಸ್ಥಾನ ಗಟ್ಟಿಗೊಂಡವು. ಉದಾಹರಣೆಗೆ ಊರಿನಲ್ಲಿ ಗುತ್ತಿನ ಯಜಮಾನ, ತಂತ್ರಿ,[89] ವಿಷವೈದ್ಯ ಇಲ್ಲದ ಕಡೆ ರಾತ್ರಿ ತಂಗಬಾರದೆಂಬ ನಿಯಮಗಳನ್ನು ರೂಪಿಸಲಾಯಿತು.[90]. ಈ ವ್ಯವಸ್ಥೆ ಸಾಮಾಜಿಕ ಸಂಬಂಧಗಳಿಗೆ ಹೊಸ ಚೌಕಟ್ಟನ್ನು ಒದಗಿಸಿಕೊಟ್ಟಿತ್ತಲ್ಲದೇ ಯಜಮಾನಿಕೆಯನ್ನು ನಿರ್ದಿಷ್ಟಪಡಿಸುವಲ್ಲಿ ಅಥವಾ ಬ್ರಾಹ್ಮಣರ ನೆಲೆಗಳಿಗೆ ಮಾನ್ಯತೆಯನ್ನು ಒದಗಿಸುವಲ್ಲಿ ನಿರ್ಣಾಯಕವಾಯಿತು.[91]

ವಾರಸುದಾರಿಕೆಯ ಜೊತೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯ ದೃಷ್ಟಿಯಿಂದ ಮೂವತ್ತೆರಡು ಗ್ರಾಮಗಳಲ್ಲಿ ಬ್ರಾಹ್ಮಣರ ನೆಲೆಗಳು ಬಹಳಷ್ಟು ಪ್ರಾಮುಖ್ಯತೆ ಪಡೆದುಕೊಂಡಿದೆ.[92] ರಾಜಕೀಯ ಪ್ರಭಾವವನ್ನು ಬಳಸಿ ಭೂಮಿ ಮತ್ತು ಅಧಿಕಾರದ ಹಂಚಿಕೆಗಳಲ್ಲಿ ಕೈಯಾಡಿಸಿ ತಮ್ಮ ನೆಲೆಗಳನ್ನು ಭದ್ರಪಡಿಸಿಕೊಂಡ ವಲಸಿಗ ಬ್ರಾಹ್ಮಣ ವರ್ಗ ಇಲ್ಲಿನ ಮೂಲನಿವಾಸಿಗಳನ್ನು ನಿರ್ವಸಿತಗೊಳಿಸಿತು. ಮಾತ್ರವಲ್ಲ ಬುಡಕಟ್ಟು ಸಮುದಾಯಗಳು

ಆರಾಧಿಸಿಕೊಂಡು ಬಂದಿದ್ದ ದೈವಗಳು ತಮ್ಮದೇ ನೆಲದಲ್ಲಿ ಅಸ್ತಿತ್ವವನ್ನು ಕಳೆದುಕೊಂಡವು. ತುಳುನಾಡಿನ ಸ್ಥಳನಾಮಗಳಲ್ಲಿ ಉಲ್ಲೇಖಿತ ಮೂಲನಿವಾಸಿಗಳು ಬ್ರಾಹ್ಮಣರ ಪ್ರಾಬಲ್ಯಗಳಿಂದ ಸ್ಥಾನಪಲ್ಲಟಗೊಂಡು ಭೂಮಿಯ ಮೇಲಿನ ಹಕ್ಕನ್ನು ಕಳೆದುಕೊಂಡರು.[93] ಅಂತೆಯೇ ಸ್ಥಳೀಯ ಆರಾಧನ ವ್ಯವಸ್ಥೆಗಳು ಬ್ರಾಹ್ಮಣ ತೆಕ್ಕೆಗೆ ಜಾರಿ ವಾರಸುದಾರಿಕೆಯ ಅರ್ಥವನ್ನು ಪುನರ್ ವ್ಯಾಖ್ಯಾನಿಸಿತು.[94]

## ಜೈನರು ಮತ್ತು ವಾರಸುದಾರಿಕೆ

ಸ್ಥಳೀಯ ರಾಜಕಾರಣದಲ್ಲಿ ಸಾಕಷ್ಟು ಪ್ರಭಾವಿಗಳೆನಿಸಿಕೊಂಡಿದ್ದ ಜೈನಸಮುದಾಯ, ಮೌರ್ಯರ ಕಾಲದಲ್ಲಿ ಪ್ರಚಾರಗೊಂಡು ಶ್ರವಣಬೆಳಗೊಳವನ್ನು ತನ್ನ ಪ್ರಮುಖ ಕೇಂದ್ರವನ್ನಾಗಿ ರೂಪಿಸಿಕೊಂಡಿತು. ಬನವಾಸಿಯ ಕದಂಬರ ಕಾಲದಲ್ಲಿ ಜೈನಧರ್ಮ ಹೆಚ್ಚು ಪ್ರಚಾರಕ್ಕೆ ಬಂದು ಹಲವಾರು ಮುನಿಸಂಘಗಳು ಸ್ಥಾಪನೆಗೊಂಡು ಕಾರ್ಯಪ್ರವತ್ತವಾಗಿದ್ದವೆಂದು ಅಭಿಪ್ರಾಯಪಡಲಾಗಿದೆ.[95] ಸಾಮಾನ್ಯಶಕೆ 707ರ ಇಸವಿಗೆ ಸಂಬಂಧಿಸಿದ ಶಾಸನವೊಂದು ಈ ಧರ್ಮ ಪ್ರಚಲಿತದಲ್ಲಿರುವ ಮತ್ತು ಜನಜೀವನ ಭಾಗವಾಗಿದ್ದರ ಬಗ್ಗೆ ನಿಖರ ಮಾಹಿತಿಯನ್ನು ನೀಡುತ್ತದೆ. ಅಂತೆಯೇ ಕುಂಡಣನ ವರಾಂಗ ಶಾಸನವು ಪುಲಿಗೆರೆಯ ಜೈನವರ್ತಕರು ಹಟ್ಟಿಯಂಗಡಿಗೆ ಬಂದು ನೆಲೆಸಿ ಜೈನಧರ್ಮದ ಪ್ರಚಾರಕ್ಕೆ ನಾಂದಿ ಹಾಡಿದರೆಂದು ಉಲ್ಲೇಖಿಸುತ್ತದೆ.[96] ಇದಲ್ಲದೇ ಲೋಕನಾಥೇಶ್ವರ ದೇವಾಲಯದ ಶಾಸನಗಳು ಪುಲಿಗೆರೆಯ ವರ್ತಕ ಗುಂಪಿನ ಮುಖ್ಯಸ್ಥ ಗುಳ್ಳಸೆಟ್ಟಿ ಹಟ್ಟಿಯಂಗಡಿಯಲ್ಲಿ ಭೂಮಿಯ ದಾನವನ್ನು ಪಡೆದುಕೊಂಡಿದ್ದರ ಬಗ್ಗೆ ಉಲ್ಲೇಖಿಸುತ್ತದೆ.[97] ಈ ಎಲ್ಲಾ ಉಲ್ಲೇಖ ಮತ್ತು ಮಾಹಿತಿಗಳ ಆಧಾರದಲ್ಲಿ ವಿದ್ವಾಂಸರಾದ ಗೋವಿಂದ ಪೈಗಳು ನಡೆಸಿದ ಅಧ್ಯಯನವೊಂದು ತುಳುನಾಡಿನಲ್ಲಿ ಜೈನಧರ್ಮ ಸಾಮಾನ್ಯ ಶಕೆ ಎರಡನೇ ಶತಮಾನದಿಂದ ಪ್ರಚಾರಗೊಂಡು ನಿಧಾನವಾಗಿ ಪ್ರವರ್ಧಮಾನಕ್ಕೆ ಬಂತೆಂದು ತಿಳಿಸುತ್ತದೆ.[98] ಇನ್ನೊರ್ವ ಚಿಂತಕ ಡಾ. ಗುರುರಾಜ ಭಟ್ಟರೂ ತುಳುನಾಡಿನಲ್ಲಿ ಜೈನ ಧರ್ಮದ ಸ್ಥಾಪನೆ ಹಾಗೂ ಪ್ರಚಾರಕ್ಕೆ ಸಂಬಂಧಿಸಿದಂತೆ ಅಭಿಪ್ರಾಯ ವ್ಯಕ್ತಪಡಿಸುತ್ತಾ ಅಲುಪರ ಆಡಳಿತಾವಧಿಯಲ್ಲಿ ಈ ಧರ್ಮ ಪ್ರಾಮುಖ್ಯತೆಯನ್ನು ಪಡೆದು ಜನಪ್ರಿಯಗೊಂಡಿತ್ತೆಂದು ಬರೆದಿದ್ದಾರೆ.[99]

ಹಟ್ಟಿಯಂಗಡಿ ಅಳೂಪರ ಮತ್ತು ಸಾಂತಾರರ ಸಾಮಾನ್ಯ ರಾಜಧಾನಿಯಾಗಿದ್ದು, ಇದು ಅವರ ನಡುವಿನ ಗಾಢ ಸಂಬಂಧವನ್ನು ಸೂಚಿಸುತ್ತದೆ. ಜೊತೆಗೆ ಮಂಕಬ್ಬರಸಿ ಮತ್ತು ತೈಲಪರ ನಡುವಿನ ವಿವಾಹವು ಈ ಎರಡು ಆಡಳಿತ ವ್ಯವಸ್ಥೆಗಳ ನಡುವಿನ ಸಂಬಂಧವನ್ನು ವೃದ್ಧಿಸಿತ್ತಲ್ಲದೇ ಇದು ಶೈವ-ಜೈನರ ಸಂಬಂಧಕ್ಕೆ ಮುನ್ನುಡಿಯಾಯಿತು. ಇದು ತುಳುನಾಡಿನಲ್ಲಿ ರಾಜಕೀಯ ಸ್ಥಿತ್ಯಂತರಗಳಿಗೆ ಕಾರಣವಾಯಿತು. ಚಾರುಕೀರ್ತಿ ದೇವರ ಪಾದ ಪದ್ಮರಾದಕನಾಗಿದ್ದ

ಮೂರನೇ ಕುಲಶೇಖರನು ಮೂಡಬಿದಿರೆ ನಗರದ ಪಾರ್ಶ್ವನಾಥ ದೇವಾಲಯಕ್ಕೆ ಈ ಸಂಬಂಧದ ಸೂಚಕವಾಗಿ ದಾನಧರ್ಮಗಳನ್ನು ನೀಡಿದ್ದನೆಂದು ಶಾಸನವೊಂದು ಹೇಳುತ್ತಿರುವುದರಿಂದ.[100] ಅಳೂಪರು ತಮ್ಮ ರಾಜಕೀಯದ ಅವಸಾನದ ದಿನಗಳಲ್ಲಿ ಶೈವ ಧರ್ಮವನ್ನು ತ್ಯಜಿಸಿ ಜೈನಧರ್ಮವನ್ನು ಸ್ವೀಕರಿಸಿರಬೇಕೆಂದು ಅಭಿಪ್ರಾಯಿಸಿದ್ದಾರೆ.[101] ಇದಕ್ಕೆ ಸಮರ್ಥನೆಯೆಂಬಂತೆ ಮಂಗಳೂರು, ಬಾರಕೂರುಗಳಲ್ಲಿ ರಾಜ್ಯ ಕಳೆದುಕೊಂಡ ಅಳೂಪರು ರಾಜಧಾನಿಯನ್ನು ಮೂಡಬಿದಿರೆಗೆ ಸ್ಥಳಾಂತರಿಸಿ, ಬಸದಿಯೊಂದರಲ್ಲಿ ರತ್ನಸಿಂಹಾಸನರೂಢರಾಗಿರುವುದು.[102] ಆದರೆ ಜೈನರ ಏಳಿಗೆ ಹಲವಾರು ಏರಿಳಿತಗಳಿಂದ ಕೂಡಿತ್ತು. ಅಳೂಪರ ಆಡಳಿತದ ಉಚ್ಛ್ರಾಯ ಕಾಲದಲ್ಲಿ ಅವರೊಂದಿಗೆ ವ್ಯಾಪಾರಿ ನೆಲೆಯಲ್ಲಿ ಸಂಪರ್ಕ ಹೊಂದಿದ್ದ ಜೈನರು ನಿಧಾನವಾಗಿ ಜಮೀನುದಾರಿ ಮನೆತನಗಳಾಗಿ ಅಭಿವೃದ್ಧಿ ಹೊಂದಿ ಸ್ಥಳೀಯ ರಾಜಕಾರಣದಲ್ಲಿ ಪ್ರಭಾವವನ್ನು ವೃದ್ಧಿಸಿಕೊಂಡರು. ಹೊಯ್ಸಳ ಕಾಲದಲ್ಲಿ ಕಂದಾಯ ಅಧಿಕಾರಿಗಳಾಗಿ ಕಾಣಿಸಿಕೊಂಡ ಈ ವರ್ಗ ಅಲೂಪರ ಅವಸಾನದ ನಂತರ ಅಂದರೆ ವಿಜಯನಗರದ ಆಡಳಿತದ ಅವಧಿಯಲ್ಲಿ ಸಾಮಂತ ಆಡಳಿತಗಾರರಾಗಿ ರೂಪಿಸಲ್ಪಟ್ಟರು. ಹೊನ್ನೆಯ ಕಂಬಳಿ ಪಾಳೆಯಗಾರರನ್ನು ಹೊರತುಪಡಿಸಿದರೆ ಅವರು ಸ್ಥಳೀಯ ಆಡಳಿತದಲ್ಲಿ ಪ್ರಧಾನ ಪಾತ್ರವಹಿಸಿದ್ದರು.[103]

ಮಧ್ಯಯುಗೀನ ರಾಜಕೀಯ ಸನ್ನಿವೇಶಗಳಿಂದಾಗಿ ಕರ್ನಾಟಕದ ಇತರ ಭಾಗಗಳಿಂದ ಜನರ ವಲಸೆ ಅನಿವಾರ್ಯವಾಗಿತ್ತು. ಈ ಅನಿವಾರ್ಯತೆಯ ಭಾಗವಾಗಿ ಅಳೂಪರ ಆಡಳಿತದ ಕಾಲದಲ್ಲಿ ಜೈನ ಜಮೀನುದಾರಿ ಸಾಮಂತರು, ಅಥವಾ ವರ್ತಕರು ಈ ಪ್ರದೇಶಕ್ಕೆ ವಲಸೆ ಬಂದಿರಬಹುದೆಂಬ ಅಭಿಪ್ರಾಯ ಅಧ್ಯಯನದಲ್ಲಿ ವ್ಯಕ್ತಗೊಂಡಿದೆ. ಇತಿಹಾಸಕಾರರ ಇನ್ನೊಂದು ಅಭಿಪ್ರಾಯದ ಪ್ರಕಾರ ಸಾಮಾನ್ಯಶಕೆ 1110ರಲ್ಲಿ ಜೈನಸಮುದಾಯದ ಆರ್ಥಿಕ ಪ್ರಭಾವಿಗಳು ಮಲೆನಾಡು ಮುಂತಾದ ಪ್ರದೇಶಗಳಿಂದ ವಲಸೆ ಬಂದು ಇಲ್ಲಿನ ರಾಜರುಗಳ ಸಹಾಯದಿಂದ ಸಣ್ಣಪುಟ್ಟ ರಾಜ್ಯಗಳನ್ನು ಸ್ಥಾಪಿಸಿಕೊಂಡರು ಎಂಬುದು.[104] ಆರಂಭದಲ್ಲಿ ವ್ಯವಸಾಯ ಸಂಬಂಧಿ ಚಟುವಟಿಕೆಗಳಿಗೆ ಸೀಮಿತವಾಗಿದ್ದ ಈ ವರ್ಗ ಕಾಲಾನುಕ್ರಮದಲ್ಲಿ ರಾಜಕೀಯವಾಗಿ ಪ್ರಬಲರಾಗಿ ಇಲ್ಲಿನ ರಾಜರುಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದರು.[105] ಭೂಮಿಯ ದೊರೆಯುವಿಕೆ, ಜನ್ಮಶ್ರೀಮಂತಿಕೆ, ವ್ಯಾಪಾರಿ ಅನುಭವ ಮತ್ತು ಇಲ್ಲಿನ ರಾಜರುಗಳ ಆಶ್ರಯ ಜೈನರಿಗೆ ರಾಜಕೀಯವಾಗಿ ಅಧಿಕಾರ ಪಡೆದುಕೊಳ್ಳಲು ಅಥವಾ ಸಾಮಾಜಿಕವಾಗಿ ಸ್ಥಾನಮಾನ ಪಡೆದುಕೊಳ್ಳಲು ಅನುವು ಮಾಡಿ ಕೊಟ್ಟಿತ್ತು. ಸುಮಾರು ಒಂದು ಸಾವಿರದ ನಾಲ್ಕುನೂರು ವರ್ಷಗಳಷ್ಟು ಕಾಲ ಅಧಿಕಾರ ನಡೆಸಿದ ಅಳೂಪರು ಆರಂಭದಲ್ಲಿ ಸೋಮಕುಲದವರೆಂದು, ಎಂಟನೇ ಶತಮಾನದ ನಂತರದಲ್ಲಿ ಪಾಂಡ್ಯರೆಂದು ಕರೆಯಲ್ಪಟ್ಟರು. ಸಾಮಾನ್ಯಶಕೆ ಹದಿನಾಲ್ಕನೇ

ಶತಮಾನದ ನಂತರ ಅಳೂಪರ ಅಧಿಕಾರದ ನೆಲೆಗಳು ದುರ್ಬಲಗೊಂಡಾಗ ನಿಧಾನವಾಗಿ ಜೈನರ ಪಾಳೇಯಗಾರಿಕೆಯು ಈ ಪ್ರದೇಶದಲ್ಲಿ ಕಾಣಿಸಿಕೊಂಡಿತು.

ಬ್ರಾಹ್ಮಣರು ವಲಸೆ ಬಂದಾಗ ಭೂಒಡೆತನವನ್ನು ಹೊಂದಿದ್ದ ಮೂಲವಾಸಿ ಪ್ರಭಾವಿಗಳು ಜೈನರೊಂದಿಗೆ ಕೈಜೋಡಿಸಿ ಇಲ್ಲವೇ ಸಂಬಂಧ-ಸಹಕಾರ ಬೆಳೆಸಿಕೊಂಡು ಈ ಭಾಗದ ಇತಿಹಾಸಕ್ಕೆ ಹೊಸ ಆಯಾಮವೊಂದನ್ನು ನೀಡಿದರು.[106] ಇದು ಜೈನರ ನೆಲೆ ವಿಸ್ತಾರಕ್ಕೆ ಪ್ರಮುಖ ಕಾರಣವಾಯಿತು. ಜೊತೆಗೆ ಕರ್ನಾಟಕದ ಇತರ ಭಾಗಗಳಿಂದಾದ ರಾಜಕೀಯ ಸ್ಥಿತ್ಯಂತರದ ಪ್ರಭಾವದಿಂದ ಅಳೂಪರು ತಮ್ಮ ಮೂಲಧರ್ಮವನ್ನು ತ್ಯಜಿಸಿ, ಜೈನಮತಾವಲಂಬಿಗಳಾಗಿ[107] ನಂತರದ ಕಾಲಘಟ್ಟದಲ್ಲಿ ಸಾಮಂತರಾಗಿ ಹೊಸ ರೂಪ ತಳೆದಿರುವುದು ಸಹ ಜೈನ ವಾರಸುದಾರಿಕೆಯ ವಿಸ್ತರಣೆಗೆ ಕಾರಣವಾಯಿತು.[108] ಜೈನರ ರಾಜಕೀಯ ಅಧಿಕಾರ, ಸಾಮಾಜಿಕ ಸ್ಥಿತಿ-ಗತಿ ಹಾಗೂ ಆರ್ಥಿಕ ಶಕ್ತಿಗಳು ಇಲ್ಲಿನ ಒಕ್ಕಲುಗಳನ್ನು ಅಧಿಕಾರಕ್ಕಾಗಿ ಹಪಿಸುವಂತೆ ಮಾಡಿತ್ತಲ್ಲದೆ, ಜೈನಮತವನ್ನು ಉನ್ನತ ಸಂಸ್ಕೃತಿಯನ್ನಾಗಿ ಪರಿಗಣಿಸಲು ಪ್ರೇರೆಪಿಸಿರಬೇಕೆಂದು ಇತಿಹಾಸತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ಈ ಪ್ರದೇಶದ ಕೃಷಿ ಆಧಾರಿತ ಅಧಿಕಾರ ಪಡೆದುಕೊಂಡ ವಲಸಿತ ಜೈನಸಮುದಾಯಗಳ ಕೃಷಿ-ವ್ಯಾಪಾರ ಮತ್ತು ಆರ್ಥಿಕ ಉನ್ನತಿಯಿಂದ ಪ್ರಭಾವಿತಗೊಂಡು ಸಹಕುಟುಂಬ ವಾಸ್ತವ್ಯ ಹೂಡಿರುವ ವಿಚಾರವನ್ನು ಇತಿಹಾಸ ಒಪ್ಪಿಕೊಂಡಿದೆ. ಜೈನ ಮತ್ತು ಒಕ್ಕಲುಗಳ ಕುಟುಂಬಗಳಲ್ಲಿನ ಸಾಮಾಜಿಕ ಸಂಬಂಧಗಳು ಈ ಬಗೆಯ ಅಭಿಪ್ರಾಯ ತಳೆಯಲು ಕಾರಣವಾಗಿದೆ.[109] ಇವೆಲ್ಲವೂ ಜೈನರ ನೆಲೆ ಭದ್ರವಾಗಲು ಕಾರಣವಾಯಿತ್ತಲ್ಲದೇ ಅವರ ಭೂವಾರಸುದಾರಿಕೆಯ ಪ್ರಕ್ರಿಯೆಗೆ ಚಾಲನೆ ನೀಡಿತು. ಜೈನ ನಾಮಾಂಕಿತಗಳಾದ ಅಜಿಲ, ಆಳ್ವ, ಅಧಿಕಾರಿ, ಬಲ್ಲಾಳ, ಬಂಗ, ಭಂಡಾರಿ, ಚೌಟ, ಹೆಗ್ಡೆ, ಕಡಂಬ, ಕಾಜವ, ಕೊಂಡೆ, ಮಲ್ಲಿ, ಪೂವಣಿ, ಬಲಿಪ ಇತ್ಯಾದಿ ಇಲ್ಲಿನ ಒಕ್ಕಲುಗಳ ಸಾದೃಶ್ಯತೆಯನ್ನು ಇಟ್ಟುಕೊಂಡಿವೆ. ಜೊತೆಗೆ ಒಕ್ಕಲುಗಳು ಆರಾಧಿಸುತ್ತಿರುವ ಸರ್ವಚೇತನಗಳನ್ನು ಜೈನಕುಟುಂಬಗಳು ಆರಾಧಿಸುತ್ತಿರುವುದಲ್ಲದೇ ವಾರಸ ಅಧಿಕಾರವನ್ನು ಮುಂದುವರೆಸಿಕೊಂಡು ಎರಡು ವರ್ಗಗಳ ಅನ್ಯೋನ್ಯತೆಗೆ ನಾಂದಿ ಹಾಡಿತು.[110] ಹೀಗೆ ಜೈನರು ದೈವದ ಆರಾಧಕರಾಗಿ, ನೂರಾರು ದೈವಗಳನ್ನು ಅಧಿಕಾರದ ಮಾನ್ಯತೆಗಳಿಗನುಗುಣವಾಗಿ ಮರುರೂಪಿಸಿ, ಭೂಒಡೆತನದ ಅಧಿಕಾರಗಳನ್ನು ಸಾಂಸ್ಕೃತಿಕ, ಧಾರ್ಮಿಕ ಮತ್ತು ರಾಜಕೀಯವಾಗಿ ಮಾನ್ಯಮಾಡುವ ಆರಾಧನೆಗಳನ್ನು ಸೃಷ್ಟಿಸಿ, ತಮ್ಮ ನೆಲೆ ಭದ್ರಪಡಿಸಿಕೊಂಡರು.[111] ವಸಾಹತುಪೂರ್ವ ಕಾಲಘಟ್ಟದಲ್ಲಿ ಪ್ರಮುಖ ಒಕ್ಕಲುಗಳು ಅರ್ಥಿಕ ಸುದೃಢತೆ ಹೊಂದುವ ದೃಷ್ಠಿಯಿಂದ ಜೈನ ಮತಾವಲಂಬಿಗಳಾಗಿ ಈ ಪ್ರದೇಶದ ರಾಜಕೀಯ ವ್ಯವಸ್ಥೆಯನ್ನು ನಿಯಂತ್ರಣ ಮಾಡಿದರೆಂದು

ಅಭಿಪ್ರಾಯ ಮಾಡಲಾಗಿದೆಯಾದರೂ ಪ್ರಚಲಿತದಲ್ಲಿರುವ ಕೆಲವು ಸೂಕ್ಷ್ಮ ಆಚರಣೆಗಳನ್ನು ಪರಿಶೀಲಿಸಿದಾಗ ಒಂದೆಡೆ ಒಕ್ಕಲುಗಳು ಜೈನರಾಗಿ ಮತಾಂತರ ಹೊಂದಿ ಇನ್ನೊಂದೆಡೆ ಜೈನರು ಒಕ್ಕಲ್ಮಮರಾದರೆಂದು ಸಾಧಿಸುವುದಕ್ಕೆ ಪುರಾವೆಗಳು ದೊರಕುತ್ತವೆ.[112]

ರಾಜಕೀಯ ಅಧಿಕಾರದ ದೃಷ್ಟಿಯಿಂದ ಕುಟುಂಬಕ್ಕಿಂತ ಗುತ್ತು, ಗುತ್ತಿಗಿಂತ ಗ್ರಾಮ, ಗ್ರಾಮಕ್ಕಿಂತ ಮಾಗಣೆ, ಮಾಗಣೆಗಿಂತ ಸೀಮೆ ಹಿರಿದಾಗುತ್ತಾ ಹೋಗುವುದಲ್ಲದೇ ಇದಕ್ಕೆ ಅನುಗುಣವಾಗಿ ಆಯಾ ಆಡಳಿತ ಘಟಕಗಳ ಮುಖ್ಯಸ್ಥರ ಸ್ಥಾನಮಾನ ಹೆಚ್ಚುತ್ತಾ ಹೋಗುತ್ತದೆ. ಜೈನಸಮುದಾಯ ತನ್ನ ಸ್ಥಿತಿ-ಗತಿಗಳನ್ನು ವೃದ್ಧಿಸಿಕೊಳ್ಳಲು ಆಯಕಟ್ಟಿನ ಅಧಿಕಾರವನ್ನು ಪಡೆದುಕೊಳ್ಳಲು ಪ್ರಯತ್ನಿಸಿತು. ಇದಕ್ಕೆ ಸಂವಾದಿಯಾಗಿ ತುಳುನಾಡಿನಲ್ಲಿ ವಿಜಯನಗರ ಕಾಲಾವಧಿಯಿಂದ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗೆ ಸಮಾನಾಂತರವಾಗಿ ದೈವಾರಾಧನೆ ಮಹತ್ವವನ್ನು ಪಡೆದುಕೊಂಡಿದೆ ಎಂಬುವುದು ಚರಿತ್ರಕಾರರ ಅಭಿಮತ.[113] ಒಟ್ಟಿನಲ್ಲಿ ಜೈನರು ವಿಜಯನಗರದ ವಿಶಾಲ ಸಾಮ್ರಾಜ್ಯ ಸೇರಿಕೊಂಡು ಸಾಮಂತರಾಗಿ ಅಧಿಕಾರ ನಿರ್ವಹಿಸಿದರು.

ಸಾಮಾನ್ಯಶಕೆ ಒಂಬತ್ತನೇ ಶತಮಾನದಿಂದಲೂ ಜೈನರು ತುಳುನಾಡಿನ ರಾಜಕೀಯದೊಂದಿಗೆ ಗುರುತಿಸಿಕೊಂಡು ಕೆಳಹಂತದ ರಾಜಕಾರಣ ಮತ್ತು ಸಾಮಂತ ರಾಜಕಾರಣ ವ್ಯವಸ್ಥೆಯ ಸಂಪರ್ಕ ಸೇತುವಾಗಿ ಮಧ್ಯಮ ರಾಜಕಾರಣದ ಸ್ಥಳೀಯ ಅರಸರಾಗಿ ನಿಯುಕ್ತಗೊಂಡರು. ಮಾತ್ರವಲ್ಲ, ಈ ಪ್ರದೇಶದ ಕೃಷಿ ಅಧಿಕಾರದ ರಚನೆಯಲ್ಲಿ ಗ್ರಾಮ ಮತ್ತು ಅದರ ಕೆಳಗಿನ ಸ್ತರಗಳನ್ನು ಹೊರತುಪಡಿಸಿ ಜೈನರು ಮಾಗಣೆ ಮತ್ತು ಸೀಮೆಮಟ್ಟದಲ್ಲಿ ರಾಜಕೀಯವಾಗಿ ಕೇಂದ್ರೀಕೃತಗೊಂಡಿರುವುದು ಅವರ ರಾಜಕೀಯ ಕೌಶಲ್ಯಕ್ಕೆ ಸಾಕ್ಷಿ ಎಂದು ಇತಿಹಾಸಕಾರರು ಅಭಿಪ್ರಾಯಪಟ್ಟದ್ದಾರೆ.[114] ಈ ಕಾಲಘಟ್ಟದ ಇನ್ನೊಂದು ವಿಶೇಷವೆಂದರೆ ಕರ್ನಾಟಕದಾದ್ಯಂತ ಜೈನಧರ್ಮ ಅವನತಿಗೊಂಡರೆ ತುಳುನಾಡಿನಲ್ಲಿ ಮಾತ್ರ ಜೈನಧರ್ಮ ಉಚ್ಛ್ರಾಯ ಸ್ಥಿತಿಗೆ ತಲುಪಿ, ಜೈನರ ಹಲವಾರು ಮನೆತನಗಳು ಆಡಳಿತಾತ್ಮಕವಾಗಿ ಪ್ರಬಲಗೊಂಡವಲ್ಲದೇ ಸ್ಥಳೀಯವಾಗಿ ರೂಪುಗೊಂಡ ಅನೇಕ ಆಡಳಿತಾತ್ಮಕ ಘಟಕಗಳಿಗೆ ಸಂವಾದಿಯಾಗಿ ದೈವಾರಾಧನೆ ಕೂಡಾ ಸೀಮೆ, ಮಾಗಣೆ, ಗ್ರಾಮ, ಕುಟುಂಬ ಮಟ್ಟದಲ್ಲೂ ರೂಪುಗೊಂಡು ಜೈನರ ಪ್ರಾಬಲ್ಯವನ್ನು ಸಾರಿತು. ಈ ಬೆಳವಣಿಗೆಯನ್ನು ಸಂಕೇತಿಸುವಂತೆ ಮಲೆನಾಡಿನ ಮೇಲಿನಿಂದ ಇಳಿದು ಬರುವ ಹಲವಾರು ಪ್ರಭಾವಿ ದೈವಗಳು ರಾಜನ್‌ದೈವಗಳಾಗಿ ಸಂಚಾರ ಮಾಡಿ, ಕೃಷಿ ವಲಯದ, ಸರಿಕಂಡ ಪ್ರದೇಶಗಳಲ್ಲಿ ವಾಸ್ತವ್ಯ ಹೂಡಿ ರಾಜಕೀಯ ವ್ಯವಸ್ಥೆಯೊಳಗೆ ಅಂತಸ್ತುಗಳಿಗುಣವಾಗಿ ಪ್ರಾಮುಖ್ಯತೆಯನ್ನು ಪಡೆದಿರುವುದು ಚಾರಿತ್ರಿಕವಾಗಿ ವಿಶ್ಲೇಷಣಾರ್ಹವೆಂದು ಇತಿಹಾಸಕಾರರು ವಾದಿಸಿದ್ದಾರೆ. ಇವುಗಳಲ್ಲಿ ಕೊಡಮಣಿತ್ತಾಯ, ಅತ್ತಾವರ ದೈವಗಳು, ಕನಪಡಿತ್ತಾಯ, ಮಗ್ರಂದಾಯ,

ಕಿನ್ನಿಮಾಣಿ, ಪೂಮಾಣಿ, ತೋಡಕುಕ್ಕಿನಾರ್, ಉದ್ಯಾವರ ದೈವಗಳು, ಮುಂಡತ್ತಾಯ, ವೈದ್ಯನಾಥ, ಪಂಜುರ್ಲಿ, ಜುಮಾದಿ, ಉಳ್ಳಾಯ ಮುಂತಾದ ದೈವಗಳು ಕೃಷಿ ವಲಯದ ಸುತ್ತ ಅರಾಧನೆಯನ್ನು ಪಡೆಯುವುದು ಮಾತ್ರವಲ್ಲ ಸೀಮೆಯ ಆಡಳಿತವನ್ನು ನೋಡಿಕೊಳ್ಳುವ ಅರಸನಿಗೆ ಸಂವಾದಿಯಾಗಿಯೂ, ಪ್ರತಿನಿಧಿಯಾಗಿಯೂ, ಕಾರ್ಯನಿರ್ವಹಿಸುವ ಸೀಮೆಯ ದೈವವಾಗಿ ಕಾಣಿಸಿಕೊಂಡವು. ಇದೇ ರೀತಿ ಮಾಗಣೆ, ಗ್ರಾಮ, ಗುತ್ತು, ಕುಟುಂಬ ಮಟ್ಟದಲ್ಲಿ ಈ ಘಟಕಗಳ ಆಡಳಿತವನ್ನು ನೋಡಿಕೊಳ್ಳುವ ಮುಖ್ಯಸ್ಥನಿಗೆ ಸಮಾನಾಂತರವಾಗಿಯೂ, ಪ್ರತಿನಿಧಿಯಾಗಿಯೂ ಮಾಗಣೆ, ಊರು, ಗುತ್ತು ಮತ್ತು ಕುಟುಂಬ ದೈವಗಳು ಕಾಣಿಸಿಕೊಂಡವಲ್ಲದೇ ರಾಜಕೀಯ ಘಟಕಗಳ ಐಕ್ಯವನ್ನು ಕಾಪಾಡಿಕೊಂಡು ಬರುವಲ್ಲಿ ಈ ದೈವಗಳು ಪ್ರಮುಖ ಪಾತ್ರವಹಿಸಿದವು.[115]

ಸೀಮೆಯಿಂದ ಮಾಗಣೆಗೆ, ಮಾಗಣೆಯಿಂದ ಗ್ರಾಮಕ್ಕೆ, ಗ್ರಾಮದಿಂದ ಗುತ್ತಿನ ಮನೆಗೆ, ಗುತ್ತಿನ ಮನೆಯಿಂದ ಕುಟುಂಬಕ್ಕೆ ಅಧಿಕಾರವು ಇಳಿದು ಬರುತ್ತದೆ. ಹೀಗೆ ಇಳಿದು ಬರುವ ಅಧಿಕಾರದ ವ್ಯಾಪ್ತಿಯೂ ಕಡಿಮೆಯಾಗುತ್ತಾ ಬರುತ್ತದೆ. ಇದೇ ಕ್ರಮವೂ ದೈವಗಳ ಶ್ರೇಣಿಕೃತ ವ್ಯವಸ್ಥೆಯಲ್ಲಿಯೂ ಕಂಡುಬರುತ್ತದೆ. ಕುಟುಂಬ, ಗುತ್ತು, ಗ್ರಾಮ, ಮಾಗಣೆ ಈ ಭೌಗೋಳಿಕ ಘಟಕಗಳ ವ್ಯಾಪ್ತಿಯೊಳಗಿನ ದೈವಗಳ ಅಧಿಕಾರವು ಸೀಮೆಯ ದೈವದಿಂದ ವಿಕೇಂದ್ರಿಕರಣ ರೂಪದಲ್ಲಿ ಇಳಿದು ಬರುತ್ತದೆ. ರಾಜಕೀಯವಾಗಿ ಸೀಮೆಯ ಅರಸನ ಮಾತು ಅಂತಿಮವಾಗಿರುವಂತೆ ಸೀಮೆ ದೈವದ ಮಾತು ಅಂತಿಮವಾಗಿರುತ್ತದೆ. ಅಂದರೆ ಆರಾಧನೆಯ ಸಂದರ್ಭದಲ್ಲಿ ಕೆಳಗಿನ ಹಂತದ ದೈವಗಳು ತನಗಿಂತ ಮೇಲಿನ ಹಂತದ ದೈವಗಳನ್ನು ಗೌರವಿಸಬೇಕಾಗುತ್ತದೆ. ಆಡಳಿತಾತ್ಮಕ ರಾಜಕೀಯ ಘಟಕಗಳ ಮುಖ್ಯಸ್ಥರು ಆಡಳಿತದಲ್ಲಿ ಐಕ್ಯ ಸಾಮಾಜಿಕ ಕಟ್ಟುಕಟ್ಟಳೆ ಮತ್ತು ಸನಾತನ ಧರ್ಮದ ರಕ್ಷಣೆಯ ಕಡೆಗೆ ವಿಶೇಷ ಗಮನಕೊಡುವಂತೆ ಪ್ರತಿನಿಧಿ ಸ್ವರೂಪದ ದೈವಗಳು ಕೂಡಾ ಈ ಉದ್ದೇಶಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ರಾಜಕೀಯ ಅಧಿಕಾರ ಮತ್ತು ಆಸ್ತಿಯ ಒಡೆತನದಂತಹ ಆರ್ಥಿಕ ಸಂಪನ್ಮೂಲಗಳ ಹಕ್ಕು ವಂಶಪಾರಂಪರ್ಯವಾಗಿ ಮುಂದುವರೆದುಕೊಂಡು ಬರುವಂತೆ ಸಾಮಂತರು ಮತ್ತು ದೈವಗಳು ಜೊತೆಜೊತೆಯಾಗಿ ಎಚ್ಚರವಹಿಸಿಕೊಂಡು ಬಂದಿರುವುದು ತಿಳಿದುಬರುತ್ತದೆ. ಆದ್ದರಿಂದ ನ್ಯಾಯ ಮತ್ತು ಐಕ್ಯ ಎಂಬುದು ಜಾತಿನಿಷ್ಠ, ಜಮೀನುದಾರೀ ಪದ್ಧತಿಯ ಸಾಮಾಜಿಕ ವ್ಯವಸ್ಥೆಯ ಪರವಾಗಿರುವುದು ಅನಿವಾರ್ಯವಾಗಿರುತ್ತದೆ. ಸಾಮಂತ ಹೇಳುವ ನ್ಯಾಯ ಮತ್ತು ಐಕ್ಯ ದೈವ ಹೇಳುವ ನ್ಯಾಯ ಮತ್ತು ಐಕ್ಯ-ಇವು ಪರಸ್ಪರ ಸಂಬಂಧ ಪಡೆದುಕೊಂಡಿರುವ ಅಂಶಗಳಾಗಿವೆ. ಇಂತಹ ಸಾಮಾಜಿಕ ವ್ಯವಸ್ಥೆಯ ಐಕ್ಯ ಮತ್ತು ನ್ಯಾಯ ತೀರ್ಮಾನದ ಪರಿಕಲ್ಪನೆಗಳು ಆ ವ್ಯವಸ್ಥೆಯ ಮೇಲ್ತುದಿಯವರಿಗೆ ಹಿತವನ್ನು ತರುವ ಐಕ್ಯ ಮತ್ತು ನ್ಯಾಯ

ತೀರ್ಮಾನದ ಅಂಶವಾಗಿರುತ್ತದೆ. ಹೀಗೆ ದೈವಾರಾಧನೆಯು ತುಳುನಾಡಿನಲ್ಲಿ ಸಾಂಪ್ರದಾಯಿಕ ಸಮಾಜದ ಮೌಲ್ಯಗಳನ್ನು, ಕಟ್ಟುಕಟ್ಟಳೆಗಳ ಪದ್ಧತಿಗಳನ್ನು ಅದರ ಮೂಲರೂಪದಲ್ಲಿ ವ್ಯತ್ಯಾಸವಾಗದಂತೆ ನೋಡಿಕೊಳ್ಳುತ್ತದೆ.[116]

ವಸಾಹತುಪೂರ್ವದ ಇತಿಹಾಸದ ವಿಭಿನ್ನ ಘಟ್ಟಗಳಲ್ಲಿ ಈ ರೀತಿಯಾಗಿ ವಿಸ್ತರಣೆಗೊಂಡು ಒಕ್ಕಲುಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡ ಜೈನಬಲ್ಲಾಳರು ಹಾಗೂ ಶೆಟ್ಟಿಗಳು ಪಾಳೆಯಗಾರರಾಗಿ ರಾಜಕೀಯ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಜೊತೆಗೆ ಈ ಪ್ರದೇಶದಲ್ಲಿ ಆಡಳಿತ ಮಾಡುತ್ತಿದ್ದ ಅಧಿಕಾರಿವರ್ಗ ಮತ್ತು ಸಾಮಂತರುಗಳೊಂದಿಗೆ ಸಂಬಂಧಗಳನ್ನಿಟ್ಟುಕೊಂಡು ಭೂಮಿ ಅಧಿಕಾರ ಪಡೆದುಕೊಳ್ಳುವ ಕಾರ್ಯಯೋಜನೆಯನ್ನು ರೂಪಿಸಿಕೊಂಡರು. ಅಧಿಕಾರ ಏಕಸ್ವಾಮ್ಯತೆಯ ಸ್ವರೂಪ ಪಡೆದುಕೊಂಡು ಜೈನರನ್ನು ಮೂಲನಿವಾಸಿಗಳು ಅವಲಂಬಿತಗೊಳ್ಳುವ ವ್ಯವಸ್ಥೆಯೊಂದು ರೂಪಿಸಲ್ಪಟ್ಟಿತ್ತು. ಇದಲ್ಲದೇ ವ್ಯಾಪಾರ-ವ್ಯವಹಾರಗಳು ಸಹ ಜೈನರಿಗೆ ಭೂಮಿಯ ಮೇಲೆ ಹಿಡಿತ ಸಾಧಿಸಿಕೊಳ್ಳಲು ಮತ್ತಷ್ಟು ಅವಕಾಶಗಳನ್ನು ಮಾಡಿಕೊಟ್ಟಿತ್ತು.

ವಿಜಯನಗರ ಕಾಲದಿಂದ ಕೆಳದಿಯ ಅಧಃಪತನದವರೆಗೂ ಪ್ರಬಲರಾಗಿದ್ದ ಇವರು ಸಾಮಂತರಾಗಿ ಅಧಿಕಾರ ನಿರ್ವಹಿಸಿದರು.[117] ಈ ವ್ಯವಸ್ಥೆಗೆ ಪೂರಕವಾಗಿ ಕೃಷಿ ಅಧಾರಿತ ಕೇಂದ್ರಗಳು ವ್ಯಾಪಾರಿ ವಲಯಗಳಾಗಿ ಪರಿವರ್ತಿತಗೊಂಡು ಸೆಟ್ಟಿಕಾರ, ಹಲರು, ಎಳಮೆಗಳು ಮುಂತಾದ ವೃತ್ತಿ ಆಧಾರಿತ ವ್ಯಾಪಾರಿ ಗುಂಪುಗಳು ಸ್ಥಾಪನೆಗೊಂಡವು.[118] ಜೊತೆಗೆ ಹಲವಾರು ಮಠಗಳು ಸ್ಥಾಪನೆಗೊಂಡು ಮೂಡಬಿದಿರೆಯಲ್ಲಿ ಚಾರುಕೀರ್ತಿ ಭಟ್ಟಾರಕ ಮಠ, ಕಾರ್ಕಳದಲ್ಲಿ ಲಲಿತಕೀರ್ತಿ ಭಟ್ಟಾರಕ ಮಠ, ವರಾಂಗದಲ್ಲಿ ದೇವೇಂದ್ರಕೀರ್ತಿ ಭಟ್ಟಾರಕ ಮಠ, ಗೇರುಸೊಪ್ಪೆ, ಹಾಡುವಳ್ಳಿಗಳಲ್ಲಿ ಅಕಲಂಕ ಮಠಗಳು ಪ್ರವರ್ಧಮಾನಕ್ಕೆ ಬಂದವು. ಈ ಪ್ರಧಾನ ಮಠಗಳಲ್ಲದೇ ಇವುಗಳ ಶಾಖಾಮಠಗಳು, ಬಸದಿಗಳು, ಹಾಗೂ ಜೈನ ವ್ಯಾಪಾರಿ ಗುಂಪುಗಳು ನಿರ್ಮಾಣಗೊಂಡು ಭೂಮಿಯ ಒಡೆತನವನ್ನು ಪಡೆದುಕೊಂಡವು.[119] ಈ ರೀತಿ ಜೈನಬಸದಿಗಳು ಭೂಮಾಲಕತ್ವವನ್ನು ಹೊಂದಿಕೊಂಡಿರುವುದನ್ನು ಶಾಸನಗಳು ರುಜುವಾತುಪಡಿಸುತ್ತದೆ.[120]

ತುಳುನಾಡಿನಲ್ಲಿ ಸೈನ್ಯ ಸಂಘಟನೆ ಸಂಖ್ಯೆಗಳನ್ನಾಧರಿಸಿ ಜೈನರ ಗುತ್ತುಗಳು ಶ್ರೇಣಿಕೃತಗೊಂಡವು. ಸಂಖ್ಯಾಧಾರಿತ ಸಾಮಂತತೆ ರೂಪುಗೊಂಡವು. ಭೂಮಿಯ ಒಡೆತನದ ವಿಸ್ತಾರವನ್ನು ಅವಲಂಬಿಸಿ ಜೈನರಲ್ಲೂ ಪ್ರಭಾವಿ ಒಕ್ಕಲುಗಳು ಮತ್ತು ವಲಸಿಗ ಬ್ರಾಹ್ಮಣರಂತೆ ನೂರಾಳ, ಮುನ್ನೂರಾಳ, ನಾನೂರಾಳ, ಐಂದಾಳ, ಸಾರಾಳ, ಮೂಸ್ರಾಳ, ಐಸ್ರಾಳವೆಂಬ ಅಧಿಕಾರದ ಸ್ತರಗಳು ರೂಪುಗೊಂಡವು.[121] ರಾಜಕೀಯ ಅಧಿಕಾರ ಮತ್ತು ಭೂಮಿಯ ಒಡೆತನಗಳಂತಹ ಹಕ್ಕುಗಳನ್ನು ವಂಶಪಾರಂಪರ್ಯವಾಗಿ ಮುಂದುವರೆಯುವಂತೆ ಜೈನ ಅರಸರು

ಎಚ್ಚರವಹಿಸಿಕೊಂಡು ಬಂದು ದೈವಿಕಗೊಳಿಸಿದರು.[122] ಇಲ್ಲಿನ ಮೂಲಸಮುದಾಯಗಳನ್ನು ಸಾಂತ್ವನಪಡಿಸಲು ಮತ್ತು ತಮ್ಮ ಅಧಿಕಾರದ ಆಧಾರ ಸ್ತಂಭಗಳನ್ನಾಗಿ ಮಾಡುವ ಉದ್ದೇಶದೊಂದಿಗೆ ವೀರ ಆರಾಧನೆಯ ದೈವಗಳ ಭಂಡಾರಗಳೆಲ್ಲವನ್ನು ಜೈನರ ಅಧೀನದಲ್ಲಿರುವ ಪ್ರಭಾವಿ ಒಕ್ಕಲುಗಳು ಇಲ್ಲವೇ ಬಿಲ್ಲವರ ಮನೆಗಳಲ್ಲಿ ಸ್ಥಾಪಿಸುವ ಕಾರ್ಯಯೋಜನೆಗಳನ್ನು ಸಿದ್ಧಪಡಿಸಲಾಯಿತು.[123] ಹೀಗೆ ಜೈನ ನೆಲೆಗಳು ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸಾಮಾಜಿಕವಾಗಿ ಬಲಗೊಂಡು ಭೂಮಿಯ ವಾರಸುದಾರಿಕೆಯನ್ನು ಅನುಭವಿಸಿತ್ತಲ್ಲದೇ ಮೂಲನಿವಾಸಿಗಳನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡು ಅಧಿಕಾರ ಚಲಾಯಿಸಿತು.

ಇಟಲಿಯ ಮಾರ್ಕ್ಸ್‌ವಾದಿ ಚಿಂತಕ ಆಂಟನಿ ಗ್ರಾಮ್ಸ್ಕಿ ಅವರು ತಮ್ಮ ಪ್ರಧಾನ ಚಿಂತನೆಯಾದ 'ಹೆಜಮನಿ'ಯನ್ನು ವಿವರಿಸುತ್ತಾ ಪ್ರಬಲ ಅಥವಾ ಅಧಿಕಾರೀ ವರ್ಗಗಳು ಅಧೀನ ಅಥವಾ ಕೆಳವರ್ಗಗಳನ್ನು ಒತ್ತಾಯಪೂರ್ವಕ ಅಥವಾ ಶೋಷಣೆ-ಬಲವಂತದ ಬದಲಿಗೆ ಮನಪರಿವರ್ತಿಸಿ ಒಲಿಸಿಕೊಂಡು ತಮ್ಮ ಸ್ಥಾನವನ್ನು ಭದ್ರಗೊಳಿಸಿಕೊಳ್ಳಬೇಕು.[124] ಇದು ದೂರಗಾಮಿ ಹಿತಾಸಕ್ತಿಯನ್ನು ರಕ್ಷಿಸುವ ತಂತ್ರವಾಗಿದೆ. ಅಧಿಕಾರೀ ವರ್ಗವು ತನ್ನ ಹಿತಾಸಕ್ತಿಗಳನ್ನು ಹೇಗೆ ಮತ್ತು ಯಾವ ರೀತಿಯಲ್ಲಿ ಪ್ರಕಟಿಸುತ್ತದೆ ಎಂಬುವುದು ಅತ್ಯಂತ ಮುಖ್ಯವಾದ ವಿಚಾರವಾಗಿದೆ.[125] ತಮ್ಮ ಅಧಿಕಾರವನ್ನು ಭದ್ರಗೊಳಿಸುವ ದೃಷ್ಟಿಯಿಂದ ಅಧಿಕಾರ ವಿಕೇಂದ್ರಿಕರಣ ವ್ಯವಸ್ಥೆಯನ್ನು ಒಪ್ಪಿಕೊಂಡ ಜೈನ ಅರಸರು ಅಧೀನ ವರ್ಗಗಳ ಬೆಂಬಲವನ್ನು ಬಲವಂತದಿಂದ ಪಡೆದುಕೊಳ್ಳದೇ ಒಲಿಸಿಕೊಳ್ಳುವ ತಂತ್ರಗಾರಿಕೆಯನ್ನು ಅನುಸರಿಸಿದರು. ಹಾಗಾಗಿ ಸೀಮೆಯಿಂದ ಮಾಗಣೆ, ಮಾಗಣೆಯಿಂದ ಗ್ರಾಮ, ಗ್ರಾಮದಿಂದ ಗುತ್ತು, ಗುತ್ತಿನಿಂದ ಕುಟುಂಬ ಹೀಗೆ ಅಧಿಕಾರವು ಹರಿದು ಬರುವ ವ್ಯವಸ್ಥೆಯನ್ನು ಒಪ್ಪಿಕೊಂಡ ಜೈನ ಆಡಳಿತ ಅಧಿಕಾರದ ವಿಕೇಂದ್ರಿಕರಣವನ್ನು ಸಮರ್ಥಿಸಿ, ಅಧಿಕಾರ ವ್ಯಾಪ್ತಿ ಅವರೋಹಣಗೊಳ್ಳುವುದನ್ನು ಅನುಮೋದಿಸಿದರು. ಇದರಿಂದಾಗಿ ಮಾಗಣೆಯ ಬಲ್ಲಾಳರಿಗೆ ಗ್ರಾಮದ ಗುರಿಕಾರ ಮತ್ತು ಗುತ್ತಿನ ಯಜಮಾನನ ಬೆಂಬಲ ಸಿಕ್ಕಿದರೆ, ಇವರೆಲ್ಲರ ಬೆಂಬಲ ಸೀಮೆಯ ಅರಸರಿಗೆ ಸಿಕ್ಕಿ ಸ್ಥಾನ ಭದ್ರಪಡಿಸಿಕೊಳ್ಳಲು ಸಾಧ್ಯವಾಯಿತು. ಸಾಮಾಜಿಕ-ರಾಜಕೀಯವಾಗಿ ಈ ಬಗೆಯ ಸಂಬಂಧ-ಸಂವಹನಗಳು ಒಂದು ಕಡೆ ಅರಸನಿಗೆ ಸಹಾಯ ಮಾಡಿದರೆ ಇನ್ನೊಂದೆಡೆ ಕೆಳಹಂತದ ನಾಯಕರುಗಳೂ ಒಂದಷ್ಟು ಪ್ರಭಾವ-ಅಧಿಕಾರ-ಅಂತಸ್ತು-ಸ್ಥಾನಮಾನಗಳನ್ನು ಹಂಚಿಕೊಳ್ಳಲು ಅವಕಾಶ ನೀಡಿದವು. ಕುಟುಂಬದ ಹಿರಿಯ, ಗುತ್ತಿನ ಮುಖ್ಯಸ್ಥನಿಂದ ಹಿಡಿದು ಸೀಮೆಯ ಅರಸನವರೆಗೆ ಆಡಳಿತದ ಎಲ್ಲಾ ವರ್ತುಲಗಳು ವ್ಯವಸ್ಥೆಗೊಂಡು ಆಡಳಿತಾತ್ಮಕ ಗೊಂದಲಗಳು ನಿವಾರಣೆಗೊಂಡವಲ್ಲದೇ, ಆಯಾಕ್ಷೇತ್ರದ ಮುಖ್ಯಸ್ಥರು ತಮ್ಮ ಅಧಿಕಾರ ವ್ಯಾಪ್ತಿಯೊಳಗೆ

ಪ್ರಶ್ನಾತೀತರಾಗಿ ಪ್ರಭಾವಿಗಳೆನಿಸಿಕೊಂಡು ಸದೃಢಗೊಂಡರು. ಇದು ಜೈನರ ಆಡಳಿತಕ್ಕೆ ಭದ್ರ ಬುನಾದಿಯನ್ನು ಹಾಕಿಕೊಟ್ಟು ರಾಜಕೀಯ ಸ್ಥಿತ್ಯಂತರವೊಂದಕ್ಕೆ ಕಾರಣವಾಯಿತು.

## ಪ್ರಮುಖ ಜೈನಕೇಂದ್ರಗಳು

ತುಳುನಾಡಿನ ಪಾಳೆಯಗಾರರ ಆಡಳಿತ, ಈ ಪ್ರದೇಶದ ಆಡಳಿತದಲ್ಲಿ ಅವರು ಪ್ರಭಾವಿಗಳಾದರೆಂಬ ವಿವರಣೆ, ಅದರಲ್ಲೂ ಮುಖ್ಯವಾಗಿ ಜೈನ ಅರಸರ ಮತ್ತು ಪಾಳೆಯಗಾರರ ಬಗ್ಗೆ ಸಮಗ್ರ ದಾಖಲೆಯ ಮಹತ್ವದ ಅಧ್ಯಯನಗಳಾಗಿವೆ.[126] ಈ ಅಧ್ಯಯನದ ಪ್ರಕಾರ ಬಂಗರು-ಬಂಗಾಡಿ, ನಂದಾವರ, ಮತ್ತು ಮಂಗಳೂರಿನಲ್ಲಿ ರಾಜಕೀಯವಾಗಿ ಪ್ರಬಲಗೊಂಡಿದ್ದು ಬಂಗಾಡಿ, ನಂದಾವರ, ಕೂಳೂರು, ಮತ್ತು ಮಂಗಳಾಪುರಗಳನ್ನು ಕೇಂದ್ರವಾಗಿಟ್ಟುಕೊಂಡು ಆಡಳಿತ ನಡೆಸಿದರು.[127] ಇಲ್ಲಿನ ಸ್ಥಳೀಯ ರಾಜಕೀಯ ಘಟಕಗಳಾಗಿದ್ದ ಹದಿನೈದು ಮಾಗಣೆಗಳಲ್ಲಿ ಇವರು ಬಲಿಷ್ಠರಾಗಿದ್ದರಲ್ಲದೇ ಹೊಯ್ಸಳರಿಂದ ರಾಜರೆಂಬ ಮಾನ್ಯತೆ ಪಡೆದುಕೊಂಡಿದ್ದರು. ಸಾಮಾನ್ಯಶಕೆ 1157ರಲ್ಲಿ ವೀರನರಸಿಂಹ ಬಂಗನೆಂಬ ಅರಸ ವಿದೇಶಿ ವ್ಯವಹಾರದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದರಿಂದ ಹಣವಿನ (ಸಂಪತ್ತಿನ) ಬಂಗನೆಂದು ಹೆಸರನ್ನು ಪಡೆದುಕೊಂಡಿದ್ದನು. ಸ್ಥಳೀಯ ಆಡಳಿತದಲ್ಲಿ ಪ್ರಭಾವಿಗಳಾಗಿದ್ದ ಒಕ್ಕಲುಗಳನ್ನು ಮತ್ತು ಪ್ರಭಾವಿ ಬ್ರಾಹ್ಮಣರನ್ನು ವಿಶ್ವಾಸಕ್ಕೆ ತೆಗೆದುಕೊಡು ಆಡಳಿತ ನಡೆಸಿ ಈ ವರ್ಗ ಅದರಲ್ಲಿ ಯಶಸ್ಸನ್ನು ಪಡೆದುಕೊಂಡಿತು. ಅಧಿಕಾರದ ಹಂಚಿಕೆಯ ಒಡಂಬಡಿಕೆಯ ಪ್ರಕಾರ ಬಂಗಾಡಿ ಮಾಗಣೆ ನಡದ ಗುತ್ತಿನವರು ಅರಸನ ಕೈಹಿಡಿದು ಪಟ್ಟಕ್ಕೆ ಕರೆಯುವ ಅಧಿಕಾರ ಪಡೆದುಕೊಂಡಿದ್ದರು. ಅಂತೆಯೇ ಮಂಗಳೂರಿನ ಸಾವಿರಸೀಮೆ ಹರೇಕಳ ಗುತ್ತಿಗೆ ಪಟ್ಟದ ಉಂಗುರವನ್ನು ತೊಡಿಸುವ ಅಧಿಕಾರ, ಸಜಿಪ ನಡುಗುತ್ತಿಗೆ ಪಟ್ಟದ ಕತ್ತಿ ಕೊಡುವ ಅಧಿಕಾರ, ಮಣಿನಾಲ್ಕೂರು ಸೀಮೆಯ ಸಾಲೂರು ಗುತ್ತಿಗೆ ಪಟ್ಟದ ಹೆಸರು ಕರೆಯುವ ಅಧಿಕಾರ-ಹೀಗೆ ಅಧಿಕಾರವನ್ನು ಹಂಚಲಾಗಿತ್ತು. ರಾಜಪುರೋಹಿತರಾಗಿ ಸಜಿಪಗ್ರಾಮದ ಮುನ್ನೂರುಭಟ್ಟರ ಮನೆತನಕ್ಕೆ ಅಧಿಕಾರ ನೀಡಲಾಗಿತ್ತು.[128] ಈ ವ್ಯವಸ್ಥೆ ವಸಾಹತುಕಾಲದವರೆಗೆ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಆದರೆ ಬದಲಾದ ರಾಜಕೀಯ ಸಮೀಕರಣದಲ್ಲಿ ಪ್ರಭಾವಿ ಒಕ್ಕಲುಗಳು ರಾಜಕೀಯ ಅಧಿಕಾರ ಕಳೆದುಕೊಂಡ ಪರಿಣಾಮವಾಗಿ ಬ್ರಿಟಿಷರು ಸಾಮಾನ್ಯಶಕೆ 1800ರಲ್ಲಿ ಐದನೇ ಲಕ್ಷ್ಮಪ್ಪರಸ ಬಂಗನಿಗೆ ಪಟ್ಟ ಕಟ್ಟಿದ್ದರಲ್ಲದೇ ಆತನೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಇತಿಹಾಸದ ಪ್ರಕಾರ ಸಾಮಾನ್ಯಶಕೆ 1837ರಲ್ಲಿ ಐದನೇ ಲಕ್ಷ್ಮಪ್ಪರಸನು ಕಲ್ಯಾಣಪ್ಪನ ಕಾಟಕಾಯಿಯೊಂದಿಗೆ ಸೇರಿ ಬ್ರಿಟಿಷರ ವಿರುದ್ಧದ ರಾಜದ್ರೋಹ ಮಾಡಿದನೆಂಬ ಆಪಾದನೆಗೊಳಪಟ್ಟು ಬಿಕರ್ಣಕಟ್ಟೆಯಲ್ಲಿ ಶಿರಛೇದಕ್ಕೊಳಗಾದನು. ಹೀಗೆ ವಸಾಹತುಪೂರ್ವದಲ್ಲಿ ಅತ್ಯಂತ ಯಶಸ್ವಿಗಳೆನಿಸಿಕೊಂಡು ಆಡಳಿತ ನಡೆಸಿದ ಬಂಗರಸರು

ನಂತರದ ಕಾಲಘಟ್ಟದಲ್ಲಿ ತಮ್ಮ ಆಸ್ತಿತ್ವ ಕಳೆದುಕೊಂಡರು. ಅದರಲ್ಲೂ ಮುಖ್ಯವಾಗಿ ವಸಾಹತುಶಾಹಿಯ ಕಾಲದಲ್ಲಿ ಅಧಿಕಾರ ಕಳೆದುಕೊಂಡು ಅಪ್ರಸ್ತುತರಾಗಿ ತಮ್ಮ ನೆಲೆಯನ್ನು ಪೂರ್ಣವಾಗಿ ಕಳೆದುಕೊಂಡರು.[129]

ಅಂತೆಯೇ ಕಳಸ-ಕಾರ್ಕಳದ ಭೈರರಸರು ಜೈನ ಮತಾವಲಂಬಿಗಳಾಗಿದ್ದರು. ಇತಿಹಾಸದಲ್ಲಿ ಸಾಕಷ್ಟು ಪ್ರಭಾವಿಗಳಾಗಿದ್ದ ಇವರು ಹೈದರಾಲಿಯ ಕಾಲದಲ್ಲಿ ನೆಲೆ ಕಳೆದುಕೊಂಡು ಅವಸಾನಗೊಂಡರು.[130] ಸೂರಾಲಿನ ತೋಳಹಾರರು ಜೈನರಾಗಿದ್ದು ಬಾರಕೂರಿನ ಅಂತರಿಕ ಆಡಳಿತದಲ್ಲಿ ಪ್ರಭಾವಿಗಳಾಗಿದ್ದರು. ಇವರು ಸೂರಾಲು, ಕೊಕ್ಕರ್ಣೆ, ಬಸರೂರು, ಮತ್ತು ಕಂಡ್ಲೂರು ವ್ಯಾಪ್ತಿಯಲ್ಲಿ ರಾಜಕೀಯ-ಧಾರ್ಮಿಕ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸಿದರು. ಒಂಬತ್ತು ಮಾಗಣೆ ನಲ್ವತ್ತು ಗುತ್ತುಗಳ ಮೇಲೆ ಅಧಿಕಾರ ಚಲಾಯಿಸಿದ ಮೂಲಿಕೆಯ ಸಾಮಂತರು ಇತಿಹಾಸದ ಪುಟಗಳಲ್ಲಿ ತಮ್ಮದೇ ಛಾಪು ಮೂಡಿಸಿದ್ದಾರೆ.[131] ಕಂದಾಯ ವಸೂಲಿಗಾರರಾಗಿ ಪ್ರಸಿದ್ಧಿ ಪಡೆದುಕೊಂಡಿದ್ದ ಕುಂಬಳೆಯ ಜೈನರಸರು ಮೂಲತ; ಕಣ್ಯಾರ, ಕೊಡ್ಯಮೆ, ಮತ್ತು ಮಾಯಿಪ್ಪಾಡಿಗಳಲ್ಲಿ ಭೂಮಿಯನ್ನು ಪಡೆದುಕೊಂಡಿದ್ದರು. ಚರಿತ್ರೆಯ ಪ್ರಕಾರ ರಾಜಕೀಯ ಸ್ಥಿತ್ಯಂತರಕ್ಕೊಳಪಟ್ಟ ಈ ಮನೆತನ ಜೈನಮತಕ್ಕೆ ಮತಾಂತರಗೊಂಡಿತು. ಕುಂಬಳೆಯ ಅರಸರಿಗೆ ಕಣಿಪುರದಲ್ಲಿ ಪಟ್ಟಾಭಿಷೇಕವಾಗುತ್ತಿದ್ದು, ಬಡಾಜೆ ತಂತ್ರಿಯವರಿಂದಲೇ ಪಟ್ಟಾಭಿಷೇಕದ ವಿಧಿ-ವಿಧಾನಗಳು ನಡೆಯಬೇಕೆಂಬ ಸಂಪ್ರದಾಯವನ್ನು ಆರಂಭಿಸಲಾಯಿತು. ಹೀಗೆ ಪಟ್ಟಾಭಿಷೇಕಗೊಂಡ ಅರಸ ಉಪವಾಸದಲ್ಲಿದ್ದುಕೊಂಡು ಮದವೂರು ದೇವಸ್ಥಾನಕ್ಕೆ ಹೋಗಿ ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಮಾಡಿದ ಬಳಿಕ ಉಪವಾಸ ವ್ರತವನ್ನು ಪರಿಮಾರ್ಜನೆಗೊಳಿಸುತ್ತಿದ್ದನು. ಕುಂಬಳೆಯ ರಾಜನ ಆಧೀನಕ್ಕೆ ಒಳಪಟ್ಟ ಬಡಾಜೆ ತಂತ್ರಿಯವರಿಗೆ ಉಪ್ಪಳದಿಂದ ಉದ್ಯಾವರದ ತನಕ ಭೂಮಿಯನ್ನು ಉಂಬಳಿಯಾಗಿ ನೀಡಿದ ಕಾರಣ ಬಡಾಜೆಯ ತಂತ್ರಿ ಭೂಮಾಲಕರಾಗಿ ಪ್ರಭಾವಿಗಳೆನಿಸಿಕೊಂಡಿದ್ದರು.[132] ತಮ್ಮ ಆಡಳಿತದ ಇತಿಹಾಸದಲ್ಲಿ ಹಲವಾರು ಏರಿಳಿತಗಳನ್ನು ಕಂಡ ಕುಂಬಳೆ ಅರಸರು ಕೆಳದಿ ಶಿವಪ್ಪನಾಯಕನ ಕಾಲದಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡು ಕೇವಲ ನಾಲ್ಕು ಸೀಮೆಯ ಅಧಿಕಾರಕ್ಕೆ ಸೀಮಿತಗೊಂಡರು.[133]

ಸಾಮಾನ್ಯಶಕೆ ಹನ್ನೆರಡನೇ ಶತಮಾನದ ಉತ್ತರಾರ್ಧದಲ್ಲಿ ವಲಸೆ ಬಂದ ಚೌಟರು ಉಳ್ಳಾಲ, ಪುತ್ತಿಗೆ ಮತ್ತು ಮೂಡಬಿದಿರೆಯನ್ನು ಕೇಂದ್ರವಾಗಿ ಆಡಳಿತ ನಡೆಸಿದ ಜೈನವಂಶೀಯರಾಗಿದ್ದಾರೆ. ಹೊಯ್ಸಳರ ದೊರೆ ವಿಷ್ಣುವರ್ಧನನಿಂದ ಸೋಲಿಸಲ್ಪಟ್ಟು ಅಧಿಕಾರ ಕಳೆದುಕೊಂಡ ಚೌಟರು ಒಂದನೇಯ ತಿರುಮಲನ ನೇತೃತ್ವದಲ್ಲಿ ಉಳ್ಳಾಲವನ್ನು ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಸೀಮಿತ ಅಧಿಕಾರ ಮುಂದುವರೆಸಿದರು. ನಂತರದ

ಕಾಲಘಟ್ಟದಲ್ಲಿ ಸೋಮೇಶ್ವರ, ತಲಪಾಡಿ, ಅಮ್ಮೆಂಬಳ, ಬೆಳ್ಳ, ಬಾಳೆಪುಣಿ, ಕೈರಂಗಳ, ಮಿಜಾರು, ಮಳಲಿ, ಪುತ್ತಿಗೆ, ಕಡಂದಲೆ, ಪೇಜಾವರ, ಹೆಜಮಾಡಿ, ಮುಂಡ್ಕೂರು, ಕಳವಾರು, ಸಾಣೂರು, ಪಟ್ಟೆಗ್ರಾಮಗಳ ಪಾಳೆಯಗಾರರಾಗಿ ಅಧಿಕಾರದ ಪರಿಧಿಯನ್ನು ವಿಸ್ತರಿಸಿಕೊಂಡವರು. ಅಬ್ಬಕ್ಕರ ಕಾಲದಲ್ಲಿ ಹೆಸರುವಾಸಿಯಾದ ಈ ಪಾಳೆಯಗಾರರು ಮೂಡಬಿದಿರೆಯಲ್ಲೂ ಪ್ರಭಾವಿಗಳೆನಿಸಿ ಅಧಿಕಾರ ಚಲಾಯಿಸಿದರು. ಇಕ್ಕೇರಿ ಸಂಸ್ಥಾನಗಳ ಮೇಲುಸ್ತುವಾರಿಗೆ ಒಳಪಟ್ಟ ಚೌಟರ ರಾಜ್ಯ ಹೈದರಾಲಿಯ ಆಡಳಿತಾವಧಿಯಲ್ಲಿ ಕಂದಾಯ ಸಲ್ಲಿಸುವಲ್ಲಿ ವಿಫಲರಾದ ಕಾರಣಕ್ಕೆ ಅಧಿಕಾರವನ್ನು ಕಳೆದುಕೊಳ್ಳಬೇಕಾಯಿತು. ಸಾಮಾನ್ಯಶಕೆ 1766ರಲ್ಲಿ ಹೈದರನಿಂದ ಮಾಲೀಖಾನೆ ಪಡೆಯುವುದರೊಂದಿಗೆ ಅಧಿಕೃತವಾಗಿ ಅಧಿಕಾರವನ್ನು ಕಳೆದುಕೊಂಡರು. ಆದರೆ ಬ್ರಿಟಿಷರಿಂದ ಪಿಂಚಣಿ ಪಡೆದು ಸಾಂಕೇತಿಕ ಅಧಿಕಾರಗಳನ್ನು ಮುಂದುವರೆಸಿಕೊಂಡರಲ್ಲದೇ ಸಾಮಾನ್ಯಶಕೆ 1867ರಲ್ಲಿ ಅಧಿಕಾರ-ಆಸ್ತಿಗೆ ಸಂಬಂಧಿಸಿ ದಾವೆಯೊಂದು ದಾಖಲಾಗಿ ವಿವಾದಿತರೆನಿಸಿಕೊಂಡರು.[134]

ಸಾಮಾನ್ಯಶಕೆ ಹದಿಮೂರನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ವಿಟ್ಲದ ಡೊಂಬರಸರು ಬಂಟ್ವಾಳ ತಾಲೂಕಿನ ವಿಟ್ಲವನ್ನು ತಮ್ಮ ರಾಜಕೀಯ ಕೇಂದ್ರವಾಗಿಸಿಕೊಂಡು ಹತ್ತೊಂಬತ್ತು ಗ್ರಾಮಗಳನ್ನೊಳಗೊಂಡ ವಿಟ್ಲ ಎರಡುಸಾವಿರ ಸೀಮೆಯನ್ನು ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು.[135] ಅಲೂಪರ ಆಳ್ವಿಕೆಯಲ್ಲಿದ್ದ ಈ ಪ್ರದೇಶದ ರಕ್ಷಣೆಗೆ ಅಥವಾ ಆಡಳಿತಕ್ಕೆ ಅಧಿಕಾರಿಯಾಗಿ ಡೊಂಬ ಹೆಗ್ಗಡೆ ನಿಯುಕ್ತರಾಗಿದ್ದರಾದರೂ, ಅಳೂಪರ ಪತನದ ನಂತರ ಸ್ವತಂತ್ರ ಪಾಳೆಯಗಾರರಾಗಿ ಸಾಮಾನ್ಯಶಕೆ ಹತ್ತೊಂಬತ್ತನೆಯ ಶತಮಾನದ ಆರಂಭದ ತನಕ ಆಡಳಿತ ನಿರ್ವಹಿಸಿದರೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಡೊಂಬ ಹೆಗ್ಗಡೆ ಎಂಬ ಅಭಿದಾನ ಮತ್ತು ಬಲ್ಲಾಳ ಎಂಬ ನಾಮದೇಯದೊಂದಿಗೆ ಅಧಿಕಾರ ನಡೆಸಿರುವ ಇವರು ಮೂಲತಃ ಜೈನರಾಗಿರದೇ ಕ್ಷತ್ರೀಯ ಬಲ್ಲಾಳರೆಂದು ಕರೆಯುವುದು ರೂಢಿಯಲ್ಲಿದೆ. ಹದಿನೆಂಟು ದೇವಸ್ಥಾನ ಮತ್ತು ಹದಿನೆಂಟು ದೈವಸ್ಥಾನಗಳು ಇವರ ನಿಯಂತ್ರಣದಲ್ಲಿದ್ದು ಧಾರ್ಮಿಕವಾಗಿಯೂ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದರು.[136] ಪ್ರಸ್ತುತ ಈ ಧಾರ್ಮಿಕ ಕೇಂದ್ರಗಳಲ್ಲಿ ಸಾಮಾಜಿಕ ಮಾನ್ಯತೆಯನ್ನು ಪಡೆಯುತ್ತಿದ್ದಾರೆ.[137]

ಹೊಯ್ಸಳ, ವಿಜಯನಗರ ಹಾಗೂ ಕೆಳದಿ ಅರಸರ ಕಾಲದಲ್ಲಿ ಅಧಿಕಾರ ನಡೆಸಿಕೊಂಡು ಬಂದಿದ್ದ ವೇಣೂರಿನ ಅಜಿಲರು, ವೇಣೂರು, ಆಳದಂಗಡಿ, ಕೇಳ ಮತ್ತು ಬರಾಯದಲ್ಲಿ ಅರಮನೆ ಹೊಂದಿದ್ದರಲ್ಲದೇ ಹದಿಮೂರು ಮಾಗಣೆಗಳು ಮತ್ತು ಎಂಬತ್ತು ಗ್ರಾಮಗಳು ಅವರ ಅಧಿಕಾರ ವ್ಯಾಪ್ತಿಯಲ್ಲಿ ಒಳಗೊಂಡಿದ್ದವು.[138] ಇದಲ್ಲದೇ ಮೂಲಿಕೆಯ ಸಾವಂತರು, ಹೊಸಂಗಡಿಯ ಹೊನ್ನೆಕಂಬಳಿಯರಸರು, ಸೂರಾಲಿನ ತೊಳಹಾರರು ಹಾಗೂ ಮೂಲರಂತಹ

ಹಲವಾರು ಸಣ್ಣಪುಟ್ಟ ಪಾಳೆಯಗಾರರು ಇಲ್ಲಿನ ರಾಜಕಿಯ ಹಾಗೂ ಸಾಂಸ್ಕೃತಿಕ ಇತಿಹಾಸದ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು.

ಪಟ್ರೊಡಲ್ಲಾವೆಲ್ಲೆ ಎಂಬ ವಿದೇಶಿ ಪ್ರವಾಸಿಗನ ಬರವಣಿಗೆ ಹಾಗೂ ಲಿಂಗಣ್ಣ ಕವಿಯ ಕೆಳದಿ ನೃಪವಿಜಯದಲ್ಲಿ ಉಲ್ಲೇಖಿತವಾಗಿರುವಂತೆ ಕೆಳದಿಯ ವೆಂಕಟಪ್ಪನಾಯಕ ಪಶ್ಚಿಮ ಕರಾವಳಿ ಕರ್ನಾಟಕದಲ್ಲಿನ ಭೂಮಿಯ ಮೇಲಿನ ಅಧಿಕಾರ ಹೊಂದಿದ್ದ ಪ್ರಭಾವಿ ಪಾಳೆಯಗಾರರನ್ನು ನಿರ್ಮೂಲನೆ ಮಾಡುವಲ್ಲಿ ಆಸಕ್ತಿಯನ್ನು ವಹಿಸಿದ್ದನು.[139] ಇದಕ್ಕನುಗುಣವಾಗಿ 1629ರಲ್ಲಿ ವೆಂಕಟಪ್ಪ ನಾಯಕನು 50,000 ಪಗೋಡಾ ಮೌಲ್ಯದ ಭೂಮಿ ಪಾಳೆಯಗಾರರಿಂದ ವಶಪಡಿಸಿಕೊಂಡನು. ಈ ಸಂದರ್ಭಗಳಲ್ಲಿ ಅಧೀನ ಸಂಸ್ಕೃತಿಯ ಪ್ರಭಾವಿ ಒಕ್ಕಲುಗಳು ಜೈನ ಪಾಳೆಯಗಾರರನ್ನು ಬದಿಗೊತ್ತಿ ತಮ್ಮ ಅಧಿಕಾರಗಳನ್ನು ವಿಸ್ತರಿಸಿಕೊಂಡರಲ್ಲದೇ ಪಾಳೆಯಗಾರರ ಆಸ್ತಿಗೆ ವಾರಸುದಾರರಾದರೆಂದು ಇತಿಹಾಸ ಬರಹಗಾರರು ಅಭಿಪ್ರಾಯಪಟ್ಟಿದ್ದಾರೆ. ಇದು ಜೈನ ಅರಸರ ಪತನಕ್ಕೆ ಕಾರಣವಾಯಿತ್ತಲ್ಲದೆ ಜೈನರ ಆಡಳಿತದ ಅದಃಪತನಕ್ಕೂ ಕಾರಣವಾಯಿತು.[140] ಧರ್ಮಸ್ಥಳದ ಹೆಗ್ಗಡೆ ಮನೆತನ ವಸಾಹತುಶಾಹಿ ಕಾಲದಲ್ಲೂ ತನ್ನ ಆಡಳಿತದ ವರಸೆಯನ್ನು ಮುಂದುವರೆಸಿದ್ದು, ಪ್ರಸ್ತುತ ತನ್ನ ಸಮಾಜ ಸೇವಾ ಕಾರ್ಯಗಳಿಂದ ಸಾಮಾಜಿಕ ಮನ್ನಣೆಯನ್ನು ಗಳಿಸಿದೆ.

ತುಳುನಾಡಿನಲ್ಲಿ ಜೈನರ ಆಡಳಿತಕ್ಕೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳಾಗಿವೆಯಾದರೂ ಅವುಗಳಲ್ಲಿ ಅತ್ಯಂತ ಪ್ರಮುಖವಾಗಿರುವುದು ಗಣಪತಿರಾವ್ ಐಗಳ್‌ರವರ ಚಾರಿತ್ರಿಕ ಸಂಶೋಧನೆ. ಅವರು ತಮ್ಮ ಐತಿಹಾಸಿಕ ಬರವಣಿಗೆಯಲ್ಲಿ ಸೀಮೆ, ಮಾಗಣೆ ಮತ್ತು ಗುತ್ತುಗಳ ಅಧಿಕಾರ, ಸೀಮೆ ದೇವಸ್ಥಾನಗಳ ವಿವರಗಳು, ಸೀಮೆ, ಮಾಗಣೆ ಮತ್ತು ಗ್ರಾಮಗಳ ದೇವಸ್ಥಾನಗಳಲ್ಲಿ ಈ ಪ್ರದೇಶದ ಸ್ಥಳೀಯ ಆಡಳಿತಾಧಿಕಾರ ಧಾರ್ಮಿಕ ವಿಧಿಗಳೊಂದಿಗೆ ಮಾನ್ಯಗೊಳ್ಳುವ ಪ್ರಕ್ರಿಯೆಗಳು, ನ್ಯಾಯ ತೀರ್ಮಾನ ಮಾಡುವ ದೇವಸ್ಥಾನಗಳ ವಿವರ ಹಾಗೂ ಭೂಮಿಕೆಗಳು ಮಾತ್ರವಲ್ಲದೇ, ದೈವಸ್ಥಾನಗಳು ಕುಟುಂಬ ಮಟ್ಟದಿಂದ ಗುತ್ತು ಮಟ್ಟಗಳ ವರೆಗಿನ ಅಧಿಕಾರ ಮತ್ತು ನ್ಯಾಯತೀರ್ಮಾನವನ್ನು ಹೇಗೆ ಮಾನ್ಯಗೊಳಿಸುತ್ತವೆ ಎಂಬ ವಿಚಾರಗಳನ್ನು ಗುರುತಿಸಿದ್ದಾರೆ.[141] ಇವುಗಳಲ್ಲಿ ಕೆಲವು ಗುತ್ತು ಮತ್ತು ಮಾಗಣೆಗಳು ವಸಾಹತು ಪೂರ್ವಕ್ಕೆ ಸಂಬಂಧಿಸಿದರೆ ಕೆಲವು ಗುತ್ತುಗಳು ವಸಾಹತು ಸಂದರ್ಭದಲ್ಲಿ ರೂಪುಗೊಂಡು ಹೊಸ ರಾಜಕೀಯದೊಂದಿಗೆ ಸಂವಹನವನ್ನು ಇಟ್ಟುಕೊಂಡಿದ್ದರ ಬಗ್ಗೆ ವಿವರಿಸಿದ್ದಾರೆ.[142] ಇದಲ್ಲದೇ ಉಳ್ಳಾಲ್ತಿ ಪಾಡ್ದನದಲ್ಲಿ ಜೈನರ ಹಲವಾರು ಬೀಡುಗಳ ಬಗ್ಗೆ ಉಲ್ಲೇಖಗಳಿವೆ. ಉದಾಹರಣೆಗೆ ಕಲ್ಲೂರು, ಕುರ್ಮಾನ್, ಬೀರೂರು, ಪಟ್ಟೋರಿ ಕೋಣಾಜೆ, ಮಂಚಿ, ಬೋಳಂತೂರು, ಏರ್ಯ, ಕುರಿಯಾಡಿ, ಇರಾ-ಚಿತ್ತರಿಗೆ, ಮೀಂಜ, ಬೆಜ್ಜಂಗಳ,

ಮಂಗಳ್ಪಾಡಿ ಬೀಡು ಮುಂತಾದವುಗಳು.[143] ಮಂಗಳೂರು ರಾಜ್ಯದ ಅಧಿಕಾರಿಗಳ ಬೆಂಬಲದೊಂದಿಗೆ ಕೂಟಾತ್ತಾಜೆಯ ಜನನಂದ ಜೈನಬೀಡು ಕಣಂತೂರಿನ ದೈವದೊಂದಿಗೆ ರಾಜಕೀಯ ಸಂಬಂಧಗಳನ್ನು ಇಟ್ಟುಕೊಂಡು ನೂದಾಳ ಪಟ್ಟದ ಅಧಿಕಾರವನ್ನು ಪಡೆಯುತ್ತಿತ್ತು. ಅಜ್ಜೇರು ಕಣಂತೂರು ಮಾಡದ ಉಸ್ತುವಾರಿ ಮಾತ್ರವಲ್ಲ ಗುತ್ತುಗಳಿಗೆ ಅಧಿಕಾರ ಹಂಚುವ ಕಾರ್ಯವನ್ನು ನಿರ್ವಹಿಸುತ್ತಿತ್ತು.[144] ನಾರ್ಯಗುತ್ತು, ನಡಿಯಾಲಗುತ್ತು, ಪೊಯ್ಯತ್ತಾಯಬೀಡು ಅರಸು ಅಥವಾ ಪ್ರಧಾನ ದೈವಾರಾಧನೆಗೆ ಒಳಪಟ್ಟ ಪ್ರದೇಶಗಳಾಗಿದ್ದು, ನ್ಯಾಯತೀರ್ಮಾನಕ್ಕೆ ಹೆಸರುವಾಸಿಯಾಗಿದ್ದವು. ಒಟ್ಟಾರೆ ವಸಾಹತುಪೂರ್ವದ ಜೈನಕೇಂದ್ರಿತ ಅಧಿಕಾರೀ ವ್ಯವಸ್ಥೆಗಳು ದೈವಕೇಂದ್ರಿತವಾಗಿರುವುದನ್ನು ಗಮನಿಸಬಹುದು.[145]

## ಒಕ್ಕಲುಗಳು ಅಥವಾ ಒಕ್ಕೆಲ್ಮರು, (ಬಂಟರು) ವಾರಸುದಾರಿಕೆ

ಒಕ್ಕಲುಗಳು ಅಥವಾ ಒಕ್ಕೆಲ್ಮರ ಜೀವನ, ಕೃಷಿ ವ್ಯವಸ್ಥೆಯಲ್ಲಿ ಅವರ ಪಾಲುದಾರಿಕೆ, ಅಧಿಕಾರೀ ವ್ಯವಸ್ಥೆಯಲ್ಲಿ ಅವರ ಸಹಭಾಗಿತ್ವ, ಭೂಒಡೆತನ ಮತ್ತು ವಾರಸುದಾರಿಕೆಯ ವಿವಿಧ ಸ್ತರಗಳಲ್ಲಿ ಅವರು ಕಾಣಿಸಿ ಪಾಲು ಪಡೆದುಕೊಂಡಿರುವುದರಿಂದ ಅಧಿಕಾರ ಮತ್ತು ಅಧಿಕಾರ ಪ್ರಧಾನಗಳ ವಿವಿಧ ಸಾಪೇಕ್ಷ ವ್ಯವಸ್ಥೆಗಳಲ್ಲಿ ಈ ಸಮುದಾಯ ಮುಖ್ಯವಾಗಿತ್ತು. ಇತಿಹಾಸದಲ್ಲಿ ವಿಸ್ತೃತ ನೆಲೆಯನ್ನು ಸ್ಥಾಪಿಸಿದ್ದ ಒಕ್ಕಲ್ಮರು ಇಲ್ಲಿನ ಪ್ರಧಾನ ಜನಸಮುದಾಯವಾಗಿ, ವಾರಸುದಾರಿಕೆಯನ್ನು ಪಡೆದುಕೊಂಡ ಬಗೆ, ಇತ್ಯಾದಿಗಳ ಬಗ್ಗೆ ಹಲವಾರು ಅಧ್ಯಯನಗಳು ಮಾಡಲ್ಪಟ್ಟಿವೆಯಾದರೂ, ಹೆಚ್ಚಿನ ಅಧ್ಯಯನಗಳು ಅವರ ಜೀವನ ಚರಿತ್ರೆಯಾಗಿವೆಯೇ ಹೊರತು ವಾರಸುದಾರಿಕೆಯ ವ್ಯವಸ್ಥೆಯಲ್ಲಿ ಅವರನ್ನು ಸ್ಥಳೀಕರಣಗೊಳಿಸಿ ವಸಾಹತುಪೂರ್ವದ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿದ ಪ್ರಯತ್ನಗಳು ವಿರಳ.[146] ಇದಕ್ಕೆ ಪ್ರಮುಖ ಕಾರಣವೇನೆಂದರೆ ಒಕ್ಕೆಲ್ಮರ ಬಗ್ಗೆ ದೊರೆಯುವ ಮಾಹಿತಿ ಅಥವಾ ವಿಚಾರಗಳು ಸ್ವತಂತ್ರ ನೆಲೆಯವುಗಳಾಗಿರದೇ ಇಲ್ಲಿನ ಅಧಿಕಾರಸ್ಥ ಪ್ರಬಲ ವರ್ಗಗಳೊಂದಿಗೆ ಅಥವಾ ಈ ಪ್ರದೇಶವನ್ನು ಆಳಿದ ರಾಜಮನೆತನಗಳ ವಿಚಾರಗಳೊಂದಿಗೆ ಸಮ್ಮಿಳಿತಗೊಂಡಿರುವುದು.[147] ಆದ್ದರಿಂದ ಈ ನೆಲೆಯಲ್ಲಿ ಮಾಡಲ್ಪಡುವ ಯಾವುದೇ ಸಂಶೋಧನೆಗಳು ಇತಿಹಾಸದ ದೃಷ್ಟಿಯಿಂದ ವಿಶೇಷವೆನಿಸಿಕೊಳ್ಳುತ್ತವೆ.[148] ಪ್ರೊ ಬಿ. ಸುರೇಂದ್ರರಾವ್, ಬರೆದು ಪ್ರಕಟಪಡಿಸಿದ 'ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು' ಎಂಬ ಗ್ರಂಥವು ಈ ದೃಷ್ಟಿಕೋನದ ಒಂದು ಅಧ್ಯಯನವಾಗಿದ್ದು ಒಕ್ಕಲ್ಮರಿಗೆ ಸಂಬಂಧಿಸಿದಂತೆ ಸಮಗ್ರ ಮಾಹಿತಿಯನ್ನು ನೀಡುತ್ತದೆ. ಒಕ್ಕಲ್ಮರ ಜೀವನ ಮತ್ತು ಅಧಿಕಾರಕ್ಕಾಗಿನ ಹೋರಾಟದ ಬಗ್ಗೆ ಮಾಹಿತಿ ಕಲೆಹಾಕುತ್ತಾ ಪ್ರೊ ರಾವ್ ಅವರು ಈ ಬಗೆಯಲ್ಲಿ ಅಭಿಪ್ರಾಯಿಸಿದ್ದಾರೆ. ಇತಿಹಾಸದಲ್ಲಿ ಅಧಿಕಾರಕ್ಕಾಗಿ ಹೋರಾಡಿರುವ ಹೋರಾಟಗಾರರು ಅನೇಕರಿದ್ದು, ಅವರ ಹೋರಾಟದ ಫಲವಾಗಿ

ಬದಲಾಗಿರುವ ರಾಜಕೀಯ ಮತ್ತು ಸಾಮಾಜಿಕ ಸಮೀಕರಣಗಳು ಅಧಿಕಾರದ ಗುಣಲಕ್ಷಣಗಳಾಗಿ ಮಾರ್ಪಟ್ಟಿವೆ. ತುಳುನಾಡಿನ ಸಾಮಾಜಿಕ ಸಮೀಕರಣ ಮತ್ತು ಅಧಿಕಾರದಲ್ಲಿ ಒಕ್ಕಲ್ಮರು ಕೇಂದ್ರವಾಗಿ ತಮ್ಮ ಇರುವಿಕೆ ಅಥವಾ ಉಪಸ್ಥಿತಿಯನ್ನು ಸ್ಪಷ್ಟವಾಗಿ ರೂಪಿಸಿಕೊಂಡಿದ್ದರು. ಆದ್ದರಿಂದ ತುಳುನಾಡಿಗೆ ಸಂಬಂಧಿಸಿದ ಯಾವುದೇ ಅಧ್ಯಯನವು ಪರಿಪೂರ್ಣಗೊಳ್ಳಬೇಕಾದರೆ ಒಕ್ಕಲ್ಮರು ಹಾಗೂ ವಾರಸುದಾರಿಕೆಯಲ್ಲಿ ಅವರ ಪಾತ್ರವನ್ನು ಅರ್ಥಮಾಡಿಕೊಳ್ಳುವುದು ಅನಿವಾರ್ಯವಾಗಿದೆ.

## ಒಕ್ಕಲ್ಮರ ಮೂಲ

ಒಕ್ಕಲ್ಮರ (ಬಂಟ) ಮೂಲಕ್ಕೆ ಸಂಬಂಧಿಸಿದಂತೆ ಇತಿಹಾಸದ ಪುಟಗಳಲ್ಲಿ ಭಿನ್ನ ಅಭಿಪ್ರಾಯಗಳು ದಾಖಲಾಗಿವೆ.[149] ಈ ಸಮುದಾಯದ ಬಗ್ಗೆ ಅಧ್ಯಯನ ಮಾಡಿದ ಇತಿಹಾಸತಜ್ಞರ ಪ್ರಕಾರ ಅವರ ಪ್ರಾದೇಶಿಕ ವ್ಯಾಪ್ತಿ ಬಡಗು ಗಂಗೆಯಿಂದ ತೆಂಕು ರಾಮೇಶ್ವರದವರೆಗೆ, ಮೂಡಲ ಕಾವೇರಿ ಘಟ್ಟದಿಂದ ಪಡುವಲ ಹೊರಳು ಮರಳಿನವರೆಗೆ ವಿಸ್ತಾರವನ್ನು ಹೊಂದಿತ್ತು. ಆದರೆ ಈ ಬಗೆಯ ಅಭಿಪ್ರಾಯ ಹೆಚ್ಚಿನ ಸಂದರ್ಭಗಳಲ್ಲಿ ಮೌಖಿಕ ಆಕರಗಳ ಆಧಾರಿತವಾಗಿ ರೂಪಿಸಲ್ಪಟ್ಟಿದೆಯೇ ಹೊರತು ಸಮಗ್ರ ಬರವಣಿಗೆಯ ಮೂಲಗಳಿಂದ ರೂಪಿತಗೊಂಡಿದ್ದಲ್ಲ. ಆದ್ದರಿಂದ ಈ ಬಗೆಯ ಅಭಿಪ್ರಾಯಗಳನ್ನು ಒಪ್ಪಿಕೊಳ್ಳದ ಇತಿಹಾಸತಜ್ಞರು ಅನೇಕರಿದ್ದಾರೆ. ಅವರ ಪ್ರಕಾರ ತುಳುನಾಡಿಗೆ ಸಂಬಂಧಿಸಿದ ರಾಜಕೀಯ ಅಥವಾ ಆಡಳಿತದ ಮೇರೆಗಳು ನಿರಂತರ ಬದಲಾವಣೆಗೆ ಒಳಗಾಗುತ್ತಿದ್ದರಿಂದ ಒಕ್ಕಲ್ಮರ ಬಗ್ಗೆ ಸ್ಪಷ್ಟ ಅಥವಾ ವೈಜ್ಞಾನಿಕ ನಿಲುವು ತಳೆಯುವುದು ಕ್ಲಿಷ್ಟಕರ.[150] ಮಾತ್ರವಲ್ಲ, ಸಾಂಸ್ಕೃತಿಕವಾಗಿಯೂ ದೈವಗಳ ಪ್ರಸರಣಕ್ಕೆ ಸಂಬಂಧಿಸಿ ತುಳುನಾಡಿನ ಮೇರೆಗಳು ಏಕಪ್ರಕಾರವಾಗಿ ಉಲ್ಲೇಖಿತವಾಗದಿರುವುದರಿಂದ ಒಂದು ಸಮುದಾಯದ ವಾಸ್ತವ್ಯ ಮತ್ತು ಚಲನೆಯನ್ನು ಗಮನಕ್ಕೆ ತೆಗೆದುಕೊಂಡಾಗ, ಅದರಲ್ಲೂ ಮುಖ್ಯವಾಗಿ ಒಕ್ಕಲ್ಮರ ಪ್ರಾದೇಶಿಕ ವ್ಯಾಪ್ತಿಯನ್ನು ಪರಿಗಣಿಸಿದಾಗ ಅದು ಇಷ್ಟೇ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಐತಿಹಾಸಿಕವಾಗಿ ಒಕ್ಕಲಕುಲು, ಒಕ್ಕೆಲ್ಮೆರ್, ಶೆಟ್ರು ಎಂಬ ಜಾತಿಸೂಚಕ ಪದಗಳಿಂದ ಸಾಮಾಜಿಕ ನೆಲೆಯಲ್ಲಿ ಗುರುತಿಸಿಕೊಂಡಿದ್ದ ಸಮುದಾಯವನ್ನು ವಸಾಹತುಶಾಹಿಯ ನೀತಿ ನಿರೂಪಣೆಗಳು 'ಬಂಟರು'[151] ಎಂದು ಪುನರ್‌ನಾಮಕರಣ ಮಾಡಿ, ಈ ಸಮುದಾಯದ ಸಾಮಾಜಿಕ ಅನನ್ಯತೆಯನ್ನು ಕಾಯ್ದುಕೊಳ್ಳುವಲ್ಲಿ ಕಾರಣೀಭೂತರಾದರು. ಇದಲ್ಲದೇ ತುಳುನಾಡಿನ ಚಾರಿತ್ರಿಕ ಅಧ್ಯಯನಗಳು ಒಕ್ಕಲ್ಮರನ್ನು ಯೋಧರು, ಸೇನಾಧಿಪತಿಗಳು, ರಾಜ್ಯವನ್ನು ಆಳಿದವರು, ಮಾಸಾಧಿಕ ಜೈನರು, ಮಲಬಾರಿನ ನಾಯರ್ ಹಾಗೂ ತಮಿಳುನಾಡಿನ ನಟ್ಟರ್, ಇವರುಗಳಿಗೆ ಸಮಾನಾಂತರರು ಎಂದು ತೀರ್ಮಾನಿಸಿರುವುದು ಮಾತ್ರವಲ್ಲದೇ, ಕೆಲವು ಚಿಂತನೆಗಳು ಒಕ್ಕಲ್ಮರು

ದ್ರಾವಿಡ ಜನಾಂಗದವರು ಎಂಬ ಅಭಿಪ್ರಾಯವನ್ನೂ ಮುಂಚೂಣಿಗೆ ತಂದಿವೆ.[152] ಆದರೂ ಇಲ್ಲಿನ ಪ್ರಮುಖ ಸಮುದಾಯವಾದ ಒಕ್ಕಲ್ಮರ ಬಗ್ಗೆ ಸಮರ್ಪಕ ಲಿಖಿತ ದಾಖಲೆಗಳು ರೂಪಿತಗೊಂಡಿಲ್ಲದ ಕಾರಣ ಅವರು ಮೂಲತಃ ತುಳುನಾಡಿನವರೇ ಅಥವಾ ಬ್ರಾಹ್ಮಣರಂತೆ ಬೇರೆ ಪ್ರದೇಶಗಳಿಂದ ವಲಸೆ ಬಂದು ನೆಲೆಸಿದವರೇ ಎಂಬುದರ ಬಗ್ಗೆ ಜಿಜ್ಞಾಸೆ ಮುಂದುವರೆದುಕೊಂಡು ಬಂದಿದೆ.

ಮಂಜೇಶ್ವರ ಗಣಪತಿರಾವ್ ಐಗಳ್ ಇವರು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಂತೆ ಒಕ್ಕಲ್ಮರು ಬಹಳ ಪುರಾತನ ಕಾಲದಿಂದ ಅಂದರೆ, ಬ್ರಾಹ್ಮಣರು ತುಳುನಾಡಿಗೆ ವಲಸೆ ಬರುವ ಪೂರ್ವದಲ್ಲೇ ಇಲ್ಲಿ ಬಂದು ನೆಲೆನಿಂತ ಒಂದು ವಂಶದವರು. ಆದಾಗ್ಯೂ ಇತರ ಅಧ್ಯಯನಗಳು ಇವರು ಈ ಪ್ರದೇಶದಲ್ಲಿ ಪುರಾತನ ಕಾಲದಿಂದಲೇ ಇದ್ದವರೋ ಅಥವಾ ಉತ್ತರ ದೇಶದಿಂದ ಇಲ್ಲಿಗೆ ಬಂದ ದ್ರಾವಿಡರ ಒಂದು ಶಾಖೆಯವರೋ ಎಂಬುದರ ಬಗ್ಗೆ ನಿಸ್ಸಂದೇಹವಾಗಿ ಅಭಿಪ್ರಾಯ ವ್ಯಕ್ತಪಡಿಸುವುದಿಲ್ಲ. ಆದರೆ ಇವರ ಭೌತಿಕ ಸ್ವರೂಪ ಮತ್ತು ಆಚರಣೆಗಳ ಆಧಾರದಲ್ಲಿ ದ್ರಾವಿಡ ವಂಶಕ್ಕೆ ಸೇರಿದ ಕುಟುಂಬದವರಾಗಿರಹುದೆಂದು ತೀರ್ಮಾನಿಸಿವೆ ಈ ಸಂಶೋಧನೆಗಳ ಪ್ರಕಾರ ಒಕ್ಕಲ್ಮರು ಪೂರ್ವದಲ್ಲಿ ಚದುರಿದ ರಾಜಕಾರಣಿಗಳಾಗಿದ್ದು ಸಣ್ಣಪುಟ್ಟ ರಾಜ್ಯಗಳನ್ನು ಸ್ಥಾಪಿಸಿ ಆಳಿಕೊಂಡಿದ್ದರು. ದೈಹಿಕವಾಗಿ ಮಹಾಧೈರ್ಯಶಾಲಿಗಳು, ಕಾಯಕ ಶಕ್ತಿಯುಳ್ಳವರು ಹಾಗೂ ರಾಜ್ಯಭಾರ ಮಾಡಲಿಕ್ಕೆ ಸಮರ್ಥರಾಗಿದ್ದರಿಂದ ಈ ಜಿಲ್ಲೆಯಲ್ಲಿರುವ ಇತರ ದ್ರಾವಿಡ ವಂಶಗಳು ಇವರ ಕೈಕೆಳಗಿನ ಸಮುದಾಯಗಳಾಗಿ ಆಳ್ವಿಕೆಗೆ ಒಳಪಟ್ಟದ್ದವು.[153]

ಒಟ್ಟಿನಲ್ಲಿ ಒಕ್ಕಲ್ಮರು ತುಳುನಾಡಿನ ಒಂದು ಪ್ರತ್ಯೇಕ ಸಮುದಾಯ. ಕೃಷಿಯನ್ನು ಪ್ರಧಾನ ಕಸುಬನ್ನಾಗಿ ಮಾಡಿಕೊಂಡಿದ್ದರಿಂದ ಇವರು ಒಕ್ಕೆಲಕುಲು (ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕಾರ್ಯದಲ್ಲಿ ನಿರತರಾದವರು) ಅಥವಾ ಬಾರಗೆರ್ (ಭತ್ತದ ಕೃಷಿ ಮಾಡುವವರು, ದೊಡ್ಡ ವ್ಯವಸಾಯಗಾರರು.) ಎಂಬುವುದಾಗಿ ಗುರುತಿಸಲ್ಪಟ್ಟಿದ್ದರು.[154] ಅಂತೆಯೇ ತುಳುನಾಡಿನ ಕೆಳಸ್ತರದ ರಾಜಕಾರಣದಲ್ಲಿ ಸಕ್ರಿಯರಾಗಿದ್ದರಿಂದ ಳುವವರು (ತುಳುನಾಡಿನ ಆಡಳಿತ ಘಟಕದ ಉಸ್ತುವಾರಿಗಳು), ಪಾಲರು (ಊರಿನ ಪ್ರತಿನಿಧಿಗಳು), ಕರ್ತರು (ಆಡಳಿತದ ವ್ಯವಸ್ಥೆಯನ್ನು ನೋಡಿಕೊಳ್ಳುವವರು), ದೊಕ್ಕುಲು (ಒಡೆಯ), ಬಾರುವವರು (ಆಡಳಿತದಲ್ಲಿ ಪಾಲು ಪಡೆದುಕೊಂಡ ಪ್ರತಿನಿಧಿಗಳು), ಇತ್ಯಾದಿ ಹೆಸರುಗಳಿಂದ ಮಾನ್ಯತೆಯನ್ನು ಪಡೆದುಕೊಂಡಿದ್ದರು. ಈ ವಿಚಾರಗಳು ಮೌಖಿಕ ಆಕರಗಳಲ್ಲಿ ಉಲ್ಲೇಖಿಸಲ್ಪಟಿವೆ.[155] ಜೊತೆಗೆ ಒಕ್ಕಲ್ಮರು ಮೂಲತಃ ಮಾತೃಪ್ರಧಾನ ಕುಟುಂಬಪದ್ಧತಿಯನ್ನು ಹೊಂದಿ, ಅಳಿಯಕಟ್ಟು ಸಂಪ್ರದಾಯವನ್ನು ಆಚರಿಸುವವರಾಗಿದ್ದು ದೈವಾರಾಧಕರೂ, ನಾಗಾರಾಧಕರೂ ಆಗಿದ್ದರು.[156] ಹೀಗೆ ಒಕ್ಕಲ್ಮರು ಈ

ಪ್ರದೇಶದ ಕೃಷಿಕರಾಗಿ, ಊರಿನ ಪ್ರಮುಖ ಸಮುದಾಯವಾಗಿ ಇಲ್ಲಿನ ವ್ಯಾಪಾರ-ವಹಿವಾಟು, ಗ್ರಾಮಾಧಿಕಾರ, ಪ್ರದೇಶದ ಉಸ್ತುವಾರಿ-ಇವೇ ಮೊದಲಾದವುಗಳಲ್ಲಿ ತೊಡಗಿಸಿಕೊಂಡು ತುಳುನಾಡಿನ ಇತಿಹಾಸದಲ್ಲಿ ಅಸ್ತಿತ್ವವನ್ನು ಸ್ಥಾಪಿಸಿದ್ದರು.

ತುಳುನಾಡಿನ ವಸಾಹತುಪೂರ್ವ ವ್ಯವಸ್ಥೆಯಲ್ಲಿ ಒಕ್ಕಲ್ಮರ ಸ್ಥಿತಿಗತಿ ಅಥವಾ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಸ್ಪಷ್ಟ ದಾಖಲೆಗಳಿಲ್ಲದಿದ್ದರೂ ದೊರೆಯುತ್ತಿರುವ ಲಿಖಿತ ದಾಖಲೆ ಹಾಗೂ ಮೌಖಿಕ ಅಭಿಪ್ರಾಯಗಳು ಆ ಸಂದರ್ಭವನ್ನು ಅರ್ಥೈಸಿಕೊಳ್ಳಲು ಪ್ರಯತ್ನ ನಡೆಸಿವೆ. ವಸಾಹತುಪೂರ್ವ ವ್ಯವಸ್ಥೆಯಲ್ಲಿ ಅಧಿಕಾರ ನಡೆಸಿದ ಸಾಮಂತರು ಆರ್ಥಿಕವಾಗಿ ಬಲಾಢ್ಯರಾಗಿದ್ದರೂ, ಆಳ್ವಿಕೆ ನಡೆಸುವಲ್ಲಿನ ಪರಿಧಿಯಲ್ಲಿ ಸಾಮಾಜಿಕ ಸ್ಥಾನಮಾನ ಹಾಗೂ ಪ್ರಾಬಲ್ಯತೆಯನ್ನು ಪಡೆದ ಒಕ್ಕಲುಗಳನ್ನು ನಿರ್ಲಕ್ಷಿಸಲಾಗದೇ ಅವರಿಗೆ ಅಧಿಕಾರದಲ್ಲಿ ಪಾಲುಕೊಟ್ಟು ಪ್ರತಿಯಾಗಿ ಅವರಿಂದ ಸಹಕಾರ-ಸಹಾಯ ಪಡೆದುಕೊಂಡು ರಾಜಕೀಯ ವ್ಯವಸ್ಥೆಯೊಂದನ್ನು ಹುಟ್ಟುಹಾಕಿದರೆಂಬ ಅಭಿಪ್ರಾಯವನ್ನು ಚರಿತ್ರಕಾರರು ವ್ಯಕ್ತಪಡಿಸಿದ್ದಾರೆ.[157] ಇದು ರಾಜಕೀಯ ಲೆಕ್ಕಾಚಾರವಾಗಿದ್ದು ಅಧಿಕಾರ ಸಹಭಾಗಿತ್ವದ ಸಂಯೋಜನೆಯಿಂದ ಸಾಮಂತರು ಒಕ್ಕಲುಗಳಿಂದ, ಒಕ್ಕಲುಗಳು ಸಾಮಂತರಿಂದ ಹೀಗೆ-ಪರಸ್ಪರ ಲಾಭ ಪಡೆದಿರುವ ಹಲವಾರು ಸಂದರ್ಭಗಳು ಚರಿತ್ರೆಯಲ್ಲಿ ಕಾಣಸಿಗುತ್ತದೆ. ಈ ವ್ಯವಹಾರವು ಆಡಳಿತದ ಮುಖ್ಯಸ್ಥರಾದ ಸಾಮಂತರಿಗೆ ಹೆಚ್ಚು ಲಾಭದಾಯಕವಾಗಿತ್ತು. ಏಕೆಂದರೆ ಸ್ಥಳೀಯ ಮಟ್ಟದಲ್ಲಿ ಆರ್ಥಿಕವಾಗಿ ಬಲಾಢ್ಯರಾಗಿದ್ದ ಒಕ್ಕಲುಗಳನ್ನು ಒಲೈಸಿ, ಅವರ ವಿಶ್ವಾಸ ಗಳಿಸಿ, ಒಕ್ಕಲುಗಳಿಗೆ ತಮ್ಮ ಪ್ರತಿನಿಧಿಗಳನ್ನು ಆಯ್ಕೆಮಾಡಿಕೊಳ್ಳಲು ಅವಕಾಶ ನೀಡಿ ತನ್ಮೂಲಕ ಅಧಿಕಾರ ನೀಡಿ ಇವರ ಜೊತೆಗಿನ ಸಂಘರ್ಷವನ್ನು ತಪ್ಪಿಸಿಕೊಂಡದ್ದು ಮಾತ್ರವಲ್ಲದೇ ತಮ್ಮ ಅಧಿಕಾರ, ಸ್ಥಾನಮಾನವನ್ನು ಸಾಮಂತರುಗಳು ಭದ್ರಗೊಳಿಸಿ ಅದರಲ್ಲಿ ಯಶಸ್ಸನ್ನು ಪಡೆದುಕೊಂಡರು. ಸಂಕ್ಷಿಪ್ತವಾಗಿ ಹೇಳುವುದಾದರೆ, ಈ ರಾಜಕೀಯ ತಂತ್ರಗಾರಿಕೆ ಸ್ಥಳೀಯವಾಗಿ ಪ್ರಬಲರಾಗಿದ್ದ ಒಕ್ಕಲುಗಳನ್ನು ಗೆಲ್ಲುವ ಪರಿಣಾಮಕಾರಿ ವಿಧಾನವಾಗಿತ್ತು. ಈ ತಂತ್ರಗಾರಿಕೆಯ ಹಿಂದೆ ಸಾಮಂತರ ಅಧಿಕಾರ ಭದ್ರಗೊಳಿಸುವ ಉದ್ದೇಶವಿತ್ತಾದರೂ, ಅದರಿಂದ ಒಕ್ಕಲುಗಳು ಕೆಳಹಂತದ ರಾಜಕೀಯದಲ್ಲಿ ತಮ್ಮ ಬಲವರ್ಧನೆ ಮಾಡಿಕೊಂಡರಲ್ಲದೇ ಮೇಲ್‌ಸ್ತರದ ಸಾಮಂತರುಗಳೊಂದಿಗೆ ಅಧಿಕಾರ ಹಂಚಿಕೊಂಡು ಅವರಿಗೆ ಸಮಾನರಾಗಿ ಕಾಣಿಸಿಕೊಂಡರು.[158]

## ಶಾಸನಗಳ ದಾಖಲೆಗಳಲ್ಲಿ ಒಕ್ಕಲ್ಮರು

ತುಳುನಾಡಿನ ಶಾಸನಗಳನ್ನು ಪರಿಶೀಲಿಸಿದಾಗ ಸಾಮಾನ್ಯಶಕೆ ಏಳನೇ ಶತಮಾನಗಳಲ್ಲಿ ಒಕ್ಕಲುಗಳು ಭೂಮಿಯ ಒಡೆತನ ಹೊಂದಿದ ಉಲ್ಲೇಖಗಳಿವೆ.[159] ಅಂತೆಯೇ ಸುಮಾರು ಎಂಟನೇ ಶತಮಾನದ ಪೂರ್ವಕಾಲದಲ್ಲಿ ಒಕ್ಕಲುಗಳು ಭೂಮಿಯ ಹಕ್ಕು ಪಡೆದು, ಸ್ಥಳೀಯ

ಅಧಿಕಾರಿಗಳಿಗೆ ಕಂದಾಯ ಸಲ್ಲಿಸಿ ಜೀವನ ನಡೆಸುತ್ತಿದ್ದ ವಿಚಾರಗಳಲ್ಲದೇ ರಾಜಕೀಯ ಹಾಗೂ ಆಡಳಿತಾತ್ಮಕ ರಚನೆಯ ನೆಲೆಗಳಲ್ಲಿ ಭೂಮಿ ಘಟಕಗಳಾಗಿ ವಿಭಾಗಗೊಂಡು ಒಕ್ಕಲುಗಳ ಆಧೀನಕ್ಕೆ ಒಳಪಟ್ಟಿರುವ ಉಲ್ಲೇಖಗಳನ್ನು ಅಳೂಪರ ಕಾಲದ ಶಾಸನಗಳು ನೀಡುತ್ತವೆ.[160] ಸುಮಾರು ಮೂರ್‍ನಾಲ್ಕು ಶತಮಾನಗಳ ನಂತರ ಅಂದರೆ ಹನ್ನೆರಡನೇ ಶತಮಾನದಲ್ಲಿ ಕೃಷಿ ಕೆಲಸಗಳಲ್ಲಿ ಸಮಗ್ರವಾಗಿ ತೊಡಗಿಸಿಕೊಂಡಿದ್ದ ಒಕ್ಕಲುಗಳು ನಂತರದ ದಿನಗಳಲ್ಲಿ ಅದೇ ಭೂಮಿಯ ಮೇಲೆ ಹಕ್ಕು ಸಾಧಿಸಿ ಅಧಿಕಾರ ಚಲಾಯಿಸಿದ್ದರು ಎಂಬುದನ್ನು ಇತಿಹಾಸ ಅಧ್ಯಯನಗಳು ಕಂಡುಕೊಂಡಿವೆ.[161]

ವಿಜಯನಗರದ ಆಡಳಿತ ಅವಧಿಯಲ್ಲಿ ಒಕ್ಕಲುಗಳು ಕೃಷಿ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಕಾಣಿಸಿಕೊಂಡಿದ್ದರಲ್ಲದೇ ಹೆಚ್ಚಿನ ಪ್ರಮಾಣದಲ್ಲಿ ಭೂಮಾಲಕತ್ವವನ್ನು ಪಡೆದಿರುವುದು ಆ ಕಾಲದಲ್ಲಿ ನಿರ್ಮಾಣಗೊಂಡಿದ್ದ ಗದ್ದೆಗಳ ಹೆಸರುಗಳಲ್ಲಿ ನಮೂದಿತವಾಗಿದೆ. ಈ ವಿಚಾರಗಳು ಆ ಕಾಲದ ಶಾಸನಗಳಲ್ಲಿ ಉಲ್ಲೇಖಗೊಂಡಿದ್ದು ಒಕ್ಕಲ್ಮರು ಗಣನೀಯ ಪ್ರಮಾಣದ ಭೂಮಿಯ ಮೇಲೆ ಒಡೆತನವನ್ನು ಹೊಂದಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.[162] ನಂತರದ ಕಾಲಘಟ್ಟದಲ್ಲಿ ಆರ್ಥಿಕವಾಗಿ ಇನ್ನೂ ಹೆಚ್ಚು ಪ್ರಬಲರಾದ ಒಕ್ಕಲ್ಮರು ತಮಗಿಂತ ರಾಜಕೀಯವಾಗಿ ಪ್ರಬಲರೆನಿಸಿಕೊಂಡಿದ್ದ ಹೆಗ್ಗಡೆಗಳ ಮೇಲೆ ಪ್ರಭಾವ ಬೀರಿ "ಬಾಳು" ಭೂಮಿಗಳನ್ನು ನಿರ್ದಿಷ್ಟ ಮೌಲ್ಯಕ್ಕೆ ಖರೀದಿಸಿ, ದೇವಸ್ಥಾನಗಳ ಸೇವೆಗೆ ನೀಡಿದ ವಿವರಗಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿರುವುದರಿಂದ ಭೂಒಡೆತನ ಹೊಂದುವಲ್ಲಿ ಒಕ್ಕಲುಗಳ ಪ್ರಭಾವವನ್ನು ಗುರುತಿಸಬಹುದು.[163] ಅಂತೆಯೇ ಕೃಷಿಯಲ್ಲಿ ಸದೃಢಗೊಂಡ ಒಕ್ಕಲುಗಳು ಬ್ರಾಹ್ಮಣರಿಂದ ನಾಯರುಮೂಲ ಭೂಮಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಕ್ರಯಕ್ಕೆ ಇಲ್ಲವೇ ಭೋಗ್ಯಕ್ಕೆ ಪಡೆದುಕೊಂಡು ತಮ್ಮ ವಾರಸುದಾರಿಕೆಯನ್ನು ವಿಸ್ತರಿಸಿಕೊಂಡರು. ಈ ಬಗೆಯಲ್ಲಿ ಬ್ರಹ್ಮದೇಯ ಭೂಮಿಗಳು ಒಕ್ಕಲುಗಳಿಗೆ ಮಾರಾಟಗೊಳ್ಳುತ್ತಿದ್ದ ಬಗೆಗಿನ ಮಾಹಿತಿಗಳು ವಿಜಯನಗರ ಕಾಲದ ಅವಧಿಯ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.[164]

ಭೂಮಿಯ ಒಡೆತನ ಹೊಂದಿ ಆರ್ಥಿಕ ಸಮುದಾಯಗಳಾಗಿ ರೂಪುಗೊಂಡ ಒಕ್ಕಲುಗಳು ಭೂಮಿಯ ವಿಸ್ತಾರತೆಗೆ ಅನುಗುಣವಾಗಿ ಕೆಳಹಂತದ ರಾಜಕಾರಣದ ಅಧಿಕಾರಿವರ್ಗಗಳಾಗಿ ನೇಮಕಗೊಂಡು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿಯೂ ಬಲಾಢ್ಯರಾದರು. ಬ್ರಾಹ್ಮಣರಿಂದ ಹಾಗೂ ಹೆಗ್ಗಡೆಗಳಿಂದ ಆರಂಭದಲ್ಲಿ ಭೂಮಿಯನ್ನು ಪಡೆದುಕೊಂಡ ಒಕ್ಕಲ್ಮರು ತಮ್ಮ ನೆಲೆ ಭದ್ರಗೊಂಡ ಮೇಲೆ ಆ ಭೂಮಿಗಳನ್ನು ದೇವಸ್ಥಾನಗಳಿಗೆ ದಾನ ನೀಡುವ ಪ್ರಕ್ರಿಯೆಯೊಂದನ್ನು ಆರಂಭಿಸಿರುವುದು ಹಲವಾರು ಐತಿಹಾಸಿಕ ಬೆಳವಣಿಗೆಗಳಿಗೆ ಕಾರಣವಾಯಿತು. ಈ ರೀತಿಯ ಬೆಳವಣಿಗೆ ಆ ಕಾಲದ ಆರ್ಥಿಕ ಮತ್ತು

ಸಾಮಾಜಿಕ ಅಗತ್ಯತೆಗಳಿಗೆ ಅವಶ್ಯಕವೆನಿಸಿಕೊಂಡವು.[165] ಜಾತಿ ವಿಭಜಿತ ಕೃಷಿಅಧಿಕಾರದ ಸಮಾಜದಲ್ಲಿ ಒಕ್ಕಲುಗಳು ತಮ್ಮ ಸ್ಥಾನಮಾನವನ್ನು ಭದ್ರಗೊಳಿಸಿಕೊಂಡಿರುವುದು ಒಂದೆಡೆಯಾದರೆ, ಇನ್ನೊಂದೆಡೆ ಬ್ರಾಹ್ಮಣರ ಸಹಯೋಗದೊಂದಿಗೆ ಈ ತೆರನಾದ ಕಾರ್ಯಚಟುವಟಿಕೆಗಳಲ್ಲಿ ತೊಡಗಿದಾಗ ಒಕ್ಕಲುಗಳು ಸಂಪತ್ತಿನ ಸಂಚಯನ ಹಾಗೂ ಸಮಾಜವನ್ನು ತಮ್ಮ ಅಂಕೆಯೊಳಗೆ ತರುವ ಸಂದರ್ಭದಲ್ಲಿ ಲೋಪವಾಗದಂತೆ ಮಾಡುವ ಪ್ರಯತ್ನವೂ ಸಾಧಿಸಲ್ಪಟ್ಟಿತ್ತು. ಪ್ರಭಾವಿ ಒಕ್ಕಲುಗಳು ದತ್ತಿ ಪ್ರಕ್ರಿಯೆಗಳ ಉದಾರತೆಯನ್ನು ಪ್ರಾರಂಭಿಸಿರುವುದು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಪ್ರತಿಫಲಗಳನ್ನು ಗಳಿಸಿಕೊಳ್ಳುವ ಉದ್ದೇಶದ್ದು ಎಂದರೂ ತಪ್ಪಲ್ಲ. ಇದು ಒಕ್ಕಲುಗಳು ಮತ್ತು ಬ್ರಾಹ್ಮಣರು ಭೂಮಿ ಹಾಗೂ ಅಧಿಕಾರವನ್ನು ಪಡೆದುಕೊಳ್ಳುವ ದಿಕ್ಕಿನಲ್ಲಿ ಪರಸ್ಪರ ಸಹಕಾರಿಯಾಯಿತೆಂಬುದು ಇತಿಹಾಸಕಾರರ ಅಭಿಪ್ರಾಯ.[166]

ಒಟ್ಟಿನಲ್ಲಿ ಭೂಮಿಯ ಒಡೆತನ ಮತ್ತು ದತ್ತಿ ನೀಡುವ ಸಂಪ್ರದಾಯ ಒಂದು ತೆರನಾದ ಅಧಿಕಾರದ ವರ್ತುಲಗಳನ್ನು ನಿರ್ಮಿಸಿ, ಗ್ರಾಮಗಣ್ಯತೆಯನ್ನು ಪಡೆಯುವ ಪ್ರಯತ್ನವಾಗಿತ್ತಲ್ಲದೇ ಒಕ್ಕಲುಗಳಿಗೆ ರಾಜಕೀಯ ಸಂಬಂಧಗಳನ್ನು ವಿಸ್ತರಿಸಿಕೊಳ್ಳಲು ಮತ್ತು ಕೇಂದ್ರ ವ್ಯವಸ್ಥೆಯೊಂದಿಗೆ ಸಂಪರ್ಕ ಸಾಧಿಸಿ, ಸ್ಥಳೀಯ ಆಡಳಿತದಲ್ಲಿ ನಿರ್ಣಾಯಕ ಪಾತ್ರವಹಿಸಲು ಇದು ಅವಕಾಶ ನೀಡಿತು.[167] ಜೊತೆಗೆ ಕೃಷಿಅಧಿಕಾರದಲ್ಲಿ ತೊಡಗಿಸಿಕೊಂಡಿದ್ದ ಒಕ್ಕಲುಗಳು ಸ್ಥಳೀಯ ನಾಯಕರಾಗಿ, ಸೈನಿಕ ಜವಾಬ್ದಾರಿಯನ್ನು ವಹಿಸಿಕೊಳ್ಳುವ ಸಂದರ್ಭವೇರ್ಪಟ್ಟಿತ್ತಲ್ಲದೇ ರಾಜ್ಯದ ಅಲಿಖಿತ ಆಜ್ಞೆಗಳ ನಿರ್ವಾಹಕರಾಗಿ ಹಾಗೂ ಅವುಗಳನ್ನು ವ್ಯವಸ್ಥಿತವಾಗಿಡುವ ನ್ಯಾಯಿಕ ಅಧಿಕಾರಗಳನ್ನು ಪಡೆದುಕೊಂಡರು. ಮಾತ್ರವಲ್ಲ ಒಂದೆಡೆ ಕೇಂದ್ರ ವ್ಯವಸ್ಥೆಯ ಅಧೀನ ಸಂಸ್ಥೆಗಳಾಗಿ ಅವುಗಳ ಮೇಲೆ ಪ್ರಭಾವ ಹೊಂದಿದರೆ ಸ್ಥಳೀಯ ಅಧಿಕಾರದ ನಿರ್ವಾತ ತುಂಬುವಲ್ಲಿ ಒಕ್ಕಲ್ಮರು ಯಶಸ್ವಿಯಾದರು.[168] ಒಕ್ಕಲುಗಳು ಇತಿಹಾಸದ ಆರಂಭಿಕ ಪುಟಗಳಲ್ಲಿ ಸಾಮಾನ್ಯ ಸಮುದಾಯವಾಗಿದ್ದರೂ, ನಂತರದ ಶತಮಾನಗಳಲ್ಲಿ ಭೂಮಿಯ ಒಡೆತನ ಹೊಂದಿ, ಸ್ಥಳೀಯ ಆಡಳಿತ ಘಟಕಗಳ ಪ್ರತಿನಿಧಿಗಳಾಗಿ ಸೇವೆ ಸಲ್ಲಿಸಿದ್ದರು.ಆದರೆ ಇದು ಎಲ್ಲಾ ಒಕ್ಕಲುಗಳಿಗೆ ಸಮಾನವಾಗಿ ಅನ್ವಯಿಸುವುದಿಲ್ಲ. ಭೂಮಿಯ ವಾರಸುದಾರಿಕಾ ಅಧಿಕಾರ ಒಕ್ಕಲುಗಳ ಕೆಲವು ವರ್ಗ ಅಥವಾ ವಂಶಗಳಿಗೆ ಮಾತ್ರ ಸೀಮಿತವಾಗಿತ್ತು.[169]

ವಸಾಹತುಪೂರ್ವದಲ್ಲಿ ಯಾವುದೇ ವರ್ಗಗಳ ಅಥವಾ ಸಮುದಾಯಗಳ ಸಾಮಾಜಿಕ ಹಾಗೂ ರಾಜಕೀಯ ಸ್ಥಾನಮಾನಗಳು ಅವುಗಳು ಹೊಂದಿರುವ ಭೂಮಿಯ ವಿಸ್ತಾರ, ಅಧಿಕಾರ ಮತ್ತು ಹಕ್ಕುಗಳನ್ನು ಆಧರಿಸಿತ್ತು. ಬದಲಾಗುತ್ತಿರುವ ಸಮಾಜ ಮತ್ತು ಆರ್ಥಿಕತೆಗಳಲ್ಲಿ ಕೆಲವು ವರ್ಗಗಳು ಆಯಾಕಾಲದ ಕ್ರಮಾಗತ ವ್ಯವಸ್ಥೆಯಲ್ಲಿ ಸ್ಥಾನ ಪಡೆಯಲು ಹವಣಿಸಿದ್ದರಿಂದ ಇದು

ರಾಜಕೀಯ ಮೇಲಾಟಕ್ಕೆ ಕಾರಣವಾಗಿತ್ತು. ರಾಜಕೀಯ-ಅಧಿಕಾರದ ಈ ಮೇಲಾಟದಲ್ಲಿ ಸ್ಪರ್ಧಿಸಿ ಯಶಸ್ವಿಯಾದ ಒಕ್ಕಲುಗಳನ್ನು ನೋಡಿ ಇತರ ಹಲವು ವರ್ಗಗಳು ಕೂಡಾ ಇದೇ ದಾರಿ ತುಳಿದಿರಬಹುದೆಂಬುವುದನ್ನು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.[170]

ಹೀಗೆ ಕೃಷಿ-ಅಧಿಕಾರಕ್ಕಾಗಿ ಹಾತೊರೆದು ಮೇಲಾಟ ನಡೆಸಿ ಗೆದ್ದ ಒಕ್ಕಲುಗಳು ಸ್ಥಳೀಯ ಸ್ತರದ ಆಡಳಿತದಲ್ಲಿ ಪಾಲುದಾರರಾಗಿ ಭೂಒಡೆತನವನ್ನು ಹೊಂದಿ 'ಗುತು'ತ್ತ ಎಂಬ ರಾಜಕೀಯ-ಆಡಳಿತ ವ್ಯವಸ್ಥೆಯ ಮೂಲಕ ಸ್ಥಳೀಯ ಮಟ್ಟದ ರಾಜಕೀಯದ ಮೂಲ ಘಟಕವಾಗಿ ಜೀವನ ಅಥವಾ ರಾಜಕೀಯ ಕಾರ್ಯಾರಂಭಿಸಿದರು. ಒಕ್ಕಲುಗಳ ಯಜಮಾನರು ಗುತ್ತಿನ ಅಧಿಕಾರದ ಪರಿಧಿಯೊಳಗಿನ ಪ್ರಜೆಗಳಿಗೆ ನಿಕಟರಾಗಿ, ಜೊತೆಗೆ ಮೇಲ್‌ಹಂತದ ಸಾಮಂತರ ಅಧಿಕಾರದೊಂದಿಗೆ ಸಹ ಸೇರಿಕೊಂಡು ಸಮುದಾಯಕ್ಕೆ ಬುನಾದಿ ಹಾಕಿದರು.[171]

ಈ ಚಿಂತನೆಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ನಡೆಸಿದ ಕೆಲವು ಇತಿಹಾಸಕಾರರು ಗುತ್ತಿನ ಒಡೆಯರಾಗಿ ಕಾರ್ಯನಿರ್ವಹಿಸಿದ ಒಕ್ಕಲುಗಳು, ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಸ್ವತಂತ್ರರಾಗಿ 'ಅರಸು'ಗಳೆಂಬ ಅಭಿದಾನವನ್ನು ಕಾಲಾನುಕ್ರಮದಲ್ಲಿ ಪಡೆದುಕೊಂಡರು ಎಂಬ ವಾದವನ್ನು ಮುಂದಿಡುತ್ತಾರೆ.[172] ಆದರೆ ಇದನ್ನು ತಿರಸ್ಕರಿಸುವ ಇನ್ನೂ ಕೆಲವು ಚಿಂತನೆಗಳು ವಾಸ್ತವವಾಗಿ ಸಾಂದರ್ಭಿಕ ಘಟನೆಗಳು ಭೂಮಿಯ ಮೇಲಿನ ಹಕ್ಕುಗಳನ್ನು ಪಡೆದುಕೊಳ್ಳಲು ಒಕ್ಕಲ್ಮರಿಗೆ ಅವಕಾಶ ನೀಡಿ ಆ ಹಕ್ಕುಗಳು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಸಂಪರ್ಕಗಳನ್ನು ಏರ್ಪಡಿಸಿ ಅಧಿಕಾರದ ವ್ಯಾಪ್ತಿ ಮತ್ತು ಕ್ರಮಬದ್ಧತೆಯನ್ನು ಸ್ಪಷ್ಟಪಡಿಸಿರುವುದರಿಂದ ಇಲ್ಲಿನ ಒಕ್ಕಲುಗಳು ಅಧಿಕಾರದ ಒಳಮರ್ಮಗಳನ್ನು ಅರಿತುಕೊಂಡು ಅರಸರೆಂಬ ಭ್ರಮೆಗೆ ಒಳಗಾಗಿರಬಹುದೆಂಬ ಅನುಮಾನ ವ್ಯಕ್ತಪಡಿಸುತ್ತಾರೆ. ಒಟ್ಟಾರೆ ಇಲ್ಲಿನ ಪ್ರಾದೇಶಿಕ ಮತ್ತು ಸ್ಥಳೀಯ ಅಧಿಕಾರಗಳು ಸ್ವತಂತ್ರ ನಿರ್ವಹಣೆಗೆ ಒಳಗಾಗಿ ಅವುಗಳು ತುಳುನಾಡಿನ ಆಡಳಿತದ ಅಡಿಪಾಯವಾಗಿ ಕೆಲಸ ನಿರ್ವಹಿಸಿದ್ದವು ಎಂಬುವುದನ್ನು ಅರ್ಥಮಾಡಿಕೊಂಡಲ್ಲಿ ಒಕ್ಕಲುಗಳು ತುಳುನಾಡಿನಲ್ಲಿ ವಹಿಸಿದ ಪಾತ್ರವನ್ನು ಅರಿಯಲು ಸಾಧ್ಯವಾಗುತ್ತದೆ.[173] ಆದರೆ ಸ್ಥಳೀಯ ಆಡಳಿತದ ನೆಲೆಗಳು ಸ್ವತಂತ್ರ ಸ್ವರೂಪವನ್ನು ಪಡೆದುಕೊಂಡಿದ್ದವು ಎಂದಾದರೂ ಅವುಗಳು ಮನಬಂದಂತೆ ಅಧಿಕಾರ ಚಲಾಯಿಸಿ, ತೀರ್ಮಾನ ತೆಗೆದುಕೊಂಡು ಆಡಳಿತ ನಡೆಸಿದ ನಿದರ್ಶನಗಳು ತೀರಾ ಕಡಿಮೆ.ಅದಾಗ್ಯೂ ತುಳುನಾಡಿನ ವಿಶಾಲ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ಸ್ಥಳೀಯ ಸಾಮಂತ ಮನೆತನಗಳ ಮತ್ತು ಒಕ್ಕಲ್ಮರ ನಡುವಿನ ರಾಜಕೀಯ ಹಾಗೂ ಆರ್ಥಿಕ ಸಂಬಂಧಗಳು ಒಕ್ಕಲುಗಳ ಅಧಿಕಾರವನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿದ್ದವು. ಈ ವ್ಯವಸ್ಥೆಯು ಆಡಳಿತದ ವಿಕೇಂದ್ರಿಕರಣಕ್ಕೆ ಅವಕಾಶ ನೀಡಿತ್ತಲ್ಲದೇ, ಸಾಮಂತರ ಅಥವಾ ಅವರಿಗಿಂತ

ಮೇಲ್‌ಹಂತದ ಅಧಿಕಾರ ಕೇಂದ್ರಗಳ ಮೇಲೆ ಹಿಡಿತ ಸಾಧಿಸಿ ಆಡಳಿತದ ಕ್ರಮಬದ್ಧತೆಗೆ ಅವಕಾಶ ನೀಡಿತ್ತು.[174] ಹೀಗೆ ಆಡಳಿತದಲ್ಲಿ ತಮ್ಮ ಛಾಪು ಮೂಡಿಸಿದ ಒಕ್ಕಲ್ಮರು ತುಳುನಾಡಿನ ಆಡಳಿತ ವ್ಯವಸ್ಥೆಯ ಪ್ರಧಾನ ಭಾಗವಾಗಿ ಕಾಣಿಸಿಕೊಂಡರು.

ಶಾಸನಗಳು ಒಕ್ಕಲುಗಳ ಜೀವನ, ಅಧಿಕಾರ ಹಾಗೂ ಭೂದಾನಗಳ ಬಗ್ಗೆ ಸಮಗ್ರ ಮಾಹಿತಿ ನೀಡುವುದರ ಜೊತೆಗೆ ಆ ಕಾಲದ ಉಳಿಗಮಾನ್ಯ ವ್ಯವಸ್ಥೆಯ ಬೇರುಗಳು ಹಾಗೂ ರಾಜಕೀಯ ಸ್ಥಿತ್ಯಂತರಗಳ ಬಗ್ಗೆಯೂ ಸಹ ಹಲವಾರು ಮಾಹಿತಿ-ಉಲ್ಲೇಖಗಳನ್ನೂ ನೀಡಿವೆ.[175] ಕೃಷಿ ಭೂಮಿಯ ಮೇಲಿನ ಆಸಕ್ತಿ-ಅವಲಂಬನೆಗಳಿಂದ ಉತ್ಪಾದನೆಗಳು ಮಿಗತೆಗೊಂಡು ಕೃಷಿ ಆಧಾರಿತ ವ್ಯಾಪಾರ ವ್ಯವಸ್ಥೆಗೆ ಅನುಕೂಲ ಮಾಡಿಕೊಟಿತ್ತಲ್ಲದೇ ಇದು ಉಛ್ರಾಯ ಸ್ಥಿತಿಯನ್ನು ತಲುಪಿದಾಗ ಭೂಮಿಯ ವಹಿವಾಟುಗಳು ಅಧಿಕಗೊಂಡವು. ಭೂಮಿ ಹೊಂದಿದ್ದ ಬ್ರಾಹ್ಮಣರು ಭೂಮಿಯ ಮಾರಾಟಕ್ಕೆ ಅಣಿಯಾದರು. ಅಲ್ಲದೇ ಭೂರಹಿತ ಬ್ರಾಹ್ಮಣರು ಭೂಮಿಯನ್ನು ದತ್ತಿ ಪಡೆದರೂ ಕೃಷಿ ಮಾಡುವಲ್ಲಿ ಉತ್ಸಕತೆಯನ್ನು ತೋರದೇ ಭೂಮಿಯನ್ನು ಮಾರಾಟ ಇಲ್ಲವೇ ಭೋಗ್ಯಕ್ಕೆ ನೀಡಿದ ಸಂದರ್ಭಗಳು ಶಾಸನಗಳಲ್ಲಿ ದಾಖಲಾಗಿವೆ. ಈ ಬೆಳವಣಿಗೆಗಳು ಭೂಮಿಯ ಮೇಲೆ ಹಿಡಿತ ಸಾಧಿಸುವ ತನ್ಮೂಲಕ ಸಾಮಾಜಿಕ ಅಂತಸ್ತುಗಳನ್ನು ಪಡೆಯುವ ಮೇಲಾಟದಲ್ಲಿದ್ದ ಒಕ್ಕಲುಗಳು ಭೂಮಿಯನ್ನು ಕ್ರಯಕ್ಕೆ ತೆಗೆದು ಅಗ್ರಹಾರ, ಮಠ, ಧಾರ್ಮಿಕ ಸಂಸ್ಥೆಗಳಿಗೆ ದತ್ತಿ ನೀಡಿದವು. ಈ ಪ್ರಕ್ರಿಯೆ ಒಕ್ಕಲ್ಮರ ಪ್ರತಿಷ್ಠೆಯ ದ್ಯೋತಕವಾಗಿ ರೂಪಿಸಲ್ಪಟ್ಟು ಅಧಿಕಾರದ ಪರಿಧಿಯನ್ನು ವಿಸ್ತರಿಸಿತ್ತಲ್ಲದೇ ಬ್ರಾಹ್ಮಣರ ಭೂಮಿಯ ಮಾರಾಟದಿಂದ ಒಕ್ಕಲುಗಳು ಒಡೆತನವನ್ನು ಪಡೆಯುವ ಮೂಲಕ ತಮ್ಮ ನೆಲೆಯನ್ನು ಇನ್ನಷ್ಟು ಭದ್ರಗೊಳಿಸಿಕೊಂಡರು.[176] ಈ ಸ್ಥಾನಮಾನವು ಒಕ್ಕಲ್ಮರಿಗೆ ಆ ಭೂಪ್ರದೇಶದ ದೈವಿಕ ವ್ಯವಸ್ಥೆಯ ಮೇಲೂ ಹಿಡಿತ ಸಾಧಿಸಲು ಅವಕಾಶ ನೀಡಿತ್ತಲ್ಲದೇ ಮಠಮಾನ್ಯಗಳ ಪರಿಧಿಯೊಳಗೆ ಬರುವ ನ್ಯಾಯ ತೀರ್ಮಾನಗಳನ್ನು ಹಾಗೂ ದಂಡ ವಸೂಲಿ ಮಾಡುವ ಅಧಿಕಾರಗಳನ್ನು ನೀಡಿದವು. ಈ ರೀತಿಯ ಅಧಿಕಾರದ ಕಾರ್ಯಸಾಧನೆ ಮುಂದಿನ ಶತಮಾನಗಳಲ್ಲಿ ವಾರಸಾ ಹಕ್ಕಾಗಿ ಪರಿವರ್ತನೆಗೊಂಡು ಒಕ್ಕಲ್ಮರ ಸ್ಥಿತಿಗತಿಗಳನ್ನು ಉತ್ತಮಪಡಿಸಿತು.[177]

ವಿಜಯನಗರ ಆಡಳಿತ ಸ್ಥಾಪನೆಯಾದಂದಿನಿಂದ ತುಳುನಾಡಿನ ಆಡಳಿತದಲ್ಲಿ, ಅದರಲ್ಲೂ ಸ್ಥಳೀಯ ಮಟ್ಟದ ಆಡಳಿತ ವ್ಯವಸ್ಥೆಯಲ್ಲಿ ಅಮೂಲಾಗ್ರ ಬದಲಾವಣೆಯಾಗಿವೆ ಎಂಬುವುದು ಚರಿತ್ರಕಾರರ ಅಭಿಪ್ರಾಯ. ರಾಜಕೀಯಾಧಿಕಾರಕ್ಕೆ ಸಮಾನಾಂತರವಾಗಿ ಆ ಕಾಲದಲ್ಲಿನ ದೇವಸ್ಥಾನ, ದೈವಸ್ಥಾನ, ಮಠ, ಬಸದಿಗಳ ಮೇಲೆ ಅಧಿಕಾರ ನಡೆಸಬೇಕಾಗಿರುವ ವ್ಯವಸ್ಥೆಯೊಂದನ್ನು ಆಗಾಗಲೇ ಹುಟ್ಟುಹಾಕಲಾಗಿತ್ತು. ಆದರೆ ಈ ಕೇಂದ್ರಗಳ ಮೇಲೆ ಕೇವಲ ಸಾಮಂತರುಗಳಿಗೆ ಮಾತ್ರ ಅಧಿಕಾರ ಚಲಾಯಿಸುವುದು ಸಾಧ್ಯವಿಲ್ಲದ ಕಾರಣ ಸಾಮಂತರ

ಅಧೀನಕ್ಕೆ ಒಳಪಟ್ಟ ಒಕ್ಕಲುಗಳು ಅವುಗಳ ಮೇಲೆ ಸಾಮಂತರ ಅಣತಿಯಂತೆ ಅಧಿಕಾರ ನಡೆಸಿದರು.[178] ಉದಾಹರಣೆಗೆ ತುಳುನಾಡು, ಮಂಗಳೂರು ಹಾಗೂ ಬಾರ್ಕೂರು ರಾಜ್ಯಗಳಾಗಿ ವಿಂಗಡಗೊಂಡಾಗ ಪ್ರಮುಖ ಒಕ್ಕಲು ಮನೆತನಗಳಾದ ಬಾರ್ಕೂರಿನ ಹನೆಹಳ್ಳಿ, ದೊಡ್ಡಮನೆ, ನಡುಮನೆ, ಪಡುಮನೆಗಳು ಕೃಷಿ ಅಧಿಕಾರ ರಚನೆಯ ಮನೆಗಳಾಗಿ ಮಾನ್ಯಗೊಂಡವಲ್ಲದೇ ಬಾರ್ಕೂರು ಪಂಚಲಿಂಗೇಶ್ವರ ದೇವಸ್ಥಾನ ಹೋಬಳಿ ದೇವಸ್ಥಾನವಾಗಿ ಮಾನ್ಯತೆ ಪಡೆದು ಅದರ ಆಡಳಿತ ಈ ನಾಲ್ಕು ಮನೆತನಗಳ ಸುಪರ್ಧಿಗೊಳಪಟ್ಟವು.[179] ಪ್ರಭಾವಿ ಒಕ್ಕಲು ಮನೆತನಗಳಾದ ಕೊಡಿಯಾಲಗುತ್ತು, ಗುಡ್ಡೆಗುತ್ತು, ಬಡಿಲಗುತ್ತು ಮುಂತಾದವುಗಳು ಕೃಷಿ ಅಧಿಕಾರ ರಚನೆಯಲ್ಲಿ ಮಾನ್ಯತೆಯನ್ನು ಪಡದುಕೊಂಡವು. ಕದ್ರಿ ಮಂಜುನಾಥೇಶ್ವರ ದೇವಸ್ಥಾನ ಮಂಗಳೂರಿನ ಹೋಬಳಿ ದೇವಸ್ಥಾನವಾಗಿ ಗುರುತಿಸಿಕೊಂಡ ನಂತರ ಮಂಗಳೂರು ರಾಜ್ಯದ ಸುತ್ತಮುತ್ತಲಿನ ಒಕ್ಕಲುಗಳು ದೇವಸ್ಥಾನದ ಅಧಿಕಾರವನ್ನು ಪಡೆದುಕೊಂಡು ಪ್ರಭಾವಿಗಳೆನಿಸಿಕೊಂಡವು.[180] ಹೀಗೆ ಪ್ರಭಾವಿ ಗುತ್ತುಗಳು ಇಲ್ಲವೇ ಒಕ್ಕಲುಗಳು ವಿಸ್ತಾರವಾದ ಕೃಷಿ ಭೂಮಿಯನ್ನು ಹೊಂದಿ ದೇವಸ್ಥಾನಗಳ ಮೂಲಕ ವಿಶೇಷ ಗೌರವಾದರಗಳನ್ನು ಪಡೆದು ವ್ಯಾವಹಾರಿಕವಾಗಿ ಮತ್ತು ರಾಜಕೀಯವಾಗಿ ಕೇಂದ್ರದೊಂದಿಗೆ ಅಥವಾ ಸಾಮಂತರೊಂದಿಗೆ ಸಂಪರ್ಕವನ್ನು ಹೊಂದಿ ಯಶಸ್ಸು ಪಡೆದುಕೊಂಡವು.[181] ಇದಲ್ಲದೇ ಹೆರಂಜೆಯ ಪ್ರಧಾನ ಒಕ್ಕಲು ಕೂಡ ವಿಜಯನಗರ ಕಾಲದ ಪ್ರಮುಖ ಸ್ಥಳೀಯ ಅಧಿಕಾರ ಕೇಂದ್ರವಾಗಿ ಸುತ್ತುಮುತ್ತಲಿನ ದೇವಸ್ಥಾನಗಳಲ್ಲಿ ಆದರಾದಿತ್ಯ ಪಡೆಯುವಲ್ಲಿ ಮುಂಚೂಣಿಯಲ್ಲಿತ್ತು ಎಂದು ಚರಿತ್ರಕಾರರು ವಾದಿಸಿದ್ದಾರೆ.[182] ಈ ರೀತಿಯ ಬೆಳವಣಿಗೆ ತುಳುನಾಡಿನಾದ್ಯಂತ ಆಗಿದ್ದು ಒಕ್ಕಲುಗಳ ಭೂಮಿಯ ವಿಸ್ತಾರಕ್ಕೆ ಅನುಗುಣವಾಗಿ ಅದರ ಪರಿಧಿಯಲ್ಲಿರುವ ಧಾರ್ಮಿಕ ಕೇಂದ್ರಗಳ ಅಧಿಕಾರ ಪಡೆದು ತುಳುನಾಡಿನ ಸಾಂಸ್ಕೃತಿಕ ಯಾಜಮಾನ್ಯವನ್ನು ಪಡೆದುಕೊಂಡಿದ್ದರು.[183] ಹೀಗೆ ವಿಜಯನಗರದ ಕಾಲದಲ್ಲಿ ಒಂದೆಡೆ ಬ್ರಾಹ್ಮಣರು ದೇವಸ್ಥಾನ ಕೇಂದ್ರಿತವಾಗಿ ಧಾರ್ಮಿಕ ಹಾಗೂ ನ್ಯಾಯಿಕ ಅಧಿಕಾರವನ್ನು ಪಡೆದುಕೊಂಡರೆ ಇನ್ನೊಂದೆಡೆ ಒಕ್ಕಲುಗಳು ಗುತ್ತುಕೇಂದ್ರಿತವಾಗಿ ದೈವ, ದೇವಸ್ಥಾನಗಳ ಆಡಳಿತದಲ್ಲಿ ವ್ಯವಸ್ಥಾಪಕರಾಗಿ ಸಾಮಾಜಿಕ ಮತ್ತು ರಾಜಕೀಯವಾಗಿ ಪ್ರಬಲಗೊಂಡರಲ್ಲದೇ ನ್ಯಾಯ ತೀರ್ಮಾನದ ಅಧಿಕಾರದಲ್ಲಿ ಬ್ರಾಹ್ಮಣರೊಂದಿಗೆ ಪಾಲುಪಡದುಕೊಂಡಿದ್ದರು. ಈ ಧಾರ್ಮಿಕ, ನ್ಯಾಯಿಕ ಮತ್ತು ಸಾಮಾಜಿಕ ಬೆಳವಣಿಗೆಗಳು ಶ್ರೇಣಿಕೃತ ಆಡಳಿತ ಘಟಕಗಳ, ಅದರಲ್ಲೂ ಮುಖ್ಯವಾಗಿ ಒಕ್ಕಲುಗಳ ಅಥವಾ ಒಕ್ಕಲ್ಮರ ಅಧಿಕಾರವನ್ನು ವಿಸ್ತಾರಗೊಳಿಸಿತು. ಇದೇ ಸಂದರ್ಭದಲ್ಲಿ ರಾಜಕೀಯ ಅಧಿಕಾರದಲ್ಲಿ ಸಮತೋಲನವನ್ನು ಕಾಪಾಡಿಕೊಂಡುಬರುವ ಉದ್ದೇಶದಿಂದ ದೇವರನ್ನು ಇಲ್ಲವೇ ದೈವವನ್ನು ಸಾಕ್ಷಿಯಾಗಿಸುವ ಪರಿಕಲ್ಪನೆಯೊಂದು ಪ್ರಾರಂಭಗೊಂಡು

ಒಕ್ಕಲುಗಳು ತಮ್ಮ ಕಾರ್ಯಸಾಧಿಸುವಲ್ಲಿ ಅಥವಾ ಅಧಿಕಾರ ವಿಸ್ತರಿಸಿಕೊಳ್ಳಲು ಅದನ್ನು ಬಳಸಿಕೊಂಡರು. ಆಡಳಿತ ಸ್ತರಗಳಿಗುನುಗುಣವಾಗಿ ಅಥವಾ ವ್ಯಾಪ್ತಿಗನುಗುಣವಾಗಿ ಒಕ್ಕಲುಗಳು ಅರಸನ ಪಟ್ಟಧಾರಣೆಯ ಸಂದರ್ಭದಲ್ಲಿ ಗೌರವಗಳನ್ನು ಪಡೆದುಕೊಳ್ಳುವ ಸಂಪ್ರದಾಯ, ಊರಿನ ದೈವ-ದೇವರ ವಾರ್ಷಿಕ ಜಾತ್ರೆಯ ಸಂದರ್ಭದಲ್ಲಿನ ಅಧಿಕಾರಗಳು ಹಾಗೂ ಶಾಸ್ತ್ರವಿಧಿಗಳಲ್ಲಿನ ಭಾಗವಹಿಸುವಿಕೆ ಮುಂತಾದವುಗಳು ಅವರಿಗೆ ಊರಿನ ಗಣ್ಯತೆಯ ಸ್ಥಾನವನ್ನು ಕಲ್ಪಿಸಿಕೊಟ್ಟವು. ಜೊತೆಗೆ ಕೇಂದ್ರ ರಾಜಕೀಯ ವ್ಯವಸ್ಥೆಯ ವ್ಯೂಹರಚನೆಯ ಅನುಕಲನಗಳಾಗಿ ರೂಪುಗೊಂಡು ಒಕ್ಕಲುಗಳ ವಾರಸ ಅಧಿಕಾರವಾಗಿ ಮಾರ್ಪಟ್ಟಿತ್ತು. ಇದಲ್ಲದೇ ವಲಸೆ, ಅರ್ಥಿಕತೆ, ಜನಸಾಂದ್ರತೆ, ಕೃಷಿ ಭೂಮಿಯ ವಿಸ್ತಾರ, ನಿರ್ದೇಶಿತ ಕಂದಾಯದ ಬೇಡಿಕೆಯ ಅಗತ್ಯತೆಗಳು, ಆಡಳಿತದ ಒತ್ತಡಗಳು, ವ್ಯವಸ್ಥೆಯನ್ನು ಸರಿಹೊಂದಿಸುವಲ್ಲಿ ಕೃಷಿ ಒಕ್ಕಲುಗಳ ಮತ್ತು ಅವರ ಆಶ್ರಿತ ಸಹಭಾಗಿಗಳ ಕೈಗಳು, ಕಾನೂನು ನಿಯಂತ್ರಕರಾಗಿ ಆಡಳಿತದ ದೃಷ್ಟಿಯಿಂದ ಪರಿವರ್ತನೆಗೊಂಡವು.[184]

ವಸಾಹತುಪೂರ್ವದ ಒಕ್ಕಲುಗಳ ಭೂಒಡೆತನಗಳ ಬಗ್ಗೆ ಮಾಡಲ್ಪಟ್ಟ ಅಧ್ಯಯನಗಳು ಪ್ರಮುಖ ಒಕ್ಕಲುಗಳ ಹೆಸರುಗಳನ್ನು ಉಲ್ಲೇಖಿಸಿವೆ.[185] ಬಸರೂರಿನ ಎರಡು ಪ್ರಮುಖ ಮನೆತನಗಳು-ಅನ್ಯಂತರ ಬಳಿಯ ಸಂಕರಸೆಟ್ಟಿಯ ಮಗ, ಕೂಡೆಯರ ಬಳಿ ನಾರಣಸೆಟ್ಟಿಯ ಭೂಒಡೆತನದ ನಿದರ್ಶನಗಳು, ಮೇರವಣ್ಣಸೆಟ್ಟಿ, ಮಾದಣ್ಣಸೆಟ್ಟಿ ಭೂದಾನ ಮಾಡಿದ ಉಲ್ಲೇಖಗಳು, ಇದಲ್ಲದೇ ಮಾಕಣ್ಣಸೆಟ್ಟಿ, ಹೊಸಬುಸೆಟ್ಟಿ, ಕೋಟಿಯಣ್ಣಸೆಟ್ಟಿ, ಸೋಮಣ್ಣಸೆಟ್ಟಿ, ಕ್ರಮವಾಗಿ ತುಳುವೇಶ್ವರ ದೇವಸ್ಥಾನಕ್ಕೆ ಭೂದಾನ ಮಾಡಿದ ಉಲ್ಲೇಖಗಳನ್ನು ಗಮನಿಸಿದಾಗ ಬಸರೂರು ಒಕ್ಕಲುಗಳ ಪ್ರಧಾನ ಕೇಂದ್ರವಾಗಿತ್ತು. ಸಿರಿ ಐತಿಹ್ಯ ಮತ್ತು ಸಿರಿ ಪಾಡ್ದನ ಅವರ್ತನಗಳಲ್ಲಿಯೂ ಬಸರೂರಿನಲ್ಲಿ ಹಲವಾರು ಒಕ್ಕಲುಗಳ ಮತ್ತು ಒಕ್ಕಲುಗಳು ಭೂಮಿಯನ್ನು ಪಡೆದ ಉಲ್ಲೇಖಗಳಿವೆಯಲ್ಲದೇ, ಭೂಮಿಯ ವ್ಯಾಜ್ಯಕ್ಕೆ ಸಂಬಂಧಿಸಿ ಕೂಟಕಳ ಕರೆದ ಮಾಹಿತಿಗಳು ನೀಡಲ್ಪಟ್ಟವೆ. ಅಂತೆಯೇ ವಸಾಹತುಪೂರ್ವದ ರಾಜಕೀಯ ವ್ಯವಸ್ಥೆಯ ಹಲವಾರು ಮಜಲುಗಳನ್ನು ಅನಾವರಣಗೊಳಿಸುವ, ಮಠದ ಪ್ರತಿನಿಧಿಯ ಮೂಲಕ ತನ್ನ ಧಾರ್ಮಿಕ ಸಂಸ್ಥೆಯ ಕಾರ್ಯ ಸಾಂಗವಾಗಿ ನಡೆಸಿಕೊಂಡು ಹೋಗುವಲ್ಲಿ ದತ್ತಿ ನೀಡಿ ತನ್ನ ಅಧಿಕಾರದ ಪ್ರಭಾವಲಯವನ್ನು ಸಂಕೇತಿಕರಿಸುವ ಒಕ್ಕಲುಗಳ ಭೂಮಿಯ ಒಡೆತನದ ಬಗ್ಗೆ ಮಾಹಿತಿ ನೀಡುವ ಪ್ರಮುಖ ಆಕರಗಳಿವೆ.[186] ಇದಲ್ಲದೇ ಬ್ರಾಹ್ಮಣರಿಗೆ ಮೀಸಲಾಗಿದ್ದ ಬ್ರಹ್ಮದೇಯ ಭೂಮಿಗಳನ್ನು ಪಡೆದ ಒಕ್ಕಲುಗಳು ಹಕ್ಕು ಸ್ಥಾಪಿಸಿ, ಭೂಒಡೆತನವನ್ನು ತಮ್ಮದಾಗಿಸುವುದರ ಜೊತೆಗೆ ಸಾಮಾಜಿಕ ಅಂತಸ್ತುಗಳನ್ನು ವೃದ್ಧಿಸಿಕೊಂಡ ವಿಚಾರಗಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆಯಲ್ಲದೇ, ಆ ಭೂಮಿಗಳನ್ನು ದೇವಸ್ಥಾನಗಳಿಗೆ ದಾನ ನೀಡಿದ

ಉಲ್ಲೇಖಗಳು ವಸಾಹತುಶಾಹಿಗಳ ಕಡತಗಳಲ್ಲಿ ದಾಖಲಾಗಿವೆ. ಆದರೆ ಈ ಕಡತಗಳು ವಸಾಹತುಪೂರ್ವದ ಒಕ್ಕಲ್ಮರ ಬಗ್ಗೆ ನಿಖರ ಮಾಹಿತಿ ನೀಡುವುದಿಲ್ಲ. ಅದಾಗ್ಯೂ ಗೋವಾದಿಂದ ವಲಸೆ ಬಂದು ವಸಾಹತುಶಾಹಿಗಳ ಶೋಷಣೆಗೆ ಗುರಿಯಾಗಿದ್ದ ಜನಸಮುದಾಯಗಳಿಗೆ ರಕ್ಷಣೆ ನೀಡಿದ ಪ್ರಭಾವಿ ಒಕ್ಕಲುಗಳ ಬಗ್ಗೆ ಮಾಹಿತಿ, ಹಾಗೂ ಹೈದಾರಾಲಿ, ಟಿಪ್ಪುಸುಲ್ತಾನರ ಕ್ರೌರ್ಯಕ್ಕೆ ಒಳಗಾಗಿರುವ ಜನಗಳನ್ನು ಸಾಂತ್ವನಗೊಳಿಸಿ ಅವರಿಗೆ ಆಶ್ರಯ ನೀಡಿದ ಒಕ್ಕಲುಗಳ ಮಾಹಿತಿ ದಾಖಲುಗೊಂಡಿರುವುದರಿಂದ ಅವುಗಳ ಆಧಾರದಲ್ಲಿ ಭೂಒಡೆತನ ಹೊಂದಿದ್ದ ಒಕ್ಕಲುಗಳು ವಸಾಹತುಪೂರ್ವದ ರಾಜಕಾರಣದಲ್ಲಿ ಪ್ರಮುಖ ಪಾತ್ರವಹಿಸಿದ್ದವೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ ಒಕ್ಕಲ್ಮರು ಭೂನಿಯಂತ್ರಣಾಧಿಕಾರದ ಜೊತೆಗೆ ಅಧಿಕಾರಸ್ಥ ಜನಗಳೊಂದಿಗಿನ ಸಂಬಂಧದಿಂದ ತಮ್ಮ ನೆಲೆಯನ್ನು ವಿಸ್ತರಿಸಿಕೊಂಡರು.ಇದಕ್ಕೆ ಪೂರಕವಾಗಿ ಭೂಉತ್ಪಾದನೆಯು ಅವರನ್ನು ಆರ್ಥಿಕವಾಗಿ ಬಲಾಢ್ಯರನ್ನಾಗಿ ರೂಪಿಸಿತು.ಇದಲ್ಲದೇ ಭಿನ್ನ ವೃತ್ತಿಗಳನ್ನು ಅನುವಂಶಿಕ ನೆಲೆಯಲ್ಲಿ ಅನುಸರಿಸಿಕೊಂಡು ಬಂದ ಗ್ರಾಮದ ಇತರ ಜಾತಿಗಳು ಕೂಡಾ ಒಕ್ಕಲುಗಳೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದವು. ಆದರೆ ಜೈನ-ಒಕ್ಕಲುಗಳ ಸಮೀಕರಣ ಹೊಂದಿರುವ ಒಕ್ಕಲುಗಳ ವಾಸ್ತವ್ಯದ ನೆಲೆಗಳು ಯಾವುದೇ ಒಂದು ನಿಶ್ಚಿತ ಕಾಲಘಟ್ಟದಲ್ಲಿ ಪ್ರಾಮುಖ್ಯಕ್ಕೆ ಬಂದವುಗಳಲ್ಲ. ಇತಿಹಾಸದಲ್ಲಿ ಅವುಗಳು ತಮ್ಮದೇ ಆದ ಏಳು, ಬೀಳುಗಳನ್ನು ಕಂಡವುಗಳು. ಒಂದೊಮ್ಮೆ ಜೈನ ಠರಾವಣೆಗಳಾಗಿದ್ದ ಮನೆತನಗಳ ಕೇಂದ್ರಗಳು ನಿಷ್ಠೆ ಬದಲಾಯಿಸುವುದರ ಮೂಲಕ ಬದಲಾವಣೆಯಾಗಿ ಒಕ್ಕಲುಗಳ ವಾಸ್ತವ್ಯದ ಕೇಂದ್ರಗಳಾಗಿ ಮಾರ್ಪಾಡಾಗಿವೆ. ಉದಾಹರಣೆಗೆ ತೋಕೂರು, ವಂಡಾರು, ಪುತ್ತಿಗೆ, ಹೆಬ್ರಿ ಮುಂತಾದವುಗಳು ಜೈನ ಮೂಲದ ಪ್ರಮುಖ ಗುತ್ತು ಇಲ್ಲವೇ ಬೀಡುಗಳು. ಯಡ್ತರೆ, ನಂದಳಿಕೆ, ಕೆದಿಂಜೆ, ಶಿರ್ವದ ನಡಿಬೆಟ್ಟು, ತಿಂಗಳೆ, ಪಾಂಗಾಳ, ನಿಟ್ಟೆ, ಕೊಡಿಯಾಲ್ಗುತ್ತು, ಬಡಿಲ, ಬೆಳ್ಳಿಪ್ಪಾಡಿ, ಉಳಿಪಾಡಿ, ಇಚ್ಲಂಪಾಡಿ ಗುತ್ತುಗಳು ಮುಂತಾದವುಗಳು ಆರಂಭಿಕ ಜೈನ ನೆಲೆಗಳಾಗಿದ್ದು ನಂತರ ಒಕ್ಕಲ್ಮರ ನೆಲೆಗಳಾಗಿ ಪರಿವರ್ತನೆಗೊಂಡು ಈ ಪ್ರದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಯಜಮಾನಿಕೆಯ ಪ್ರಧಾನ ಭೂಮಿಕೆಯಾದವು ಎಂಬುವುದು ಚರಿತ್ರಕಾರರ ಅಭಿಮತವಾಗಿದೆ.[194]

ಒಕ್ಕಲ್ಮರ ಇತಿಹಾಸವನ್ನು ವಿವರಿಸುವ ಪ್ರಮುಖ ಬರವಣಿಗೆಯಾದ ಮರಾಠಿ ಗ್ರಂಥ ಶಿವ ಚರಿತ್ರೆ 2 ಬಗೆಯ ಒಕ್ಕಲುಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ-ಗ್ರಾಮ ಸೆಟ್ಟಿ ಮತ್ತು ನಗರ ಸೆಟ್ಟಿ ಎಂಬುವುದಾಗಿ. ಈ ಬರವಣಿಗೆಯ ಪ್ರಕಾರ ಒಕ್ಕಲ್ಮರು ಆಡಳಿತಾತ್ಮಕವಾಗಿ ಪ್ರಭಾವಿಗಳಾಗಿದ್ದು, ಸ್ಥಳೀಯವಾಗಿ ಆಡಳಿತ ಮತ್ತು ಕಂದಾಯ ವಸೂಲಿಯಲ್ಲಿ ಪ್ರಮುಖ ಪಾತ್ರವಹಿಸಿದ್ದರು.[195] ಅಂತೆಯೇ ತುಳುನಾಡಿನ ನ್ಯಾಯ ತೀರ್ಮಾನ ಮಾಡುವಲ್ಲಿ ಧರ್ಮಸ್ಥಳದ

ದೊಡ್ಡ ಚಿಕ್ಕಸೆಟ್ಟಿ ಮತ್ತು ಧರ್ಮಪಾಲ ಸೆಟ್ಟಿ ಪ್ರಸಿದ್ಧಿಯನ್ನು ಪಡೆದಿದ್ದರು ಎಂಬುವುದಾಗಿ ಕೆಳದಿ ಗುಂಡಾಜೋಯಿಸರು ಶಾಸನಗಳ ಆಧಾರದಲ್ಲಿ ವಿಶ್ಲೇಷಿಸಿದ್ದಾರೆ. ಇದಕ್ಕೆ ಸಂವಾದಿಯಾಗಿ ಮೌಖಿಕ ಅಕರಗಳಲ್ಲಿ ನ್ಯಾಯ ತೀರ್ಮಾನ ಮಾಡುವ ಪ್ರಭಾವಿ ಒಕ್ಕಲುಗಳು ಅಧಿಕಾರ ರಚನೆಯಲ್ಲಿ ತೊಡಗಿಸಿಕೊಂಡಿರುವುದನ್ನು ಪತ್ತೇರಿಕೂಟಗಳ ಉಲ್ಲೇಖಗಳಲ್ಲೂ ಕಾಣಬಹುದು.[196] ವಾಸ್ತವಿಕವಾಗಿ ಒಕ್ಕಲ್ಮರು ಮಾತ್ರವಲ್ಲದೇ ಬಹುಸಂಖ್ಯಾಕರಾಗಿದ್ದ ಬಿಲ್ಲವರೂ ಕೂಡಾ ವಿಸ್ತಾರವಾದ ಕೃಷಿ ಭೂಮಿಯನ್ನು ಹೊಂದಿದವರಾಗಿದ್ದು ಬಿಲ್ಲವರಿಗೆ ಸಂಬಂಧಿಸಿದ ನೂರಕ್ಕೂ ಹೆಚ್ಚು ಗುತ್ತುಮನೆತನಗಳನ್ನು ಗುರುತಿಸಲಾಗಿದೆ. ಬಂಟ್ವಾಳದ ಪನೆಕಲ, ಕಾರ್ಕಳದ ಕೈರಬೆಟ್ಟು ಬೋಂಟ್ರ ಮನೆತನ, ಕ್ರಾಮಗುತ್ತು, ಬೆಳ್ತಂಗಡಿ ತಾಲೂಕಿನ ಕರಾಯದ ಮುಗ್ಗಗುತ್ತು, ನಾಲ್ಕೂರುಗುತ್ತು, ಎಳ್ಜಾಜೆಗುತ್ತು, ಮಂಗಳೂರಿನ ಅತ್ತಾವರ ವೈದ್ಯನಾಥ ಕ್ಷೇತ್ರದ ಭಂಡಾರಮನೆ, ಚಿನ್ನತೂರುಗುತ್ತು,[197] ದೇರಾಜೆಗುತ್ತು, ಕಂಕಣಗುತ್ತು, ಜಪ್ಪು ಕುಡುಪಾಡಿಗುತ್ತು, ವೇಣೂರಿನ ಏಳಜೆಗುತ್ತು, ತಾಳಿಪಾಡಿಯ ಅಡ್ಡಣಗುತ್ತು, ಕೋಟಿಚೆನ್ನಯರ ಪಾಡ್ದನದಲ್ಲಿ ಬರುವ ಮುಂಡಾಸುಗುತ್ತು ಮುಂತಾದವುಗಳು ಇವುಗಳಲ್ಲಿ ಪ್ರಮುಖವಾದವುಗಳು.[198] ಇದಕ್ಕೆ ಪುರಾವೆಯಾಗಿ ತುಳುನಾಡಿನ ಹೆಚ್ಚಿನ ದೈವ ಆರಾಧನ ಕೇಂದ್ರಗಳ ಭಂಡಾರಗಳು ಬಿಲ್ಲವರ ಗುತ್ತುಗಳ ಸುಪರ್ದಿಯಲ್ಲಿ ಇರುವುದನ್ನು ನೋಡಬಹುದು. ಕಾಲಘಟ್ಟದಲ್ಲಿ ಆದ ರಾಜಕೀಯ ಸ್ಥಿತ್ಯಂತರಗಳಿಂದಾಗಿ ಬಹುಸಂಖ್ಯಾಕ ಬಿಲ್ಲವರು ಅಧಿಕಾರ ಕಳೆದುಕೊಂಡರಲ್ಲದೇ ವೈಷ್ಣವ ಮತ ಪ್ರಭಾವದ ಒಳರಾಜಕೀಯದಲ್ಲಿ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದ ಘಟನೆಗಳು ಇತಿಹಾಸದಲ್ಲಿ ದಾಖಲುಗೊಂಡಿದೆ. ಬಿಲ್ಲವರು ಭೂಮಿಯ ಒಡೆತನ ಕಳಕೊಂಡಿರುವ ಸಂದರ್ಭಕ್ಕೆ ನಿದರ್ಶನವಾಗಿ ಉಡುಪಿಯ ಸುತ್ತಮುತ್ತಲಿನ ಐತಿಹ್ಯದ ಅಭಿಪ್ರಾಯವೊಂದನ್ನು ಉಲ್ಲೇಖಿಸಬಹುದಾದರೂ ಅದನ್ನು ಕೂಲಂಕುಶವಾಗಿ ಅಧ್ಯಯನ ಮಾಡಲಾಗಿಲ್ಲ.[199] ತುಳುನಾಡಿನ ಬ್ರಾಹ್ಮಣರ ಪಾವಿತ್ರ್ಯ ಸಿದ್ಧಾಂತದಿಂದಾಗಿ ಮತ್ತು ಪ್ರಭಾವಿ ಒಕ್ಕಲುಗಳ ಅಧಿಕಾರ ಗಳಿಸಿಕೊಳ್ಳುವ ತಂತ್ರದಿಂದಾಗಿ ಬಹುಸಂಖ್ಯಾತರಾಗಿದ್ದ ಬಿಲ್ಲವರು ಸಮಾಜದಲ್ಲಿ ಗುತ್ತುಗಳನ್ನು ಹೊಂದಿದ್ದರೂ ನಿರ್ಲಕ್ಷಿಸಲ್ಪಟ್ಟರು. ಇಲ್ಲವೇ ಭೂಒಡೆತನವನ್ನು ಹೊಂದಲು ಸಂಘರ್ಷದ ಹಾದಿ ತುಳಿಯಬೇಕಾಯಿತೆಂದು ಅಧ್ಯಯನಗಳು ವಾದಿಸಿವೆ.[200] ಈ ಅಧ್ಯಯನಗಳ ಅಭಿಪ್ರಾಯಗಳು ಮೌಖಿಕ ಆಧಾರಗಳನ್ನು ಅವಲಂಬಿಸಿ ರೂಪಿಸಲ್ಪಟ್ಟವುಗಳು. ಇದರ ಪರಿಣಾಮವಾಗಿ ಬಿಲ್ಲವರನ್ನು ಒಳಗೊಂಡಂತೆ ಇಲ್ಲಿನ ಹಲವಾರು ಸಮುದಾಯಗಳು ಸಾಂಸ್ಕೃತಿಕ ನಾಯಕತ್ವಕ್ಕೆ ಬದಲು ದೈವಾರಾಧನೆಯ ಶ್ರಮಿಕ ವರ್ಗವಾಗಿ ಇಲ್ಲವೇ ಪೂಜಾರಿಗಳಾಗಿ ಮಾರ್ಪಟ್ಟರು. ಹೀಗೆ ಪಾರಂಪರಿಕವಾಗಿ ಬಿಲ್ಲವರು ಸೈನಿಕರಾಗಿ, ನಾಟೀವೈದ್ಯರಾಗಿ, ದೈವಗಳ ಪೂಜಾರಿಗಳಾಗಿ, ಕೃಷಿಕರಾಗಿ, ಕೃಷಿ ವ್ಯವಸ್ಥೆಯ ಬೆನ್ನೆಲುಬಾಗಿ ತಮ್ಮ ನೆಲೆ ಕಂಡುಕೊಂಡಿದ್ದರು. ತುಳುನಾಡಿನ

ಹೆಚ್ಚಿನ ದೈವಸ್ಥಾನಗಳಲ್ಲಿ ದೈವದ ಮಾನ್ಯಾದಿಗೆ ಸೇವೆ (ದರ್ಶನ ಪಾತ್ರಿ) ಮತ್ತು ಮೂಲ್ಯಾದಿಗೆ ಸೇವೆ (ಸೇವಾ ಪಾತ್ರಿ) ಗಳನ್ನು ಆಳಿಯಕಟ್ಟಿನ ಪದ್ಧತಿಯಂತೆ ಬಿಲ್ಲವರು ಅನುವಂಶೀಯವಾಗಿ ನೆರವೇರಿಸುತ್ತಾ ಬಂದರು. ಕೋಟೆಕಾರು ವೈದ್ಯನಾಥ ದೈವಸ್ಥಾನದ ನುಡಿಕಟ್ಟಿನಲ್ಲಿ ಈ ರೀತಿಯ ಉಲ್ಲೇಖವಿದೆ-ಕುಕ್ಕಬನ್ನಾಯ, ಪಾಲನಬನ್ನಾಯ ಕೈಪತ್ತಿಂಚಿತ್ತಿ ಸ್ಥಳ (ಕೈಹಿಡಿದ ಸ್ಥಳ).ಇಲ್ಲಿ ಕುಕ್ಕಬನ್ನಾಯರು ದರ್ಶನಪಾತ್ರಿಗಳಾಗಿ, ಪಾಲನಬನ್ನಾಯರು ಸೇವಾಪಾತ್ರಿಗಳಾಗಿ ಸೇವಾದೀಕ್ಷೆ ಪಡೆದವರು ಎಂದರ್ಥ.[201] ಬಿಲ್ಲವರು ನಾಟೀವೈದ್ಯರೆಂಬುವುದಕ್ಕೆ ತುಳುನಾಡಿನ ವೈದ್ಯನಾಥ ಆರಾಧನೆಯ ಸಂದರ್ಭದಲ್ಲಿನ ದೈವದ ಪಾತ್ರವೊಂದು ಈ ವಿಚಾರವಾಗಿ ಗಮನಸೆಳೆಯುತ್ತದೆ-ಜಾನುಬೈದ್ಯನ (ವೈದ್ಯ) ಸಂಕೇತವಾಗಿ ಬಿಲ್ಲವ ಜನಾಂಗದ ಪೂಜಾರಿಯೊಬ್ಬನು ಗಿಡಮೂಲಿಕೆಯ ಔಷಧಿಯ ಮಣ್ಣಿನ ಪಾತ್ರೆಯೊಂದನ್ನು ಕೈಯಲ್ಲಿ ಹಿಡಿದುಕೊಂಡು ಆರಾಧನೆಯ ಸಂದರ್ಭದಲ್ಲಿ ದೈವದೊಂದಿಗೆ ಪ್ರದಕ್ಷಿಣೆ ಬರುವ ಸಂಪ್ರದಾಯ. ಮಾತ್ರವಲ್ಲ ವೈದ್ಯನಾಥ ಬಿಲ್ಲವರಿಂದ ಆಹಾರ ಸ್ವೀಕರಿಸಿ ನೆಲೆಯಾದ ಹಲವಾರು ಐತಿಹ್ಯಗಳು ಚಾಲ್ತಿಯಲ್ಲಿವೆ.[202] ತುಳುನಾಡಿನಾದ್ಯಂತ ಆರಾಧನೆಗೊಳ್ಳುತ್ತಿರುವ ವೈದ್ಯನಾಥ, ಮುಂಡತ್ತಾಯ, ಮುಂಡಿತ್ತಾಯ, ಮುಡದೇರ್, ಕಾಳಭೈರವನೆಂಬ ದೈವಗಳು ಬಿಲ್ಲವರ ದೈವಗಳೆಂದೇ ಹೆಸರು ಪಡೆದಿವೆ.[203] ವ್ಯವಸ್ಥೆಯಲ್ಲಿನ ಸ್ಥಿತ್ಯಂತರಗಳು ಪ್ರಧಾನವಾಗಿದ್ದು ಇಂತಹ ವ್ಯವಸ್ಥೆಗಳನ್ನು ಅಧೀನ ವ್ಯವಸ್ಥೆಗಳಾಗಿ ಪರಿವರ್ತಿಸಿವೆ ಎಂಬುವುದಾಗಿ ಅಭಿಪ್ರಾಯಪಡಲಾಗಿದೆ. ಒಟ್ಟಿನಲ್ಲಿ ಪ್ರಬಲ ಆರ್ಥಿಕತೆಯ ಅಧಿಕಾರಿವರ್ಗ ಇಲ್ಲಿನ ಪ್ರಭಾವಿ ಒಕ್ಕಲುಗಳ ಸಹಕಾರದೊಂದಿಗೆ ಪರಸ್ಪರ ಅಂತಸ್ತುಗಳನ್ನು ವೃದ್ದಿಸಿಕೊಂಡು ಸ್ಥಳೀಯ ಆಧಿಕಾರ ನಿರ್ವಹಣೆಯಲ್ಲಿ ಯಶಸ್ಸು ಕಂಡರು.[204] ಇದನ್ನು ಸಮರ್ಥಿಸುವಂತೆ ಸಾಮಂತ ವ್ಯವಸ್ಥೆಗಳು ಪತನಗೊಂಡಾಗ ಅವುಗಳ ನೆಲೆಗಳಲ್ಲಿ ಅವುಗಳನ್ನು ಆಶ್ರಯಿಸಿಕೊಂಡಿದ್ದ ಒಕ್ಕಲುಗಳು ಸ್ಥಳೀಯವಾಗಿ ಅಧಿಕಾರಕ್ಕೇರಿದ ವಿಚಾರಗಳು ಶಾಸನಗಳಲ್ಲಿ, ಇತರ ಮೌಖಿಕ ಹಾಗೂ ಲಿಖಿತ ಆಕರಗಳಲ್ಲಿ ಉಲ್ಲೇಖಿಸಲ್ಪಟಿವೆ.[205] ಹೀಗೆ ಬ್ರಾಹ್ಮಣ ಮತ್ತು ಜೈನ ವಾರಸುದಾರಿಕೆಯಂತೆ ತುಳುನಾಡಿನಲ್ಲಿ ವಾರಸುದಾರಿಕೆಯನ್ನು ಸ್ಥಾಪಿಸಿ ಅಧಿಕಾರ ಚಲಾಯಿಸಿದ ಮತ್ತೆರಡು ಪ್ರಮುಖ ಸಮುದಾಯಗಳೆಂದರೆ ಒಕ್ಕಲ್ಮರು ಮತ್ತು ಬಿಲ್ಲವರು.

**ಸಮುದಾಯ-ಜಾತಿ ವಾರಸುದಾರಿಕೆ**

ಸಮುದಾಯ ಎಂಬುವುದು ಎಲ್ಲವನ್ನು ಸಂಭಾಳಿಸಿಕೊಂಡು ಇಲ್ಲವೇ ತುಂಬಿಸಿಕೊಂಡು ಹೋಗುವ ಕೇವಲ ಸಮರೂಪದ ಗುಂಪುಗಳಾಗಿರದೇ, ಬುಡಕಟ್ಟು ವ್ಯವಸ್ಥೆಯಲ್ಲಿದ್ದಾಗ ಕೃಷಿಯನ್ನು ಪೂರ್ಣ ಪ್ರಮಾಣದಲ್ಲಿ ಅವಲಂಬಿಸಿಕೊಂಡಿರುವ ಗುಂಪುಗಳಾಗಿ ಐಡೆಂಟಿಟಿಯನ್ನು ಪಡೆದಿದ್ದವು. ಈ ಸಂದರ್ಭದಲ್ಲಿ ಕೃಷಿ ಸಮುದಾಯಗಳು 'ಎಲ್ಲವನ್ನು ತುಂಬಿಸಿಕೊಡು ಹೋಗಬಹುದಾದ ಸಮಾಜದ ರಚನೆ' ಎಂದರೂ ಅತಿಶಯೋಕ್ತಿಯಾಗುವುದಿಲ್ಲ.[206]

ವಸಾಹತುಪೂರ್ವದಲ್ಲಿ ಈ ರೀತಿಯ ಅಧಿಕಾರದ ಕೇಂದ್ರಗಳು ಆಧಿಕಾರ-ಆಯುಧಗಳನ್ನು ಪಡೆದುಕೊಂಡು ಸಾಮಾಜಿಕ ಶ್ರೇಣಿಕರಣದೊಂದಿಗೆ ಸಂಪತ್ತನ್ನು ಹಂಚಿ ದಾನ ಮಾಡುವ ಉದ್ದೇಶವನ್ನಿಟ್ಟುಕೊಂಡು ರಾಜ್ಯದ ಮೇಲೆ ಹತೋಟಿ ಸಾಧಿಸುವುದಕ್ಕಾಗಿ ಮತ್ತು ವ್ಯವಸ್ಥಿತ ಆಡಳಿತ ರೂಪಣೆಗಾಗಿ ತನ್ನದೇ ಶಾಸ್ತ್ರವಿಧಿಗಳ ರೂಪಿಸಿ ತಮ್ಮ ಉದ್ದೇಶ ಸಾಧಿಸಿಕೊಂಡರು.[207] ಸೈನಿಕ ಬಲದಿಂದ ರಾಜ್ಯವನ್ನು ಹತೋಟಿಯಲ್ಲಿಡುವುದು ಪ್ರಯಾಸದ ಕೆಲಸವಾದುದರಿಂದ ಖಾಸಗಿ ಒಡೆತನ ಪ್ರಾಮುಖ್ಯತೆ ಪಡೆಯಿತ್ತಲ್ಲದೇ ಭೂಮಾಲಿಕ-ಮಧ್ಯವರ್ತಿಗಳ ಹುಟ್ಟಿಗೆ ಕಾರಣವಾಯಿತು. ಸಾಮಾನ್ಯಶಕೆ ಸುಮಾರು ಎಂಟರಿಂದ ಸಾಮಾನ್ಯಶಕೆ ಹದಿನಾಲ್ಕನೇ ಶತಮಾನದ ಚರಿತ್ರೆಯನ್ನು ಅವಲೋಕಿಸುವಾಗ ಎರಡು ರೀತಿಯ ಮಧ್ಯವರ್ತಿ ವ್ಯವಸ್ಥೆಗಳನ್ನು ಕಾಣಬಹುದಾಗಿದೆ. ಒಂದನೇಯದಾಗಿ ದಾನದ ಮೂಲಕ ಭೂಮಿ ಪಡೆದ ಮಹಾಜನರು ಹಾಗೂ ಭೂಮಿಯ ವ್ಯವಹಾರ, ತೆರಿಗೆ ಸಂಗ್ರಹಣೆ, ದತ್ತಿ, ಕೆರೆ ನಿರ್ಮಾಣ, ಧಾರ್ಮಿಕ ಶೈಕ್ಷಣಿಕ ಕೆಲಸ ಮಾಡಿಕೊಂಡು ಸರಕಾರದ ಮಧ್ಯವರ್ತಿಗಳಾದ ಜನ್ನಿಗಳು, ಮಧ್ಯಸ್ಥ, ಸೇನಾಬೋವರು, ಅಗ್ರಹಾರಿಗಳು, ತಂತ್ರಿಗಳು, ಅತಿಕಾರಿಗಳು, ಸೆಟ್ಟಿಗಳು, ಹಲರು, ಗ್ರಾಮಣಿಗಳು ಮತ್ತು ಇತರರು. ಜೊತೆಗೆ ಬ್ರಹ್ಮದೇಯ ಭೂಮಿಯನ್ನು ಕ್ರಯಕ್ಕೆ ಇಲ್ಲವೇ ಗೇಣಿಗೆ ಪಡೆದುಕೊಂಡು ಸೃಷ್ಟಿಯಾದ ನೂತನ ಭೂಮಾಲಿಕರು. ಎರಡನೆಯದಾಗಿ ಸ್ಥಳೀಯ ಆಡಳಿತ, ಗ್ರಾಮಗಣ್ಯತೆಯ ಮೂಲಕ ಸೃಷ್ಟಿಯಾದ ಮಧ್ಯವರ್ತಿಗಳ ಹುಟ್ಟು-ಸಾಮಾಜಿಕ ಸ್ಥಿತ್ಯಂತರಗಳಿಗೆ ಕಾರಣವಾಯಿತು.[208]

ತುಳುನಾಡಿನಲ್ಲಿ ವಿಜಯನಗರ ಕಾಲದಿಂದ ಸಾಮಾಜಿಕವಾಗಿ ಬ್ರಾಹ್ಮಣರ ವಾಸ್ತವ್ಯದಿಂದ, ಆರ್ಥಿಕವಾಗಿ ಭತ್ತದ ಕೃಷಿಯ ವಿಸ್ತರಣೆಯಿಂದಾಗಿ, ಆಡಳಿತಾತ್ಮಕವಾಗಿ ಮತ್ತು ಸಾಂಸ್ಕೃತಿಕವಾಗಿ ದೇವಸ್ಥಾನ, ದೈವಸ್ಥಾನಗಳಂತಹ ಸಾಂಸ್ಥಿಕ ಸಂಸ್ಥೆಗಳ ಬೆಳವಣಿಗೆಯಿಂದಾಗಿ ಜಾತಿಯ ಕಲ್ಪನೆ ಸುದೃಢತೆಯನ್ನು ಪಡೆದು ಸಹಜ ಸಾಮಾಜಿಕ ಬೆಳವಣಿಗೆಯಾಗಿ ಸಮುದಾಯಗಳು ಸಮಾಜ, ವರ್ಗ ವ್ಯವಸ್ಥೆಯಾಗಿ ರೂಪಿತವಾಯಿತು. ಜಾತಿ ಪದ್ಧತಿಯು ವಸಾಹತುಶಾಹಿಯ ಶೋಧನೆಯಾಗಿರದೇ[209] ಬ್ರಿಟಿಷ್ ಆಡಳಿತದಲ್ಲಿ ಜಾತಿ ಹೊಸ ಅತಿಶಯ ಸಂಗತಿಯಾಗಿ ವರ್ಧಿಸಿ ಸಾರ್ವಜನಿಕ ಕ್ಷೇತ್ರಕ್ಕೆ ಸರಿದುಹೋಗಿರುವುದನ್ನು ಗಮನಿಸಿದಾಗ ಜಾತಿ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಸಂಚಲನೆಯನ್ನು ಉಂಟು ಮಾಡಿದೆ.[210] ಸಾಮಾಜಿಕ ಶ್ರೇಣಿಕರಣದ ಒಟ್ಟು ವ್ಯವಸ್ಥೆಯಲ್ಲಿ ಹಾಗೂ ಜಾತಿ ಸ್ಥಾನಮಾನ ನಿರ್ಧಾರದ ಆಧಾರದಲ್ಲಿ ವಸಾಹತುಪೂರ್ವದ ಸಾಂಸ್ಥಿಕ ಸಂಸ್ಥೆಗಳ ಬೆಳವಣಿಗೆ ಮತ್ತು ಹೊಸ ಕೃಷಿ ಸಮೀಕರಣದ ಸುತ್ತ ರಾಜ್ಯ ರೂಪುಗೊಂಡಿರಬಹುದೆಂದು ಅಭಿಪ್ರಾಯಪಡಲಾಗಿದೆ.[211]

ಮಧ್ಯಯುಗೀನ ದಕ್ಷಿಣಭಾರತದ ರಾಜ್ಯ ವ್ಯವಸ್ಥೆಯ ಬಗ್ಗೆ ಬಹಳಷ್ಟು ಅಧ್ಯಯನಗಳಾಗಿದ್ದು, ರಾಜ್ಯ ವ್ಯವಸ್ಥೆಯಲ್ಲಿ ಮೂರು ಝೋನ್‌ಗಳನ್ನು ಕಾಣಬಹುದು. ಸೆಂಟ್ರಲ್, ಇಂಟರ್‌ಮೀಡಿಯೇಟ್ ಮತ್ತು ಪೆರಿಪೆರಲ್. ಸೆಂಟ್ರಲ್ ಝೋನ್‌ನಲ್ಲಿ ನೈಜ ರಾಜಕೀಯಾಧಿಕಾರವಿದ್ದರೆ, ಉಳಿದವುಗಳು ಕೇವಲ ಆಚರಣಾತ್ಮಕ ಅಧಿಕಾರವನ್ನು ಹೊಂದಿತ್ತು. ಈ ರೀತಿಯ ರಾಜ್ಯ ವ್ಯವಸ್ಥೆಯಲ್ಲಿ ಜಾತಿ (ಸಮುದಾಯಗಳು) ಗಳು ಪ್ರಧಾನ ಭೂಮಿಕೆಯನ್ನು ವಹಿಸಿವೆ ಮಾತ್ರವಲ್ಲ ಜಾತಿ (ಸಮುದಾಯಗಳು) ಗಳು ರಾಜ್ಯದ ಬಲವರ್ಧನೆಗೂ ಕಾರಣವಾಗಿದೆ.[212]

ಈ ಹಂತದಲ್ಲಿ ಮಾತೃಪ್ರಧಾನ ಬಂಧುತ್ವ ಕಲ್ಪನೆಯ, ಉತ್ಪಾದನಾ ವ್ಯವಸ್ಥೆ ಸ್ಥಾನಾಂತರಗೊಂಡು ಶ್ರಮಾಧಾರಿತ ಉತ್ಪಾದನೆಗೆ ಅವಕಾಶ ಮಾಡಿಕೊಟ್ಟಿತು. ಜೊತೆಗೆ ಭೂಮಿಯ ದಾನಕಲ್ಪನೆ ಉತ್ಪಾದನಾ ರಂಗದಲ್ಲಿ ಹೊಸ ಬೆಳವಣಿಗೆಗೆ ಅವಕಾಶ ಮಾಡಿಕೊಟ್ಟಿತ್ತು. ಮಧ್ಯವರ್ತಿಗಳ ಅಧಿಕಾರ, ಸವಲತ್ತು, ವರ್ಚಸ್ಸು ಹೆಚ್ಚಿದಂತೆಲ್ಲ ಮೂಲ ಪ್ರಭುತ್ವ ಹಳ್ಳಿಗಳಲ್ಲಿ ಮುಸುಕಾಯಿತು. ಇದು ಉತ್ಪಾದನಾ ಸಂಬಂಧಗಳ ಮೇಲೆ ಪರಿಣಾಮ ಬೀರಿತ್ತಲ್ಲದೇ ಭೂಮಿಯ ಒಡೆತನ ಮತ್ತು ರಾಜಕಾರಣದ ನಡುವೆ ನಿಕಟ ಸಂಬಂಧವನ್ನು ಏರ್ಪಡಿಸಿತು. ಮಧ್ಯವರ್ತಿಗಳು ಕೃಷಿಕರ ಪಾಲಿಗೆ ಅರಸರಾಗುವ ಮೂಲಕ ಕೆಳಸ್ತರದ ದುಡಿಮೆಯ ಫಲವನ್ನು ಪಡೆದುಕೊಂಡು ಸಂಕೀರ್ಣ ಸಮಾಜದ ರಚನೆಗೆ ಕಾರಣರಾದರು.[213]

ಸವಲತ್ತುಗಳ ಪಡೆದುಕೊಳ್ಳುವಿಕೆ ಮತ್ತು ಅನುಭವಿಸುವಿಕೆ ಸಾಮಾಜಿಕ ವ್ಯವಸ್ಥೆಯಲ್ಲಿ ಓರ್ವನ ಅಧಿಕಾರದ ಮಟ್ಟವನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪಾತ್ರವಹಿಸುತ್ತದೆ. ಇದನ್ನು ಪಡೆದುಕೊಳ್ಳುವವರು ಸಾಮಾಜಿಕವಾಗಿ ಗುರುತಿಸಲ್ಪಟ್ಟು, ಪ್ರತಿಷ್ಠಿತರೆನಿಸಿಕೊಂಡು ಗೌರವಾಧಾರಗಳಿಗೆ ಒಳಪಡುತ್ತಾರೆ. ಅಲ್ಲದೇ ಸವಲತ್ತು, ಪ್ರತಿಷ್ಠೆ, ಗೌರವಗಳು ಒಟ್ಟಾಗಿ ಬಲಾಢ್ಯತೆಗೆ ಅವಕಾಶ ಮಾಡಿಕೊಟ್ಟು, ತನ್ನ ಸುತ್ತಲಿನ ವ್ಯವಸ್ಥೆಯ ಮೇಲೆ ಯಜಮಾನಿಕೆ ಸ್ಥಾಪಿಸಿಕೊಳ್ಳಲು ಅನುವು ಮಾಡಿಕೊಟ್ಟಿದೆ ಎಂಬುವುದು ಚರಿತ್ರಕಾರರ ಅಧ್ಯಯನಗಳು ತಿಳಿಯಪಡಿಸುತ್ತವೆ.[214] ಈ ಮಾನದಂಡವನ್ನು ಮುಂದಿಟ್ಟು ಪರಿಶೀಲಿಸಿದಾಗ ಪ್ರಬಲರು ರಾಜ್ಯದ ಅಧಿಕಾರಿಗಳಾಗಿ, ರಾಜ ಅಥವಾ ಆಡಳಿತದ ಮುಖ್ಯಸ್ಥನೊಂದಿಗೆ ಸಂಬಂಧಗಳನ್ನು ಬೆಳೆಸಿಕೊಂಡಿರುವ ಬಗ್ಗೆ ಸಾಕಷ್ಟು ನಿದರ್ಶನಗಳನ್ನು ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ನೀಡಬಹುದು. ತುಳುನಾಡಿನ ಆರ್ಥಿಕತೆಯನ್ನು ಕೇಂದ್ರವಾಗಿಟ್ಟುಕೊಂಡು ಅದರ ಸುತ್ತ ರೂಪಿಸಲ್ಪಟ್ಟ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳು ಇತರರ ಮೇಲೆ ಯಜಮಾನಿಕೆ ಸ್ಥಾಪಿಸುವ ಸಂದರ್ಭದಲ್ಲಿ ಜಾತಿಯನ್ನು ಬಳಸಿಕೊಳ್ಳುವುದರ ಬಗ್ಗೆ ಐತಿಹಾಸಿಕ ವಿವರಣೆಗಳಿವೆ. ಈ ವ್ಯವಸ್ಥೆ ಮುಂದುವರೆದು ಪ್ರಚಲಿತ ಪದ್ಧತಿಯಲ್ಲಿ ಪ್ರಭಾವಿ ಚಿಂತನೆಗಳು ಸೇರಿಕೊಂಡಾಗ

ಇಲ್ಲಿನ ಸಾಂಸ್ಕೃತಿಕ ಇತಿಹಾಸ ಮಗ್ಗುಲು ಬದಲಾಯಿಸಿರುವುದನ್ನು ಕಾಣಬಹುದಾಗಿದೆ.[215] ಈ ವ್ಯವಸ್ಥೆ ಕೆಲವೊಂದು ಬಾರಿ ಧನಾತ್ಮಕ ಫಲಿತಾಂಶಗಳಿಗೆ ಅವಕಾಶ ಮಾಡಿಕೊಟ್ಟರೆ ಬಹುತೇಕ ಅದರ ಕೊಡುಗೆ ಋಣಾತ್ಮಕವಾಗಿತ್ತು. ಉದಾಹರಣೆಗೆ ಅಜಲು ಪದ್ಧತಿಯ ಹುಟ್ಟು ಮತ್ತು ಅನ್ವಯಿಕತೆ.[216] ಇದೇ ಬಗೆಯ ಕಾರ್ಯಯೋಜನೆಗಳು ಸಾಂಸ್ಕೃತಿಕ ಆಚರಣೆಗಳಲ್ಲಿಯೂ ಹುಟ್ಟುಹಾಕಿ ಯಜಮಾನಿಕೆಯ ಪರಿಕಲ್ಪನೆಗೆ ನಿರ್ದಿಷ್ಟ ರೂಪ ನೀಡುವ ಪ್ರಯತ್ನ ನಡೆಸಲಾಯಿತು. ಉದಾಹರಣೆಗೆ ವೀರ ಆರಾಧನೆಯ ಕುರುಹುಗಳು ನಿಜವಾಗಿ ಭೂಮಿಯ ಮೇಲಿನ ಒಡೆತನ ಮತ್ತು ಅಧಿಕಾರವನ್ನು ಸ್ಥಾಪಿಸಿ ಕ್ರಮಬದ್ಧಗೊಳಿಸುವ ಸ್ಪಷ್ಟ ಯೋಜನೆಯಾಗಿದೆ ಎಂಬುವುದಾಗಿ ಇತಿಹಾಸತಜ್ಞರು ಅಭಿಪ್ರಾಯಪಡುತ್ತಾರೆ. ಕೆಲವೊಂದು ಬಾರಿ ಅರಸನ ಅಥವಾ ಯಜಮಾನನ ಅಧಿಕಾರದ ಸ್ಥಾನವನ್ನು ಗಟ್ಟಿಗೊಳಿಸುವ ಉದ್ದೇಶವನ್ನಿಟ್ಟುಕೊಂಡ ಹೋರಾಟಗಳನ್ನು ವಂಶಪಾರಂಪರ್ಯಗೊಳಿಸಿ ಅಧಿಕಾರದಲ್ಲಿ ಯಶಸ್ಸನ್ನು ಪಡೆದಿರಬಹುದೆಂಬುವುದು ಡಾ.ಭಾಸ್ಕರ ಆನಂದ ಸಾಲೆತ್ತೂರರ ಅಭಿಪ್ರಾಯವಾಗಿದೆ.[217] ಜೊತೆಗೆ ಭೂಮಿಯ ಮೇಲಿನ ಹಕ್ಕಿನ ಸ್ವರೂಪ, ಉತ್ಪಾದನ ವ್ಯವಸ್ಥೆಯ ಯಜಮಾನಿಕೆ ನಿರ್ಧರಿಸಿದರೆ ಕೆಲವೊಂದು ಬಾರಿ ಯಜಮಾನಿಕೆ ಅವುಗಳನ್ನು ನಿರ್ಧರಿಸುತ್ತಿತ್ತು. ಈ ಪ್ರಕ್ರಿಯೆ ಮುಂದುವರೆದು ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲು-ಕೀಳು, ಉನ್ನತ-ಅಧೀನ, ಯಜಮಾನ-ಆಳು ಇತ್ಯಾದಿ ವರ್ಗಗಳು ಪ್ರವರ್ಧಮಾನಕ್ಕೆ ಬಂದವು. ಇದು ಭಾವನಾತ್ಮಕವಾಗಿಯೂ ಮತ್ತು ಅನ್ವಯಿಕತೆಯಲ್ಲೂ ತನ್ನ ನೆಲೆಯನ್ನು ಭದ್ರಗೊಳಿಸಿ ನೈಜವಾಗಿ ಸಾಮಾಜಿಕ ರಚನೆಯನ್ನು ಸಂಕೀರ್ಣಗೊಳಿಸಿತ್ತಾದರೂ ಸಂಬಂಧಗಳು ಮಾತ್ರ ಸ್ಪಷ್ಟಗೊಂಡವು. ಈ ಬಗೆಯ ಬೆಳವಣಿಗೆಗೆ ಪೂರಕವಾಗಿ ಕೆಲವೊಂದು ನಿಯಮಾವಳಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ರೂಪಿಸಲ್ಪಟ್ಟು ಜಾರಿಗೆ ಬಂದವು.

ಭೂಧಾನ ವ್ಯವಸ್ಥೆಯು ನೂರಾರು ಬುಡಕಟ್ಟುಗಳ ವಿಘಟನೆಯಲ್ಲಿ ನಿರ್ಣಾಯಕವೆನಿಸಿಕೊಂಡು ಭೂಮಿಯ ಒಡೆತನದ ವ್ಯವಸ್ಥೆಯು ಮೂಲ ಸ್ವರೂಪದಲ್ಲಿ ಬದಲಾವಣೆಯಾಗಿ ವಂಶಪಾರಂಪರ್ಯ ಜಾತಿಗಳು ಹೆಚ್ಚಾದವು ಎಂಬುವುದು ಡಾ.ಆರ್.ಎಸ್ ಶರ್ಮ ಅವರ ಅಭಿಪ್ರಾಯ.[218] ಬ್ರಹ್ಮದೇಯ, ಅಗ್ರಹಾರ ಇತ್ಯಾದಿ ಭೂಮಿಗಳ ಸೃಷ್ಟಿ ಬುಡಕಟ್ಟು ವ್ಯವಸ್ಥೆಯಿಂದಾಗಿ ಬಿಡುಗಡೆ ಪಡೆದ ಸಮುದಾಯಗಳ ಮೇಲೆ ಪ್ರಭಾವ ಬೀರುವ ಸಾಧನಗಳಾದವು. ಅಂತೆಯೇ ಈ ವ್ಯವಸ್ಥೆಯ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿಕೊಳ್ಳಲು ಬ್ರಾಹ್ಮಣರಿಗೆ ಅವಕಾಶ ನೀಡಿದಲ್ಲದೇ ಪ್ರಬಲ ಆರ್ಥಿಕತೆಯ ಜಾಲವನ್ನು ವಿಸ್ತಾರಗೊಳಿಸಿ ಸಂಸ್ಕಾರಗಳೆಂಬ ಸಾಧನದ ಮೂಲಕ ಅಧೀನ ಆರ್ಥಿಕತೆಗಳನ್ನು ಸಹ ಹತೋಟಿಯಲ್ಲಿ

ಇಟ್ಟುಕೊಳ್ಳಲು ಅವಕಾಶ ನೀಡಿತು. ಇದು ತುಳುನಾಡಿನಲ್ಲಿ ನಿಧಾನವಾಗಿ ವಾರಸುದಾರಿಕ ವ್ಯವಸ್ಥೆಯನ್ನು ಸ್ಪುಟಗೊಳಿಸಿ, ವಿಸ್ತಾರಗೊಳಿಸಲು ಕಾರಣವಾಯಿತು.

ತುಳುನಾಡಿನ ಸಮಾಜದ ಶ್ರೇಣೀಕರಣದಿಂದಾದ ಸಾಮಾಜಿಕ ಭಿನ್ನತೆ, ಸಮಾಜದ ಕಾರ್ಯವಿಧಾನಗಳು, ರಾಜಕೀಯ ರಚನೆಗಳಿಗೆ ಅವಕಾಶ ಕಲ್ಪಿಸಿ ರಾಜ್ಯ ರೂಪುಗೊಳ್ಳಲು ಅವಕಾಶ ಮಾಡಿಕೊಟ್ಟಿತು.ರಾಜ್ಯ ಮತ್ತು ರಾಜ್ಯತ್ವ ಪ್ರಬಲ ಆರ್ಥಿಕ ಬೆಳವಣಿಗೆಯೊಂದಿಗೆ ಏಕಕಾಲದಲ್ಲೂ, ಅನುಬಂಧವಾಗಿಯೂ ಸಂರಚನೆಗೊಂಡು ಉಳುಮೆಯ ಸಮಾಜದ ಮೇಲೆ ಪ್ರಭುತ್ವವನ್ನು ಸ್ಥಾಪಿಸಿತು. ತುಳುನಾಡಿನ ಸಮಾಜದಲ್ಲಿ ಪ್ರಭುತ್ವ ಸಾಂಸ್ಥೀಕರಣಗೊಂಡಾಗಿನ ಸಂದರ್ಭದಲ್ಲಿ ಸಮಾಜವು ಶ್ರೇಣೀಕರಣ ವ್ಯವಸ್ಥಿತವಾಗಿ, ಉಳುಮೆ ವಿಸ್ತಾರಗೊಂಡತೆಲ್ಲ ಬಂಧುತ್ವದ ಆಧಾರದಲ್ಲಿ ಠರಾವಣೆಗೊಂಡಿದ್ದ ಸಮುದಾಯಗಳೆಲ್ಲ ಶ್ರೇಣೀಕರಣದ ಕೌಶಲ್ಯದಲ್ಲಿ ಛೇದಿಸಲ್ಪಟಿತ್ತು. ಬಂಧುತ್ವ ವ್ಯವಸ್ಥೆಯಲ್ಲಿ ರೂಪಿಸಲ್ಪಟ್ಟಿದ್ದ ವಲಯಗಳೆಲ್ಲ ಕೃಷಿ ವಲಯಗಳಾಗಿ ರೂಪಾಂತರಗೊಂಡು ನಾಡುಗಳಾಗಿ ವ್ಯವಸ್ಥೆಗೊಂಡವು. ನಾಡುಗಳೆಲ್ಲ ರಾಜಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಪ್ರಾಮುಖ್ಯತೆಯನ್ನು ಪಡೆದುಕೊಂಡು ರಾಜಕೀಯ ವ್ಯವಸ್ಥೆಯಲ್ಲಿ ಪಾಲು ಪಡಕೊಳ್ಳುವಲ್ಲಿ ಮುಂದಾದವು.[219] ಹೀಗೆ ತುಳುನಾಡಿನ ಸಾಮಾಜಿಕ ರಚನೆ ನಾಡು ಆರ್ಥಿಕತೆಯ ಮೇಲೆ ರೂಪುಗೊಂಡಾಗಿನ ಸಂದರ್ಭದ ವಾರಸುದಾರಿಕೆ ತುಳುನಾಡಿನ ನೈಜ ವಾರಸುದಾರಿಕೆಯಾಗಿ ಪರಿವರ್ತನೆಗೊಂಡಿದೆ. ಸಮಾಜದ ರಚನೆ ಅಲೆಮಾರಿ–ಬಂಧು–ಬಂಧುತ್ವ–ಶ್ರಮ–ಬಂಧುಮುಕ್ತ–ವಂಶಪಾರಂಪರ್ಯ–ಅಧಿಕತ್ವದ ವರೆಗೆ ವಿಸ್ತರಣೆಗೊಂಡಿತು. ಗುಂಪಿನಿಂದ–ಬುಡಕಟ್ಟು–ಸಮುದಾಯ– ಜಾತಿವರೆಗೆ ರೂಪಾಂತರಗಳನ್ನು ಪಡೆಯಿತು.

## ---ಕೊನೆಟಿಪ್ಪಣಿ---

[1] ಅ.ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಗಡೆ ಸಮಗ್ರ ಸಾಹಿತ್ಯ, ಪುಟಗಳು 132-133.

[2] ಉಪ್ಪಂಗಳ ರಾಮಭಟ್ಟ, ವೇಲಾಪುರ ಮಹಾತ್ಮೆ: ವಾಸುದೇವನ್, ದಿ ಕೊರಗಾಸ್, ಸುಬ್ಬಣ ರೈಯವರ ದ.ಕ ಜಿಲ್ಲೆಯ ಐತಿಹ್ಯ ಮುಂತಾದ ಗ್ರಂಥಗಳಲ್ಲಿ ಬ್ರಾಹ್ಮಣರ ವಲಸೆಯ ಪೂರ್ವ ಹುಬಾಸಿಗ ಮತ್ತು ಅವನ ಅನುಯಾಯಿಗಳು ತುಳುನಾಡಿನಲ್ಲಿ ರಾಜಕೀಯವಾಗಿ ಬಹಳಷ್ಟು ಪ್ರಭಾವಿಗಳಾಗಿದ್ದರು ಎಂಬ ವಾದವನ್ನು ಮಂಡಿಸಿವೆ.

[3] ಎಂ.ಚಂದ್ರಪೂಜಾರಿ ಸಂಶೋಧನೆ ಏನು, ಏಕೆ, ಹೇಗೆ? ಪ್ರಸರಾಂಗ ಕನ್ನಡ ವಿ.ವಿ ಹಂಪಿ, 2009. ಪರಶುರಾಮ ಸೃಷ್ಟಿಯ ಐತಿಹ್ಯ, ಪುಟ 131.

[4] ರಾಜನ್ ಗುರುಕ್ಕಳ್ ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ, ಸಂಪಾದನೆ, ಬಿ. ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್.ಸಿ 2004, ಪುಟ 67.

[5] ಇಂದಿರಾ ಹೆಗ್ಗಡೆ, ತುಳುನಾಡಿನ ಗ್ರಾಮಾಡಳಿತ ಹಾಗೂ ಅಜಲುಗಳು, ಪುಟಗಳು 25-34.

[6] ತುಳುನಾಡಿನಲ್ಲಿ ಶಿಷ್ಟ ಮತ್ತು ಪರಿಶಿಷ್ಟ ರೂಪದ ಮಾತೃ ಆರಾಧನಾ ಸಂಪ್ರದಾಯಗಳ ಕೇಂದ್ರಗಳು ಬಹಳಷ್ಟಿವೆ. ಉದಾಹರಣೆಗೆ ಮಂಗಳಾದೇವಿ, ಕಾಪು, ಬಪ್ಪನಾಡು ಮುಂತಾದವುಗಳು.

[7] ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್, 1975, ಪುಟಗಳು 144-149. 158.

[8] ಮಾತೃಪ್ರಧಾನ ವ್ಯವಸ್ಥೆಯ ಚೌಕಟ್ಟಿನಲ್ಲಿ ಆರಾಧನೆ ಕುಟುಂಬದ ದೈವಗಳಿಂದ ಪ್ರಾರಂಭಗೊಂಡು, ಗುತ್ತು, ರಾಜನ್, ಅರಸು ದೈವಗಳ ಉತ್ಸವದ ಮೂಲಕ ನಡೆದರೇ, ಪಿತೃಪ್ರಧಾನ ವ್ಯವಸ್ಥೆಯಲ್ಲಿ ಆರಾಧನೆ ಗ್ರಾಮದೇವರಿಂದ ಪ್ರಾರಂಭಿಸಿ, ಮಾಗಣೆ, ಸೀಮೆ, ರಾಜ್ಯ ದೇವಸ್ಥಾನಗಳ ವರೆಗೆ ನಡೆಯುತ್ತಿರುವುದು ಮಾತೃಪ್ರಧಾನ ವ್ಯವಸ್ಥೆ ಅಧೀನ ಆರ್ಥಿಕತೆಯ ಪ್ರತೀಕವಾಗಿದ್ದರೇ, ಪಿತೃಪ್ರಧಾನತೆ ಪ್ರಧಾನ ಆರ್ಥಿಕತೆಯ ಸಂಕೇತವಾಗಿ ದೈವ-ದೇವರ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆಯಲ್ಲಿ ಪರ್ಯಾಪ್ತಗೊಂಡಿರುವುದು.

[9] ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್, 1975, ಪುಟಗಳು 144-149. 158. ತುಳುನಾಡಿನ ಸಂದರ್ಭದಲ್ಲಿ ಬೀಡು ಮತ್ತು ಗುತ್ತುಮನೆಗಳು ಸಂಪತ್ತಿನ ಕೇಂದ್ರಗಳಾಗಿ ಮಾನ್ಯತೆ ಪಡೆದಿದೆ.

[10] ಪಾಲ್ತಾಡಿ ರಾಮಕೃಷ್ಣ ಆಚಾರ್, ನಾಗಬೆರ್ಮೆ, ಪುತ್ತೂರು 2009 ಪುಟಗಳು 24-25.

[11] ಬುಖಾನನ್ ಫ್ರಾನ್ಸಿಸ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್,

[12] ಅ.ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟಗಳು 132-133. ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 26.

[13] 7ನೇ ಶತಮಾನದ ವಡ್ಡರ್ಸೆ ಶಾಸನದ ಪ್ರಕಾರ ಅಡಕಪ್ಪ ಎಂಬುವವನು ತುಳುನಾಡಿನ ಭೂಮಿಯಲ್ಲಿ ಕೃಷಿ ಮಾಡುವ ಅಧಿಕಾರವನ್ನು ಪಡೆದುಕೊಂಡು ಪ್ರಜಾವರ್ಗವಾಗಿ ರೂಪುಗೊಂಡನು. 9ನೇ ಶತಮಾನದ ಉದ್ಯಾವರ ಶಾಸನದಲ್ಲಿ ಅಲುಪ ರಾಜ 4ನೇ ಮಾರಮ್ಮ ಅಳುವರಸ ತನ್ನ ಭೂಮಿಯನ್ನು 6 ಒಕ್ಕಲುಗಳಿಗೆ ರಾಜ ಸನ್ನದು ರೂಪದಲ್ಲಿ ನೀಡಿದನು. ಹೀಗೆ ವಾಸ್ತವ್ಯ ಹೂಡಿದ ಜನರು ಭೂಮಿಯ ಮೇಲೆ ಹಕ್ಕು ಹೊಂದಿಕೊಂಡಿದ್ದು ರಾಜನ ಅಧಿಕಾರಿಗಳಾಗಿಯೂ ಕೂಡ ಭೂಮಿಯ ಮೇಲೆ ಹಕ್ಕು ಸಾಧಿಸಿರಬಹುದೆಂದು ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ.

[14] ಸೌ.ಇ.ಇ ಸಂ.9 ಭಾಗ 2.452, 471, 1429ರ ಉದ್ಯಾವರ ಶಾಸನ, ಸೌ.ಇ.ಇ ಸಂ.7, ನಂ 288, 319, 342, 344. ಸೌ.ಇ.ಇ ಸಂ.7, ನಂ 215.

[15] ಸೌ.ಇ,ಇ ಸಂ. 7, ನಂ.215, 288, 319, 342, 344, 385. ಸೌ.ಇ,ಇ. ಸಂ. 9, ಭಾಗ 2 452, 471.ಎ.ಆರ್.ಎಸ.ಐ.ಇ 1928-29 ನಂ.69, 76, 77, 78, 79, 163, 175.

[16] 1. ಕಲ್ಲುರ್ಟಿ ಪಾಡ್ದನ, ತುಳುನಾಡಿನ ಸಾಂಪ್ರದಾಯಿಕ ಚರಿತ್ರೆಗಳು, ಶಾಸನಗಳು, ಇದಲ್ಲದೇ ಪಟ್ಟಣ ಕೇಂದ್ರಗಳ ಬೆಳವಣಿಗೆ, ಜಾತ್ಯಾತೀತ ಕಟ್ಟಡಗಳ ರಚನೆ, ಧಾರ್ಮಿಕ ಕಟ್ಟಡಗಳ ರಚನೆ, ಶ್ರಮವಿಭಜನೆಯಂತಹ ವಿಚಾರಗಳು ಶಾಸನ ಹಾಗೂ ಪಾಡ್ದನಗಳಲ್ಲಿ ಉಲ್ಲೇಖಿತವಾಗಿದೆ. 2 ತುಳುನಾಡಿನ ಸಾಮಾನ್ಯ ಶಕೆ ಹನ್ನೊಂದನೇ ಶತಮಾನದಿಂದ ಹದಿನಾರನೇಯ ಶತಮಾನಗಳ ಅವಧಿಯ ಶಾಸನಗಳಲ್ಲಿ ಕೃಷಿ, ಕೃಷಿಯೇತರ ಚಟುವಟಿಕೆಗಳ ಬಗ್ಗೆ ಮಹತ್ವದ ಉಲ್ಲೇಖಗಳಿವೆ. 3 ವೃತ್ತಿ ದ್ವಿಗುಣತೆ, ಕೃಷಿಯೇತರ ವೃತ್ತಿಗಳಲ್ಲಿನ ವಿಶೇಷತೆಗಳಾಗಿವೆ. 4. ತೆರಿಗೆಗಳ ವ್ಯವಸ್ಥೆಗಳಿಂದ ಆರ್ಥಿಕತೆಯ ಆಯಾಮಗಳು ಬದಲುಗೊಂಡಿವೆ.

[17] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801-1970, 1988, ಪುಟ 11. ಸುರೇಂದ್ರ ರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟಗಳು 51, 52:

[18] 1. ಸೌ.ಇ.ಇ.ಸಂ.9 ಭಾಗ 2, 540: 28
2. ಸೌ.ಇ.ಇ ಸಂ. 9 ಭಾಗ 1 621, 659, 675, 694:
3. ಗುರುರಾಜ ಭಟ್ 1975, ಪುಟ-203.
4. ಸೌ.ಇ.ಇ ಸಂ. 9, 512.
5. ವಸಂತ ಮಾಧವ ಕೆ, ಪುಟ 12, 6.ಸೌ.ಇ.ಇ ವಿ. 7 ನಂ 264, ಸೌ.ಇ.ಇ ವಿ.9 620, 632, 655,
7. ವಸಂತ ಮಾಧವ, ಕೆ.ಜಿ ವೆಸ್ಟರ್ನ್ ಕರ್ನಾಟಕ; ಇಟ್ಸ್ ಅಗ್ರೇರಿಯನ್ ರಿಲೇಶನ್ಸ್ 1500-1800 ಹೊಸದೆಹಲಿ 1991, ಪುಟ 129.

[19] ಚಂದ್ರಪೂಜಾರಿ, ಸಂಶೋಧನೆ ಏನು? ಯಾಕೆ? ಹಂಪಿ. ವಿ. ವಿ ಪ್ರಸರಾಂಗ, ಪುಟಗಳು 130-131.

[20] ಶಿವಳ್ಳಿಯ ಮೂರು ವರ್ಗದ ಬ್ರಾಹ್ಮಣರಲ್ಲಿ ಮೂರನೇ ವರ್ಗ-ಉದಾ ಮಟ್ಟು ಬ್ರಾಹ್ಮಣರು.

[21] ಸಾಮಾನ್ಯ ಶಕೆ ಪೂರ್ವದಲ್ಲಿ ಬ್ರಾಹ್ಮಣರು ಸ್ಥಾನಿಕರಾಗಿ ಅಡಳಿತ ದೃಷ್ಟಿಯಿಂದ ವಲಸೆ ಬಂದವರು. ಆದರೆ ಬ್ರಾಹ್ಮಣರನ್ನು ನೆಲೆ ನಿಲ್ಲಿಸಿದ ರಾಜನ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಸಾಮಾನ್ಯ ಶಕೆ 4ನೇ ಶತಮಾನ ಕದಂಬ ಮಯೂರ ಶರ್ಮ? 11ನೇ ಶತಮಾನದ ಹಂಗಳದ ಮಯೂರ ಶರ್ಮ.? ಒಟ್ಟಾರೆ ಪ್ರಭುತ್ವದ ಒತ್ತಾಸೆಯಿಂದ ಬ್ರಾಹ್ಮಣರು ವಲಸೆ ಬಂದು ವಾಸ್ತವ್ಯ ಹೂಡಿರುವುದು ಸ್ಪಷ್ಟ.

[22] ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ 2005 ಪುಟ 54. ಎಂ.ಎಸ್.ಎ.ಶರ್ಮ, ಪುಟ 44.

[23] 'ಪರಶುರಾಮನ ಸೃಷ್ಟಿ'-ಪರಶುರಾಮ ಸೃಷ್ಟಿಯೇ ತುಳುನಾಡಿನ ಆರಂಭವೇ? ಸಾಂಪ್ರದಾಯಿಕ ಚರಿತ್ರೆ? ಪರಶುರಾಮ ವಲಸೆ ಬಂದ ಬ್ರಾಹ್ಮಣರ ಪರವೇ? ಶೂದ್ರ ಬ್ರಾಹ್ಮಣರ ಪರವೇ? ಪರಶುರಾಮನಿಂದ ದೀಕ್ಷೆ ಪಡೆದವರು ಬೆಳೆಯಲಿಲ್ಲ ಯಾಕೆ?

[24] ಗಣಪತಿ ರಾವ್ ಐಗಳ್, ಪೊಳಲಿ ಶೀನಪ್ಪ ಹೆಗ್ಡೆಯವರು ಲಭ್ಯ ಗ್ರಾಮ ಪದ್ಧತಿಯ ಪತ್ರಗಳಿಂದ, ಬಿ.ಎ ಸಾಲೆತ್ತೂರರು ಪರಶುರಾಮ ಸೃಷ್ಟಿಯ ವಿಭಿನ್ನ ಕಥಾವಳಿಗಳಿಂದ ಗುಜರಾತಿನಿಂದ ಕೇರಳದ ವರೆಗೆ ಭೂಮಿ ಹೇಗೆ ಸೃಷ್ಟಿಸಲ್ಪಟ್ಟಿದೆ ಹಾಗೂ ಬ್ರಾಹ್ಮಣರ ಪ್ರಾಬಲ್ಯದ ಬಗ್ಗೆ ಚರ್ಚಿಸಿದ್ದಾರೆ.

[25] ಎಂ.ಚಂದ್ರಪೂಜಾರಿ, ಸಂಶೋಧನೆ ಏನು? ಯಾಕೆ? ಹೇಗೆ? ಹಂಪಿ. ವಿ.ವಿ ಪ್ರಸಾರಾಂಗ ಪುಟ 130-131.

[26] ಕೇಶವನ್ ವೇಳುತಾಟ್ ದ, ಅರ್ಲಿ ಮೀಡಿವಲ್ ಇನ್ ಸೌತ್ ಇಂಡಿಯಾ, ಒಕ್ಸಪರ್ಡ ಯುನಿವರ್ಸಿಟಿ ಪ್ರೆಸ್ ನ್ಯೂದಿಲ್ಲಿ: 2009, ಪುಟಗಳು 86-87.

[27] ಭಾರ್ಗವ ಟ್ರಸ್ಟ್ ಪ್ರಕಟಿತ ಸ್ಮರಣ ಸಂಚಿಕೆ, ಭಾರ್ಗವರಾಮ, ಪುಟಗಳು 9-11.

[28] ಕೇಶವನ್ ವೇಳ್ತಾಟ್, ಆರ್ಯ ಬ್ರಾಹ್ಮಣ ಸೆಟಲ್ಮೆಂಟ್ ಒಫ್ ಎನಿಸಿಯಂಟ್ ಕೇರಳ ಕ್ಯಾಲಿಕಟ್ ವಿ.ವಿ1974, ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005 ಪುಟ 12.

[29] ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಉಡುಪಿ; 1975.

[30] ಎಂ.ಚಂದ್ರಪೂಜಾರಿ, ಸಂಶೋಧನೆ, ಏನು? ಏಕೆ? ಹೇಗೆ? ಹಂಪಿ. ವಿ.ವಿ ಪ್ರಸಾರಾಂಗ ಪುಟಗಳು 130-131.

[31] ಉಪ್ಪಂಗಳ ರಾಮಭಟ್ಟ, ವೇಲಾಪುರ ಮಹಾತ್ಮೆ, 2004-ಉಡುಪಿ ಪುಟಗಳು 28-29. ವಾಸುದೇವನ್.ಸಿ, ದಿ ಕೊರಗಾಸ್-ದಿ ಪರ್ ಗಾಟನ್‌ಲಾಟ್ ದಿ ಪ್ರಿಮಿಟಿವ್ ಟ್ರೈಬ್ ಆಫ್ ತುಳುನಾಡು, ತ್ರಿಚೂರ್ 1998.

[32] ತುಳುನಾಡಿನ ಶಾಸನಗಳಲ್ಲಿ ಈ ಬಗ್ಗೆ ಬಹಳಷ್ಟು ಸಮರ್ಥನೆಗಳು ದೊರೆಯುತ್ತವೆ.

[33] ಬುಖಾನನ್ ಫ್ರಾನ್ಸಿಸ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್, 1807. ಪುಟಗಳು 213-214.

[34] ಬುಖಾನನ್ ಫ್ರಾನ್ಸಿಸ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್ 1988 ನ್ಯೂ ಪ್ರಿಂಟ್, ಪುಟ 31.

[35] ಪರಶುರಾಮ ಐತಿಹ್ಯ-ಪರಶುರಾಮನು ಕ್ಷತ್ರೀಯ ಸಂಹಾರದ ನಂತರ ತನ್ನ ಅಧಿಕಾರಕ್ಕೆ ಒಳಪಟ್ಟ ಭೂಮಿಯನ್ನು ತಾನೊಬ್ಬ ಬ್ರಾಹ್ಮಣ, ಈ ಭೂಮಿಯನ್ನಿಟ್ಟುಕೊಂಡು ತಾನೇನು ಮಾಡಲಿ ಎಂದು ಅಲೋಚಿಸಿ ಕಶ್ಯಪ ಪ್ರಜಾಪತಿಗಳನ್ನು ಕರೆದು ತನ್ನ ಆಧೀನದಲ್ಲಿರುವ ಭೂಪ್ರದೇಶವನ್ನೆಲ್ಲ ಧಾರಾದತ್ತಪೂರ್ವಕವಾಗಿ ಸಮರ್ಪಿಸುತ್ತಾರೆ. ಆದ್ದರಿಂದಲೇ ಈ ಭೂಮಿಗೆ ಕಾಶ್ಯಪಿ ಎಂಬ ಹೆಸರು ನಂತರದ ದಿನಗಳಲ್ಲಿ ಸಂಪ್ರಾಪ್ತವಾಯಿತು. ಬ್ರಾಹ್ಮಣನಾದರೂ ಬ್ರಾಹ್ಮಣ್ಯಕ್ಕೆ ಸಂಬಂಧಪಟ್ಟ ಕರ್ಮಗಳಲ್ಲಿ ತಾನು ಪೂರ್ಣವಾಗಿ ತೊಡಗಿಸಿಕೊಂಡಿಲ್ಲ ಎಂಬ ಅಸಮಾಧಾನ ಭಾರ್ಗವರನ್ನು ಮಹೇಂದ್ರಗಿರಿಯಲ್ಲಿ ತಪಶ್ಚರ್ಯೆಯಲ್ಲಿ ನಿರತವಾಗಿಸಿತು. ಈಗಾಗಲೇ ಅವರ ಯೋಗ್ಯತೆಗೆ ಶರಣಾಗಿ ಅಗಣಿತ ಸಂಖ್ಯೆಯಲ್ಲಿ ಅನುವರ್ತಿಗಳಾಗಿದ್ದರು. ಇದ್ದಕ್ಕಿದಂತೆ ಪರಶುರಾಮರಿಗೆ ಮನಸ್ಸಿನಲ್ಲೊಂದು ಆಲೋಚನೆ ಸುಳಿಯಿತು. ತಾನು ತಪಸ್ಸು ಮಾಡುತ್ತಿರುವುದು ಕಶ್ಯಪರಿಗೆ ದಾನ ಕೊಟ್ಟ ಭೂಭಾಗದಲ್ಲಿ, ಯಾವುದನ್ನು ತನ್ನದಲ್ಲವೆಂದು ತ್ಯಾಗ ಮಾಡಿದ್ದೆನೋ ಅದನ್ನು ಪುನಃ ವಿನಿಯೋಗಿಸಿದರೆ ದತ್ತಾಪಹಾರ ದೋಷ ತನ್ನನ್ನು ಕಾಡುತ್ತದೆ ಎಂದು ಸತ್ಯವನ್ನು ಕಂಡುಕೊಂಡ ಪರಶುರಾಮರು, ತನ್ನ ಉಪಯೋಗಕ್ಕಾಗಿ ಭೂಪ್ರದೇಶವೊಂದರ ಅಗತ್ಯವನ್ನು ಮನಗಂಡರು. ಸಮುದ್ರರಾಜನಲ್ಲಿ ಭೂಮಿಯನ್ನು ಕೇಳಿದಾಗ ಹಿಂದೆ ಸರಿಯುವುದಕ್ಕೆ ಒಲ್ಲದ ಸಮುದ್ರರಾಜನ

ಬಗ್ಗೆ ಅಸ್ತ್ರಪ್ರಯೋಗದ ಕುರಿತು ಪ್ರವೃತ್ತರಾಗುತ್ತಾರೆ. ಯಾವ ಅಸ್ತ್ರ-ಶಸ್ತ್ರಗಳು ತನಗೆ ಬೇಡವೆಂದು ಬದಿಗಿಟ್ಟಿದ್ದರೂ ಅಂತಹ ಪರಶುರಾಮ ತನ್ನ ಕಾರ್ಯಸಾಧನೆಯ ಲಕ್ಷ್ಯದಿಂದ ಅಸ್ತ್ರ ಪ್ರಯೋಗಕ್ಕೆ ಅನುವಾಗುತ್ತಾರೆ. ಪರಶುರಾಮರ ದಿವ್ಯ ತೇಜಸ್ಸಿಗೆ ಹೆದರಿದ ಸಮುದ್ರರಾಜ ಶರಣಾಗುತ್ತಾನೆ. ಅಪರಿಮಿತವಾದ ಜಲರಾಶಿ ಹಿಂದೆ ಸರಿಯುವುದಕ್ಕೆ ಒಂದು ಮಾನದಂಡ ಬೇಡವೇ? ಹಿಂದೆ ಸರಿಯುವುದಕ್ಕೆ ಸಿದ್ಧನಿದ್ದೇನೆ, ನಿಮಗಾಗಿ ಭೂಪ್ರದೇಶವೊಂದರ ನಿರ್ಮಾಣಕ್ಕಾಗಿ ನೀವೆ ಗಡಿಯನ್ನು ಗುರುತಿಸಿರಿ. ನೀರಿನಡಿಯಲ್ಲಿರುವ ಪಾತಾಳಲೋಕ ಭೂಪ್ರದೇಶವಾಗಿ ನನ್ನ ಪ್ರಾಮಾಣಿಕ ಪ್ರಯತ್ನದಿಂದ ನಿಮ್ಮ ಯೋಗ್ಯತೆಗೆ ಶರಣಾಗಿ ನಾನು ಹಿಂದೆ ಸರಿಯುವುದರ ಮೂಲಕ ಕೊಡಲ್ಪಡುತ್ತದೆ ಎಂದು ಮರುನುಡಿದಾಗ ಅಸ್ತ್ರವನ್ನು ಪರಶುರಾಮರು ಉಪಸಂಹಾರಗೊಳಿಸುತ್ತಾರೆ. ಒಡನೆಯೇ ತಾನು ಯಜ್ಞದ ಮೂಲಕ ದೇವತೆಗಳಿಗೆ ಅವಿರ್ಭಾಗವನ್ನು ಸಮರ್ಪಿಸುತ್ತಿದ್ದ ಸ್ರುವವನ್ನು (ಸಟ್ಟುಗದಂತಹ ತುಪ್ಪ ಹಾಕುವ ಸಾಧನ) ಎದುರಿಗಿದ್ದ ಶರಧಿಗೆ ಎಸೆಯುತ್ತಾರೆ. ಸ್ರುವ ಬಿದ್ದಷ್ಟು ದೂರ ಸಮುದ್ರವು ಹಿಂದೆ ಸರಿದು ಜಲಪ್ರದೇಶವು ನೆಲ ಪ್ರದೇಶವಾಗಿ ಪರಿವರ್ತನೆಯಾಯಿತು. ಈ ರೀತಿ ಪರಿವರ್ತನೆಯಾದ ಭೂಮಿಯನ್ನು ತನ್ನ ಅನುಯಾಯಿಗಳಿಗೆ ಪರಶುರಾಮನು ದಾನ ರೂಪದಲ್ಲಿ ಕೊಡುತ್ತಾನೆ.

1. ಭಾರ್ಗವ ರಾಮ-2011 ಭಾರ್ಗವ ಟ್ರಸ್ಟ್ ಪ್ರಕಟಿತ ಸ್ಮರಣ ಸಂಚಿಕೆ

2. ಕೇರಳ ಚರಿತ್ರೆಯಲ್ಲಿ ಉಲ್ಲೇಖಿಸಿದಂತೆ ಗೋಕರ್ಣದಿಂದ ಬ್ರಹ್ಮಾವರದ ಭದ್ರಗಿರಿಯ ವರೆಗೆ ಹವ್ಯಕವಾದರೆ, ಭದ್ರಗಿರಿಯಿಂದ ಕೇರಳದ ಕಾಂಜಗಾಡ್ ವರೆಗಿನ ಪ್ರದೇಶವು ತೌಳವವಾಗಿ, ಉಳಿದ ಭಾಗವು ಮಲೆಯಾಳವೆಂದು ಪರಿಗಣಿತವಾಯಿತು. ಪರಶುರಾಮ ತನ್ನ ಅನುಯಾಯಿಗಳಿಗೆ ಹನ್ನೊಂದು ಶಿವಾಲಯಗಳನ್ನು, ಒಂಬತ್ತು ದುರ್ಗಾಲಯಗಳನ್ನು, ಹನ್ನೆರಡು ವೈಷ್ಣವ ಕ್ಷೇತ್ರಗಳನ್ನು, ಹದಿಮೂರು ಶಾಸ್ತ್ರ ಬ್ರಹ್ಮಕ್ಷೇತ್ರಗಳನ್ನು ಜೊತೆಗೆ ಆರು ಸುಬ್ರಮಣ್ಯ, ಎಂಟು ಗಣಪತಿ ಕ್ಷೇತ್ರಗಳನ್ನು ನಿರ್ಮಿಸಿದ್ದರೆಂದು ಇತಿಹಾಸದಲ್ಲಿ ಹೇಳಲ್ಪಡುತ್ತದೆ.

[36] ಪುರುಷೋತ್ತಮ ಬಿಳಿಮಲೆಯವರ ಪ್ರಕಾರ ಜೀವನಾವರ್ತನ ಮತ್ತು ವಾರ್ಷಿಕಾವರ್ತನದ ಆಚರಣೆಗಳಲ್ಲಿ ಬಳಸಲಾಗುವ ವಾದ್ಯ, ಸಮ್ಮೇಳ, ಡೋಲು ಮತ್ತಿತರ ವಾದನ ಸಾಮಾಗ್ರಿಗಳನ್ನು ಗಮನಿಸಬೇಕು.ಇವು ನಿಯತವಾದ ಶಬ್ದವನ್ನುಂಟು ಮಾಡುವುದರ ಮೂಲಕ ಪ್ರಕೃತಿಯ ಮಧ್ಯೆ ಮಾನವನಿಗೆ ಅಗತ್ಯವಾದ ಒಂದು ಬಗೆಯ ಅಮೂರ್ತವಾದ ಮತ್ತು ಅಲೌಕಿಕವಾದ ವಾತವರಣವನ್ನು ಉಂಟುಮಾಡುತ್ತದೆ.ಆಚರಣ ಸೀಮೆಯನ್ನು ನಿರ್ಮಿಸುತ್ತದೆ.ಇಂತಹ ಸ್ವನಿರ್ಮಿತ ವಿನ್ಯಾಸಗಳೊಳಗೆ ಮಾತ್ರ ಮಾನವ ಕ್ರಿಯಾಶೀಲನಾಗುತ್ತಾನೆ. ಕೊರಗ ಜನಾಂಗದಲ್ಲಿ ಉಪಲಬ್ಧವಿರುವ ಕತೆಯೊಂದರ ಪ್ರಕಾರ . ಸೃಷ್ಟಿಯ ಆದಿಯಲ್ಲಿ ನೀರೆ ತುಂಬಿದ್ದು, ಅಲ್ಲಿ ಒಂದು ಡೋಲು ಕಾಣಿಸಿಕೊಂಡಿತು. ಸಾಂಪ್ರದಾಯಿಕ ಚರಿತ್ರೆಯಲ್ಲಿ ಉಪಲಬ್ಧವಿರುವ ಪರಶುರಾಮನ ಕಥೆಯ ಪ್ರಕಾರ ಎಲ್ಲೆಲ್ಲೂ ನೀರು ತುಂಬಿದ ಜಾಗವನ್ನು ಕೊಡಲಿ ಎಸೆದು ದೂರ ಮಾಡಿ ಭೂಭಾಗವನ್ನು ಪರಿವರ್ತಿಸಿದರ ಸಂಕೇತವೇನೆಂದರೆ, ಅವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸುವ ಸಂಕೇತ ಅವ್ಯವಸ್ಥಿತವಾಗಿದ್ದ ತುಳುನಾಡು-ಬ್ರಾಹ್ಮಣರ ವಲಸೆಯಿಂದ ವ್ಯವಸ್ಥಿತಗೊಂಡಿದೆ ಎಂಬುವುದು ಇಲ್ಲಿನ ವಾದ. ಆದರೆ ಪರಶುರಾಮ ಸೃಷ್ಟಿಯ ಪ್ರಕಾರ ಬ್ರಾಹ್ಮಣರು ಪರಶುರಾಮನಿಂದ ಭೂಮಿಯನ್ನು ದಾನವಾಗಿ ಪಡೆದು ಯಜಮಾನಿಕೆಯನ್ನು ಸ್ಥಾಪಿಸಿದರೇ ಹೊರತು ವಲಸೆ ನೆಲೆಯಿಂದ ಅಲ್ಲ.

[37] ಇನ್ನಾ ಮುದ್ದಾಣು ಶ್ರೀ ಮಹಾಲಿಂಗೇಶ್ವರ, ಮುಂಡ್ಕೂರು ಶ್ರೀ ದುರ್ಗಾಪರಮೇಶ್ವರಿ, ಬಾರಕೂರು, ಉಡುಪಿ, ಬೆಳ್ಮಣ್ಣು ದುರ್ಗಾಪರಮೇಶ್ವರಿ, ಕಂದಾವರ ಕ್ಷೇತ್ರ ಮಹಾತ್ಮೆಗಳು ಇತ್ಯಾದಿ.

[38] ಪರಾಜಿತರ್. ಎಫ್. ಇ ಎನಿಶಿಯಂಟ್ ಇಂಡಿಯನ್ ಹಿಸ್ಟಾರಿಕಲ್ ಟ್ರೇಡಿಶನ್, ದಿಲ್ಲಿ ನ್ಯೂಪ್ರಿಂಟ್ 1997. ಪುಟಗಳು 2-3, 9-11, 61-75.

[39] ನಾಗೇಂದ್ರ ರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, ಪುಟ 45.

[40] ನಾಗೇಂದ್ರ ರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, ಪುಟಗಳು 191-197.

[41] ನಾಗೇಂದ್ರರಾವ್., ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟಗಳು 63-95.

[42] ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪುಟಗಳು 37-40.

[43] ಸೈಯದ್ ಅಬ್ದುಲ್ ಬಾರಿ, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ, ಪುಟಗಳು 72-79.

[44] ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, ಪುಟಗಳು 199-205.

[45] ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, ಪುಟಗಳು 191-197.

[46] ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟ 65.

[47] ಪಿ.ಎನ್. ನರಸಿಂಹಮೂರ್ತಿ ಅಧ್ಯಯನ ಮಾಡಿದ ಶಾಸನಗಳ ಆಧಾರದಲ್ಲಿ ಮಾಹಿತಿಯನ್ನು ಕಲೆ ಹಾಕಿದ್ದನ್ನು ನಾಗೇಂದ್ರರಾವ್ ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

48 ಮಹಾಕಾಳಿ ಲಕ್ಷ್ಮಿಜನಾರ್ಧನ ದೇವಸ್ಥಾನವನ್ನು ಕೇಂದ್ರವಾಗಿ, ಪ್ರಸ್ತುತ ಅಂಬಲಪಾಡಿಯ ಬಳ್ಳಾಲರೆಂಬ ನಾಮದೇಯದೊಂದಿಗೆ ಅಧಿಕಾರ ಮುಂದುವರೆಸುತ್ತಿದ್ದಾರೆ. ಡಾ.ನಿ.ಬಿ ವಿಜಯ ಬಳ್ಳಾಲ್ ಈಗಿನ ಯಜಮಾನರು.

49 ಸಿ.ಆರ್ ಬಳ್ಳಾಲ್, ಬ್ರಾಹ್ಮಣ ಬಲ್ಲಾಳಾಸ್ ಆಫ್ ದಕ್ಷಿಣ ಕನ್ನಡ-2013, ಪುಟಗಳು 97-102.

50 ಬಿ. ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ, ಬ್ರಹ್ಮಾವರ, 1988

51 ಬಿ.ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ, ಬ್ರಹ್ಮಾವರ, 1988 ಪುಟಗಳು 6-7.

52 ಬಿ. ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ, ಬ್ರಹ್ಮಾವರ, 1988 ಪುಟ 18.

53 ಉಮಾನಾಥ ಶೆಣೈಯವರ ಶಾಸನಗಳ ಅಧ್ಯಯನವನ್ನು ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾದಲ್ಲಿ ಆಕರವಾಗಿ ಬಳಸಿಕೊಂಡಿದ್ದಾರೆ.

54 ಸಿ.ಆರ್ ಬಳ್ಳಾಲ್, ಬ್ರಾಹ್ಮಣ ಬಲ್ಲಾಳಾಸ್ ಆಫ್ ದಕ್ಷಿಣ ಕನ್ನಡ, 2013, ಪುಟಗಳು 108-109.

55 ಅಂಟಿಕ್ವಿಟ್ಟಿಸ್ ಅಫ್ ಸೌತ್ ಕೆನರಾ, ಪುಟ 21 ಎಫ್, ಎಫ್. ಗುರುರಾಜ ಭಟ್, ಅಲುಪರಸರು, ಬೆಂಗಳೂರು 1976, ಪುಟಗಳು 33-34.

56 ಸೌ.ಇ.ಇ. ಸಂ.7 ನಂ.270, 288, 296, 297, 298, 299, 303, 319, 344.
ಸೌ.ಇ.ಇ. ಸಂ.9 ಭಾಗ.2 ನಂ.446, 452, 511, 517.

57 ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟ 83.

58 ಬಿ.ಎ ಸಾಲೆತ್ತೂರ್, ದ ಜರ್ನಲ್ ಒಪ್ ಬಾಂಬೇ ಯುನಿವರ್ಸಿಟಿ ಸಂ.7 ಭಾಗ 1, ಪುಟಗಳು 1-65, 11-1 1934ರ ನವಯುಗ ಪರ್ಯಾಯ ಸಂಚಿಕೆ 2-4.

59 ಭಾರ್ಗವ ರಾಮ-ಪುಟ 23-24. ಇವರಲ್ಲಿ ಮಡ್ಮಣ್ಣಾಯರು ಗ್ರಾಮ ಮುಖಂಡರೆನಿಸಿ, ಧಾರ್ಮಿಕ ಕಾರ್ಯಗಳ ನೇತೃತ್ವ ವಹಿಸಿಕೊಂಡಿದ್ದರು. ಅವರಿಗೆ ಮುಂಡ್ಕೂರು ದುರ್ಗಾಪರಮೇಶ್ವರೀ, ಮುದ್ದಾಣು ಮಹಾಲಿಂಗೇಶ್ವರ ದೇವಾಲಯಗಳಲ್ಲಿ ಪವಿತ್ರಪಾಣಿಯೆಂದು ಗೌರವದ ಪೀಠ ಸಲ್ಲುವುದರ ಜೊತೆಗೆ ಸಭಾ ಮರ್ಯಾದೆಗಳು ಕೂಡಾ ನೀಡಲ್ಪಡುತ್ತಿದ್ದವು.

60 ವಸಂತ ಮಾಧವ, ಮೂಲ್ಕಿಯ ಇತಿಹಾಸ, ಪುಟಗಳು 38-39. ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ-2005, ಪುಟ 73.

61 ಚಂದ್ರಹಾಸ ಕಣಂತೂರ್ (ಸಂ) ಧರ್ಮರಸು ತೋಡಕುಕ್ಕಿನಾರ್ ಸ್ಮರಣಸಂಚಿಕೆ, ಪೊಯ್ಯತ್ತಾಯ ಕುಟುಂಬದ ವಂಶವೃಕ್ಷದ ಮಾಹಿತಿಗಳನ್ನು ಉಲ್ಲೇಖಿಸಿದ್ದಾರೆ. ಪೊಯ್ಯತ್ತಬೈಲು ಬೀಡಿನಲ್ಲಿ ಈ ವಲಸಿಗ ಬ್ರಾಹ್ಮಣರ ವಾಸ್ತವ್ಯ ಇದೆ.

62 ಗಣಪತಿರಾವ್ ಐಗಳ್ ಎಂ.ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 1923, ಪುಟ 413.

63 ಗಣಪತಿರಾವ್ ಐಗಳ್ ಎಂ.ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 1923, ಪುಟ 412.

64 ಎ.ಆರ್.ಎಸ್,ಐ,ಇ ನಂ 482

65 ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ-2005, ನರಸಿಂಹ ಮೂರ್ತಿಯವರ ಅಧ್ಯಯನ ಆಧಾರಿತ

66 ಗಣಪತಿರಾವ್ ಐಗಳ್ ಎಂ.ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 1923, 396.

67 ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟಗಳು 88-89.

68 ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟಗಳು 89-90.

69 ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟ 91.

70 ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005, ಪುಟಗಳು 91-92.

71 ಸೌ, ಇ, ಇ ಸಂ.7, 270, 288, 296,298, 299, 303.

72 ಎಂ.ಎಸ್. ಎ. ಶರ್ಮ, ಉಡುಪಿ ಕ್ಷೇತ್ರದ ನೈಜ್ಯ ಚಿತ್ರ ಮತ್ತು ಚಾರಿತ್ರಿಕ ಹಿನ್ನಲೆ, 1969 ಮಂಗಳೂರು ಪುಟ 14-17.

73 ನಾಗೇಂದ್ರರಾವ್ ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ-2005 ಪುಟ 42; ರೋಮಿಲಾ ಥಾಪರ್, ಸಿಚುವೆಟಿಂಗ್ ಇಂಡಿಯನ್ ಹಿಸ್ಟರಿ 1986, ಪುಟ 380.

74 ಎಸ್.ಕೆ ರಾಮಚಂದ್ರರಾವ್, ಭಾರತೀಯ ದೇವಾಲಯಗಳ ಜಾನಪದ ಮೂಲ, ಬೆಂಗಳೂರು, 1981 ಪುಟಗಳು 27-28; ಭಾರ್ಗವರಾಮ ಪುಟ-11.

75 ಎಂ.ಎಸ್. ಎ. ಶರ್ಮ, ಉಡುಪಿ ಕ್ಷೇತ್ರದ ನೈಜ್ಯ ಚಿತ್ರ ಮತ್ತು ಚಾರಿತ್ರಿಕ ಹಿನ್ನಲೆ, 1969 ಮಂಗಳೂರು, ಪುಟ 15.

76 ಡಿ.ಡಿ ಕೊಸಂಬಿ, ಎನ್ ಇನ್‌ಟ್ರಡಕ್ಷನ್ ಟು ಡೆಕ್ಕಾನ್-ಬಾಂಬೆ ಎರಡನೇ ಅವೃತ್ತಿ, 1975 ಪುಟಗಳು 328-329.

77 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಪುಟ 51-52.

[78] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801–1970 ಪುಟಗಳು 80–81.

[79] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801–1970 ಪುಟಗಳು 80–81.

ತುಳುನಾಡಿನ ಸಂದರ್ಭದಲ್ಲಿ ಇನ್ನಾ ಮುದ್ದಾಣು ಮಹಾಲಿಂಗೇಶ್ವರ, ಕಲ್ಲಮುಂಡ್ಕೂರು ಶ್ರೀ ದುರ್ಗಾಪರಮೇಶ್ವರಿ ಮುಂತಾದ ತುಳುನಾಡಿನ ಹೆಚ್ಚಿನ ಶಿಷ್ಟ ದೇವಸ್ಥಾನಗಳು ವಲಸೆಯ ನಂತರದಲ್ಲಿ ಈ ಬಗೆಯಿಂದ ಪ್ರತಿಷ್ಠಾಪನೆಗೊಂಡಿರುವುಗಳಾಗಿವೆ. ಗೋಪಾಲಕೃಷ್ಣ ಪೈ, ಸ್ವಪ್ನಸಾರಸತ್ವ, ಗೋವಾದಿಂದ ಗೌಡ, ಗೌಡ ಸಾರಸ್ವತ ಬ್ರಾಹ್ಮಣರ ವಲಸೆಯ ಕಥಾನಕಗಳನ್ನು ಚಾರಿತ್ರಿಕ ದೃಷ್ಟಿಯಿಂದ ಹೆಣೆದಿದ್ದಾರೆ. ಉಳ್ಳಾಲದ ಲಕ್ಷ್ಮೀನರಸಿಂಹ, ಮಂಗಳೂರಿನ ವೆಂಕಟರಮಣ, ಮಂಜೇಶ್ವರ ಮುಂತಾದವುಗಳು ಪೋರ್ಚುಗೀಸರ ದೌರ್ಜನ್ಯಕ್ಕೆ ಒಳಗಾದ ನಂತರದ ಕಾಲಘಟ್ಟದಲ್ಲಿ ಗೋವಾದಿಂದ ವಲಸೆ ಬಂದು ಈ ಪ್ರದೇಶಗಳಲ್ಲಿ ದೇವಸ್ಥಾನಗಳನ್ನು ಸ್ಥಾಪಿಸಿರುವ ಸಾಧ್ಯತೆಗಳಿವೆ.

[80] ಭಾರ್ಗವ ಟ್ರಸ್ಟ್ ಸ್ಮರಣ ಸಂಚಿಕೆ, ಭಾರ್ಗವರಾಮ, ಪರಶುರಾಮ ಸೃಷ್ಟಿಯ ಐತಿಹ್ಯ ಬಗ್ಗೆ ಉಲ್ಲೇಖ ನೀಡಿದೆ.

[81] ಬಿ.ಎ ಸಾಲೆತ್ತೂರು, ಎನ್ಶ್ಯಂಟ್ ಕರ್ನಾಟಕ; ಹಿಸ್ಟರಿ ಆಫ್ ತುಳುವ, ಓರಿಯೆಂಟ್ ಬುಕ್ ಏಜೆನ್ಸಿ ಪೂನಾ 1936. ಗುರುರಾಜಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಉಡುಪಿ; 1975,

[82] ರೋಮಿಲಾ ಥಾಪರ್, ಸಿಚುವೇಟಿಂಗ್ ಇಂಡಿಯನ್ ಹಿಸ್ಟ್ರಿ, ಪುಟ 365.

[83] ಬಿ.ಎ ಸಾಲೆತ್ತೂರ್, ಯೆನ್ಶಿಯಂಟ್ ಕರ್ನಾಟಕ ಹಿಸ್ಟರಿ ಆಫ್ ತುಳುವ, ಓರಿಯೆಂಟ್ ಬುಕ್ ಎಜೆನ್ಸಿ ಪೂನಾ 1936 ಪುಟಗಳು 341–347.

[84] ಬಿ.ಎ.ಸಾಲೆತ್ತೂರ್, ಅದೇ ಪುಟಗಳು 341–347.

[85] ಗ್ಲೆಗ್, ಮುನ್ರೊನ ಜೀವನಚರಿತ್ರೆ, ಪುಟ 59. ಮುನ್ರೊನ ಪತ್ರಗಳಲ್ಲಿನ ಅನಿಸಿಕೆಗಳನ್ನು ಈ ಗ್ರಂಥದಿಂದ ಆಯ್ದುಕೊಳ್ಳಬಹುದು.

[86] ನಾಗೇಂದ್ರರಾವ್, ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ–2005, ಪುಟಗಳು 55–57.

[87] ಗುರುರಾಜ ಭಟ್, 1975, ಪುಟಗಳು 160–170. ಶೈಲಾ ಟಿ. ವರ್ಮ, ಪುಟಗಳು 145–149. ಟಿ. ಪಿ ವಿಜಯ್, ಜಮ್ಮಾ ಸಿಸ್ಟಮ್ ಇನ್ ಕೊಡಗು ಅಪ್ರಕಟಿತ ಸಂಶೋಧನಾ ಪ್ರಬಂಧ ಮಂ.ವಿ.ವಿ) ಕೊಡಗಿನಲ್ಲಿ ಜೆಮ್ಮಿ, ಜಮ್ಮಾ ಭೂಒಡೆತನವನ್ನು ಸೂಚಿಸುವ ಪದವಾಗಿದೆ.

[88] ಅಳಿಯಸಂತಾನಕಟ್ಟು ಕಟ್ಟು–ಕಟ್ಟಳೆಯ ರೂಪುರೇಷೆಗಳು ಬ್ರಾಹ್ಮಣರು ಈ ಪ್ರದೇಶದಲ್ಲಿ ವ್ಯವಸ್ಥಿತವಾಗಿ ವಾಸ್ತವ್ಯ ಹೂಡಿದ ನಂತರದ ಸಂದರ್ಭದಲ್ಲಿ ರೂಪುಗೊಂಡಿರುವ ಸಾಧ್ಯತೆಗಳಿರಬಹುದೆಂಬುವುದು ಚರಿತ್ರಕಾರರ ಅಭಿಪ್ರಾಯ.

[89] ತುಳುನಾಡಿನ ಆಯಾಯ ಊರಿನ ಉತ್ಸವ ಅಥವಾ ಅಯನದ ದಿನಗಳಂತಹ ನಿಯಮಿತ ದಿನಗಳಲ್ಲಿ ದೇವಾಲಯಗಳಲ್ಲಿ ಆಗಮ ತತ್ವಗಳಿಗೆ ಅನುಸಾರವಾಗಿ ಧಾರ್ಮಿಕ ವಿಧಿ–ವಿಧಾನಗಳ ಆಚರಣೆ ನಡೆಯುವಂತೆ ನೋಡಿಕೊಳ್ಳುವ ವ್ಯಕ್ತಿಯನ್ನು ತಂತ್ರಿ ಎಂದು ಕರೆಯಲಾಗುತ್ತದೆ. ತಂತ್ರಿ ಬ್ರಾಹ್ಮಣರ ಪ್ರತಿನಿಧಿಯಾಗಿದ್ದು, ಊರಿನಲ್ಲಿ ಜರಗುವ ಎಲ್ಲಾ ಕಾರ್ಯಕ್ರಮಗಳ ಮಾರ್ಗದರ್ಶಕ ಇಲ್ಲವೇ ತಂತ್ರಗಾರನಾಗಿರುತ್ತಾನೆ. ಇದನ್ನು ಅವಲೋಕಿಸಿದಾಗ ಬ್ರಾಹ್ಮಣರು ಈ ಪ್ರದೇಶದ ಮೇಲೆ ಹೇಗೆ ಹಿಡಿತವನ್ನಿಟ್ಟುಕೊಂಡರು ಎಂಬುವುದು ಮುಖ್ಯವಾಗುತ್ತದೆ. ಒಟ್ಟಿನಲ್ಲಿ ತಂತ್ರಿ ಅವನಿಗೆ ಸಂಬಂಧಿಸಿದ ಊರಿನ ಇಲ್ಲವೇ ಆಡಳಿತ ಘಟಕಗಳ ಸಾಮಾಜಿಕ, ಧಾರ್ಮಿಕ, ಆಡಳಿತಾತ್ಮಕ ವಿಚಾರಗಳಲ್ಲಿ ಮುಖ್ಯನಾಗುತ್ತಾನೆ.

[90] ಶ್ರಿ ಶಶಿಕುಮಾರ್ ಪೊದುವಾಳರೊಂದಿಗಿನ ಸಂದರ್ಶನ ತಾ.9–9–2012, ಅವರ ವಿವೇಚನೆಗೆ ಪೂರಕವಾಗಿ ಬ್ರಾಹ್ಮಣರ ವಾಸ್ತವ್ಯವನ್ನು ಅಧಿಕೃತಗೊಳಿಸಲು ಮಾರ್ಗಪರಂಪರೆ ಬಲಿ ಚಕ್ರವರ್ತಿಯಿಂದ ವಾಮನ ಭೂಮಿ ಪಡೆಯುವ ಕಾರ್ಯಯೋಜನೆಯನ್ನು ರೂಪಿಸಿರಬಹುದು.

[91] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ನಡಿಬೈಲು ಶಂಕರನಾರಯಣ ಭಟ್, ಗ್ರಾಮಕ್ಕೆ ತಂತ್ರಿಯ ಅವಶ್ಯಕತೆ.ತಾ.23–3–2012,

[92] ನಾಗೇಂದ್ರರಾವ್, ಬ್ರಾಹ್ಮಣಾಸ್ ಒಫ್ ಸೌತ್ ಇಂಡಿಯಾ, ಪುಟ 12.

[93] ಹುಬಸಿಗನ ಐತಿಹ್ಯವನ್ನು ವಿಶ್ಲೇಷಿಸಿದ್ದಲ್ಲಿ ತುಳುನಾಡಿನ ಮೂಲನಿವಾಸಿಗಳ ವಾಸ್ತವ್ಯದ ಬಗ್ಗೆ ತಿಳಿದಿಕೊಳ್ಳಬಹುದು.

[94] ಸರ್ವಶ್ರೇಷ್ಠರು, ರಾಜನ ನಂತರದ ಸ್ಥಾನಮಾನಿಗರೆಂದು ಸಮರ್ಥಿಸಲೆಂಬಂತೆ ವೈಧಿಕೇತರ ಸಂಸ್ಕೃತಿ, ವೈದಿಕದ ವ್ಯವಸ್ಥೆಯೊಳಗೆ ಸೇರ್ಪಡೆಗೊಂಡು, ವೈದಿಕತೆಯ ಪೂಜಾ ವಿಧಾನಗಳೊಂದಿಗೆ ಅಧೀನ ಆರ್ಥಿಕತೆಯ ಪೂಜಾ ವ್ಯವಸ್ಥೆಯನ್ನು ಸಮ್ಮಿಳಿತಗೊಳಿಸಿರುವುದು ಬ್ರಾಹ್ಮಣರ ಸರ್ವಶ್ರೇಷ್ಠತೆಗೆ ಒಳ್ಳೆಯ ನಿದರ್ಶನ.

95 ಎಸ್. ಡಿ ಶೆಟ್ಟಿ, ಜೈನಧರ್ಮ, ಒಂದು ಸಾಂಸ್ಕೃತಿಕ ಅಧ್ಯಯನ ಉಡುಪಿ, 2002, ಪುಟ 47. ಎಪಿಗ್ರಾಫಿಕ ಇಂಡಿಯಾ ಭಾಗ 32, ಪುಟ 317.

96 ಎ.ಆರ್.ಎಸ್.ಐ.ಇ ನಂ.ಬಿ 526-1928-1929.

97 ಪಿ.ಎನ್ ನರಸಿಂಹ ಮೂರ್ತಿ, ಹಟ್ಟಿಯಂಗಡಿ ಒಂದು ಸಮೀಕ್ಷೆ 1986, ಪುಟಗಳು 4-5.

98 ನಾರಾಯಣ ಪಿ.ಕೆ, ತೆಂಕನಾಡು, 1947, ಪುಟ 41.

99 ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಉಡುಪಿ; 1975, ಪುಟ 428.

100 ಸೌ.ಇ.ಇ ಸ. 7 ನಂ 225.

101 ಎಸ್. ಡಿ ಶೆಟ್ಟಿ, ಜೈನಧರ್ಮ, ಒಂದು ಸಾಂಸ್ಕೃತಿಕ ಅಧ್ಯಯನ ಉಡುಪಿ, 2002, ಪುಟಗಳು 191-192. ಕಾರ್ಕಳದ ಬೈರರಸರೂ, ಉಳ್ಳಾಲದ, ಪುತ್ತಿಗೆಯ ಚೌಟರೂ, ಸುರಾಲಿನ ತೋಳಹಾರರು, ಬಂಗವಾಡಿಯ ಬಂಗರೂ, ಧರ್ಮಸ್ಥಳದ ಹೆಗ್ಗಡೆಯವರು ಸೋಮನಾಥ, ಮಂಜುನಾಥ, ಮಹಾಲಿಂಗೇಶ್ವರನನ್ನು ತೀರ್ಥಂಕರರ ಜೊತೆಯಲ್ಲಿ ಆರಾಧಿಸಿಕೊಂಡು ಈಗಲೂ ಬರುತ್ತಿದ್ದಾರೆ.

102 ಎಸ್.ಡಿ ಶೆಟ್ಟಿ, ಜೈನಧರ್ಮ-ಒಂದು ಸಾಂಸ್ಕೃತಿಕ ಅಧ್ಯಯನ ಉಡುಪಿ, 2002, ಪುಟ 53.

103 ತುಳು-ಕರ್ನಾಟಕ ಅರಸುಮನೆತನಗಳು-1, ಸಂಪಾದಿತ ಕೃತಿ, ಪ್ರಸಾರಾಂಗ ಕನ್ನಡ ವಿ.ವಿ ಹಂಪಿ 2000.

104 ತುಳು-ಕರ್ನಾಟಕ ಅರಸು ಮನೆತನಗಳು-1, ಸಂಪಾದಿತ ಕೃತಿ, ಪ್ರಸಾರಾಂಗ ಕನ್ನಡ ವಿ.ವಿ ಹಂಪಿ 2000. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಹಲವಾರು ಪ್ರಭಾವಿ ಕೃಷಿ ವರ್ಗ ಕಂದಾಯ ವಸೂಲಿ ಮಾಡುವ ಅಧಿಕಾರಿಗಳಾಗಿ ವಾಸ್ತವ್ಯ ಹೂಡಿರುವುದು-ಮುಂದೆ ಕೃಷಿ ಅಧಿಕಾರದ ರಚನೆಯಲ್ಲಿ ಪ್ರಭಾವಿಗಳಾಗಿ ಬಂಗ, ಅಜಿಲ, ಸಾವಂತ, ಚೌಟ ಮನೆತನಗಳಾಗಿ ರಾಜಕಾರಣದಲ್ಲಿ ಪ್ರಧಾನ ಭೂಮಿಕೆ ವಹಿಸಿದೆ.

105 ಗಣಪತಿರಾವ್ ಐಗಳ್ ಎಂ.ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ 1923, ಪುಟ 263-264.

106 ಸ್ಟರಕ್.ಜೆ, ಮದ್ರಾಸ್ ಡಿಸ್ಟ್ರಿಕ್ ಮ್ಯಾನುವೆಲ್ಸ್ ಸೌತ್ ಕೆನರಾ ಸಂಪುಟ-1 ಮದ್ರಾಸ್ 1894.ಪುಟ 155.

107 ಅಲುಪರ ಚಿಕ್ಕಾಯಿತಾಯಿಯು ಮೂರನೇ ಬಳ್ಳಾಲನ ಪಟ್ಟದರಸಿಯಾಗಿ ಹೊಯ್ಸಳರ ಪ್ರಭಾವಕ್ಕೆ ಒಳಪಟ್ಟಿರುವುದು

108 ಪೊಳಲಿ ಶೀನಪ್ಪ ಹೆಗ್ಡೆ, ದ.ಕ ಜಿಲ್ಲೆಯ ಪ್ರಾಚೀನ ಇತಿಹಾಸ ಮತ್ತು ಭೂತಾಳರಾಯ ಪಾಂಡ್ಯನ ಅಳಿಯಕಟ್ಟು; ಬಾರಹ-ಕನ್ಯಾಪುರ 12 ಮಂದಿ ರಾಜಕುಮಾರಿಯರನ್ನು ಮದುವೆ ಮಾಡಿಸಿ, ತುಳುನಾಡನ್ನು ಎರಡು ರಾಜ್ಯಗಳನ್ನಾಗಿ ವಿಂಗಡಿಸಿ ಅಧಿಕಾರದ ಹಂಚಿಕೆಯಾಗಿರುವ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ.

109 ಕಡವ ಶಂಭುಶರ್ಮ, ತುಳು ದೇಶ ಭಾಷಾ ವಿಚಾರವೂ, ಪುಟಗಳು 58-59.

110 ಒಕ್ಕಲುಗಳು ಆರಾಧಿಸುತ್ತಿದ್ದ ಸರ್ವಚೇತನವಾದಿ ದೈವಗಳಲ್ಲಿ ಕೆಲವೊಂದು ಜೈನ ಸಾಮಂತರ ಪಟ್ಟದ ದೈವಗಳಾಗಿ ಆರಾಧಿಸಲ್ಪಟ್ಟಿರುವುದು ಆ ಕಾಲದ ರಾಜಕಾರಣದಲ್ಲಿ ಪಾಲು ಪಡೆದ ಈ ಎರಡು ವರ್ಗಗಳು ಒಂದು ರೀತಿಯ ಅಲಿಖಿತ ಅಧಿಕಾರ ಒಪ್ಪಂದಗಳನ್ನು ಮಾಡಿದ್ದು ಇತಿಹಾಸ ವಿಶ್ಲೇಷಣೆಗೆ ಒಳಪಡಬೇಕಾದ ವಿಚಾರ.

111 1.ವೇಣೂರಿನಲ್ಲಿ ದೈವ ಆರಾಧನೆ ಕೈ ಬಿಟ್ಟದ್ದಕ್ಕೆ ಜೈನರು ಅನುಭವಿಸಿದ ಶಿಕ್ಷೆಗಳು 2. ತಂಬಿಲ, ಕೋಲ, ನೇಮ, ಆಯನ, ಬಂಡಿ, ಧರ್ಮ ನೇಮಗಳಂತಹ ಆಚರಣೆಗಳನ್ನು ಯಥಾವತ್ತಾಗಿ ಮುಂದುವರೆಸಿರುವುದು.

112 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 166.

113 ಚಿನ್ನಪ್ಪಗೌಡ, ಭೂತಾರಾಧನೆ ಒಂದು ಜಾನಪದೀಯ ಅಧ್ಯಯನ, ಪುಟ 193.

114 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ ಪುಟ 150.

115 ಕೆ.ಚಿನ್ನಪ್ಪಗೌಡ, ಭೂತಾರಾಧನೆ; ಜಾನಪದೀಯ ಅಧ್ಯಯನ, ಪುಟ 195.

116 ಕೆ.ಚಿನ್ನಪ್ಪಗೌಡ, ಭೂತಾರಾಧನೆ; ಜಾನಪದೀಯ ಅಧ್ಯಯನ, ಪುಟಗಳು 195-196.

117 ಧಾರ್ಮಿಕ ದತ್ತಿ ಇಲಾಖೆ ಪತ್ರಗಳು-ಜಿಲ್ಲಾಧಿಕಾರಿಗಳ ಕಛೇರಿ ಮಂಗಳೂರು.

118 ಎಸ್.ಡಿ ಶೆಟ್ಟಿ, ಜೈನಧರ್ಮ, ಒಂದು ಸಾಂಸ್ಕೃತಿಕ ಅಧ್ಯಯನ, ರಾ.ಗೋ.ಪೈ ಸಂಶೋಧನ ಕೇಂದ್ರ, ಉಡುಪಿ 2002 ಪುಟ 55.

119 ಸೌ.ಇ.ಇ ಸಂ.7, ನಂ.243, 341. ಶೈಲಾ ಟಿ.ವರ್ಮ ಪುಟಗಳು 259-260. ತುಳುನಾಡಿನ ಸುಮಾರು 180 ಬಸದಿಗಳು ನಿತ್ಯ ನೈಮಿತ್ಯಕ್ಕಾಗಿ ಭೂಒಡೆತನವನ್ನು ಇಟ್ಟುಕೊಂಡಿದ್ದವು.

120 ಸೌ.ಇ.ಇ ಸಂ.7 ನಂ. 325.

121 ಮೊಘಲರ ಮಾನಸಬ್ ನೀತಿಗಳಂತೆ ತುಳುನಾಡಿನಲ್ಲಿ ಅಳುಗಳ ಸಂಖ್ಯಾಧಾರಿತ ರಾಜಕೀಯಾಧಿಕಾರ ಪ್ರಚಲಿತದಲ್ಲಿತ್ತು. ಉದಾಹರಣೆಗೆ ವಿಟ್ಲ ಎರಡು ಸಾವಿರಾಳ, ಮೋಗರ್ನಾಡು ಸಾವಿರಾಳ, ಇನವಳ್ಳಿ ಸಾವಿರಾಳ.

122 ಕೆ.ಚಿನ್ನಪ್ಪಗೌಡ, ಭೂತಾರಾಧನೆ; ಜಾನಪದೀಯ ಅಧ್ಯಯನ ಪುಟ 195, 207. ಧರ್ಮಸ್ಥಳದಲ್ಲಿ ಅಲ್ಲಿನ ಧರ್ಮದೈವಗಳಿಂದ ದೀಕ್ಷೆಯನ್ನು ಪಡೆದು ಹೆಗ್ಗಡೆಯವರು ಧರ್ಮಾಧಿಕಾರಿಯಾಗಿ ಪಟ್ಟವೇರುವ ಆಚರಣೆಯು ಜರಗುತ್ತದೆ. ನೆಲ್ಯಾಡಿ ಬೀಡಿನ ಧರ್ಮದೇವತೆಗಳು ಹೆಗ್ಗಡೆಯವರನ್ನು ತಮ್ಮ ಪ್ರತಿನಿಧಿ

ಎಂಬುದಾಗಿ ಸ್ವೀಕರಿಸಿ ಮಂಚದಲ್ಲಿ ಕುಳ್ಳಿರಿಸಿ ಶುಭವನ್ನು ಕೋರುತ್ತವೆ. ಪಟ್ಟವೇರುವ ಹೆಗ್ಗಡೆಯವರಿಗೆ ಮಾಡಿಸುವ ಕಲಶಸ್ನಾನ, ಮಂಜುನಾಥ ದೇವಾಲಯದಲ್ಲಿ ಮಾಡುವ ವಿಶೇಷಪೂಜೆ-ಇವು ಹೆಗ್ಗಡೆಯವರನ್ನು ಅಲೌಕಿಕ ವ್ಯಕ್ತಿಯನ್ನಾಗಿ ಮಾಡುವ ಧಾರ್ಮಿಕ ಆಚರಣೆಗಳಾಗಿವೆ. ಹೆಗ್ಗಡೆಯವರ ಕೈಯನ್ನು ಹಿಡಿದು ಮಂಚದಲ್ಲಿ ಕುಳ್ಳಿರಿಸಿ ಬೆರಳಿಗೆ ಉಂಗುರವನ್ನು ತೊಡಿಸಿ, ಕೈಗೆ ಖಡ್ಗವನ್ನು ಕೊಟ್ಟು ದೈವಗಳು ಅವರನ್ನು ತಮ್ಮ ಪ್ರತಿನಿಧಿಯನ್ನಾಗಿ ನೇಮಕ ಮಾಡಿದ ಘೋಷಣೆಯನ್ನು ಮಾಡುತ್ತವೆ. ದೈವಗಳು ಮಾತನಾಡುವಾಗ ಹೆಗ್ಗಡೆಯವರು ಮೌನವಾಗಿರುವುದು ಸಾಂಕೇತಿಕವಾಗಿದೆ. ದೈವಾರಾಧನೆಯು ಮುಗಿದ ಆನಂತರದಲ್ಲಿ ಹೆಗ್ಗಡೆಯವರ ಮಾತು ಅಲೌಕಿಕ ಶಕ್ತಿಯಾದ ದೈವಗಳ ಮಾತುಗಳೇ ಆಗಿರುತ್ತವೆಯೆಂದು ಜನಪದರು ಭಾವಿಸಿ, ಹೆಗ್ಗಡೆಯವರನ್ನು ಅಲೌಕಿಕತೆಯ ಪ್ರತೀಕವೆಂದು ಗೌರವಿಸುತ್ತಾರೆ. ಹೆಗ್ಗಡೆಯವರು ನಡೆಸುವ ಆಡಳಿತಕ್ಕೆ ಈ ಕಾರಣದಿಂದ ಧಾರ್ಮಿಕತೆಯು ಬಂದಿದೆ. ದೈವದ ಪ್ರತಿನಿಧಿಯಾಗಿ ಹೆಗ್ಗಡೆಯವರು ಕೈಗೊಳ್ಳುವ ಪ್ರಮಾಣವು ಅವರ ಆಡಳಿತ ವ್ಯವಸ್ಥೆ ಮತ್ತು ಸಾಮಾಜಿಕ ಜೀವನವನ್ನು ಧಾರ್ಮಿಕ ಭಾವನೆಯಿಂದ ನೋಡುವಂತೆ ಮಾಡಿವೆ. ವಸಾಹತುಪೂರ್ವ ವ್ಯವಸ್ಥೆಯಲ್ಲಿ ಈ ರೀತಿಯ ಚಿಂತನೆಗಳು ಸರ್ವೇಸಾಮಾನ್ಯವಾಗಿದ್ದವು.

123 ಸಾಂಸ್ಕೃತಿಕವಾಗಿ ಅಂದಿನ ರಾಜಕಾರಣದ ಸಂಕೇತಗಳಾಗಿ ಆಚರಣಾತ್ಮಕ ಆಡಳಿತವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ.

124 ಅಂಟನಿ ಗ್ರಾಮ್‌ಸ್ಕಿ, ಪ್ರಿಸನರ್ಸ್ ನೋಟ್ ಬುಕ್

125 ಆಧಿವಾಸಿ ವ್ಯಾಖ್ಯಾನ ಸಂಪಾದಿತ ಕೃತಿ, ಟಿ.ಪಿ ವಿಜಯ್, ಪುಟ 89. ಗ್ರಾಮ್‌ಸ್ಕಿ ಅವರ ಚಿಂತನೆಯ ಈ ನೆಲೆಯನ್ನು ಪ್ರಾಯಶಃ ವಸಾಹತುಪೂರ್ವ ಜೈನರ ಆಡಳಿತದಲ್ಲಿ ಕಾಣಬಹುದಾಗಿದೆ.

126 ಹೇರಂಜೆ ಕೃಷ್ಣ ಭಟ್, ಎಸ್ ಡಿ.ಶೆಟ್ಟಿ. ತುಳುಕರ್ನಾಟಕದ ಅರಸು ಮನೆತನಗಳು-ಕರ್ನಾಟಕ ರಾಜಸಂಸ್ಥಾನಗಳು-1. ಪ್ರಸಾರಾಂಗ ಕನ್ನಡ ವಿ. ವಿ ಹಂಪಿ 2000.

127 ಹೇರಂಜೆ ಕೃಷ್ಣ ಭಟ್, ಎಸ್ ಡಿ.ಶೆಟ್ಟಿ. ತುಳುಕರ್ನಾಟಕದ ಅರಸು ಮನೆತನಗಳು-ಕರ್ನಾಟಕ ರಾಜಸಂಸ್ಥಾನಗಳು-1.ಪ್ರಸಾರಾಂಗ ಕನ್ನಡ ವಿ. ವಿ ಹಂಪಿ 2000.

128 ಗಣಪತಿರಾವ್ ಐಗಳ್ ಎಂ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 1923, ಪುಟ 267.

129 ಹೇರಂಜೆ ಕೃಷ್ಣ ಭಟ್, ಎಸ್ ಡಿ.ಶೆಟ್ಟಿ. ತುಳುಕರ್ನಾಟಕ ಅರಸು ಮನೆತನಗಳು-ಕರ್ನಾಟಕ ರಾಜಸಂಸ್ಥಾನಗಳು. ಪ್ರಸಾರಾಂಗ ಕನ್ನಡ ವಿ.ವಿ ಹಂಪಿ 2000, ಪುಟಗಳು 67-95. ಬಂಗರ ಉತ್ತಾರಾಧಿಕಾರಿಗಳು ಬಂಗಾಡಿಯಲ್ಲಿ ಬಳ್ಳಾಲ ಪಟ್ಟದ ಹೆಸರಿನಲ್ಲಿ ಅಧಿಕಾರವನ್ನು ಸಾಂಕೇತಿಕವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

130 ಉತ್ತಾರಾಧಿಕಾರಿಗಳ ಬಗ್ಗೆ ಯಾವುದೇ ಮಾಹಿತಿಗಳಿಲ್ಲ.

131 ಇಂದಿಗೂ ಆಚರಾಣಾತ್ಮಕವಾಗಿ ಅಧಿಕಾರವನ್ನು ನಡೆಸಿಕೊಂಡು ಬರುತ್ತಿದ್ದಾರೆ ಎಂಬುದುನ್ನು ಇತ್ತೀಚೆಗೆ ನಡೆದ ಗಡಿಪಟ್ಟ ಸಂಪ್ರದಾಯದ ದಾಖಲಾತಿಯಿಂದ ತಿಳಿದುಕೊಳ್ಳಬಹುದು.

132 ಗಣಪತಿರಾವ್ ಐಗಳ್ ಎಂ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ 1923, ಪುಟ 371.

133 ಉದಯವರ್ಮರಾಜ, ತುಳುನಾಡಿನ ಗತವೈಭವ, ಕ.ಸಾ.ಪ ಕೇರಳ ಕಾಸರಗೋಡು, 1998.

134 ಹೇರಂಜೆ ಕೃಷ್ಣ ಭಟ್, ಎಸ್ ಡಿ. ಶೆಟ್ಟಿ. ತುಳು-ಕರ್ನಾಟಕ ಅರಸು ಮನೆತನಗಳು, ಪುತ್ತಿಗೆ-ಮೂಡಬಿದಿರೆಯ ಚೌಟರು, ಕನ್ನಡ ವಿ.ವಿ ಹಂಪಿ, 2000, ಪುಟಗಳು 146-188.

135 ಹೇರಂಜೆ ಕೃಷ್ಣ ಭಟ್, ಎಸ್ ಡಿ. ಶೆಟ್ಟಿ. ತುಳು ಕರ್ನಾಟಕ ಅರಸು ಮನೆತನಗಳು, ಕನ್ನಡ ವಿ.ವಿ ಹಂಪಿ, 2000, ಪುಟ 189.

136 ಹೇರಂಜೆ ಕೃಷ್ಣ ಭಟ್, ಎಸ್ ಡಿ. ಶೆಟ್ಟಿ. ತುಳು ಕರ್ನಾಟಕ ಅರಸು ಮನೆತನಗಳು, ಕನ್ನಡ ವಿ.ವಿ ಹಂಪಿ, 2000, ಪುಟ 201.

137 ಅನಂತಕೃಷ್ಣ ಹೆಬ್ಬಾರ್, , ಭಾಮರ (ಸಂ) ವಿಟ್ಲ ಅರಸರ ಅಭಿನಂದನಾ ಗ್ರಂಥ 1986.

138 ಹೇರಂಜೆ ಕೃಷ್ಣ ಭಟ್, ಎಸ್ ಡಿ. ಶೆಟ್ಟಿ. ತುಳು ಕರ್ನಾಟಕ ಅರಸು ಮನೆತನಗಳು, ಕನ್ನಡ ವಿ.ವಿ ಹಂಪಿ, 2000, ಪುಟ 236.

139 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ. ಬಿ ಅರ್ತಿಕಜೆ ಪುಟ 52.

140 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ. ಬಿ ಅರ್ತಿಕಜೆ ಪುಟ 166. ಪುತ್ತಿಗೆಯ ಚೌಟರು, ತೋಕೂರು ಗುತ್ತು, ಉಳಿಪಾಡಿ, ಅರ್ಲ ಇರಂದಿಲು ಮನೆ, ಮಿಜಾರು ಗುತ್ತಿನ ಕೆಲವು ಶಾಖೆಗಳು, ಕೋಡಿಯಾಲ್ಗುತ್ತಿಗೆ ಸಂಪರ್ಕವಿದ್ದ ಬಜಾಲ್ ಬೀಡು, ವಂಡಾರು ಮತ್ತು ಸವಣೂರು ಗುತ್ತು ಜೈನ ಪರಂಪರೆ ಮತ್ತು ಸಂಬಂಧ ಹೇಳಿಕೊಳ್ಳುವ ಕೆಲವು ಒಕ್ಕಲು ಮನೆತನಗಳು. ಜೈನರು ಮತ್ತು ಒಕ್ಕಲುಗಳು ವೈವಾಹಿಕ ಸಂಬಂಧ ಸ್ವೀಕರಿಸಿದ ಮತ್ತು ಆಕಸ್ಮಿಕ ಸಂದರ್ಭಗಳಲ್ಲಿ ದತ್ತು ಸ್ವೀಕರಿಸಿದ ಉದಾಹರಣೆಗಳಿವೆ.

---

[141] ಎಂ.ಗಣಪತಿ ರಾವ್ ಐಗಳ್, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಬಂಟ್ವಾಳ, 1923, ಪುಟಗಳು 382–421.

[142] ಅದೇ–ಸಂಪಾದಕರು ಪಾದೇಕಲ್ಲು ವಿಷ್ಣುಭಟ್, ರಾ.ಕ.ಗೋ.ಪೈ,ಸಂ.ಕೇಂದ್ರ, ಉಡುಪಿ, 2004, ಪುಟಗಳು 249–275.

[143] ಚಂದ್ರಹಾಸ ಕಣಂತೂರು, ಕಣಂತೂರು ಧರ್ಮಅರಸು ಶ್ರೀ ತೊಡಕುಕ್ಕಿನಾರ್, 1997 ಪುಟಗಳು 71–77.

[144] ವೈದ್ಯನಾಥನೊಂದಿಗೆ ಉಳ್ಳಾಲ ಸಮುದ್ರ ಸ್ನಾನಕ್ಕೆ ಹೋದ ಉಳ್ಳಾಲ್ತಿ ಉಳ್ಳಾಲದಲ್ಲಿ ನೆಲೆಯೂರುತ್ತದೆ ಮಾತ್ರವಲ್ಲ ಕಣಂತೂರಿನಲ್ಲೂ ಭೋಗ ಪಡೆಯುತ್ತದೆ.

[145] ಕಣಂತೂರು ಧರ್ಮಅರಸು ಶ್ರೀ ತೋಡಕುಕ್ಕಿನಾರ್ ದೈವಸ್ಥಾನದ ಮೋಕ್ತೆಸರ ಬಾಲಕೃಷ್ಣ ಪೊಯ್ಯತ್ತಾಯರೊಂದಿಗಿನ ಸಂದರ್ಶನ ತಾರೀಕು 5–2–2012.

[146] ಶೀರೂರು ಶಿವರಾಮ ಶೆಟ್ಟಿ, ಬಂಟರ ಮೂಲ, ಮಂಗಳೂರು, 1995. ಸಚ್ಚಿದಾನಂದ ಹೆಗ್ಡೆ ಬಿ., ತುಳುನಾಡವರ ಸಮಾಜ, ಬೆಂಗಳೂರು 2010; ಇಂದಿರಾ ಹೆಗ್ಡೆ., ಬಂಟರು ಒಂದು ಸಮಾಜೋ–ಸಾಂಸ್ಕೃತಿಕ ಅಧ್ಯಯನ ಬೆಂಗಳೂರು, 2004.

[147] ಇಂದಿರಾ ಹೆಗ್ಡೆ., ಬಂಟರು ಒಂದು ಸಮಾಜೋ–ಸಾಂಸ್ಕೃತಿಕ ಅಧ್ಯಯನ ಬೆಂಗಳೂರು, 2004 ಪುಟ 326

[148] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು. ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ

[149] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ–ಸಾಂಸ್ಕೃತಿಕ ಅಧ್ಯಯನ ಬೆಂಗಳೂರು, 2004, ಪುಟಗಳು 2–4.

[150] ಬಿ.ಎ ವಿವೇಕ ರೈ, ಸಂಪಾದನೆ, ತುಳು ಸಾಹಿತ್ಯ ಚರಿತ್ರೆ, ಪ್ರಸರಾಂಗ ಕ.ವಿ.ವಿ. ಹಂಪಿ, 2007 ಪುಟ 30.

[151] ತುಳುನಾಡಿನಲ್ಲಿ ಮಿಲಿಟರಿ ಸ್ವಭಾವದ ಜನರ ಇರವು ಮುಖ್ಯವಾದುದರಿಂದ ವಸಾಹತುಶಾಹಿಗಳ ಸಾಂಗತ್ಯಕ್ಕೆ ಒಳಗಾಗಿದ್ದ ಒಕ್ಕಲ್ಮರಿಗೆ 'ಬಂಟ' ನಾಮದೇಯವನ್ನು ಪ್ರಧಾನ ಮಾಡಿರುವುದು. ಬಂಟ ಎಂಬ ಪದ ಸೇವಕ ಎಂಬ ಅರ್ಥ ಕೊಡುವುದರಿಂದ ಬ್ರಿಟಿಷರ ಸೇವೆಗೆ ಹೆಚ್ಚುಕಡಿಮೆ ಬದ್ಧರಾಗಿದ್ದ ಈ ಸಮುದಾಯವನ್ನು 1871ರ ಜನಗಣತಿಯಲ್ಲಿ ಬಂಟರೆಂದು ನಮೂದಿಸಿದ್ದಾರೆ. ಮೌಖಿಕ ಆಕರಗಳಲ್ಲಿ ಬಂಟೆರ್ ಎಂಬ ಶಬ್ದ ದೈವಗಳ ಸೇವಕರು ಇಲ್ಲವೇ ಚಾಕರಿಯವರೆಂದು, ವಸಾಹತುಪೂರ್ವದ ಸಾಮಂತರ ಕೈಕೆಳಗಿರುವ ಯೋಧ ವರ್ಗದವರನ್ನು ಸಂಬೋಧಿಸಲಾಗಿತ್ತು. (ಒಕ್ಕಲ್ಮರು, ಬಿಲ್ಲವರು, ಮುಂಡಾಲರು, ಬಾಕುಡರು, ಬೆಳ್ಚಪ್ಪಾಡರು, ಮೋಗವೀರರು, ಜೋವಿಗಳು, ಮುಸಲ್ಮಾನರು ವಸಾಹತುಪೂರ್ವದ ಯೋಧ ವರ್ಗದವರಲ್ಲಿ ಪ್ರಮುಖರಾಗಿದ್ದರು.) ಕೋಟಿಚೆನ್ನಯ್ಯರ ಪಾಡ್ದನದಲ್ಲಿ ಬರುವ ಬಂಟೆರೆ ಸಂಧಿ, ಬಂಟೆ ಸೊರ್ಕುಂಡ ಬಲ್ಲಾಳೆ ಎಂಬ ಒಗಟು ಮುಂತಾದವುಗಳು.

[152] ಪಿ.ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟ್ರಿ ಅಂಡ್ ಕಲ್ಚರ್ ಕಲ್ಯಾಣಪುರ. 1975; ಪುಟ 230; ಶೀರೂರು ಶಿವರಾಮ ಶೆಟ್ಟಿ 1995, ಬಂಟರ ಮೂಲ ಒಂದು ಅಧ್ಯಯನ ಪುಟ 53. ಆ ಬಾಲಕೃಷ್ಣ ಪೊಳಲಿ, 1991, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟಗಳು 28–33. ಹೀರಾ ಆದ್ಯಂತಾಯ, 1996, ಬಂಟರ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆ ಪುಟ 77. ಎಡ್ಗರ್‌ಥರ್ಸ್ಟನ್, ಕಾಸ್ಟ್ ಎಂಡ್ ಟ್ರೈಬ್ಸ್ ಆಫ್ ಸಧರ್ನ್ ಇಂಡಿಯಾ ಸಂ.1 ಪುಟಗಳು 151–152.

[153] ಗಣಪತಿರಾವ್ ಐಗಳ್ ಎಂ, ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ 1923, ಪುಟ 35.

[154] ಅಮೃತ ಸೋಮೇಶ್ವರ, ತುಳುಪಾಡ್ದನ ಸಂಪುಟ, ಪ್ರಸಾರಾಂಗ, ಕನ್ನಡ ವಿ.ವಿ ಹಂಪಿ 1997, ಪುಟ 462.

[155] ಅಮೃತ ಸೋಮೇಶ್ವರ, ತುಳುಪಾಡ್ದನ ಸಂಪುಟ, ಪ್ರಸಾರಾಂಗ, ಕನ್ನಡ ವಿ.ವಿ ಹಂಪಿ 1997, ಪುಟ 485.

[156] ಶೇಖರ್, ಬಂಟರ ಬದುಕು ಮತ್ತು ಬದಲಾವಣೆ, ಪುಟಗಳು 36–37.

[157] ಎಂ. ಗಣಪತಿರಾವ್ ಐಗಳ್, ಪಿ. ಗುರುರಾಜ ಭಟ್, ಸೇಡಿಯಾಪು ಕೃಷ್ಣಭಟ್ ಮುಂತಾದ ವಿದ್ವಾಂಸರು ಈ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

[158] ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು ಕನ್ನಡ ಅವೃತ್ತಿ ವಿ.ಬಿ. ಅರ್ತಿಕಜೆ ಪುಟ 52.

[159] ಕುಂದಾಪುರ ತಾಲೂಕಿನ ವರ್ದ್ಸಸೆಯಲ್ಲಿ ಅಡಕಪ್ಪ ಮತ್ತು ಆರು ಒಕ್ಕಲುಗಳಿಗೆ ಅಳೂಪರು ರಾಜಾಶ್ರಯ ನೀಡಿದ್ದು ಮಾತ್ರವಲ್ಲ ಕೃಷಿಗೆ ಉತ್ತೇಜನ ನೀಡಿದ ವಿಚಾರ ವಡ್ಡರ್ಸೆ ಶಾಸನದಲ್ಲಿ ಉಲ್ಲೇಖಗೊಂಡಿದೆ.

[160] ಮಾಲಿನಿ ಅಡಿಗ, ದ ಮೇಕಿಂಗ್ ಓಫ್ ಸದರ್ನ್ ಕರ್ನಾಟಕ, ಒರಿಯಂಟ್ ಲಾಂಗ್‌ಮನ್, ಚೆನ್ನೈ; 2006 ಪುಟ 207.

[161] ಜಗದೀಶ ಶೆಟ್ಟಿ. ಅಪ್ರಕಟಿತ ಸಂಶೋಧನ ಪ್ರಬಂಧ ಮಂಗಳೂರು ವಿ. ವಿ ಪುಟಗಳು 112–113. ವಸಂತ ಮಾಧವ ಕೆ.ಜಿ., ವೆಸ್ಟರ್ನ್ ಕರ್ನಾಟಕ; ಇಟ್ಸ್ ಅಗ್ರೇರಿಯನ್ ರಿಲೇಶನ್ಸ್ 1500–1800, ಹೊಸದೆಹಲಿ, 1991.

[161] ಸುರೇಂದ್ರರಾವ್ ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು ಕನ್ನಡ ಅವೃತ್ತಿ ವಿ.ಬಿ. ಅರ್ತಿಕಜೆ ಪುಟ 52.

[161] ಮಾಲಿನಿ ಅಡಿಗ, ದ ಮೇಕಿಂಗ್ ಓಫ್ ಸದರ್ನ್ ಕರ್ನಾಟಕ, ಒರಿಯಂಟ್ ಲಾಂಗ್‌ಮನ್, ಚೆನ್ನೈ; 2006 ಪುಟ 207.

161 ಜಗದೀಶ ಶೆಟ್ಟಿ ಅಪ್ರಕಟಿತ ಸಂಶೋಧನ ಪ್ರಬಂಧ ಮಂಗಳೂರು ವಿ. ವಿ, ಪುಟಗಳು 112–113.

162 ಸೌ.ಇ.ಇ, ಸಂ. 9 ನಂ. 444, ಸೌ.ಇ.ಇ ಸಂ. 9 ನಂ. 448.

163 ಸೌ.ಇ.ಇ, ಸಂ.9, ನಂ. 426.

164 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ. ಬಿ. ಅರ್ತಿಕಜೆ ಪುಟಗಳು 52.53. ಸೌ.ಇ.ಇ. ಸಂ. 9, ನಂ. 655.

165 ಭಾರತದಲ್ಲಿ ಉಳಿಗಮಾನ್ಯ ಬೆಳೆದು ಬಂದಿರುವ ವಿವರಣೆಯನ್ನು ಆರ್. ಎಸ್ ಶರ್ಮರವರು ಚರ್ಚಿಸಿದ್ದು, ತುಳುನಾಡಿನಲ್ಲಿಯೂ ಈ ಸಾಧ್ಯತೆಗಳನ್ನು ನೋಡಬೇಕಾಗುತ್ತದೆ.

166 ಮಾಲಿನಿ ಅಡಿಗ, ದ ಮೇಕಿಂಗ್ ಓಫ್ ಸದರ್ನ್ ಕರ್ನಾಟಕ, ಒರಿಯಂಟ್ ಲಾಂಗ್‌ಮನ್, ಚೆನ್ನೈ: 2006 ಪುಟ 207–208.

167 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ ಪುಟ 44.

168 ಹೊಸ ಭೂಮಿಗಳನ್ನು ಕೃಷಿಯುಕ್ತ ಮಾಡುವಲ್ಲಿನ ತಾಂತ್ರಿಕತೆ, ಕೃಷಿ ಭೂಮಿಯ ವಿಸ್ತರಣೆ, ಮಿಗತೆ ಉತ್ಪಾದನೆಯ ಚಲಾವಣೆ, ಕೃಷಿ ಉದ್ಯಮಶೀಲತೆ, ಭೂಮಿಯ ಮೇಲೆ ಹತೋಟಿ ಮುಂತಾದವುಗಳನ್ನು ಅವಲೋಕಿಸಿದ್ದಲ್ಲಿ ಬ್ರಾಹ್ಮಣರಿಗೆ, ಅಗ್ರಹಾರಗಳಿಗೆ, ದೇವಸ್ಥಾನಗಳಿಗೆ, ಮಠಗಳಿಗೆ, ಬಸದಿಗಳಿಗೆ ಭೂದಾನ ಮಾಡುವ ಕಾರ್ಯವಿಧಾನ ಸಾಮಾನ್ಯವಾಗಿತ್ತು.

169 ಶಾಸನಗಳಲ್ಲಿನ ಚರಿತ್ರೆಯ ಆಧಾರಗಳು ಪ್ರಬಲ ವರ್ಚಸ್ಸಿನ ರಾಜದತ್ತಿಯನ್ನು ನೀಡುವ ಹಾಗೂ ರಾಜದತ್ತಿಗಳನ್ನು ಪಡಕೊಳ್ಳುವ ಅತೀ ಪ್ರಾಮುಖ್ಯ ವ್ಯಕ್ತಿಗಳನ್ನು ಮಾತ್ರ ಉತ್ಕ್ಷೇಪಿಸುತ್ತದೆ. ಬದಲಾಗಿ ಎಲ್ಲ ಜನರನ್ನು ಅದು ಪ್ರತಿಬಿಂಬಿಸುವುದಿಲ್ಲ.

170 ಸುರೇಂದ್ರರಾವ್ ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು. ಕನ್ನಡ ಅವೃತ್ತಿ ವಿ.ಬಿ. ಅರ್ತಿಕಜೆ ಪುಟ 29

171 ಸುರೇಂದ್ರರಾವ್, ಬಂಟ್ಸ್ ಇನ್ ಹಿಸ್ಟ್ರೀ ಅಂಡ್ ಕಲ್ಚರ್, (ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು) ಇಂಗ್ಲೀಷ್ ಅವೃತ್ತಿ, ಪುಟ–70

172 ಇಂದಿರಾ ಹೆಗ್ಡೆ., ಬಂಟರು ಒಂದು ಸಮಾಜೋ–ಸಾಂಸ್ಕೃತಿಕ ಅಧ್ಯಯನ ಬೆಂಗಳೂರು, 2004 ಪುಟ 326. ಬಂಟರನ್ನು ಅರಸರೆಂದು ಪ್ರತಿಬಿಂಬಿಸುವ ಅಧ್ಯಯನ ಮಾಡಿದ್ದಾರೆ.

173 ಶೈಲಾ ಟಿ.ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬಾರಕೂರು–ಮಂಗಳೂರು ರಾಜ್ಯಗಳನ್ನು ಆಳಿದ ಗವರ್ನರುಗಳ ಪಟ್ಟಿಯನ್ನು ನೀಡಿದ್ದಾರೆ. ಸುರೇಂದ್ರರಾವ್ ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ. ಅರ್ತಿಕಜೆ ಪುಟ 65.

174 ಅರ್ಥಾತ್ ಆಡಳಿತವನ್ನು ಅಧಿಕಾರಿಗಳು ನಿರ್ವಹಿಸಬಹುದು ಆದರೆ ಆಳ್ವಿಕೆಯನ್ನು ಮಾಡಲು ಸಾಧ್ಯವಾಗುವುದಿಲ್ಲ. ಈ ನಿಟ್ಟಿನಲ್ಲಿ ರಾಜ್ಯಗಳ ಅಸ್ತಿತ್ವ, ಸ್ವರೂಪ ಸಾಮಂತ ವ್ಯವಸ್ಥೆಯನ್ನು ಉಳಿಗಮಾನ್ಯ ರಾಜಕೀಯ ವ್ಯವಸ್ಥೆಯನ್ನಾಗಿ ನೋಡುವ ಹಾಗೂ ಕೇಂದ್ರ ಮತ್ತು ಸ್ಥಳೀಯ ಆಡಳಿತದ ನಡುವಿನ ಸಂಬಂಧಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನಗಳನ್ನು ಮಾಡಬೇಕಾಗುತ್ತದೆ. ಅದಾಗ್ಯೂ ಈ ಪ್ರದೇಶದಲ್ಲಿ ಆಚರಣಾತ್ಮಕವಾಗಿ ಕೊಡುಕೊಳ್ಳುವ ಚಿಂತನೆಗಳಿಗೆ ಪ್ರಾಶಸ್ತ್ಯವಿರುವುದನ್ನು ಗಮನಿಸಿದಾಗ ಆಡಳಿತಾತ್ಮಕವಾಗಿರುವ ಕೆಲವು ನಿರ್ಬಂಧಗಳು ರಾಜಕೀಯ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು.

175 ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ 1988 ಪುಟಗಳು 17, 18. ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು–ಜಿಲ್ಲಾಧಿಕಾರಿ ಕಚೇರಿ ಮಂಗಳೂರು.

176 ಸುರೇಂದ್ರರಾವ್ ಬಿ, ಬಂಟ್ಸ್ ಇನ್ ಹಿಸ್ಟ್ರೀ ಅಂಡ್ ಕಲ್ಚರ್, (ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು) ಇಂಗ್ಲೀಷ್ ಅವೃತ್ತಿ, ಪುಟ 39.

177 ಸುರೇಂದ್ರರಾವ್ ಬಿ. ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಪುಟಗಳು 17–46.

178 ಕೆ ಮೋಹನಕೃಷ್ಣ ರೈ, ತುಳುನಾಡು ಕನ್ನಡನುಡಿ, ಪುಟಗಳು 19–25.

179 ಗಣಪತಿರಾವ್ ಐಗಳ್ ಎಂ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ 1923 ಪುಟ 385.

180 ಗಣಪತಿರಾವ್ ಐಗಳ್ ಎಂ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 1923 ಪುಟಗಳು 251–252.

181 ಸೌ.ಇ.ಇ.ಸಂ.27, ನಂ–156.

182 ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ 1988, ಪುಟಗಳು 17, 18.

183 ಮುರಳೀಧರ ಉಪಾಧ್ಯ ಹಿರಿಯಡಕ, ಸಂಪಾದನ ಗ್ರಂಥ, ದಕ್ಷಿಣ ಕನ್ನಡದ ದೇವಾಲಯಗಳು, ಪುಟಗಳು 44–45. ತುಳುನಾಡಿನಲ್ಲಿ ಅಂದಾಜು 2000 ಧಾರ್ಮಿಕ ಕೇಂದ್ರಗಳು ಧಾರ್ಮಿಕ ದತ್ತಿ ಇಲಾಖೆಗೆ ಸಂಬಂಧಿಸಿದವುಗಳು ಎಂಬ ಅಂಕಿ–ಅಂಶ ಸಿಕ್ಕಿದರೆ, ಸುಮಾರು 2000 ಧಾರ್ಮಿಕ ಇಲಾಖೆಗೆ ಒಳಪಡದವು ಎಂಬ ಅಂಕಿ–ಅಂಶಗಳು ದೊರಕುತ್ತವೆ. ಮೇಲ್ಕಂಡ ಇವುಗಳಲ್ಲಿ ಖಾಸಗಿ, ಜಾತೀಯ, ಸಾರ್ವಜನಿಕ, ವಾರೀಸು ಹಕ್ಕಿನ ದೇವಸ್ಥಾನ, ಬಸದಿ, ಮಠ, ದೈವಸ್ಥಾನಗಳಿವೆ.

---

184 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ ಪುಟ 57. ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, 2004.

185 ವಸಂತ ಮಾಧವ, ಜಗದೀಶ ಶೆಟ್ಟಿ ಅವರುಗಳು ಕೈಗೊಂಡ ಶಾಸನಗಳ ಅಧ್ಯಯನ ಆಧಾರದಲ್ಲಿ ತುಳುನಾಡಿನ ಒಕ್ಕಲುಗಳ ಭೂಮಿಯ ಒಡೆತನದ ಬಗ್ಗೆ ವಿಸ್ತೃತ ಮಾಹಿತಿ ಲಭ್ಯವಿದೆ. 1 .ಸೌ.ಇ.ಇ. ಸಂ-9, ನಂ 449-1444. 2. ಸೌ.ಇ.ಇ. ಸಂ. 9 ನಂ 452 3. ಸೌ.ಇ.ಇ. ಸಂ.9 ನಂ. 424, 4. ಸೌ.ಇ.ಇ ಸಂ.9 ನಂ 424, 5. ಸೌ.ಇ.ಇ.ಸಂ. 9, ನಂ .511. 6. ಸೌ.ಇ.ಇ. ಸಂ, 9, ನಂ 464-1472. 7. ಸೌ.ಇ.ಇ. ಸಂ. 9, ನಂ 471-14828. ಸೌ.ಇ.ಇ. ಸಂ. 9 ಭಾಗ, 2 ನಂಬ್ರ 525

186 ಸೌ.ಇ.ಇ ಸ. 9 ನಂ. 423, 1400.

187 ಸೌ.ಇ.ಇ ಸಂ.9 ನಂ. 419, 1380.

188 ಸುರೇಂದ್ರರಾವ್ ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ ಪುಟ 40.

189 ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, 2004 ಪುಟಗಳು 328-329.

190 ಅದೇ, ಪುಟ-357.

191 ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ ಬೆಂಗಳೂರು, 2004 ಪುಟ-363.

192 ಇಂದಿರಾ ಹೆಗ್ಡೆ-ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು 2004. ಮಂಗಳೂರು ತಾಲೂಕಿನ ಕೊಂಪದವು ಕುಡುಬಿಗಳ ಕೇಂದ್ರವಾಗಿದ್ದು, ಬೆಳ್ಳಿಬೆಟ್ಟು ಗುತ್ತು ಅವರ ಸುಪರ್ಧಿಯಲ್ಲಿದೆ. ಕಿನ್ನಿಗೋಳಿ ತಾಳಿಪಾಡಿಯ ಅರಸರ ಗುತ್ತು ಕ್ರೈಸ್ತರ ಆಧೀನದಲ್ಲಿದೆ. ಕೋಟಿಚೆನ್ನಯ ಪಾಡ್ದನದಲ್ಲಿ ಉಲ್ಲೇಖವಿರುವ ಮುಂಡಾಸ್ ಗುತ್ತು ಮುಸಲ್ಮಾನರಲ್ಲಿದೆ. ಇನ್ನು ಹಲವಾರು ಪೂರ್ವಪರಂಪರೆಯ ಇಲ್ಲವೇ ತುಳುನಾಡಿನ ಸ್ಥಳೀಯಾಡಳಿತದಲ್ಲಿ ಪಾಲುಪಡೆದುಕೊಂಡಿರುವ ಭೂಒಡೆತನಗಳು ಒಕ್ಕಲುಗಳಲ್ಲದೇ ಪ್ರಭಾವಿಗಳ ವಶದಲ್ಲಿರುವುದನ್ನು ಕಾಣಬಹುದು.

193 ವಿವೇಕ ರೈ, ಬಿ.ಎ. ತುಳು ಜನಪದ ಸಾಹಿತ್ಯ, ಪುಟಗಳು 130-131. ಕಾಳಭೈರವ (ಮುಂಡತ್ತಾಯ) ಪ್ರಸರಣದಲ್ಲಿ ಉಲ್ಲೇಖವಿರುವ ಮುಗೇರ್‌ನಾಡು, ಬಾರ್ದಲ ಬೀಡಿನಿಂದ ಪ್ರಾರಂಬಿಸಿ ಪರಿಯಾಳ (ಹರೇಕಳ) ಸಾವಿರಸೀಮೆ, ಮುಲಾರಗುತ್ತು, ಉಳ್ಳಾಲ, ಅತ್ತಾವರದ ವರೆಗಿನ ಸಮಾರು 20 ಹೆಚ್ಚು ಒಕ್ಕಲುಗಳ ಮಾಹಿತಿ ದೊರಕುತ್ತದೆ. ಈ ರೀತಿಯಲ್ಲಿ ಹಲವಾರು ದೈವಗಳ ಪ್ರಸರಣದ ಮೂಲಕ ಒಕ್ಕಲುಗಳು ಪ್ರಭಾವಿತವಾಗಿದೆ. ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಕ. ಪು. ಪ್ರಾಧಿಕಾರ ಬೆಂಗಳೂರು, 2004, ಪುಟಗಳು 155-190. ಬಳಿ, ದೈವಗಳ ಪ್ರಸರಣದ ನೆಲೆಯಲ್ಲಿ ಉದಾಃ ಅರಿಯ ಬಳಿಯ ಒಕ್ಕಲುಗಳು ಅಂಬೋಡಿ ಕಲ-ಎರ್ಮಾಳು ಉಡುಪಿ ಜಿಲ್ಲೆ. ಇನೋಳಿ ಬೀಡು, ಪಾವೂರು ಮನೆತನ, ಕಿಲ್ಲೂರು ಗುತ್ತು, ಕೋಟೆಕಾರು ಗುತ್ತು, ಕೊಳ್ಪೆ ಮನೆತನ ಬಜಪೆ, ತಿರುವೈಲುಗುತ್ತು ವಾಮಂಜೂರು, ತೋವೂರು ಮನೆತನ, ನಂದೊಟ್ಟು ಬಜಪೆ, ಮರವೂರು ಬೀಡು ಬಜಪೆ ಮಂಗಳೂರು ತಾಲೂಕಿನಲ್ಲಿದ್ದು, ತುಪ್ಪೆಕಲ್ಲು ಅರ್ಕುಳ, ಮದ್ಯಾಳ ಅರಳ ಮನೆತನ ಬಂಟ್ವಾಳ, ಕುಡಾಲ ಗುತ್ತು ಕಾಸರಗೋಡಿನಲ್ಲಿದೆ. ಸೇಡಿಯಾಪು ಕೃಷ್ಣ ಭಟ್, ತಥ್ಯ ದರ್ಶನ ಪುಟ 30, 1991.

194 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು ಕನ್ನಡ ಅವೃತ್ತಿ ವಿ.ಬಿ. ಅರ್ತಿಕಜೆ

195 ಸುರೇಂದ್ರರಾವ್ ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು ಇಂಗ್ಲೀಷ್ ಅವೃತ್ತಿ. ಪುಟ 48.

196 ಸಿರಿ ಐತಿಹ್ಯದಲ್ಲಿ ಬಸರೂರಿನ ಕೂಟಕಳ, ದೇವುಪೂಂಜ ಪಾಡ್ದನದ ಐತಿಹ್ಯ, ಕಚ್ಚೂರ ಮಾಲ್ದಿ ಐತಿಹ್ಯ

197 1904ರಲ್ಲಿ ಬ್ರಿಟಿಷ್ ಸರಕಾರ ರೈಲು ನಿಲ್ದಾಣಕ್ಕಾಗಿ ವಶಪಡಿಸಿಕೊಂಡಿದೆ.

198 ಗುರುತು ಪತ್ರಿಕೆ, ಬಿಲ್ಲವರ ಸುಮಾರು 100ಕ್ಕಿಂತಲೂ ಹೆಚ್ಚು ಗುತ್ತುಗಳನ್ನು ಪಟ್ಟಿಮಾಡಲಾಗಿದೆ. ಬಾಬು ಶಿವಪೂಜಾರಿ, ಬಿ.ಎಂ ರೋಹಿಣಿ, ಮುದ್ದು ಮೂಡುಬೆಳ್ಳೆ, ರಮಾನಾಥ ಕೋಟೆಕಾರ್ ಕಾರ್ಯಕ್ಷೇತ್ರದಲ್ಲಿ ದಾಖಲೀಕರಿಸಿದ್ದಾರೆ.

199 ಎಂ.ಎಸ್.ಎ. ಶರ್ಮ, ಉಡುಪಿ ಕ್ಷೇತ್ರದ ನೈಜ್ಯ ಚಿತ್ರ ಮತ್ತು ಚಾರಿತ್ರಿಕ ಹಿನ್ನಲೆ, 1969 ಮಂಗಳೂರು ದಿಡುಂಬು ಗುದ್ಯೇರೋ ಪುಟಗಳನ್ನು ನೋಡಿ.

200 ವಾಮನ ನಂದಾವರ, ಕೋಟಿಚೆನ್ನಯ್ಯ ಜಾನಪದ ಅಧ್ಯಯನ, ಹೇಮಾಂಶು ಪ್ರಕಾಶನ ಮಂಗಳೂರು 2001.

201 ರಮಾನಾಥ ಕೋಟೆಕಾರು, ಬಿಲ್ಲವರು ಮತ್ತು ಬಾಸೆಲ್ ಮಿಷನು ಒಂದು ಅಧ್ಯಯನ; 2011, ಪುಟ 4.

202 ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ಮುಲಾರ ವೈದ್ಯನಾಥ ಕ್ಷೇತ್ರದಲ್ಲಿ ಜಾನುಬೈದ್ಯನ ಆರಾಧನೆಯನ್ನು ಕೈಬಿಟ್ಟ ಪ್ರಸಂಗವನ್ನು ಅಷ್ಟಮಂಗಲ ಪ್ರಶ್ನೆಯಲ್ಲಿ ಕಂಡುಕೊಳ್ಳಲಾಗಿ ಶೀಘ್ರ ಆ ಸಂಪ್ರದಾಯವನ್ನು ಆರಂಭಿಸುವಂತೆ ಪರಿಹಾರ ನೀಡಲಾಯಿತು.

203 ರಮಾನಾಥ ಕೋಟೆಕಾರು, ಬಿಲ್ಲವರು ಮತ್ತು ಬಾಸೆಲ್ ಮಿಷನು ಒಂದು ಅಧ್ಯಯನ, 2011 ಪುಟ 16.

204 ಸುರೇಂದ್ರರಾವ್ ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಪುಟ 37. ಸೌ.ಇ.ಇ ಸಂ.9, ನಂ.419, 1380.

205 ಬಂಟೆ (ಒಕ್ಕೆಲ್ಮೆ) ಸೊರ್ಕುಂಡ ಬಲ್ಲಾಳೆ.

---

[206] ರಾಜನ್ ಗುರುಕ್ಕಳ್, ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ, ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್.ಸಿ 2004, ಪುಟ 73.

[207] ರೋಮಿಲಾ ಥಾಪರ್, ಇಂಟರ್‌ಪ್ರಿಟೇಶನ್ ಅಪ್ ಅರ್ಲಿ ಇಂಡಿಯಾ, ಪುಟಗಳು 82–83.

[208] ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪುಟ 47.

[209] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟಗಳು 26–27.

[210] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟಗಳು 26–30.

[211] ರಾಜನ್ ಗುರುಕ್ಕಳ್, ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ, ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್. ಸಿ 2004, ಪುಟಗಳು 77–79.

[212] ಹರ್ಮನ್‌ಕುಲ್ಕೆ ಸಂಪಾದಿತ, ದ ಸ್ಟೇಟ್ ಇನ್ ಇಂಡಿಯಾ 1000–1700, ಒಕ್ಸ್‌ಪರ್ಡ್ ಯುನಿವರ್ಸಿಟಿ ಪ್ರೆಸ್ ನ್ಯೂ ದಿಲ್ಲಿ 1995. ಪುಟಗಳು 21–22. ಎಡಗೈ, ಬಲಗೈ ದಲಿತ ವರ್ಗಗಳು ಚೋಳ ರಾಜಕಾರಣದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರ ಬಗ್ಗೆ ಮಾಹಿತಿ ನೀಡಿದೆ.

[213] ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪುಟ 49.

[214] ರಾಜನ್ ಗುರುಕ್ಕಳ್, ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ ಸಂಪಾದನೆ, ಬಿ.ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್.ಸಿ 2004, ಪುಟ 67.

[215] ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟಗಳು 22–40.

[216] ಇಂದಿರಾ ಹೆಗ್ಗಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು, 2004 ಪುಟಗಳು 25–59.

[217] ಸಾಲೆತ್ತೂರು ಬಿ.ಏ ಏನ್ಶಂಟ್ ಕರ್ನಾಟಕ; ಹಿಸ್ಟರಿ ಆಫ್ ತುಳುವ, ಓ.ಬು.ಏ ಪೂನಾ 1936, ಪುಟಗಳು 5–7.

[218] ಆರ್.ಎಸ್.ಶರ್ಮ, ಪ್ರಾಚೀನ ಭಾರತದಲ್ಲಿ ಶೂದ್ರರು ಕನ್ನಡ ಅವೃತ್ತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು–1, ಎರಡನೇ ಮುದ್ರಣ 2006, ಪುಟಗಳು 122–126. ಮನುಸ್ಮೃತಿಯ ಅಧ್ಯಾಯದಲ್ಲಿ 61 ಜಾತಿಗಳ ಮಾಹಿತಿ ಸಿಗುತ್ತದೆ.

[219] ಇ.ಸಿ ಸಂಪುಟ. 9, ಪುಟ 21. ಎ.ಆರ್ ನಂ. 296 1931–32.

---------

## ವಾರಸುದಾರಿಕೆಯ ಪರಂಪರಾಗತ ಸ್ತರಗಳು

ಇತಿಹಾಸದ ಆರಂಭಿಕ ಶತಮಾನಗಳಲ್ಲಿ ವಾರಸುದಾರಿಕೆ ಎಂಬ ಪರಿಕಲ್ಪನೆಯು ಸ್ಪಷ್ಟ ಅರ್ಥ ಅಥವಾ ರೂಪ ಪಡೆದುಕೊಳ್ಳದ ಕಾರಣ ಅದರ ಅರ್ಥೈಸುವಿಕೆಗೆ ಸಂಬಂಧಿಸಿದಂತೆ ವಿಭಿನ್ನ ಆಯಾಮ ಅಥವಾ ಮಗ್ಗುಲುಗಳನ್ನು ಪರಿಶೀಲಿಸುವುದು ಅನಿವಾರ್ಯ. ಒಂದರ್ಥದಲ್ಲಿ 'ಭೂಮಿಯ ಒಡೆಯ' ಎಂಬುವುದು ಮಧ್ಯಯುಗೀನ ಚರಿತ್ರೆಯಲ್ಲಿ ಕಂಡು ಬರುವ ಊಳಿಗಮಾನ್ಯ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿರುವ 'ಖಾಸಗಿ ಒಡೆತನ'ದ ಸೂಚಕ. ಆದರೆ ಉಳಿಗಮಾನ್ಯ ವ್ಯವಸ್ಥೆಯ ಪೂರ್ವದಲ್ಲಿ ಈ ಪದ ನಿಧಾನವಾಗಿ ಆದರೆ ನಿರ್ದಿಷ್ಟವಾಗಿ ವಿಕಾಸಗೊಂಡಿರುವುದರಿಂದ ಊಳಿಗಮಾನ್ಯ ಪದ್ಧತಿಯಲ್ಲಿ ಕಾಣುವ ಈ ವ್ಯವಸ್ಥೆಯು ಇತಿಹಾಸಪೂರ್ವದ ಬೆಳವಣಿಗೆಗಳ ಮುಂದುವರೆದ ಭಾಗ ಎಂಬುವುದು ನಿಸ್ಸಂದೇಹ.

ಅರಸನು ಆಕ್ರಮಣಗಳ ಮೂಲಕ ತನ್ನ ರಾಜ್ಯವನ್ನು ವಿಸ್ತರಿಸಿದ ಸಂದರ್ಭಗಳು ಇತಿಹಾಸ ಪೂರ್ವದಲ್ಲಿ ಕಂಡುಬರುತ್ತವೆಯಾದರೂ, ಆಕ್ರಮಿಸಿಕೊಂಡ ಭೂಮಿಯ ಒಡೆತನ ಯಾರಿಗೆ ಸೇರಿದ್ದೆಂಬ ಪ್ರಶ್ನೆಗೆ ಸಂಬಂಧಿಸಿದಂತೆ ಅನೇಕ ಗೊಜಲುಗಳಿವೆ. ಕೆಲವೊಂದು ಬಾರಿ ವಶಕ್ಕೆ ತೆಗೆದುಕೊಂಡ ಭೂಮಿಯನ್ನು ರಾಜ ತನ್ನ ಒಡೆತನಕ್ಕೆ ಪರಿವರ್ತಿಸಿಕೊಂಡರೆ, ಇನ್ನು ಕೆಲವು ಬಾರಿ ತೆರಿಗೆ ಸಂಗ್ರಹಣೆಗೆ ಮಾತ್ರ ಅವುಗಳ ಮೇಲೆ ಪ್ರಭುತ್ವ ಸಾಧಿಸಿದ ನಿದರ್ಶನಗಳಿವೆ. ಹಾಗಿದ್ದರೂ ಭೂಮಿಯ ಆರ್ಥಿಕತೆಯು ವಿಕಾಸದ ಸಾಧನವಾಗಿಯೇ ಉಳಿದುಕೊಂಡಿತ್ತೇ ಹೊರತು ಬೇರಾವುದೇ ಉದ್ದೇಶಕ್ಕಾಗಿ ಬಳಸಲ್ಪಟ್ಟಿರಲಿಲ್ಲ. ಹೆಚ್ಚೆಂದರೆ ದಾನದ ಪರಿಕಲ್ಪನೆಯಲ್ಲಿ ಕಾಣಿಸಿಕೊಂಡು ಹಸ್ತದಿಂದ ಹಸ್ತಕ್ಕೆ ಹಸ್ತಾಂತರಗೊಳ್ಳುತ್ತಿದ್ದಾದರೂ 'ಒಡೆತನ' ಎಂಬುವುದು ಅಸ್ಪಷ್ಟ ರೂಪದಲ್ಲಿಯೇ ಮುಂದುವರೆದುಕೊಂಡು ಬಂತು. ಆದ್ದರಿಂದಲೇ ಭೂಮಿಯ ವೈಯುಕ್ತಿಕ ಒಡೆತನಕ್ಕೆ ಸಂಬಂಧಿಸಿದಂತೆ ತುಳುನಾಡಿನಲ್ಲಿ ಸ್ಪಷ್ಟ ನಿರ್ಧಾರವಾಗಿರುವುದು ಇತಿಹಾಸದ ನಂತರದ ಕಾಲಘಟ್ಟದಲ್ಲಿ. ಆರಂಭಿಕ ಹಂತದಲ್ಲಿ ಶಾಸನಗಳನ್ನಾಧರಿಸಿಕೊಂಡು ಭೂಮಿಯನ್ನು ದಾನ ಮಾಡುವ ಸಂಪ್ರದಾಯವಿದ್ದರೂ ಇಡೀ ಭೂಮಿಯನ್ನು ಒಳಗೊಂಡ ಗ್ರಾಮದಾನ ಅಪರೂಪದಲ್ಲಿ ಅಪರೂಪವೇ. ಭೂಮಿಯ ವೈಯುಕ್ತಿಕ ಒಡೆತನಕ್ಕೆ ವಿರೋಧ ವ್ಯಕ್ತವಾಗಿರುವುದರಿಂದ ಎಲ್ಲೋ ಒಂದು ತುಂಡು ಭೂಮಿಯನ್ನು ಆಗಾಗ್ಗೆ ದಾನವನ್ನು ಕೊಡುವುದಿದ್ದರೂ ರಾಜನು ಇಡೀ ಭೂಮಿಯನ್ನು ದಾನ ಮಾಡುವಂತಿಲ್ಲ. ತಾನು ಕೊಂಡಿರುವ ಮನೆ, ಭೂಮಿಯನ್ನು ದಾನ ಮಾಡಬಹುದು. ಇದು ಭೂಮಿಯ ವಾರಸುದಾರಿಕೆಗೆ ಸಂಬಂಧಿಸಿದ ವಿಚಾರ. ಅಳೂಪರ ಕಾಲದಿಂದ ರಾಜ ಭೂಮಿಯ ಒಡೆಯ ಎಂದು ಶಾಸನಗಳ ಆಧಾರದಿಂದ ಸಮರ್ಥಿಸಬಹುದಾದರೂ, ಕೆಲವೊಂದು ಸಂದರ್ಭಗಳಲ್ಲಿ ರಾಜ ಖಾಸಗಿ ಭೂಮಿಯ ಮೇಲೆ ಒಡೆತನವನ್ನು ಹೊಂದಿರಲಿಲ್ಲ. ಭೂಮಿಯ

ಮೇಲಿನ ಆತನ ಅಧಿಕಾರವು ಸುಂಕ (ತೆರಿಗೆ) ವಸೂಲಿಗೆ ಮಾತ್ರ ಸೀಮಿತವಾಗಿತ್ತು. ಹಾಗಾಗಿ ರಾಜ ತನ್ನ ಆಡಳಿತಕ್ಕೊಳಪಡುವ ಎಲ್ಲಾ ಭೂಮಿಗಳ ಮೇಲೆ ಒಡೆತನ ಸ್ಥಾಪಿಸಿರಲಿಲ್ಲವೆಂದು ಚರಿತ್ರಾಕಾರರು ಅಭಿಪ್ರಾಯಪಟ್ಟಿದ್ದಾರೆ.[1] ಇದಲ್ಲದೇ ರಾಜ್ಯದ ಅಧಿಕಾರಿಗಳು ಭೂಮಿಯ ಮಾಲಕರಾಗಿ ಭೂಮಿಯ ಒಡೆತನಕ್ಕೆ ಅನುಗುಣವಾಗಿ ಅಧಿಕಾರ ವ್ಯಾಪ್ತಿಗಳನ್ನು ವಿಸ್ತಾರಗೊಳಿಸಿದ್ದರಲ್ಲದೇ, ಭೂಮಿಯ ಹಿಡುವಳಿಯ ವಿಸ್ತಾರದ ಹರವಿಗೆ ಅನುಗುಣವಾಗಿ ಅಧಿಕಾರದ ಶ್ರೇಣಿಗಳನ್ನು ರೂಪುಗೊಳಿಸುತ್ತಿದ್ದರು.[2] ಹೀಗೆ ರಾಜನಲ್ಲದೇ, ಅಧಿಕಾರಿ ವರ್ಗದವರು, ಖಾಸಗಿಯವರು ಭೂಮಿಯ ಒಡೆತನದ ಹಕ್ಕು ಹೊಂದಿದ್ದರು ಎಂಬುವುದಕ್ಕೆ ಶಾಸನಗಳಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ.[3] ಅಲ್ಲದೇ ರಾಜ ತನ್ನ ಭೂಮಿಯನ್ನು ಕೃಷಿಕರಿಗೆ ಇಲ್ಲವೇ ಒಕ್ಕಲುಗಳಿಗೆ ಗೇಣಿಯಾಗಿ ನೀಡಿರುವ ಉಲ್ಲೇಖಗಳೂ ಶಾಸನಗಳಲ್ಲಿ ಕಂಡುಬರುತ್ತವೆ.[4] ಗೇಣಿ ಅಂದರೆ ತೆರಿಗೆಯ ರೂಪಾಂತರವಾಗಿದ್ದು, ಇದು ಜನರಿಗೆ ಜೀವನೋಪಾಯದ ಮೂಲವಾದರೂ, ಭಯ ಹುಟ್ಟಿಸುವ ಸಾಧನವಾಗಿ ಹಳ್ಳಿಯನ್ನು ಹತೋಟಿಯಲ್ಲಿಡುವ ಕಲ್ಪನೆಯಾಗಿತ್ತು. ವಿಜಯನಗರದ ಕಾಲಕ್ಕೆ ಸಂಬಂಧಿಸಿದಂತೆ ದೊರೆಯುವ ಚಾರಿತ್ರಿಕ ಮೂಲಗಳ ಪ್ರಕಾರ ಈ ಪರಂಪರೆ ಮುಂದುವರೆದು, ರಾಜ ತಮ್ಮ ಅಧಿಕಾರಿ ವರ್ಗ, ಸಾಮಂತರು, ಖಾಸಗಿಯವರು ಮುಂತಾದವರು ಭೂಮಿಯ ಮೇಲೆ ವಾರಸುದಾರಿಕ ಅಧಿಕಾರ ಹೊಂದಿದ್ದರು, ಜೊತೆಗೆ ಭೂಮಿಯನ್ನು ಗೇಣಿಗೆ ನೀಡುತ್ತಿದ್ದ ನಿದರ್ಶನಗಳನ್ನು ವಿಪುಲವಾಗಿ ಕಾಣಬಹುದು.[5] ಈ ರೀತಿ ಗೇಣಿಗೆ ಭೂಮಿಯನ್ನು ಪಡೆದುಕೊಂಡ ಅಂಚಿನಲ್ಲಿರುವ ಸೇವಾವರ್ಗ, ಭೂರಹಿತ ಶ್ರಮಜೀವಿಗಳು ಒಡೆತನವಿರುವ ಜನಸಮುದಾಯಗಳ ಬಲೆಗೆ ಬಿದ್ದು, ಭವಣೆಗೆ ಒಳಗಾಗಿ ಅವರ ನಿರ್ದಯಾತ್ಮಕ ಶೋಷಣೆಗಳಿಗೆ ಒಳಪಟ್ಟು ಅವರ ಬೇಡಿಕೆಗಳನ್ನು ಪೂರೈಸುವ ಹಕ್ಕಿಗೆ ಬಲಿಪಶುವಾಗಿದ್ದಾರೆ ಎಂದು ಚರಿತ್ರಾಕಾರರ ಅಭಿಪ್ರಾಯ. ಆದುದರಿಂದ ಭೂಮಿಯ ಒಡೆತನ ಮತ್ತು ಅಧಿಕಾರ ಸಾಮಾಜಿಕ ಅಸಮಾನತೆ ಹಾಗೂ ಅಧಿಕಾರದ ನ್ಯಾಯಬದ್ಧತೆಯನ್ನು ಯಥಾಸ್ಥಿತಿಯಲ್ಲಿಡುವ ಸಾಧನಗಳಾಗಿ ಮಾರ್ಪಾಡಾಗಿವೆ. ಈ ಹಿನ್ನೆಲೆಯಲ್ಲಿ ತುಳುನಾಡಿನಲ್ಲಿ ಅಧಿಕಾರ ಬಿಂಬಿಸಲ್ಪಟ್ಟು ಕೃಷಿಯ ಸುತ್ತ ಅಧಿಕಾರದ ವಾರಸುದಾರಿಕೆ ರೂಪುಗೊಂಡಿದೆ.

## ಅಧಿಕಾರದ ಹರಿವು

ಅಧಿಕಾರ ಮತ್ತು ಅಧಿಕಾರ ಚಲಾವಣೆ ಇವುಗಳೆರಡು ಸಾಮಾಜಿಕ ಅವಸ್ಥೆಗಳಾಗಿವೆ. ಅಧಿಕಾರದ ಮೂಲಕ ಒಬ್ಬ ವ್ಯಕ್ತಿ ಇಲ್ಲವೇ ಗುಂಪು, ಇನ್ನೊಬ್ಬ ವ್ಯಕ್ತಿ ಅಥವಾ ಗುಂಪಿನ ಮೇಲೆ ಪ್ರಭಾವ ಬೀರಿ ಅದರ ಮನೋಸ್ಥಿತಿಯನ್ನು ಬದಲಾಯಿಸಿ ತನ್ನ ನಿರ್ಧಾರಗಳಿಗೆ ಬದ್ಧವನ್ನಾಗಿ ಮಾಡುವುದಾಗಿದೆ ಮಾತ್ರವಲ್ಲ, ಅಧಿಕಾರದ ಚಲಾವಣೆ ಚಲಾಯಿಸುವವನ

ಸಾಮರ್ಥ್ಯವನ್ನು ಪ್ರಕಟಿಸುವ ಕ್ರಿಯೆಯಾಗಿದೆ. ಅಧಿಕಾರವನ್ನು ಆಸ್ತಿ ಎಂದು ಪ್ರತಿಬಿಂಬಿಸುವ ಅವನ ಅಥವಾ ಗುಂಪಿನ ಸಾಮರ್ಥ್ಯದ ಆಳವನ್ನು ಒಳಗೊಂಡಿರುತ್ತದೆ. ಸಾಮರ್ಥ್ಯದ ಆಳ ಮತ್ತು ಅಧಿಕಾರಗಳನ್ನು ಸದೃಶ್ಯವಾಗಿ ನೋಡಲಾಗುವುದಿಲ್ಲವಾದುದರಿಂದ, ಒತ್ತಡಕ್ಕೆ ಇಲ್ಲವೇ ಹಿಂಸೆಗೆ ಒಳಪಡಿಸಿ ಅಧಿಕಾರವನ್ನು ಚಲಾವಣೆ ಮಾಡಿರುವ ಉದಾಹರಣೆಗಳು ಚರಿತ್ರೆಯಲ್ಲಿ ಸಾಕಷ್ಟು ಸಂಧರ್ಭಗಳಲ್ಲಿ ದಾಖಲಾಗಿವೆ.[6]

ಸಾಮರ್ಥ್ಯ ವ್ಯಕ್ತಿಗತವಾಗಿ ಮತ್ತು ಗುಂಪಿನ ಸ್ವರೂಪಕ್ಕೆ ಅನುಗುಣವಾಗಿರುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಅಧಿಕಾರ ತನ್ನ ವಾಸ್ತವತೆಯನ್ನು ಪ್ರಕಟಪಡಿಸುವುದು ಸಾಮಾಜಿಕರೊಡನೆ ಬಾಂಧವ್ಯ ಕಲ್ಪಿಸುವುದರ ಮೂಲಕ.[7] ಅಧಿಕಾರ ಪ್ರಕಟಗೊಳ್ಳುವುದೇ ಒಂದು ಇನ್ನೊಂದನ್ನು ಆಳಿದಾಗ, ಪ್ರಭಾವ ಬೀರಿದಾಗ, ಹತೋಟಿಯಲ್ಲಿಟ್ಟಾಗ ಇಲ್ಲವೇ ಅದರ ಮೇಲೆ ಪ್ರಭುತ್ವ ಸ್ಥಾಪಿಸಿದಾಗ. ಒಟ್ಟಿನಲ್ಲಿ ಆಳುವುದು, ಪ್ರಭಾವಿಸುವುದು, ಹತೋಟಿ ಇವುಗಳೆಲ್ಲವೂ ಪ್ರಭುತ್ವ ಇಲ್ಲವೇ ಅಧಿಕಾರದ ವಿವಿಧ ಆಯಾಮಗಳಾಗಿವೆ.[8] ಆದುದರಿಂದ ಅಧಿಕಾರ, ಒಬ್ಬನ ಮೇಲೆ ಹೇರುವ ಸಾಧ್ಯತೆಗಳು ಇನ್ನೊಬ್ಬನ ನಡವಳಿಕೆಯನ್ನು ಅವಲಂಬಿಸಿರುತ್ತದೆ. ಒಬ್ಬ ವ್ಯಕ್ತಿ ಗುಂಪಿನಲ್ಲಿರುವ ವ್ಯಕ್ತಿಗಳನ್ನು ಸಾಮೂಹಿಕ ಪ್ರತಿಕ್ರಿಯೆಗೆ ಒಳಪಡಿಸುವುದು ಪ್ರತಿರೋಧ ಆಗುತ್ತದೆ ಇಲ್ಲವೇ ವಿಧೇಯತೆಯೂ ಆಗಿರಬಹುದು.[9] ಚಾರಿತ್ರಿಕವಾಗಿ ವ್ಯವಸ್ಥೆ ಮತ್ತು ಅಧಿಕಾರ ಅಂತರಿಕವಾಗಿ ಪಾತ್ರ ಬದಲಾಯಿಸಿಕೊಳ್ಳುತಿರುತ್ತದೆ. ಇಲ್ಲವೇ ವ್ಯವಸ್ಥೆ ಕಾನೂನುಬದ್ದ ಅಧಿಕಾರವನ್ನು ಉಲ್ಲೇಖಿಸಿ ಸಾಮೂಹಿಕ ಒಪ್ಪಿಗೆಯ ಮೂಲಕವಾಗಿ ಪ್ರಕಟಗೊಳ್ಳುತ್ತದೆ. ಚರಿತ್ರಕಾರರಾದ ಡಬ್ಲ್ಯು. ಸಿ. ನೀಲ್ ಅವರ ಅಭಿಪ್ರಾಯದಂತೆ ಭೂಮಿ ಆಳ್ವಿಕೆಗೆ ಇರುವುದಲ್ಲದೇ, ಭೂಮಿಯ ಒಡೆತನ ಅವುಗಳನ್ನು ಹೊಂದಿರುವ ಸಮುದಾಯದ ಅಧಿಕಾರದ ವಿಷಯ ಹಾಗೂ ಅಧಿಕಾರದ ಮಗ್ಗುಲು ಕೂಡಾ ಆಗಿರುತ್ತದೆ ಎಂಬುವುದನ್ನು ಚರ್ಚಿಸುತ್ತಾನೆ. ಇನ್ನೊರ್ವ ಚರಿತ್ರಕಾರರಾದ ಸ್ಟೋಕ್ಸರ ಅಧ್ಯಯನವನ್ನು ಭಾರತದ ಸಂದರ್ಭದಲ್ಲಿ ಅದರಲ್ಲೂ ಮುಖ್ಯವಾಗಿ ತುಳುನಾಡಿಗೆ ಅನ್ವಯಿಸಿದಾಗ ಗ್ರಾಮೀಣ ಪ್ರಭಾವಿ ವರ್ಗ ವಿಸ್ತಾರವಾದ ಭೂಮಿಯ ಒಡೆತನ ಹೊಂದಿ, ಕೃಷಿವ್ಯವಸ್ಥೆಯ ಮೇಲೆ ಅಧಿಕಾರ ಚಲಾಯಿಸಿರುವುದು ಮಾತ್ರವಲ್ಲದೇ ಕೃಷಿ ಹಳ್ಳಿಗಳ ಮೇಲೆ ಸಂಪೂರ್ಣ ಹತೋಟಿ ಸಾಧಿಸಿತ್ತು.[10] ಹೀಗೆ ಅಧಿಕಾರದಲ್ಲಿರುವ ಜನಸಮುದಾಯಗಳ ಸುಪರ್‌ಅರ್ಡಿನೇಶನ್, ಸಬಾರ್ಡಿನೇಶನ್‌ಗಳ ಸಂಗ್ರಹಿತ ಆಕರಗಳನ್ನು ಗಮನಿಸಿದಾಗ, ಕೃಷಿಅಧಿಕಾರದ ರಚನೆ ಸಮಾಜದಲ್ಲಿನ ವ್ಯವಸ್ಥೆಗಳನ್ನು ಹೇಗೆ ಹತೋಟಿಯಲ್ಲಿಡುತ್ತದೆ ಎಂಬುವುದನ್ನು ಚಾರಿತ್ರಿಕ ಮೂಲಾಂಶಗಳ ನೆರಳಲ್ಲಿ ತಿಳಿಯಬಹುದು. ಉದಾಹರಣೆಗೆ ಭೂಮಿಯ ಅಸಮತೋಲನ ಹಂಚಿಕೆ ಹಾಗೂ ಅಧಿಕಾರದ ಅಸಮಾನತೆ ಸಾಮಾಜಿಕ ನ್ಯಾಯಬದ್ಧತೆಗಳನ್ನು ನಿರ್ಣಯಿಸುವಲ್ಲಿ ಪ್ರಾಮುಖ್ಯವಾಗುತ್ತವೆ. ಮಾತ್ರವಲ್ಲ

ಸಾಮುದಾಯಿಕ ಸಮ್ಮತಿ ಅಥವಾ ಒಪ್ಪಿಗೆ ಅಧಿಕಾರದ ಚಲಾವಣೆಯಲ್ಲಿ ಪ್ರಮುಖವಾಗಿರುತ್ತದೆ. ಅದಾಗ್ಯೂ ಅಧಿಕಾರದ ಮೂಲಭೂತ ಚೌಕಟ್ಟುಗಳ ಅನನ್ಯತೆಗಳನ್ನು ಪರಿಶೀಲಿಸಿದಾಗ ಅದು ಭೂಮಿಯ ರಚನೆ ಮತ್ತು ಅಧಿಕಾರದ ಹಂಚಿಕೆಗಳನ್ನು ಅವಲಂಬಿಸಿಕೊಂಡಿರುತ್ತದೆ.[11]

ಅಧಿಕಾರ ಚಲಾಯಿಸುವಲ್ಲಿನ ಅಂತಸ್ತು ಅಧಿಕಾರಗಳು ಕ್ರೀಯಾಶೀಲವಾಗಿರುವುದು ಅಧಿಕಾರ ಚಲಾಯಿಸುವ ಸಾಂಸ್ಥಿಕ ರಚನೆಯ ಕಾರ್ಯಭಾಗವನ್ನು ಅವಲಂಬಿಸಿದೆ. ಕೃಷಿಅಧಿಕಾರದ ರಚನೆಯಲ್ಲಿ ಆಳುವವರ ಪ್ರಬಲತೆ ಮತ್ತು ಆಳಲ್ಪಡುವವರ ವಿಧೇಯತೆ ಅಸಮತೋಲನವನ್ನು ಸೃಷ್ಟಿಸಿರುವುದರಿಂದ, ನಿರಂತರವಾಗಿ ರೂಪಾಂತರಗೊಳ್ಳುತ್ತಿರುವ ಕೃಷಿ ಸಮುದಾಯಗಳ ಅಧಿಕಾರ ಗ್ರಾಮೀಣ ಪ್ರದೇಶಗಳಲ್ಲಿ ರೂಪುಗೊಳ್ಳುತ್ತದೆ ಮಾತ್ರವಲ್ಲ ಅಲ್ಪಸಂಖ್ಯಾತ ಪ್ರಬಲ ವರ್ಗ ಬಹುಸಂಖ್ಯಾತ ದುರ್ಬಲ ವರ್ಗದ ಮೇಲೆ ಪ್ರಭುತ್ವವನ್ನು ಸ್ಥಾಪಿಸಲು ಪ್ರಯತ್ನಪಡುತ್ತಿರುತ್ತದೆ. ಹೀಗೆ ರಾಜಕೀಯ ಅಧಿಕಾರ ವ್ಯವಸ್ಥಿತವಾಗಿಡುವ ಭೂಮಿಯ ಒಡೆತನವು ಭೂಮಿಯ ಒಡೆತನವಿಲ್ಲದಿರುವ ಜನಸಮುದಾಯಗಳ ಮೇಲೆ ಪ್ರಭುತ್ವ ಸಾಧಿಸಲು ಸಹಕಾರಿಯಾಗಿದೆ.[12] ಆದುದರಿಂದ ಗ್ರಾಮೀಣ ಪ್ರದೇಶದಲ್ಲಿ ಕಾರ್ಯಾಚರಿಸುತ್ತಿರುವ ನಾಯಕರು ಅಧಿಕಾರದ ಕೇಂದ್ರಗಳಾಗಿರುವುದಲ್ಲದೇ ಅಧಿಕಾರ ಚಲಾಯಿಸುವವರು ಆಗಿರುವುದರಿಂದ ಭೂಮಿಯ ಅಧಿಕಾರದಲ್ಲಿ ಪಾಲು ಪಡಕೊಂಡು ಆರ್ಥಿಕ ಒತ್ತಡಗಳಿಂದ ಸಂಪೂರ್ಣ ಸ್ವಾತಂತ್ರ್ಯ ಪಡೆಯುತ್ತಾರೆ.[13]

ಕೃಷಿಭೂಮಿಯ ಮೇಲಿನ ಅವಲಂಬನೆ, ಕೃಷಿಭೂಮಿ ವಿಸ್ತಾರದ ಚಿಂತನೆಗೆ ಬಾಗಿಲು ತೆರೆದುಕೊಂಡರೆ ವಲಸಿಗಳ ವಾಸ್ತವ್ಯ, ಹೆಚ್ಚಿನ ಕೃಷಿ ಸರಕುಗಳ ಬೇಡಿಕೆ, ಆಡಳಿತದ ಒತ್ತಡ ಮೇಲಾದ ಒತ್ತಡ ಇತ್ಯಾದಿಗಳು, ಹೊಸ ಕೃಷಿಭೂಮಿಯ ಅನ್ವೇಷಣೆ ಅಥವಾ ಸೃಷ್ಟಿಗೆ ಪ್ರೇರೆಪಣೆ ನೀಡಿದವು.[14]ಇದರ ಪೂರಕವಾಗಿ ಇಲ್ಲವೇ ಪರಿಣಾಮವಾಗಿ ಮಿಗತೆ ಉತ್ಪನ್ನ, ಮಾರುಕಟ್ಟೆಗಳ ವಿಸ್ತರಣೆ, ವ್ಯಾಪಾರಿ ಕೇಂದ್ರಗಳ ಸ್ಥಾಪನೆ, ಹೊಸ ಪಟ್ಟಣಗಳ ಉದಯ, ನಾಣ್ಯಗಳ ಚಲಾವಣೆ, ಶ್ರಮಿಕರ ಲಭ್ಯತೆ ಹಾಗೂ ಚಲನೆ ಪ್ರಾರಂಭಗೊಂಡು ಸಾಮಾಜಿಕ ಪರಿವರ್ತನೆಯ ಶಕೆ ಆರಂಭಗೊಂಡಿತೆಂಬುವುದು ಚರಿತ್ರಕಾರರ ಉಪಸಂಹಾರವಾಗಿದೆ. ಸಾಮಾನ್ಯಶಕೆ ಎಂಟನೇ ಶತಮಾನದಲ್ಲಾದ ಈ ಸಾಮಾಜಿಕ ಪರಿವರ್ತನೆಯನ್ನು ಪರಿಶೀಲಿಸಿದಾಗ ಕೃಷಿಭೂಮಿ ಕೃಷಿಕರ ಆಧೀನಕ್ಕೆ ಒಳಪಡದೇ ಆ ಪ್ರದೇಶದ ಗ್ರಾಮಗಣ್ಯರ ಒಡೆತನಕ್ಕೆ ಒಳಪಟ್ಟಿರುವುದನ್ನು ಖಾತರಿಯಾಗುತ್ತದೆ.[15] ಇದು ಮುಂದುವರೆದು ಸಾಮಾನ್ಯಶಕೆ ಹನ್ನೊಂದರಿಂದ ಹದಿಮೂರನೇ ಶತಮಾನಗಳಲ್ಲಿ ಕೃಷಿ ಆಧಾರಿತ ಅಧಿಕಾರದ ರಚನೆಯ ಚೌಕಟ್ಟು ವಿಸ್ತಾರಗೊಂಡು ಅದರ ಮಧ್ಯೆ ಅಲೌಕಿಕ ಶಕ್ತಿಗಳ ಹೆಸರಿನಲ್ಲಿ ಲೌಕಿಕ ಅಧಿಕಾರವನ್ನು

ಪಡೆಯುವ ತಂತ್ರಗಾರಿಕೆ ವ್ಯವಸ್ಥಿತವಾಗಿ ರೂಪಿಸಲ್ಪಟ್ಟಿತೆಂಬುವುದು ಇತಿಹಾಸದ ತೀರ್ಮಾನವಾಗಿದೆ.

ಭೂಮಿಯ ವಾರಸುದಾರಿಕ ಅಧಿಕಾರವನ್ನು ಪಡೆಯುವ ಬೆಳವಣಿಗೆಗಳನ್ನು ಪರಿಶೀಲಿಸಿದಾಗ ಪ್ರಬಲ ಸಮುದಾಯಗಳು ಅಲೌಕಿಕ ಶಕ್ತಿಯನ್ನು ಆಧಾರವನ್ನಾಗಿ ಇಲ್ಲವೇ ಮುಂದಿಟ್ಟುಕೊಂಡಿರುವುದನ್ನು ಕ್ರಮವಾಗಿ ಆ ಕಾಲದಲ್ಲಿ ಆಡಳಿತಾತ್ಮಕವಾಗಿ ಪರಿಷ್ಕರಣೆಗೊಂಡ ತುಳುನಾಡಿನ ಗುತ್ತು, ಮಾಗಣೆ, ಸೀಮೆ, ರಾಜ್ಯ ವ್ಯವಸ್ಥೆಯಲ್ಲಿ ಕಾಣಬಹುದಾಗಿದೆ.[16] ಇದಲ್ಲದೇ ಭೂಮಾಲಕರು, ಗ್ರಾಮಗಣ್ಯರು, ವರ್ತಕ ಗುಂಪುಗಳು ಹುಟ್ಟುಹಾಕಿದ ಸಾಂಸ್ಥಿಕ ವ್ಯವಸ್ಥೆಗಳು, ಮಹಾಜನ, ಗ್ರಾಮಅಧಿಕಾರಿ, ಜನ್ನಿಗಳು, ಆಧಿವಾಸಗಳು ಮುಂತಾದವುಗಳು ಭೂಮಿಯ ಒಡೆತನವನ್ನು ಹೊಂದುವಲ್ಲಿನ ತಂತ್ರಗಳಿಗೆ ಕಟ್ಟುಬಿದ್ದವು. ಉದಾಹರಣೆಗೆ ಅಗ್ರಹಾರಗಳು, ಬಸದಿಗಳು, ದೇವಸ್ಥಾನದಂತಹ ಧಾರ್ಮಿಕ ಸಂಸ್ಥೆಗಳು, ಮಠ–ಮಾನ್ಯಗಳು, ಮಸೀದಿಗಳು ಕೂಡಾ ಭೂಮಿಯ ಒಡೆತನವನ್ನು ಹೊಂದಿರುವ ಸಾಕಷ್ಟು ಉಲ್ಲೇಖಗಳು ಶಾಸನಗಳಲ್ಲಿ ಉಲ್ಲೇಖಿತವಾಗಿದೆ.[17] ಒಟ್ಟನಲ್ಲಿ ಭೂಮಿಯ ಒಡೆತನವನ್ನು ಹೊಂದಿರುವ ಪ್ರಭಾವಿ ಸಮುದಾಯಗಳು ಮತ್ತು ಸಾಂಸ್ಥಿಕ ವ್ಯವಸ್ಥೆಗಳು ರಾಜ್ಯಗಳ ಉದ್ದೇಶವನ್ನು ಈಡೇರಿಸುವ ಸಲಕರಣೆಗಳಾಗಿ ರೂಪುಗೊಂಡವಲ್ಲದೇ ಭೂಮಿಯ ಒಡೆತನ ಮತ್ತು ಅಧಿಕಾರ ಪ್ರಭಾವಿ ಸಮುದಾಯಗಳ ಏಕಸ್ವಾಮ್ಯಕ್ಕೆ ಒಳಗಾದವು. ಹೀಗೆ ತುಳುನಾಡಿನಲ್ಲಿ ನೆಲೆಗೊಂಡ ಹೊಸ ಶಕ್ತಿ ಪ್ರಬಲವಾಗಿ ಇಲ್ಲಿನ ಹಳೆಯ ವ್ಯವಸ್ಥೆಯನ್ನು ಮಾರ್ಪಾಡು ಮಾಡಿ ಭೂಮಿ ಹಾಗೂ ಅಧಿಕಾರ ರಚನೆಯಲ್ಲಿ ಆರ್ಥಿಕ, ಸಾಮಾಜಿಕ ವಾರಸುದಾರಿಕೆಗಳು ಬದಲಾವಣೆಗೊಳ್ಳುತ್ತಾ ಸಾಗಿದವು.ಇದು ಸಾಮಾನ್ಯಶಕೆ ಎಂಟರಿಂದ ಆರಂಭಗೊಂಡು ಹದಿನೆಂಟನೇ ಶತಮಾನದ ವರೆಗಿನ ಶಾಸನಗಳಲ್ಲಿ ದಾಖಲುಗೊಂಡಿವೆಯಲ್ಲದೇ ಕೃಷಿ ಅಧಿಕಾರ ಮತ್ತು ಭೂಮಿಯ ಒಡೆತನ ಮಹತ್ವದ ಪ್ರಮಾಣಗಳಾಗಿವೆ.[18]

ತುಳುನಾಡು ಕೃಷಿ ಸಮಾಜವಾಗಿ ರೂಪುಗೊಂಡಿರುವುದಕ್ಕೆ ಅನುಗುಣವಾಗಿ ಇಲ್ಲಿನ ಮೂಲನಿವಾಸಿಗಳ ಶ್ರದ್ಧಾಸ್ತ್ರಗಳು ಪ್ರಾಯಃಶ ಹೊಸತಾಗಿ ರೂಪಿತವಾದ ರಾಜಕೀಯ ಅಧಿಕಾರಕ್ಕೆ ಸಮನಾಂತರವಾಗಿ ರೂಪುಗೊಳ್ಳುವ ಕಥಾನಕಗಳು, ದೈವ ಪ್ರಸರಣಗಳೊಂದಿಗೆ ಸಂಲಗ್ನಗೊಂಡು ಇಲ್ಲಿನ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಸಾಮಾಜಿಕ ಆಯಾಮಗಳು ಬದಲಾದವು.[19] ಮುಂದುವರೆದು ತುಳುನಾಡಿನ ದೈವಾರಾಧನೆ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ವ್ಯವಸ್ಥೆಗಳ ಪ್ರತಿನಿಧಿಯಾಗಿ ರೂಪುಗೊಂಡ ಹಿನ್ನೆಲೆಯಿಂದಲೇ ಸಮಾಜದ ತಾತ್ವಿಕ ಮತ್ತು ಸಾಮಾಜಿಕ ನೆಲೆಗಟ್ಟುಗಳು ರೂಪುಗೊಂಡವು.[20] ಹೀಗೆ ವಿಜಯನಗರದ ಆಳ್ವಿಕೆಯ ಕಾಲದಲ್ಲಿ ರೂಪುಗೊಂಡ ಪರಿವರ್ತಿತ ಆಡಳಿತದ ನೆಲೆಗಟ್ಟುಗಳು

ಅಧಿಕಾರದ ವಾರಸುದಾರಿಕೆಯ ಉಪಕರಣಗಳಾಗಿ, ಭೂಮಿಯ ಒಡೆತನವನ್ನು ವಂಶಪಾರಂಪರ್ಯ ಯಜಮಾನಿಕೆ ಹಾಗೂ ಸಾಂಸ್ಥಿಕ ಯಜಮಾನಿಕೆಗಳಾಗಿ ರೂಪಿಸಿಕೊಂಡಿತು. ಈ ರೀತಿಯ ಬೆಳವಣಿಗೆಗಳು ದೇವಸ್ಥಾನ ಇತ್ಯಾದಿಗಳು ಕೂಡಾ ಭೂಮಿಯ ಒಡೆತನ ಹೊಂದುವಂತೆ ಪ್ರೇರೆಪಿಸಿತು. ಒಡೆತನದ ಅಧಿಕಾರವನ್ನು ಧಾರ್ಮಿಕ ಕಟ್ಟುಕಟ್ಟಳೆಯೋ ಇಲ್ಲವೇ ಆ ಸಂಸ್ಥೆಗಳ ಉಸ್ತುವಾರಿ ನೋಡಿಕೊಳ್ಳುವವರ ವಂಶಪಾರಂಪರ್ಯವಾಗಿರುವಂತೆ ಮಾಡಿ ಹಳೆಯ ಸಾಂಪ್ರದಾಯಿಕ ವ್ಯವಸ್ಥೆಯಿಂದ ಆಡಳಿತ ಸಂರಚನೆಗಳನ್ನು ರೂಪಾಂತರಗೊಳಿಸಿತು.[21]

## ಅಧಿಕಾರ ಚಲಾವಣೆ, ಸಾಂಸ್ಕೃತಿಕ ವಾರಸುದಾರಿಕೆ

ತುಳುನಾಡಿನ ವಾರ್ಷಿಕಾವರ್ತನ, ಜೀವನಾವರ್ತನ ಕೃಷಿಸಂಬಂಧಿ ಆಚರಣೆಗಳು, ನಂಬಿಕೆಗಳು ಬಂಧುತ್ವ ಆಧಾರದ ಜನ ಸಮುದಾಯದ ರೀತಿ ರಿವಾಜುಗಳಲ್ಲಿ ರೂಪುಗೊಂಡರೆ, ಇನ್ನೊಂದೆಡೆ ಪ್ರಬಲ ಸಂಸ್ಕೃತಿಯ ಪ್ರಭಾವಕ್ಕೊಳಪಟ್ಟು ಅಧಿಕಾರಗಳು ಭೂಮಿಯ ಒಡೆತನ ಹೊಂದುವಲ್ಲಿನ ಸಾಂಸ್ಕೃತಿಕ ಆಯಾಮಗಳೊಂದಿಗೆ ಗುರುತಿಸಿಕೊಂಡಿತ್ತು. ಉದಾಹರಣೆಗೆ ಗಡಿ, ಪಟ್ಟದಂತಹ ಸಂದರ್ಭಗಳಲ್ಲಿ ದೈವಸ್ಥಾನಗಳಲ್ಲಿ ದೈವಗಳ ವಿವಿಧ ಕಟ್ಟಳೆಗಳು, ದೇವಾಲಯಗಳಲ್ಲಿನ ಭೋಗಗಳು ಭೂಮಿಯ ಹಕ್ಕಿನ ಮಾನ್ಯತೆಯನ್ನು ಪಡೆಯುವಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ಸೀಮೆ. ಮಾಗಣೆ, ಗ್ರಾಮದೇವರ, ದೈವದ ಶ್ರೇಣೀಕರಣ ವಿಶಿಷ್ಟ ಸಂಸ್ಕೃತಿ ರೂಪಣೆಗೆ ಬುನಾದಿ ಒದಗಿಸಿತು. ತುಳುನಾಡಿನ ಫಲವತ್ತಾದ ಕೃಷಿಹಳ್ಳಿಗಳ ಭೂಒಡೆತನದಿಂದಾಗಿ ಬ್ರಾಹ್ಮಣರು ಧಾರ್ಮಿಕವಾಗಿ ಬಲಗೊಂಡರು.[22] ಗುತ್ತುಗಳೆಂಬ ಸ್ಥಳೀಯಾಡಳಿತದ ಪರಿಧಿಯೊಳಗೆ ಕೃಷಿ ಒಕ್ಕಲುಗಳು ಬಲಿಷ್ಠಗೊಂಡರೆ, ರಾಜಕೀಯವಾಗಿ ಅಧಿಕಾರ ಪಡೆದ ಜೈನ ಬಲ್ಲಾಳರು, ಹೆಗಡೆಗಳು, ಶೆಟ್ಟಿಗಳು ಕಂದಾಯ ಅಧಿಕಾರಿಗಳಾಗಿ, ಆಡಳಿತಗಾರರಾಗಿ ಮಾಗಣೆ, ಸೀಮೆಗಳಲ್ಲಿ ಸಕ್ರಿಯಗೊಂಡರು.[23] ಬ್ರಾಹ್ಮಣರು ಧಾರ್ಮಿಕ ಸಲಹೆಗಾರರಾಗಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವಲಯಗಳಲ್ಲಿ ಪ್ರಭಾವಿಗಳಾದರು. ಹೀಗೆ ವಸಾಹತುಪೂರ್ವದಲ್ಲಿ ತ್ರಿಸ್ತರದ ಮೈತ್ರಿ ತುಳುನಾಡಿನ ಚರಿತ್ರೆಯನ್ನು ಬದಲಾಯಿಸುವಷ್ಟು ಸಾಮರ್ಥ್ಯವನ್ನು ಹೊಂದಿತು. ಭೂಮಿಯ ಒಡೆತನ ಮತ್ತು ಒಡೆತನವನ್ನು ಶಾಶ್ವತಗೊಳಿಸುವ ರೀತಿ–ರಿವಾಜುಗಳು, ಅಧಿಕಾರವನ್ನು ಶಾಶ್ವತಗೊಳಿಸುವ ಕಾನೂನುಗಳು, ಶ್ರಮಸೇವೆಯನ್ನು ವಂಶಪಾರಂಪರ್ಯಗೊಳಿಸುವ ನಡೆಗಳನ್ನು ಈ ಸಮುದಾಯಗಳು ವಿನ್ಯಾಸಗೊಳಿಸಿದ್ದರಿಂದ ವಸಾಹತುಪೂರ್ವದ ತುಳುನಾಡಿನ ಸಮಾಜದಲ್ಲಿ ಈ ವ್ಯವಸ್ಥೆಗಳು ಅನಿವಾರ್ಯವೆಂಬಂತೆ ರೂಪಿಸಲ್ಪಟ್ಟವು.

ರೋಮಿಲಾ ಥಾಪರರ ಪ್ರಕಾರ ವಸಾಹತುಪೂರ್ವದ ಚರಿತ್ರೆಯು ಪ್ರಬಲ ಜನಸಮುದಾಯದ ಸುತ್ತಮುತ್ತ ನಿರ್ಮಾಣಗೊಂಡಿತು. ಚರಿತ್ರೆ ರಚಿಸುವ ಮನೋವೃತ್ತಿ ನಿಶ್ಚಿತ

ಚೌಕಟ್ಟಿನಲ್ಲಿ ರೂಪಿತಗೊಂಡು ಪ್ರಬಲ ಸಂಸ್ಕೃತಿ ಅಧೀನ ಸಂಸ್ಕೃತಿಗಳ ಮೇಲೆ ಅಧಿಕಾರ ಸ್ಥಾಪಿಸುವಂತೆ ಮಾಡಿದೆ. ಚರಿತ್ರೆ ಸ್ವಭೋಧವನ್ನು ಇಟ್ಟುಕೊಂಡು ವಸ್ತುಸ್ಥಿತಿಯನ್ನು ರೂಪಿಸಿಕೊಂಡಿರುವುದನ್ನು ಪರಿಶೀಲಿಸಿದಾಗ ಬ್ರಾಹ್ಮಣರ ವಲಸೆಯೊಂದಿಗೆ ವಿಶೇಷವೃತ್ತಿ ಆಧಾರಿತ ಜನರ ಆಗಮನ ತುಳುನಾಡಿನ ಸಾಮಾಜಿಕ ಬದಲಾವಣೆಯಲ್ಲಿ ವೇಗೋತ್ಕರ್ಷವನ್ನು ಉಂಟುಮಾಡಿತು. ಈ ಸಾಮಾಜಿಕ ಬದಲಾವಣೆ ಬುಡಕಟ್ಟು ಬಂಧವನ್ನೆಲ್ಲ ಅರ್ಥಹೀನಗೊಳಿಸಿದುದರ ಪರಿಣಾಮವಾಗಿ ಜನಸಮುದಾಯಗಳ ಆಸ್ತಿತ್ವ, ಸಹಜೀವನ, ಭಿನ್ನ ಆರ್ಥಿಕತೆಯೊಂದಿಗಿನ ಬಾಂಧವ್ಯಗಳ ಬೆಸೆಯುವಿಕೆಯು ಅಧಿಕಾರ ರಚನೆಯ ಅಂದಿನ ಅವಶ್ಯಕತೆಯಾಗಿ ಪರಿಗಣಿತವಾಯಿತು. ಸಮಾಜ ರಚನೆಯಲ್ಲಿ ಅಧೀನ ಆರ್ಥಿಕತೆಯ ಪ್ರಭಾವಿಗಳು ಪ್ರಬಲ ಆರ್ಥಿಕತೆಯೊಂದಿಗೆ ಕೈಜೋಡಿಸಿ ಸಾಂಸ್ಕೃತಿಕ ಯಜಮಾನಿಕೆಯ ಮೂಲಕ ಅಧಿಕಾರವನ್ನು ಯಥಾಸ್ಥಿತಿಯಲ್ಲಿ ಕಾಯ್ದುಕೊಂಡವು.[24]

ತುಳುನಾಡಿನ ಸಿರಿ, ಕೋಟೆದ ಬಬ್ಬು, ಕಲ್ಲುರ್ಟಿ, ಕೊರಗತನಿಯ ಪ್ರಸರಣ ಮುಂತಾದ ಅಲಿಖಿತ ಚರಿತ್ರೆಯನ್ನು ಅವಲೋಕಿಸಿದಾಗ ವಾರಸುದಾರಿಕೆಗೆ ಸಂಬಂಧಿಸಿದ ಹಲವಾರು ವಿಚಾರಗಳು ನಿರ್ದಿಷ್ಟ ಸಂದರ್ಭಗಳ ಅಧುನಿಕಪೂರ್ವದ ಸನ್ನಿವೇಶಗಳಲ್ಲಿ ಪ್ರಭಾವಿ ವರ್ಗದ ಕಮರಿನೊಳಗಿದ್ದು ವಿಶ್ಲೇಷಣೆಗೆ ಒಳಪಡಿಸಲು ಅರ್ಹವಾಗಿರಲಿಲ್ಲ. ಈ ಅಲಿಖಿತ ಚರಿತ್ರೆಗಳಲ್ಲಿ ವಾರಸುದಾರಿಕೆಯ ಆಯಾಮಗಳು ಶೋಷಣೆಗೆ ಒಳಗಾದ ಸಾಂಪ್ರದಾಯಿಕ, ತಾಂತ್ರಿಕ, ಶ್ರಮಿಕರ ಜನರ ಭವಣೆಯ ಸಂಕೇತಗಳಾಗಿ ಸಂಘರ್ಷಕ್ಕೊಳಪಟ್ಟಿತ್ತು ಎಂಬುವುದು ಇತಿಹಾಸತಜ್ಞರ ಅಭಿಪ್ರಾಯ.[25] ಉದಾಹರಣೆಗೆ ತುಳುನಾಡಿನ ಚರಿತ್ರೆಯ ವೈಭವೀಕರಣಕ್ಕೆ ದೈವಾರಾಧನೆಯನ್ನು ಆಕರವನ್ನಾಗಿ ಬಳಸಿಕೊಳ್ಳುವುದು ಒಂದು ವಿಧಾನವಾದರೆ, ಸಾಂಸ್ಕೃತಿಕ ಜೀವನದಲ್ಲಿ ದೈವಾರಾಧನೆಯು ಹುಟ್ಟುಹಾಕಿರುವ ಸಂಘರ್ಷವನ್ನು ಅಧ್ಯಯನ ನಡೆಸುವುದು ಇನ್ನೊಂದು ವಿಧಾನ. ತುಳುನಾಡಿನ ಅಧಿಕಾರದ ವಾರಸುದಾರಿಕೆಯನ್ನು ದೈವಾರಾಧನೆಯ ಸಂದರ್ಭದಲ್ಲಿ ವಿಶ್ಲೇಷಿಸಿದಾಗ ಸಮಾಜದ ಕೆಳವರ್ಗದವರಾದ ಪರವ, ಪಂಬಂದ ಅಥವಾ ನಲ್ಕೆಯವರು ಮೇಲ್ವರ್ಗದವರಾಗಿ ಅಧಿಕಾರದ ಸಂಕೇತವಾಗುತ್ತಾರೆ. ಮೇಲ್ವರ್ಗದ ಜನರು ಇವರ ಮುಂದೆ ಕೈಮುಗಿದು ನಿಲ್ಲುತ್ತಾರೆ. ಆದರೆ ಇಲ್ಲಿ ಪ್ರಾರ್ಥನೆ ಸಲ್ಲುವುದು ದೈವಕ್ಕೆ ಮಾತ್ರ. ದೈವದ ವೇಷ ತೊಟ್ಟ ವ್ಯಕ್ತಿ ಕೆಳವರ್ಗದವನಾಗಿಯೇ ಇರುತ್ತಾನೆ. ಮೇಲ್ವರ್ಗದ ಜನರು ತಮ್ಮ ಅಧಿಕಾರ ಮತ್ತು ಗೌರವವನ್ನು ಒಂದು ದಿನಕ್ಕಾಗಿ ಮಾತ್ರ, ಅದರಲ್ಲೂ ಹೆಚ್ಚಾಗಿ ರಾತ್ರಿಯ ಹೊತ್ತಲ್ಲಿ ಕೆಳವರ್ಗದ ವ್ಯಕ್ತಿಗೆ ದೈವದ ಹೆಸರಿನಲ್ಲಿ ವರ್ಗಾಯಿಸಿ ಇಡೀ ಗ್ರಾಮವನ್ನು ದೈವದ ಹೆಸರಿಲ್ಲಿ ತಮ್ಮ ಹತೋಟಿಗೆ ತೆಗೆದುಕೊಳ್ಳುವ ಕೌಶಲ್ಯ ಅಧಿಕಾರದ ವಾರಸುದಾರಿಕೆಯನ್ನು ಯಾವುದೇ ಪ್ರತಿರೋಧವಿಲ್ಲದೇ ಪಡೆಯುವುದಾಗಿತ್ತು. ಒಂದರ್ಥದಲ್ಲಿ ಕೆಳವರ್ಗಕ್ಕೆ ಸಂಬಂಧಿಸಿದ ಆಚರಣೆ,

ರೂಢಿ-ಸಂಪ್ರದಾಯ, ಕಥಾನಕ ಮುಂತಾದವುಗಳೆಲ್ಲ ವಿರಾಮದ ದಿನಗಳಲ್ಲಿ ಸಮಯ ಕಳೆಯುವ ಪ್ರಸಾಧನಗಳಾಗಿ ಅದೊಂದು ರೀತಿಯ ಸಾಂಸ್ಕೃತಿಕ ವಾರಸುದಾರಿಕೆಯಾಗಿ ರೂಪುಗೊಂಡಿರುವುದು ವಿಪರ್ಯಾಸ.[26] ಹೀಗೆ ತುಳುನಾಡಿನ ಚರಿತ್ರೆಯಲ್ಲಿ ಸುದೀರ್ಘ ಕಾಲಾವಧಿಯನ್ನು ಕ್ರಮಿಸಿಕೊಂಡು ಬಂದಿರುವ ಧಾರ್ಮಿಕ ಆಚರಣೆ, ರೂಢಿಸಂಪ್ರದಾಯ, ಸಾಂಸ್ಕೃತಿಕ ವಿಶಿಷ್ಟತೆ ಮುಂತಾದವುಗಳು ಇಲ್ಲಿನ ವಿಭಿನ್ನ ಸಮುದಾಯದ ಜನವರ್ಗಗಗಳ ನೈಜ ಚರಿತ್ರೆಯನ್ನು ಹುದುಗಿಸಿಕೊಂಡ ಕಾರಣ ಅವುಗಳ ತಾತ್ವಿಕ ಮತ್ತು ಸಾಮಾಜಿಕ ಚೌಕಟ್ಟು ವಾರಸುದಾರಿಕೆಯ ಸಂದರ್ಭದಲ್ಲಿ ಅವಾಸ್ತವವಾಗಿ ರೂಪುಗೊಂಡಿದ್ದನ್ನು ಚರ್ಚಿಸಬೇಕಾಗುತ್ತದೆ. ಮುಂದುವರೆದು ತುಳುನಾಡಿನ ಚರಿತ್ರೆಯಲ್ಲಿ ಅರಸು ಆರಾಧನ ಪದ್ಧತಿ ಮತ್ತು ದೈವಾರಾಧನೆಗಳಲ್ಲಿ ಸಮಾನ ಅಂಶಗಳಿರುವುದು ಕಂಡುಬರುತ್ತದೆ. ವಿಜಯನಗರದ ಅರಸರ ಕಾಲದಿಂದ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗೆ ಸಮಾನಾಂತರವಾಗಿ ದೈವತಾರಾಧನೆ ಸ್ಥಳೀಯ ಅರಸುಮನೆತನದ ಮುಂದಾಳ್ತನದಲ್ಲಿ ಆಡಳಿತ ವ್ಯವಸ್ಥೆಯ ಭಾಗವಾಗಿ ಉಳಿದುಕೊಂಡು ಬಂದಿರುವುದನ್ನು ಆಕರಗಳ ಮೂಲಕ ಸಮರ್ಥಿಸಬಹುದು.[27] ಭೂಮಿಯ ಹಂಚಿಕೆಯ ಕ್ರಮಾನುಗತತೆ, ಭೂಮಿಯ ಯಜಮಾನಿಕೆಗಳು ಹಕ್ಕುಗಳನ್ನು ಯಥಾಸ್ಥಿತಿಯಲ್ಲಿಡುವ ರೂಢ-ಸಂಪ್ರದಾಯಗಳು, ಇವೆಲ್ಲವನ್ನು ರೂಪಿಸಿದ ಶಿಷ್ಟಕಲ್ಪನೆಗಳು, ಆಚಾರ ವಿಚಾರಗಳು, ಸಾಂಸ್ಕೃತಿಕ ಚಿಂತನೆಗಳು, ಭೂಮಿಯ ಒಡೆತನ ಮತ್ತು ಅಧಿಕಾರ ಈ ಭಾಗದ ದೈವಾರಾಧನೆಯೊಂದಿಗೆ ಚಾರಿತ್ರಿಕವಾದ ಸಂಬಂಧವನ್ನು ಹೊಂದಿದೆಯಲ್ಲದೇ, ತುಳುನಾಡಿನ ಕೃಷಿ ಆಧಾರಿತ ಅಧಿಕಾರದ ರಚನೆಯ ಸ್ವರೂಪ ನಿರ್ಧರಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಿದೆ.[28]

## ವಾರಸುದಾರಿಕೆಯ ಸ್ತರಗಳು

ಜಗತ್ತಿನ ಮಾನವ ವ್ಯವಸ್ಥೆಯ ಮೂಲಘಟಕಗಳಾದ ಗಂಡು ಮತ್ತು ಹೆಣ್ಣು, ಸ್ವಭಾವ ಹಾಗೂ ದೈಹಿಕ ರಚನೆಯಲ್ಲಿ ಭಿನ್ನರೂಪ ಪಡೆದುಕೊಂಡಿವೆಯಾದರೂ, ಸಂತಾನೋತ್ಪತ್ತಿ ಹಾಗೂ ಆಹಾರದ ಬೇಡಿಕೆ-ಪೂರೈಕೆಗಳ ವಿಚಾರ ಬಂದಾಗ ಒಂದನ್ನೊಂದು ಕೂಡಿಕೊಂಡು ಕಾರ್ಯನಿರ್ವಹಿಸುತ್ತವೆ. ಇದು ಜಗದ ಸ್ವಾಭಾವಿಕ ನಿಯಮ. ಹಸಿವಿನ ಪೂರೈಕೆ ಉತ್ಪಾದನ ವಿಧಾನಗಳೊಂದಿಗೆ ನೇರ ಸಂಬಂಧ ಹೊಂದಿದ್ದು ಇದು ಬದಲಾಗುವ ಋತುಮಾನಗಳನ್ನು ಅವಲಂಬಿಸಿದೆ. ಆಹಾರ ಧಾನ್ಯಗಳನ್ನು ಬೆಳೆಸಿ ತನ್ಮೂಲಕ ಆರ್ಥಿಕ ಮಟ್ಟವನ್ನು ಉನ್ನತಿಗೊಳಿಸುವ ವ್ಯಾವಸಾಯಿಕ ರೀತಿ-ನೀತಿಗಳನ್ನು ಒಳಗೊಂಡಿರುತ್ತದೆ. ಸಂತಾನೋತ್ಪತ್ತಿಯ ಉದ್ದೇಶದಿಂದ ಒಂದಾಗುವ ಗಂಡು ಹೆಣ್ಣುಗಳು ಕೇವಲ ಆ ಉದ್ದೇಶಕ್ಕೆ ಮಾತ್ರ ಸೀಮಿತಗೊಳ್ಳದೇ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಇತರ ಕ್ಷೇತ್ರಗಳಿಗೆ ಸಂಬಂಧಿಸಿದ ಜೀವನ-

ಆಚರಣೆಗಳಿಗೂ ಸಂಬಂಧಿಸಿದೆ. ಈ ಎರಡು ಅವರ್ತನಗಳ ಫಲವಾಗಿ ಕುಟುಂಬವೊಂದು ಸ್ಥಾಪಿಸಲ್ಪಟ್ಟು ಕೌಟುಂಬಿಕ ಜೀವನ ಆರಂಭಗೊಳ್ಳುತ್ತದೆ. ಕೌಟುಂಬಿಕ ವ್ಯವಸ್ಥೆಯು ಹಲವಾರು ಅಂಶ ಕ್ರಿಯೆಗಳನ್ನು ಒಳಗೊಂಡಿದ್ದು ಅವುಗಳಲ್ಲಿ ಮುಖ್ಯವಾದವುಗಳೆಂದರೆ ಆಹಾರ, ವಸತಿ, ಉಡುಗೆ-ತೊಡುಗೆ, ಸಂಬಂಧ, ನಿರ್ಧಾರ, ಭಾಷೆ, ನಿಷೇಧಗಳು, ರಕ್ಷಣೆ, ಕೃಷಿಪದ್ಧತಿ, ಆಚರಣೆ, ನಂಬಿಕೆ, ಕ್ರೀಡೆ, ಗಾದೆ, ಒಗಟು, ಹಾಡು, ವ್ಯವಹಾರ ಇತ್ಯಾದಿಗಳು. ಆದರೆ ಇದು ಎಲ್ಲಾ ಕುಟುಂಬಗಳ ವಿಚಾರದಲ್ಲೂ ಸಮಾನವಾಗಿರುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಹಲವು ವಿಚಾರಗಳಿಗೆ ಸಂಬಂಧಿಸಿದಂತೆ ಕೌಟುಂಬಿಕ ಜೀವನ ಕುಟುಂಬದಿಂದ ಕುಟುಂಬಕ್ಕೆ ಭಿನ್ನತೆಯನ್ನು ಪಡೆದುಕೊಂಡಿರುತ್ತದೆ. ಆದ್ದರಿಂದ ಕೆಲವು ಸಂದರ್ಭಗಳಲ್ಲಿ ಒಂದು ಕುಟುಂಬಕ್ಕೆ ಶಿಷ್ಟವಾಗಿರುವ ಅಂಶಗಳು ಇನ್ನೊಂದು ಕುಟುಂಬಕ್ಕೆ ಪರಿಶಿಷ್ಟವಾಗಿರುತ್ತವೆ. ಆದರೆ ಈ ವ್ಯತ್ಯಾಸಗಳು ಕುಟುಂಬದ ಮೂಲತತ್ವಕ್ಕೆ ಯಾವುದೇ ಅಪಚಾರವನ್ನು ಉಂಟು ಮಾಡುವುದಿಲ್ಲ. ಸಮಾನ ಆಚರಣೆಗಳು, ನಂಬಿಕೆ ಇತ್ಯಾದಿಗಳಿರುವ ಕುಟುಂಬಗಳೆಲ್ಲ ಒಂದೆಡೆ ಸೇರಿದಾಗ ಒಂದು ಜನಾಂಗ ರೂಪುಗೊಂಡು, ಸಮಾನ ವ್ಯವಹಾರದ ವೇದಿಕೆಯಲ್ಲಿ ಒಂದಾಗುತ್ತವೆ. ಕುಟುಂಬದ ಹೊರಗಿನ ಜಗತ್ತಿನ ಸಂಸ್ಕೃತಿ, ಆಚರಣೆ ಹಾಗೂ ನಡವಳಿಕೆಗಳ ಪ್ರಭಾವ ಎಷ್ಟೇ ತೀವ್ರವಾಗಿದ್ದರೂ, ಪ್ರತಿಯೊಂದು ತನ್ನದೇ ಆದ ಆಸ್ತಿತ್ವವನ್ನು ಉಳಿಸಿಕೊಳ್ಳುವಂತೆ ಕುಟುಂಬವು ತನ್ನ ನೆಲೆಯನ್ನು ಉಳಿಸಿಕೊಂಡು ಬರುತ್ತದೆ.[29] ಮಾತ್ರವಲ್ಲ ಹೊರ ಜಗತ್ತಿನಲ್ಲಿ ತನ್ನದೇ ಆದ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತವೆ. ಹೀಗೆ ಕುಟುಂಬಕ್ಕೆ ಗಂಡು-ಹೆಣ್ಣುಗಳ ಸಮನ್ವಯತೆ ಕಾರಣವಾದರೇ ಗಂಡು ಹೆಣ್ಣುಗಳ ಸಮನ್ವಯತೆಗೆ ಕುಟುಂಬ ಅನಿವಾರ್ಯವಾಯಿತು. ಕುಟುಂಬದ ಆಚರಣೆ, ಸಂಸ್ಕೃತಿ ಇತ್ಯಾದಿಗಳು ನಾಗರೀಕತೆ ಬೆಳವಣಿಗೆಯಾದಂತೆ ವಿಸ್ತರಣೆ ಹಾಗೂ ಮಾರ್ಪಾಡುಗಳಿಗೆ ಒಳಗಾದವೆಂಬುವುದು ವಿದ್ವಾಂಸರ ಅಭಿಪ್ರಾಯವಾಗಿದೆ.[30] ಇದು ವಾರಸುದಾರಿಕೆಯ ಆರಂಭಗೊಳ್ಳುವ ಪ್ರಾಥಮಿಕ ನೆಲೆಯಾಗಿದೆಯೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

## ಕುಟುಂಬ ಮತ್ತು ವಾರಸುದಾರಿಕೆ

ಕುಟುಂಬ ಪರಿಕಲ್ಪನೆಯಲ್ಲಿ 'ಬಳಿ' (ಗೋತ್ರ) ಬಂಧುತ್ವ ಕಲ್ಪನೆಗೆ ಮುಖ್ಯವಾಗಿರುವುದರಿಂದ ತುಳುನಾಡಿನ ವ್ಯವಸ್ಥೆಯಲ್ಲಿ ವಾರಸುದಾರಿಕೆಯ ಅನನ್ಯತೆಗಳನ್ನು ಬಂಧುತ್ವದ ಸಂಬಂಧಗಳೊಂದಿಗೆ ಗುರುತಿಸಲಾಯಿತು. ಬಳಿ ವ್ಯವಸ್ಥೆ 'ಮೂಲ ಕುಟುಂಬದ ಬಂಧುತ್ವದ ಪರಿಕಲ್ಪನೆ'ಯಾಗಿರುವುದರಿಂದ ಇಲ್ಲಿನ ಸಾಮಾಜಿಕ ಸ್ಥಾನಮಾನ ಹಾಗೂ ರಾಜಕೀಯ ಅಧಿಕಾರಕ್ಕೆ ಸಂಬಂಧಿಸಿದ ಒಗ್ಗಟ್ಟು, ಅನ್ಯೋನ್ಯತೆ ಇತ್ಯಾದಿಗಳು ಒಂದೇ ರಕ್ತ ಸಂಬಂಧದ ಕಾರಣದಿಂದಾದವು. ಹೀಗೆ ಕುಟುಂಬದ ಒಳಗೆ ಹಾಗೂ ಮುಂದೆ ಸಮಾಜದಲ್ಲಿ

ವಾರಸುದಾರಿಕಾ ಪರಿಕಲ್ಪನೆಯಲ್ಲಿ ಬಳಿ ಮೂಲಅಂಶವಾಗಿ ಕಾರ್ಯನಿರ್ವಹಿಸಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು.[31] ಹುಟ್ಟು, ಭೋಗ, ಸಾವು ಎಂಬ ಜೀವನದ ಅವಿಭಾಜ್ಯ ಅಂಗಗಳೊಂದಿಗೆ ಕುಟುಂಬದ ಬಂಧುತ್ವ ವ್ಯವಸ್ಥೆ ಬೇರ್ಪಡಿಸಲಾಗದ ಸಂಬಂಧ ಹೊಂದಿರುವ ಹಿನ್ನೆಲೆಯಲ್ಲಿ ವಿವಾಹ ಮತ್ತು ಕುಟುಂಬ ಎಂಬಿತ್ಯಾದಿ ವ್ಯವಸ್ಥೆಗಳ ಜೈವಿಕ ತಳಪಾಯದೊಂದಿಗೆ ಸಾಮಾಜಿಕ ಪ್ರಾಮುಖ್ಯತೆ ಗಳಿಸಿದೆ.ಈ ಎಲ್ಲಾ ವ್ಯವಸ್ಥೆ-ಕಾರ್ಯಚಟುವಟಿಕೆಯಲ್ಲಿ ಸ್ತ್ರೀ/ಮಹಿಳೆ ನಿರ್ಣಾಯಕವಾಗಿ ಪಾತ್ರ ನಿಭಾಯಿಸುವುದರಿಂದ ಮಾನವಶಾಸ್ತ್ರಜ್ಞರು ಮಾತೃಪ್ರಧಾನತೆಯು ವಿಶ್ವದ ಸಂಸ್ಕೃತಿಯ ತಳಹದಿ ಎಂಬ ತೀರ್ಮಾನವನ್ನು ವ್ಯಕ್ತಪಡಿಸಿದ್ದಾರೆ.[32] ಮಾತ್ರವಲ್ಲ ಆನಂತರದ ಬದಲಾವಣೆಗಳಲ್ಲಿ ಸಾಂದರ್ಭಿಕ ನೆಲೆಯವುಗಳಾಗಿವೆ. ಮಾನವನು ಕಾಡು ಜೀವನವನ್ನು ಬಿಟ್ಟು ನಾಡು ಅಥವಾ ನಾಗರೀಕ ಜೀವನ ಆರಂಭಿಸಿದ ಮೊದಲ ಹಂತದಲ್ಲಿ ಮಾತೃಪ್ರಧಾನ ಸಂಸ್ಕೃತಿಯಲ್ಲಿಯೇ ಬದುಕುತ್ತಿದ್ದನಾದರೂ, ಆರ್ಥಿಕತೆಯ ವಿಕಾಸ ಅಥವಾ ಗರಿಗೆದರುವಿಕೆಯಿಂದ ಇಲ್ಲವೇ ಭೌತಿಕ ನೆಲೆಗಟ್ಟಿನಲ್ಲಾದ ಬದಲಾವಣೆಗಳಿಂದಾಗಿ ಮಾತೃಪ್ರಧಾನತೆಯ ಜನಸಮುದಾಯಗಳು ನಿಧಾನವಾಗಿ ಪಿತೃಪ್ರಧಾನ ವ್ಯವಸ್ಥೆಗೆ ವಾಲಿಕೊಂಡವು.[33] ಬಳಿ, ಕುಲ, ಗೋತ್ರ, ವಂಶ ಮುಂತಾದವುಗಳು ಅಧಿಮ ಸಂಸ್ಕೃತಿಗಳ ಸಾಮಾಜಿಕ ಸಂಬಂಧದೊಂದಿಗೆ ಗುರುತಿಸಿಕೊಂಡಿರುವುದರಿಂದ ಬಳಿ, ಆ ಸಂಸ್ಕೃತಿಯ ಕುಲಲಾಂಛನದ ಮುಂದುವರೆದ ಕೊಂಡಿ. ಇಲ್ಲಿನ ಬಹುಸಂಖ್ಯೆಯ ಸಮುದಾಯಗಳ ಬಳಿ, ಕುಲ, ಗೋತ್ರ ಮುಂತಾದವುಗಳು ಮಾತೃವಂಶೀಯ ಕುಟುಂಬ ವ್ಯವಸ್ಥೆಯ ಸಂಬಂಧವನ್ನು ಇಲ್ಲವೇ ಸಮುದಾಯಗಳ ವಂಶಿಕ ಅರ್ಥವನ್ನು ಸೂಚಿಸುವ ಪದಗಳಾಗಿವೆ. ಆದುದರಿಂದ ಬಳಿ ಅಥವಾ ಬರಿ ಅಥವಾ ಬಳ್ಳಿ ಅಡಿಪಾಯದ ಕುಟುಂಬದ ಒಳಗಿನ ಶಾಖೆಗಳನ್ನು ಗುರುತಿಸುವಾಗ ಮೂಲ ತಾಯಿಯ ಹೆಸರನ್ನು ಅಂದರೆ ತೊಟ್ಟನ್ನು ಗುರುತಿಸಬೇಕಾಗುತ್ತದೆ. ಕಾಯಿಗೂ ಮರಕ್ಕೆ ಇರುವ ಸಂಬಂಧದಂತೆ ತೊಟ್ಟು ತಾಯಿಗೂ ಬಳ್ಳಿಗೂ ಕೊಂಡಿಯಾಗಿ ಕೆಲಸ ಮಾಡುತ್ತದೆ. ಇದು ಕುಟುಂಬದ ಒಳಗಿನ ಶಾಖೆಗಳನ್ನು ಸೂಚಿಸುವುದರಿಂದ ಮೂಲತಾಯಿಯ ಹೆಸರಿನ ಸಂಬಂಧ, ಅಧಿಕಾರಗಳನ್ನು ಮುಂದುವರೆಸಿಕೊಂಡು ಬರುತ್ತದೆ. ಇಲ್ಲಿನ ಬಹುಸಂಖ್ಯೆಯ ಸಮುದಾಯಗಳ ರಚನೆಯ ಅಡಿಪಾಯವಾಗಿರುವ ಬಳಿ-ಬಂಧು-ಬಂಧುತ್ವ-ಮಾತೃಪ್ರಧಾನತೆಯೊಂದಿಗೆ ಸಮೀಕರಣಗೊಂಡಿರುವುದರಿಂದ ಬಳಿ ವ್ಯವಸ್ಥೆಯನ್ನು ಈ ಪ್ರದೇಶದ ಸಮುದಾಯಗಳ ಕೊಡುಗೆ ಎಂಬುವುದಾಗಿ ವಿದ್ವಾಂಸರು ಪರಿಗಣಿಸಿದ್ದಾರೆ.[34] ಮಾತ್ರವಲ್ಲದೇ ಬಳಿ ಅಥವಾ ಬರಿ ಸೂಚ್ಯವಾಗಿ ರಾಜಕೀಯ ಮತ್ತು ಸಾಂಸ್ಕೃತಿಕ ಸೀಮೆ ಅಥವಾ ಎಲ್ಲೆ ಅಥವಾ ಗಡಿ ಎನ್ನುವ ಅರ್ಥವನ್ನು ಸಹ ನೀಡುತ್ತದೆ. ಕನ್ನಡದಲ್ಲಿ ಉಕ್ತವಾಗಿರುವ ಬಳಿಗಳು ಸಹ ರಾಜಕೀಯ ಹಾಗೂ ಸಾಮಾಜಿಕವಾದ ಭೌಗೋಳಿಕ ವಿಭಜನೆಗಳನ್ನು ಸಂಕೇತಿಸುತ್ತವೆ.

## ಮಾತೃವಂಶೀಯತೆ, ಕೃಷಿ ಮತ್ತು ಅಧಿಕಾರದ ನೆಲೆಗಳು.

ತುಳುನಾಡಿನ ಅಲಿಖಿತ ಆಕರಗಳ ಪ್ರಕಾರ ಸಿರಿ ಪಾಡ್ದನ, ಕಲ್ಲುರ್ಟಿ ಪ್ರಸರಣ, ಬಳಜೇವು ಮಾನಿಗ, ಪಾಂಗೋಲ್ಲ ಬನ್ನಾರ, ಕೋಟೆದ ಬಬ್ಬು, ಜುಮಾದಿ ಪ್ರಸರಣ ಅಣ್ಣ ತಂಗಿಯರ ಬಳಿ-ಬಂಧು-ಬಂಧುತ್ವಗಳು ಮಾತೃವಂಶೀಯತೆಯ ಸುತ್ತ ಹೆಣೆದು ಅವುಗಳ ಇತಿಹಾಸ ಬಳಿ ಆಧಾರದಲ್ಲಿ ರೂಪುಗೊಂಡಿತ್ತು.[35] ಜೊತೆಗೆ ಬಳಿ ವ್ಯವಸ್ಥೆ ಮಾತೃಮೂಲತೆ ಹಾಗೂ ಆಳಿಯಕಟ್ಟನಂತಹ ಸಾಮಾಜಿಕ ಅಧಿಕಾರಕ್ಕೆ ಸಂಬಂಧಿಸಿದ ಉಲ್ಲೇಖಗಳು ಶಾಸನಗಳಲ್ಲಿ ಲಭ್ಯವಿರುವುದರಿಂದ ಅವುಗಳ ಐತಿಹಾಸಿಕತೆ ಸ್ಪಷ್ಟಗೊಳ್ಳುತ್ತದೆ.[36] ಮೂಲಭೂತವಾಗಿ ಕುಟುಂಬದ ತಾಯಿ ಬೇರಾಗಿದ್ದ ಬಳಿ ನಂತರದ ವ್ಯವಸ್ಥೆಯಲ್ಲಿ ಭೂಮಿಯ ವಿಭಜನೆಯ ಸಾಧನವಾಗಿಯೂ ಪರಿವರ್ತಿತವಾಯಿತು. ಮುಖ್ಯವಾಗಿ ಬಳಿ ಆಧಾರಿತ ಮಾತೃಪ್ರಧಾನ ಸಮಾಜದಲ್ಲಿ ಒಂದು ಕುಟುಂಬಕ್ಕೆ ತಾಯಿಯೇ ಅಧಿಕಾರಿಣಿ ಮತ್ತು ಆಕೆಯಿಂದಲೇ ಕುಟುಂಬದ ಸ್ಥಾಪನೆ, ಐಕ್ಯತೆ ಮತ್ತು ಮುಂದುವರಿಯುವಿಕೆ. ಹೀಗೆ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಯ ಹಕ್ಕು ತಾಯಿಮೂಲ ಆಧಾರದ ಮೇಲೆ ನಿರ್ಧಾರವಾಗುತ್ತಿತ್ತು. ತಾಯಿಯ ನೆಂಟರು ಮತ್ತು ಸಂಬಂಧಿಕರೊಂದಿಗಿನ ಆ ವ್ಯಕ್ತಿಯ ಸಂಬಂಧವು ಆತನ ಕರ್ತವ್ಯ, ಸವಲತ್ತು, ಕಟ್ಟುಪಾಡು ಇತ್ಯಾದಿಗಳನ್ನು ನಿರ್ಧರಿಸುತ್ತಿತ್ತು. ತಾಯಿಯ ಹಕ್ಕು ಎಂದಾಗ ಸಂತತಿ, ವಾರಸುದಾರಿಕೆ, ಅಧಿಕಾರ, ವಿವಾಹಸಂಬಂಧ ಎಲ್ಲವೂ ಸೇರಿರುವುದರಿಂದ ವಾರಸುದಾರಿಕೆ ಮುಂದುವರೆಯುವಲ್ಲಿ ತಾಯಿಯ ಹಕ್ಕು ಇಲ್ಲವೇ ಮಾತೃಪ್ರಧಾನತೆ ನಿರ್ಣಾಯಕ ಪಾತ್ರವನ್ನು ವಹಿಸಿತ್ತೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.[37]

ತುಳುನಾಡಿನ ಸಂಸ್ಕೃತಿಯ ತಳಹದಿಯು ಮೂಲನಿವಾಸಿಗಳ ಜೀವನ ಶೈಲಿಯ ವ್ಯವಸ್ಥೆಯಲ್ಲಿ ಬೇರು ಬಿಟ್ಟಿರುವುದರಿಂದ ಇಲ್ಲಿನ ತಳಮಟ್ಟದ ಅಧಿಕಾರ ವ್ಯವಸ್ಥೆ ಮತ್ತು ಅಧಿಕಾರೀ ಸಂಬಂಧಗಳು ಮಾತೃಮೂಲತೆಯ ಸುತ್ತ ಹಾಸುಹೊಕ್ಕಾಗಿತ್ತು.[38] ಮಾತ್ರವಲ್ಲ ಕೃಷಿ ವ್ಯವಸ್ಥೆಯು ಸಹ ಇದೇ ತಳಹದಿಯಲ್ಲಿ ರೂಪಿಸಲ್ಪಟ್ಟಿದ್ದು ಕೃಷಿ ಆಧಾರದಲ್ಲಿ ಬದುಕುತ್ತಿದ್ದ ಸಮುದಾಯಗಳಲ್ಲಿ ಹೆಚ್ಚಿನವುಗಳು ಮಾತೃಮೂಲತೆಯ ಪರಿಕಲ್ಪನೆಯಲ್ಲಿ ವಿಕಾಸಗೊಂಡವು.[39] ಆದರೆ ಈ ವ್ಯವಸ್ಥೆಗಳನ್ನು ಹತೋಟಿಯಲ್ಲಿಡುವ ರಾಜಕೀಯ ಶಕ್ತಿಗಳ ಅಧಿಕಾರ ಮಾತೃಮೂಲತೆಯಲ್ಲದೇ ನಿಧಾನವಾಗಿಯೂ ಪಿತೃಮೂಲಿಯವಾಗಿಯೂ ಪರಿವರ್ತನೆಗೊಂಡು ಕಾಲಾನುಕ್ರಮದಲ್ಲಿ ಈ ಭಾಗದ ವಾರಸಾ ಅಧಿಕಾರವಾಗಿಯೇ ಬಿಂಬಿತವಾಯಿತು. ಇಲ್ಲಿನ ಪರಂಪರೆಗಳ ಆಧಾರದಲ್ಲಿ ಹೇಳುವುದಾದರೆ ಮಾತೃವ್ಯವಸ್ಥೆಯ ಬೆಳವಣಿಗೆಯ ಹಿಂದೆ ಹಲವಾರು ಅಂಶಗಳಿದ್ದು ಅವುಗಳಲ್ಲಿ ಮುಖ್ಯವಾಗಿರುವುದು ಸಾಮುದಾಯಿಕ ಕೃಷಿ, ಕೃಷಿಯ ವಿಸ್ತಾರ ಮತ್ತು ಕೃಷಿ ಅಧಿಕಾರ.[40]

'ಕೃಷಿಯು ಮಹಿಳೆಯರ ಅವಿಷ್ಕಾರ ಎಂಬುವುದು ಕೆಲವು ಅಧ್ಯಯನಗಳು ವಾದಿಸಿವೆ.[41] ಅವುಗಳ ಪ್ರಕಾರ ಮಹಿಳೆಯರ ಮಗ್ನತೆ ಪ್ರಾಥಮಿಕವಾಗಿ ಕೃಷಿಯ ಮೇಲೆಯೇ ಕೇಂದ್ರಿತವಾಗಿತ್ತು. ಇದು ಅವರ ಆರ್ಥಿಕ ಹಾಗೂ ಸಾಮಾಜಿಕ ಸ್ಥಾನವನ್ನು ಉನ್ನತ ಮಟ್ಟದಲ್ಲಿರಿಸಿ ಔನ್ನತ್ಯ ಸಾಧಿಸಲು ಸಹಕಾರಿಯಾದರೆ ಈ ಔನ್ನತ್ಯವು ಸಮುದಾಯಗಳ ಆರ್ಥಿಕ ಅಡಿಪಾಯವಾಗಿ ಅದರ ಮಟ್ಟವನ್ನು ತೋರಿಸುತ್ತಿತ್ತು ಎಂಬುವುದು ವಿದ್ವಾಂಸರ ಅಭಿಪ್ರಾಯ.[42] ಅಂತೆಯೇ ಈ ವಿಚಾರಗಳು ಇಲ್ಲಿನ ಸಮಾಜ ಮತ್ತು ಸಂಸ್ಕೃತಿಯ ಮೇಲೆ ಪ್ರಭಾವಿಸಿರುವುದನ್ನು ಶಾಸನಗಳು, ಮೌಖಿಕ ಆಕರಗಳು ಹಾಗೂ ವಸಾಹತುಶಾಹಿ ಅಧಿಕಾರ ವಹಿಸಿದ ನಂತರದ ಪ್ರಥಮ ಜಿಲ್ಲಾ ಕಲೆಕ್ಟರನ ಕಾರ್ಯಕ್ಷೇತ್ರದ ಅಧ್ಯಯನಗಳು ದೃಢಗೊಳಿಸಿವೆ.[43] ಸಮಾಜದ ಕೆಳವರ್ಗಗಳ ಬಗ್ಗೆ ಅಧ್ಯಯನ ಮಾಡಿದ ಕಾಂಚ ಈಳಯ್ಯನವರು ಈ ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ. ಆಧೀನ ಸಂಸ್ಕೃತಿಯ ಮಹಿಳೆಯರು ಉತ್ಪಾದನೆಯ ಮೂಲಕ ಸಮಾಜವನ್ನು ರಚನಾತ್ಮಕವಾಗಿ ಕಟ್ಟಿದ್ದರೆ ಪ್ರಬಲ ಸಂಸ್ಕೃತಿ ಉತ್ಪಾದನೆಯಲ್ಲಿ ತೊಡಗಿಕೊಳ್ಳದೇ ಸಮಾಜದ ಮೇಲೆ ಹತೋಟಿಯನ್ನು ಸಾಧಿಸಲು ಸರ್ವಪ್ರಯತ್ನ ಮಾಡಿ ಅದರಲ್ಲಿ ಯಶಸ್ವಿಯಾಯಿತು. ಮಾತ್ರವಲ್ಲ ಇದೇ ಪ್ರಬಲ ಸಮುದಾಯಗಳು ಸಮಾಜದ ಆರೋಗ್ಯ ಹಾಗೂ ನೈರ್ಮಲ್ಯ ಕಾಪಾಡುವ ಸಮುದಾಯಗಳನ್ನು ನಿರ್ಲಕ್ಷಿಸಿ ಸಮಾಜದ ಮುಖ್ಯವಾಹಿನಿಯಿಂದ ಬೇರ್ಪಡಿಸಿದ್ದಾರೆ.[44] ಸಂಕ್ಷಿಪ್ತವಾಗಿ ಹೇಳುವುದಾದರೆ ತುಳುನಾಡಿನ ಸಮಾಜದ ಕೆಳವರ್ಗಗಳು ಅಧಿಕಾರ ರೂಪುಗೊಳ್ಳುವಲ್ಲಿನ ಪ್ರಮುಖ ಸ್ತರಗಳಲ್ಲಿ ಅಧಿಕಾರಸ್ತರ ಪರವಾಗಿ ಶ್ರಮದಾಯಕ ಕೆಲಸಗಳನ್ನು ಮಾಡಿ ನಿರ್ದಿಷ್ಟ ಕಾಲಘಟ್ಟದಲ್ಲಿ ಒತ್ತಡಕ್ಕೆ ಒಳಗಾಗಿದ್ದರು ಎಂಬುದು ವಿದ್ವಾಂಸರ ವಾದ. ಉದಾಹರಣೆಗೆ ಗ್ರಾಮದೇವತೆಗಳನ್ನು ಪೂಜಿಸುತ್ತಿದ್ದ ಜನವರ್ಗ ಅರ್ಥಿಕ ಸಾಮಾಜಿಕ ಕಾರಣಗಳಿಂದ ಶಿಷ್ಟ ಜನವರ್ಗವಾಗಿ ಪರಿವರ್ತಿತರಾಗಿರುವುದು. ಇಲ್ಲವೇ ಒತ್ತಡಕೊಳಪಟ್ಟು ಶಿಷ್ಟ ವ್ಯವಸ್ಥೆಯ ಒಕ್ಕಲಾಗುವ ಸಂದರ್ಭ. ಈ ಘಟನೆಗಳು ಆ ಸಂದರ್ಭದಲ್ಲಿ ಏರ್ಪಟ್ಟ ಸಾಮಾಜಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳಿಗೆ ಸಾಕ್ಷಿಯಾಗಿವೆ. ಈ ಎಲ್ಲಾ ಅಂಶಗಳು ಎರಡು ಪ್ರಮುಖ ವಿಚಾರಗಳನ್ನು ಪ್ರಸ್ತಾಪಿಸಿವೆ. ಒಂದು, ಮೇಲ್ವರ್ಗದ ಅಥವಾ ಪ್ರಬಲ ಸಂಸ್ಕೃತಿಯ ಸಮುದಾಯಗಳು ಅಧಿಕಾರ ಕೇಂದ್ರಗಳಾಗಿ ಕಾರ್ಯನಿರ್ವಹಿಸಿದರೆ ಆಧೀನ ಸಂಸ್ಕೃತಿಗಳು ಕೃಷಿಯೂ ಸೇರಿದಂತೆ ಶ್ರಮದಾಯಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು. ಆದರೆ ಕಾಲಕ್ರಮೇಣ ಕೃಷಿ ಚಟುವಟಿಕೆಗಳು ಆರ್ಥಿಕ ಬಲಾಢ್ಯತೆಯನ್ನು ನೀಡಿದಾಗ ಭೂಮಿಯ ಮತ್ತು ಅಧಿಕಾರದ ವಾರಸುದಾರಿಕೆಯು ನಿಧಾನವಾಗಿ ಆಧೀನ ಸಂಸ್ಕೃತಿಗಳ ಕಡೆ ವಾಲಿಕೊಂಡವು.ಅದಾಗ್ಯೂ ಪ್ರಬಲ ಸಂಸ್ಕೃತಿ ಅಥವಾ ಅಧಿಕಾರಸ್ಥರು ವಾರಸುದಾರಿಕೆಯ ಸ್ಥಾನಮಾನಗಳನ್ನು ತಮ್ಮಲ್ಲೇ

ಕೇಂದ್ರಿಕರಣಗೊಳಿಸಿ ಮುಂದುವರೆಸಲು ಪ್ರಯತ್ನಿಸಿದ್ದರು.[45] ಈ ವಿದ್ಯಾಮಾನಗಳು ಅಧಿಕಾರಸ್ಥರ ಅಧಿಕಾರ ಸಂಬಂಧಗಳು ಗಟ್ಟಿಗೊಳ್ಳುವಲ್ಲಿನ ಮಾನದಂಡಗಳಾಗಿ ಪರಿವರ್ತಿತಗೊಂಡಿತ್ತಲ್ಲದೇ ಶ್ರಮದಾಯಕ ಕೆಲಸಗಳು ಕೃಷಿ ಅಧಿಕಾರ ರೂಪುಗೊಳ್ಳುವಲ್ಲಿನ ಸಾಮಾಜಿಕ ವಾರಸುದಾರಿಕೆಯಾಗಿ ಮುಂದುವರೆದಿರುವುದನ್ನು ವಿದ್ವಾಂಸರು ವಿಶ್ಲೇಷಿಸಿದ್ದಾರೆ.[46] ತುಳುನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಯಾಜಮಾನ್ಯದಿಂದಾಗಿ ಕಾಲಘಟ್ಟದಲ್ಲಿ ಈ ರೀತಿಯ ಬೆಳವಣಿಗೆ ಇಲ್ಲವೇ ಸ್ಥಿತ್ಯಂತರಗಳಾಗಿರುವುದನ್ನು ವಾರಸುದಾರಿಕೆ ರೂಪುಗೊಳ್ಳುವ ನಿರಂತರತೆಯಲ್ಲಿ ಪರಿಗಣಿಸಬೇಕಾಗುತ್ತದೆ.[47]

ತುಳುನಾಡಿನ ಸಮುದಾಯಗಳ ಚಾರಿತ್ರಿಕ ಹಿನ್ನೆಲೆಯ ಪ್ರಕಾರ ಹೆಚ್ಚಿನ ಜನಸಮುದಾಯಗಳು ಮಾತೃಪ್ರಧಾನ ಭೂಮಿಕೆಯಲ್ಲಿಯೇ ತಮ್ಮ ಅನನ್ಯತೆಗಳನ್ನು ಕಾಯ್ದುಕೊಂಡು ಬಂದವುಗಳು. ಆದರೆ ಸಾಮಾನ್ಯಶಕೆ ನಾಲ್ಕನೇ ಶತಮಾನದಿಂದ ಹದಿನಾಲ್ಕನೇ ಶತಮಾನದ ವರೆಗೆ ಈ ಪ್ರದೇಶ ಅಳೂಪರ ಆಳ್ವಿಕೆಗೆ ಒಳಪಟ್ಟಿದ್ದರೂ,[48] ಸುಮಾರು ಒಂದು ಸಾವಿರ ವರ್ಷಗಳ ಅಭಾಧಿತ ಆಳ್ವಿಕೆಯ ಕಾಲದಲ್ಲಿ ಅವರು ಇಲ್ಲಿನ ಬಹುಸಂಖ್ಯಾತ ಸಮುದಾಯಗಳ ಮಾತೃಮೂಲೀಯ ಕ್ರಿಯೆಗಳು ಅಥವಾ ಕಟ್ಟುಕಟ್ಟಳೆಗಳು ಇಲ್ಲವೇ ಸ್ಥಳೀಯ ಹಂತದ ರಾಜಕೀಯ ವ್ಯವಸ್ಥೆಗಳಲ್ಲಿ ರೂಪಿತವಾದ ಸಾಮಾಜಿಕ ರೂಢಿಸಂಪ್ರದಾಯಗಳನ್ನು ಅನುಸರಿಸಲಿಲ್ಲ. ಮಾತ್ರವಲ್ಲ ಅವುಗಳು ಹೆಚ್ಚುಕಡಿಮೆ ಕಡೆಗಣಿಸಲ್ಪಟ್ಟವು.[49] ಆದರೆ ತಮ್ಮ ಆಡಳಿತ ಕ್ರಮದಲ್ಲಿ ಇಲ್ಲಿಯ ರೀತಿ ರಿವಾಜುಗಳನ್ನು ಸೇರ್ಪಡೆಗೊಳಿಸಿಲ್ಲದಿದ್ದರೂ, ಸ್ಥಳೀಯ ರಾಜಕೀಯ ವಿನ್ಯಾಸಗಳನ್ನು ಮಾತೃಪ್ರಧಾನ ವ್ಯವಸ್ಥೆಯಲ್ಲಿ ಮುಂದುವರೆಸಿ, ಅಧಿಕಾರ ಮುಂದುವರೆಸಿಕೊಂಡು ಬರಲು ಅಥವಾ ಯಥಾಸ್ಥಿತಿಯಲ್ಲಿಡಲು ಅವರು ಅಡ್ಡಿಪಡಿಸಲಿಲ್ಲ. ಇತಿಹಾಸತಜ್ಞರ ಪ್ರಕಾರ ಇದು ರಾಜಕೀಯ ಮುತ್ಸದ್ದಿ ಅಳೂಪರ ಆಡಳಿತಾತ್ಮಕ ತಂತ್ರಗಾರಿಕೆಯ ಒಂದು ಭಾಗವಾಗಿತ್ತು.

ಸಾಮಾನ್ಯಶಕೆ ಹದಿನಾಲ್ಕನೇ ಶತಮಾನದ ನಂತರದ ರಾಜಕೀಯ ಬೆಳವಣಿಗೆಯಲ್ಲಿ ಅಲೂಪರ ಪ್ರಭಾವ ಕುಗ್ಗಲಾರಂಭಿಸಿದ ತರವಾಯು ಅಂದರೆ ವಿಜಯನಗರದ ಆಳ್ವಿಕೆಯ ಕಾಲದಲ್ಲಿ ತುಳುನಾಡಿಗೆ ಅನ್ಯ ಪ್ರದೇಶಗಳಿಂದ ಜನಸಮುದಾಯಗಳ ವಲಸೆಯ ಗತಿ ವೇಗವನ್ನು ಪಡೆಯಿತು ಎಂಬುವುದು ಚರಿತ್ರಕಾರ ಅಭಿಪ್ರಾಯ. ಈ ರೀತಿ ಜನಸಮುದಾಯಗಳ ಚಲನಶೀಲತೆಯಿಂದ ಇಲ್ಲಿನ ಆರ್ಥಿಕತೆ ವೇಗದ ಜೊತೆಗೆ ಬದಲಾವಣೆಗೆ ತೆರೆದುಕೊಂಡಿತು.[50] ವಲಸೆಯಲ್ಲಾದ ಹೆಚ್ಚಳ, ಪರಿಣಾಮವಾಗಿ ಸ್ಥಳೀಯ ಆಡಳಿತ ಮತ್ತು ಸಾಂಸ್ಕೃತಿಕ ವ್ಯವಸ್ಥೆಯಲ್ಲಾದ ಬದಲಾವಣೆಗಳು ತುಳುನಾಡಿನ ಮೂಲಭೂತ ಸ್ವರೂಪದಲ್ಲಿ ಅಮೂಲಾಗ್ರ ಬದಲಾವಣೆ ತಂದವು.ಮಾತ್ರವಲ್ಲ ವಲಸಿಗರು ಮೂಲ ಸಂಸ್ಕೃತಿಯ ತತ್ವಗಳನ್ನು

ಅನುಸರಿಸುವುದರ ಜೊತೆಗೆ ತಮ್ಮ ಜೀವನ ಶೈಲಿಯನ್ನು ವಾಸ್ತವಕ್ಕೆ ಅನುಗುಣವಾಗಿ ರೂಢಿಸಿಕೊಂಡು ಈ ಪ್ರದೇಶದ ಅನನ್ಯತೆಗಳೊಂದಿಗೆ ಗುರುತಿಸಿಕೊಂಡಿರುವುದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ.[51] ಅಳೂಪರ ಅಧಿಕಾರ ಕೊನೆಗೊಂಡಾಗ ಆಗಾಗಲೇ ಈ ಭಾಗದ ರಾಜಕೀಯ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯರಾಗಿದ್ದ ಸ್ಥಳೀಯ ಅಧಿಕಾರಿ ವರ್ಗಗಳು ಪ್ರವರ್ಧಮಾನಕ್ಕೆ ಬಂದು ಇಲ್ಲಿನ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸ್ಥಿತ್ಯಂತರಗಳು ಆರಂಭಗೊಂಡವು.[52] ಇದು ವಾರಸುದಾರಿಕೆಯ ಕಲ್ಪನೆಯಲ್ಲಿ ಸಾಕಷ್ಟು ಬದಲಾವಣೆ ತಂದಿತ್ತು. ಅಂತೆಯೇ ಆಗ ಪ್ರಚಲಿತದಲ್ಲಿದ್ದ ಚಾರಿತ್ರಿಕ ಇಲ್ಲವೇ ಐತಿಹ್ಯ ಆಧಾರಿತ ಭೂತಾಳಪಾಂಡ್ಯರಾಯನ ಅಳಿಯಕಟ್ಟಿನ ಕಟ್ಟುಕಟ್ಟಳೆ ರೂಪುಗೊಳ್ಳುವ ಸಂದರ್ಭದ ಚಾರಿತ್ರಿಕ ಬೆಳವಣಿಗೆಗಳು ಸಹ ಇಲ್ಲಿನ ವಾರಸುದಾರಿಕೆಯ ವಿಕಾಸಕ್ಕೆ ತಮ್ಮದೇ ಕೊಡುಗೆಗಳನ್ನು ನೀಡಿದವು.[53]

## ಮಾತೃವಂಶೀಯ ವಾರಸುದಾರಿಕೆಯ ಪಲ್ಲಟ

ಸಾಮಾನ್ಯಶಕೆ ನಾಲ್ಕನೇ ಶತಮಾನದಿಂದ ತುಳುನಾಡಿನ ಸಾಮಾಜಿಕ ಚರಿತ್ರೆಯನ್ನು ಅವಲೋಕಿಸಿದಾಗ ರಾಜಕೀಯ ಮತ್ತು ಧಾರ್ಮಿಕ ಬದಲಾವಣೆಗಳ ನಡುವೆ ಮಾತೃಪ್ರಧಾನತೆಯ ಪ್ರಭಾವ ಕ್ಷೀಣಗೊಂಡಿತು.[54] ಅಲ್ಲದೇ ಈ ನಿರ್ವಾತವನ್ನು ಪಿತೃಪ್ರಧಾನ ವ್ಯವಸ್ಥೆಯು ಅವರಿಸಿಕೊಂಡು ಒಂದು ಬಗೆಯ ಸಂಘರ್ಷಕ್ಕೆ ಬಾಗಿಲು ತೆರೆದುಕೊಂಡಿತು. ಈ ಮಾತೃವಂಶೀಯ ಮತ್ತು ಪಿತೃವಂಶೀಯ ವ್ಯವಸ್ಥೆಯ ಸಾಮಾಜಿಕ ಸಂಘರ್ಷವು ಹಲವು ಚಾರಿತ್ರಿಕ ಆಯಾಮಗಳನ್ನು ನಿರ್ಮಿಸಿತು. ಸಾಂಸ್ಕೃತಿಕ ವಲಯದ ಚರಿತ್ರೆಯಲ್ಲೂ ಮಾತೃವಂಶೀಯತೆಯ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಗಳಲ್ಲಿ ಆಳಿಯ ಸಂತಾನಕಟ್ಟಿನ ಸೇರ್ಪಡೆಯಿಂದಾಗಿ ಗೊಂದಲಗಳು ಸೃಷ್ಟಿಯಾದವಲ್ಲದೇ ಪ್ರಾದೇಶಿಕ ಚರಿತ್ರೆಯ ನೆಲೆಯನ್ನು ಬದಲಾಯಿಸಿತು ಎಂಬುವುದು ಚರಿತ್ರಕಾರರ ನಿಲುವು. ಉದಾಹರಣೆಗೆ ವಸಾಹತುಪೂರ್ವದಲ್ಲಿ ಉಳ್ಳಾಲವನ್ನು ಕಾರ್ಯಕ್ಷೇತ್ರವಾಗಿಸಿದ ಅಬ್ಬಕ್ಕಂದಿರ ಸಾಹಸ ಇತಿಹಾಸದ ಪುಟಗಳಲ್ಲಿ ಸಕರಾತ್ಮಕವಾಗಿ ದಾಖಲುಗೊಂಡರೂ ಮಾತೃರೂಪಿ ಸಮಾಜವೊಂದು ಆಳಿಯ ಸಂತಾನಕಟ್ಟಿನ ಪ್ರಾರಂಭದಿಂದ ಪಿತೃರೂಪಿ ಸಮಾಜವಾಗಿ ಪರಿವರ್ತನೆಗೊಂಡಿರುವುದು. ಇದಲ್ಲದೇ ಅಬ್ಬಗ-ದಾರಗ, ಕಚ್ಚೂರಮಾಲ್ದಿ, ಕಲ್ಲುರ್ಟಿ, ಕಾಡೆದಿ, ಜುಮಾದಿ, ತನ್ನಿಮಾನಿ, ದಾರು, ದೇಯಿ, ಮಾಯಾಂದಾಲ್, ಸಾಮು, ಸೊನ್ನೆ, ಸೋಯಿಬೈದೆದಿ ಮುಂತಾದ ಕಥಾನಕಗಳನ್ನು ಪರಿಶೀಲಿಸಿದಾಗ ಮುಖ್ಯವಾಗಿ ‘ಸಿರಿ’ ಸಾಮಾಜಿಕ ಚೌಕಟ್ಟಿನಲ್ಲಿ ಮಾತೃರೂಪಿ ಸಮಾಜ, ಸ್ಥಳೀಯ ಸಾಮಾಜಿಕ ಪಲ್ಲಟದ ವ್ಯವಸ್ಥೆಗಳಲ್ಲಿ ಅಧಿಕಾರದ ದಾಯಿತ್ವವನ್ನು ಕಳೆದುಕೊಳ್ಳುವ ಸಂದರ್ಭಗಳು ಸ್ಪಷ್ಟಗೊಂಡಿರುವುದು.[55] ಇಂತಹದೇ ಮಾಹಿತಿಗಳು ತುಳುನಾಡಿನ ಇನ್ನೂ

ಹಲವಾರು ಕಥಾನಕಗಳಲ್ಲಿ ದಾಖಲುಗೊಂಡಿವೆ. ಅವುಗಳ ಪ್ರಕಾರ ಶ್ರಮಿಕವರ್ಗವು ಪಾಳೇಯಗಾರಿಕಾ ವ್ಯವಸ್ಥೆಯ ಶೋಷಣೆ ಅಥವಾ ದಬ್ಬಾಳಿಕೆಗೆ ಒಳಗಾಗಿತ್ತು. ಕಲ್ಲುರ್ಟಿ ವರ್ಗರಹಿತ ಸಮಾಜದ ಸ್ತ್ರೀಪ್ರತಿನಿಧಿಯಾಗಿ, ಶೋಷಣೆಯ ವಿರುದ್ಧ ಎಚ್ಚೆತ್ತು ಅಧಿಕಾರೀ ಅಥವಾ ಪ್ರಭುತ್ವದ ದಬ್ಬಾಳಿಕೆಯ ವಿರುದ್ಧ ಸೆಟೆದು ನಿಂತಿರುವ ವಿದ್ಯಾಮಾನಗಳನ್ನು ವಿಶ್ಲೇಷಿಸಿದಾಗ ಅನಾವರಣಗೊಳ್ಳುವ ವಿಷಯವೇನೆಂದರೆ ಭೂಮಿಯ ಒಡೆತನದಲ್ಲಿ ಪ್ರಭಾವಿಗಳಾಗಿರುವ ಸಮುದಾಯಗಳು ಶೋಷಣೆಯನ್ನು ತಮ್ಮ ಹಕ್ಕು ಅಥವಾ ಅಧಿಕಾರವೆಂಬಂತೆ ಚಲಾಯಿಸಿರುವುದು.[56] ಈ ಬಗೆಯ ಬೆಳವಣಿಗೆಗಳು ಸ್ಥಳೀಯ ಸಾಮಾಜಿಕ ಪಲ್ಲಟದ ಕಾಲದಲ್ಲಿ ಮಾತೃರೂಪಿ ವ್ಯವಸ್ಥೆಯ ನೆಲೆಯನ್ನು ದುರ್ಬಲಗೊಳಿಸಿ ಅಧಿಕಾರದ ದಾಯಿತ್ವವನ್ನು ಕಸಿದುಕೊಳ್ಳುವ ಪ್ರಯತ್ನವಾಗಿತ್ತಲ್ಲದೇ ಅದರ ನೆಲೆಯನ್ನು ಅದಕ್ಕಿಂತ ಭಿನ್ನವೂ, ವಿರುದ್ಧವೂ ಆಗಿದ್ದ ಪಿತೃಪ್ರಧಾನ ವ್ಯವಸ್ಥೆಯೊಂದಕ್ಕೆ ವರ್ಗಾಯಿಸುವುದಾಗಿತ್ತು.[57]

ಮಾತೃಪ್ರಧಾನ ವ್ಯವಸ್ಥೆಯು ಪಿತೃಪ್ರಧಾನ ವ್ಯವಸ್ಥೆಗೆ ಪರಿವರ್ತನೆಗೊಳ್ಳುವ ಸಂದರ್ಭದಲ್ಲಿ ಏರ್ಪಟ್ಟ ಸಂಘರ್ಷಗಳು, ಪಲ್ಲಟದ ಸಂದರ್ಭಗಳು, ಅಳಿಯಸಂತಾನ ಕಟ್ಟಳೆಯ ಪ್ರಾರಂಭದಿಂದ ಪುರುಷಕೇಂದ್ರಿಕೃತ ವ್ಯವಸ್ಥೆಯ ಹುಟ್ಟು, ಅದರ ಆರಂಭಿಕ ಕಾಲಘಟ್ಟದಲ್ಲಿ ಮಾತೃಪ್ರಧಾನತೆಯ ಪ್ರಾಮುಖ್ಯತೆಯನ್ನು ತೋರಿಕೆಗೆ ವೈಭವೀಕರಿಸಿದ ಘಟನೆಗಳು ಮತ್ತು ಪುರುಷಪ್ರಧಾನ ವ್ಯವಸ್ಥೆಯೊಂದು ವಿಕಾಸಗೊಂಡು ಅಧಿಕಾರ ತನ್ನಡೆಗೆ ಸೆಳೆದುಕೊಂಡಾಗ ಆ ವ್ಯವಸ್ಥೆಯಲ್ಲಿ ಮಹಿಳೆ ಎದುರಿಸಿದ ಸಮಸ್ಯೆಗಳು ಮತ್ತು ಅವುಗಳನ್ನು ಎದುರಿಸಿದ ಬಗೆ, ಪುರುಷಕೇಂದ್ರಿಕೃತ ವ್ಯವಸ್ಥೆಯನ್ನು ಸಮರ್ಥಿಸುವ ಶಕ್ತಿಗಳು–ಇವುಗಳೆಲ್ಲವೂ ಆ ಕಾಲದ ವಾರಸುದಾರಿಕೆಯ ಸ್ವರೂಪ ಮತ್ತು ವ್ಯಾಪ್ತಿ ಅರ್ಥೈಸುವಿಕೆಯಲ್ಲಿ ಪ್ರಧಾನವಾಗುತ್ತವೆ.[58]

ಸಾಮಾನ್ಯಶಕೆ ಹದಿನಾಲ್ಕು ಮತ್ತು ಹದಿನೈದನೇ ಶತಮಾನ ಆರ್ಥಿಕ ದೃಷ್ಟಿಯಿಂದ ಬಹಳ ಮುಖ್ಯವಾದ ಕಾಲಘಟ್ಟವಾಗಿದ್ದು, ಆ ಕಾಲಘಟ್ಟದಲ್ಲಿ ಮಾತೃಪ್ರಧಾನತೆಯ ಚಿಂತನೆಗಳು ಪುನರ್‌ವಿಮರ್ಶೆಗೆ ತೆರೆದುಕೊಂಡವೆಂಬುವುದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದರಾದರೂ, ಅವುಗಳಿಗೆ ಸಂಬಂಧಿಸಿದಂತೆ ಭಿನ್ನ ಅಭಿಪ್ರಾಯಗಳು ಇಲ್ಲದಿಲ್ಲ. ಭೂಮಿಯ ಮೇಲಿನ ಒಡೆತನವನ್ನು ಸಾಧಿಸಿಕೊಂಡಿದ್ದ ಹೆಚ್ಚಿನ ಸಮುದಾಯಗಳು ಮಾತೃವಂಶೀಯ ಬಂಧುತ್ವ ನೆಲೆಗಟ್ಟನಲ್ಲಿ ರೂಪುಗೊಂಡು ಆ ಕಾಲದ ಸಾಮಾಜಿಕ, ಧಾರ್ಮಿಕ ವಿಧಿವಿಧಾನ, ಆರಾಧನ ಪದ್ಧತಿಗಳನ್ನು ಕೃಷಿಯೊಂದಿಗೆ ಜೋಡಿಸಿವೆಯಲ್ಲದೇ ಅವುಗಳು ಈ ಶತಮಾನದಲ್ಲಿ ಪಲ್ಲಟಕ್ಕೆ ಒಳಗಾದವು. ಆದರೆ ವಸಾಹತುಪೂರ್ವದ ಅಧಿಕಾರದ ಚಿಂತನೆ ಸಮುದಾಯ ವ್ಯವಸ್ಥೆಯಲ್ಲಿ ಗುರುತಿಸಿಕೊಂಡಿದೆಯಾದರೂ ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅನುಸಂಧಾನದಂತೆ ಪೂರ್ವಪರಂಪರೆಯ ಪಟ್ಟವೇರುವಲ್ಲಿಂದ ಮಾತೃವಂಶೀಯತೆಯ

ಮೂಲವನ್ನು ಕಂಡುಕೊಂಡರೂ ಈ ಸಾಮಾಜಿಕ ಪರಂಪರೆಯ ಬದಲಾವಣೆ, ನಿರ್ಲಕ್ಷ್ಯ ಅಥವಾ ಉಲ್ಲಂಘನೆ ಚರಿತ್ರೆಯ ನಡೆಗಳಲ್ಲಿ ದಾಖಲಾಗದಿರುವುದರಿಂದ ಅವುಗಳ ಪ್ರಾಚೀನತೆ ಅಥವಾ ಅಧುನಿಕತೆಯನ್ನು ಗುರುತಿಸುವುದು ಕಷ್ಟ ಎಂಬುದು ಚರಿತ್ರಕಾರರ ಅಭಿಮತ.

ತುಳುನಾಡಿನ ವಲಸಿಗ ಸಮುದಾಯಗಳು ಅಳಿಯಕಟ್ಟಿನ ಸಂಪ್ರದಾಯಕ್ಕನುಗುಣವಾಗಿ ಜೀವನ ರೂಪಿಸಿಕೊಳ್ಳದಿದ್ದರೂ ಬಳಿ ರೂಢಿಯಾಗಿರಿಸಿಕೊಂಡಿದ್ದ ಮೂಲಸಮುದಾಯಗಳಲ್ಲಿ ಬಂಧು–ಬಂಧುತ್ವ ಆಚರಣೆ ಇತ್ತೆಂಬುವುದು ಸ್ಪಷ್ಟ.[59] ಮಾತ್ರವಲ್ಲ, ಈ ಭಾಗದಲ್ಲಿ ವಾಸ್ತವ್ಯ ಹೂಡಿದ್ದ ಮಲಬಾರಿ ಮಾಪಿಳ್ಳೆ ಹಾಗೂ ಬ್ಯಾರಿ ಸಮುದಾಯಗಳು ಸಾಮಾನ್ಯಶಃ 1937ರ ವರೆಗೂ ಮಾತೃಮೂಲೀಯರಾಗಿದ್ದು, ಷರೀಯತ್ ಕಾನೂನುಗಳು ಕಡ್ಡಾಯವಾದ ನಂತರ ಪಿತೃಮೂಲೀಯತೆಯನ್ನು ಒಪ್ಪಿಕೊಂಡರೆಂಬ ವಾದವಿದೆ.[60] ಈ ಘಟನೆಗಳು ಅನ್ಯ ಸಂಸ್ಕೃತಿಯ ಚಿಂತನೆಗಳು ಸಂಘರ್ಷಕ್ಕೆ ಬದಲಾಗಿ ಕಾನೂನು ದಾರಿ ತುಳಿದು ಯಜಮಾನಿಕೆ ಹೇರಿರುವುದನ್ನು ಸ್ಪಷ್ಟಪಡಿಸುತ್ತವೆ. ತುಳುನಾಡಿನ ಪರಂಪರೆಯಂತೆ ಮಾತೃಮೂಲ ವ್ಯವಸ್ಥೆಗೆ ಪರಿವರ್ತನೆಗೊಳ್ಳದೇ ಅವುಗಳು ತಮ್ಮ ಅನನ್ಯತೆಗಳನ್ನು ಮುಂದುವರೆಸಿಕೊಂಡು ಬಂದವು. ಹೀಗೆ ಆರ್ಥಿಕವಾಗಿ ಜೀವನೋಪಾಯವನ್ನು ಕಂಡುಕೊಂಡ ಸಮುದಾಯಗಳು ಪ್ರಭಾವ ಬಳಸಿ, ಭೂಮಿಯ ಒಡೆತನವನ್ನು ಪಡೆದು ವಲಸೆಪೂರ್ವ ಪ್ರದೇಶದ ರೀತಿ–ರಿವಾಜುಗಳನ್ನು ಮುಂದುವರೆಸಿಕೊಂಡು ಬಂದು ಅವುಗಳನ್ನು ಅಧಿಕಾರದ ನೆಲೆಯಾಗಿ ಪರಿವರ್ತಿಸಿ, ಬಂಧು–ಬಂಧ ವ್ಯವಸ್ಥೆಗಳನ್ನು ಅಧಿಕಾರದ ಚಲಾವಣೆಗೆ ಅನುಕೂಲಕರವಾಗಿ ಬಳಸಿಕೊಂಡಿರುವುದು ಇತಿಹಾಸದ ಸಂಶೋಧನೆಗಳಿಂದ ಸಾಬೀತುಗೊಂಡಿವೆ. ಇವುಗಳು ಸಹ ಮಾತೃಪ್ರಧಾನ ವ್ಯವಸ್ಥೆಯ ಪಲ್ಲಟಕ್ಕೆ ನಿರ್ದಿಷ್ಟ ಕೊಡುಗೆ ನೀಡಿದವು.[61]

## ಪಿತೃವಂಶೀಯತೆಯ ನುಸುಳುವಿಕೆ ಮತ್ತು ಸಂಪ್ರದಾಯಗಳ ಹುಟ್ಟು

ಅಳಿಯಕಟ್ಟು ವ್ಯವಸ್ಥೆ ಜಾರಿಗೆ ಬಂದು ಪಿತೃಪ್ರಧಾನ ವ್ಯವಸ್ಥೆ ತಲೆ ಎತ್ತಿ ಮಾತೃಪ್ರಧಾನ ವ್ಯವಸ್ಥೆ ನೆಲೆ ಕಳೆದುಕೊಂಡಾಗ ಆ ವ್ಯವಸ್ಥೆಯನ್ನು ಖಾಯಂಗೊಳಿಸುವ ನಿಟ್ಟಿನಲ್ಲಿ ಹಲವಾರು ಸಂಪ್ರದಾಯಗಳನ್ನು ಹುಟ್ಟುಹಾಕಲಾಯಿತು. ಈ ಸಂಪ್ರದಾಯಗಳು ಹೆಚ್ಚು ಕಡಿಮೆ ಮಹಿಳೆಯನ್ನು ನಿರ್ಬಂಧಿಸಿ ಪುರುಷರನ್ನು ಉನ್ನತೀಕರಿಸುವ ಉದ್ದೇಶವನ್ನು ಹೊಂದಿದ್ದವು. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಅಳಿಯಕಟ್ಟಿನ ಸೂತ್ರವನ್ನು ಅನುಸರಿಸುವವರು ಮರಣಿಸಿದರೆ ಹದಿನೈದು ದಿನಗಳ ಸೂತಕದ ಜೊತೆಗೆ ಮಹಿಳೆಯರು ಶುಭಕಾರ್ಯಗಳಲ್ಲಿ ಭಾಗವಹಿಸಬಾರದೆಂಬ ನಿಯಮ, ಹುಟ್ಟಿದ ದಿನದಿಂದ ಹತ್ತು ದಿನಗಳ ವರೆಗೆ ಸೂತಕದ ನಿರ್ಬಂಧ ಮತ್ತು ಶುಭಕಾರ್ಯಗಳಿಗೆ ನಿಷೇಧ, ಶಾಸ್ತ್ರ, ಪುರಾಣ ಇತ್ಯಾದಿಗಳಿಗೆ ವಿರೋಧ ಮಾಡಬಾರದೆಂಬ ಎಚ್ಚರಿಕೆ, ವಿವಾಹ ಸಂದರ್ಭಗಳಲ್ಲಿ ಕಡ್ಡಾಯವಾಗಿ

ಅನುಸರಿಸಬೇಕಾದ ನಿಯಮಗಳು, ಮರುಮದುವೆಯ (ಬುಡುಧಾರೆ) ವಿಧಿ-ವಿಧಾನಗಳು, ಕುಟುಂಬ ವ್ಯವಸ್ಥೆಯಲ್ಲಿ ಸೋದರಮಾವನ ಅಧಿಕಾರ, ಮಹಿಳೆಯು ಗಂಡನ, ಗುರುಹಿರಿಯರ ಹೆಸರು ಹೇಳುವುದಕ್ಕೆ ನಿರ್ಬಂಧ, ಸಾಮಾಜಿಕ ಆಚರಣೆಗಳಲ್ಲಿ ಮಹಿಳೆಗೆ ಸಂಬಂಧಿಸಿದ ಮಡಿವಂತಿಕೆ ಮುಂತಾದವುಗಳು. ಈ ಎಲ್ಲಾ ನಿರ್ಬಂಧ ಹಾಗೂ ಸಂಪ್ರದಾಯಗಳ ಆರಂಭವು ಪುರುಷಕೇಂದ್ರಿತ ಅಧಿಕಾರದ ಒಳನುಸುಳುವಿಕೆಗಾಗಿ ಮಾಡಲಾದ ಜಾಗರೂಕತೆಯ ಪ್ರಯತ್ನಗಳು ಎಂಬುವುದು ಸ್ಪಷ್ಟವಾಗುತ್ತದೆ.

ಮಾತೃಪ್ರಧಾನ ವ್ಯವಸ್ಥೆಯಲ್ಲಿ ಪರಿವರ್ತನೆ ಮಾಡಿ ಪಿತೃವ್ಯವಸ್ಥೆ ಸ್ಥಾಪನೆಗೆ ಪ್ರಮುಖವಾಗಿ ಕೊಡುಗೆ ನೀಡಿದವುಗಳು ಕೆಲವು ಸಾಮಾಜಿಕ ಆಚರಣೆಗಳು ಹಾಗೂ ಸಂಪ್ರದಾಯಗಳು.ಇವುಗಳು ಬಹುತೇಕ ಸ್ತ್ರೀಯರಿಗೆ ಸಂಬಂಧಿಸಿದವುಗಳು ಅಥವಾ ಅವರ ವಿರುದ್ಧ ರೂಪಿಸಲ್ಪಟ್ಟವುಗಳು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬಲವಂತದ ವಿವಾಹ, ಸ್ತ್ರೀಮಾರಾಟ, ಗಂಡನಿಂದ ಬೇರಾಗಿ ಐದು ವರ್ಷಗಳ ಪ್ರತ್ಯೇಕ ಜೀವನದ ನಂತರ ವಿಚ್ಛೇದನೆ ಕೊಡಿಸುವುದು, ಕೆಳ ಅಥವಾ ಹೀನಜಾತಿಗೆ ಸೇರಿದವನನ್ನು ವಿವಾಹವಾದ ಪಕ್ಷದಲ್ಲಿ ಉತ್ತರಕ್ರಿಯೆಯಂತಹ ಆಚರಣೆಗಳನ್ನು ಸಾಂಕೇತಿಕವಾಗಿ ನಿರ್ವಹಿಸಿ ಸಂಬಂಧ ಕಡಿದುಕೊಳ್ಳುವುದು, ಅಂತಹ ಪ್ರಕರಣಗಳಲ್ಲಿ ಸ್ತ್ರೀಯನ್ನು ಜಾತಿಯಿಂದ ಕೈಬಿಟ್ಟು ಆಕೆಗೆ ಜನಿಸಿದ ಮಕ್ಕಳನ್ನು ಮಾತ್ರ ಕುಟುಂಬದಲ್ಲಿ ಮುಂದುವರೆಸುವುದು, ಹಾದರ ಮಾಡಿದ ವಿವಾಹಿತ ಸ್ತ್ರೀಗೆ ಬರನೀಡುವುದು, ವಿವಾಹದ ಮುಂಚೆ ಬಸುರಾದರೆ ಆತನ ಜೊತೆಗೆ ಬಲವಂತದ ವಿವಾಹ ಏರ್ಪಡಿಸುವುದು, ಸಾಮಾಜಿಕ ವ್ಯವಸ್ಥೆಗೆ ವಿರುದ್ಧವಾದ ಚಟುವಟಿಕೆಗಳಲ್ಲಿ ಭಾಗಿಯಾದ ಸ್ತ್ರೀಯರಿಗೆ ಬಹಿಷ್ಕಾರ ಹಾಕುವುದು, ಸ್ತ್ರೀಯೊರ್ವಳು ಪುರುಷನ ಜೊತೆ ಓಡಿಹೋದಲ್ಲಿ ಕಂಡುಹಿಡಿದು ವಿವಾಹ ಮಾಡುವುದು-ಹೀಗೆ ಹದಿನಾರು ಕಟ್ಟಳೆಗಳು ಹೆಣ್ಣಿನ ಸುತ್ತ ಹೆಣೆಯಲ್ಪಟ್ಟದ್ದು ಸ್ತ್ರೀಯರು ಪುರುಷಪ್ರಧಾನ ವ್ಯವಸ್ಥೆಯಲ್ಲಿ ಪುನರ್‌ವ್ಯಾಖ್ಯಾನಿಸಲ್ಪಟ್ಟಿರುವುದಕ್ಕೆ ಸಾಕ್ಷಿಯಾಗಿವೆ. ಅಳಿಯಕಟ್ಟಿನ ಸಂಪ್ರದಾಯಗಳಿಂದ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಈ ಬಗೆಯ ಪಿತೃಪ್ರಧಾನತೆ ಅನಾಯಾಸವಾಗಿ ಒಳನುಸುಳಿತು.[62]

ಸ್ತ್ರೀಯರ ಸುತ್ತ ರೂಪಿಸಲ್ಪಟ್ಟದ್ದ ಆಚರಣೆಗಳಂತೆ ಸಾಮಾಜಿಕ ವ್ಯವಸ್ಥೆಯಲ್ಲಿಯೂ ಕೆಲವೊಂದು ಚಟುವಟಿಕೆಗಳು ಸಂಪ್ರದಾಯದ ಸ್ವರೂಪದಲ್ಲಿ ರೂಪಿಸಲ್ಪಟ್ಟದ್ದವು. ಅವುಗಳೆಂದರೆ ಬ್ರಾಹ್ಮಣರಿಗೆ ಉಂಬಳಿನೀಡುವುದು, ಬಡವರಿಗೆ ಧರ್ಮಸಹಾಯ, ಉತ್ತಮಫಲ ಹಾಗೂ ಕೆಟ್ಟಫಲಗಳ ಕರ್ಮಸಿದ್ಧಾಂತ, ಸ್ಥಿರ, ಚರ ಸೊತ್ತುಗಳಲ್ಲಿ ಪತ್ನಿಗೆ ಹಕ್ಕು ತಿರಸ್ಕಾರ, ವಿವಾಹ ಕಾರ್ಯಗಳಲ್ಲಿ ಬ್ರಾಹ್ಮಣರಿಂದ ನೆರವೇರಿಸಲ್ಪಡುತ್ತಿದ್ದ ಪೂಜಾದಿಕಾರ್ಯಗಳನ್ನು ಮಾಡದಿರುವುದು, ಜನನ-ಮರಣ ಸಂದರ್ಭಗಳಲ್ಲಿ ದೇವಸ್ಥಾನಗಳಲ್ಲಿ ನಿರ್ಮಾಲ್ಯ, ದಾನ-

ಧರ್ಮ, ಮರಣಿಸಿದಾಗ ಕೆಲವೊಂದು ಆಚರಣೆಗಳನ್ನು ಮಾಡಿ ಮರ್ಯಾದೆ ಸಲ್ಲಿಸುವುದು, ಗ್ರಾಮದ ಪುರೋಹಿತರಿಂದ ಶುದ್ಧಿ ಮಾಡಿಸುವುದು. ಆದಿದೇವತಾ, ಕುಲದೇವತಾ ಆರಾಧನೆಗಳ ಮೂಲಕ ಇತರ ಸಮುದಾಯಗಳ ಅಥವಾ ಜಾತಿಗಳನ್ನು ದೂರವಿಡುವುದು, ಆಳಿಯಸಂತಾನದ ಸಪ್ತಗೋತ್ರದವರಿಗೆ ಬಳಿ ವ್ಯವಸ್ಥೆಯನ್ನು ಮಾಡುವುದು, ಹದಿನೆಂಟು ಬಳಿಗಳನ್ನು ಶ್ರೇಷ್ಠವೆಂದು ಮಾನ್ಯಮಾಡಿ ಉಳಿದವುಗಳಿಗೆ ಗೋತ್ರವಿಲ್ಲದ ಬಳಿಗಳೆಂದು ಘೋಷಿಸುವುದು, ಸ್ವಬಳಿಯ ದತ್ತು ಸ್ವೀಕಾರಕ್ಕೆ ಅನುಮತಿ ಮುಂತಾದವುಗಳು.

ಚಿಟುಪಾಡಿ ಮತ್ತು ನಿಡಂಬೂರು ಬಲ್ಲಾಳರುಗಳನ್ನು ಅಳಿಯಸಂತಾನದವರು ಗುರುಗಳ ಸ್ಥಾನಮಾನ ನೀಡಿ ಆ ಬೀಡುಗಳಲ್ಲಿ ಜನನ-ಮರಣಕ್ಕೆ ಎಲ್ಲಾ ಬಳಿಯವರಿಗೂ ಸೂತಕ ಹೇರಿಕೆ ಮಾಡಿ ಸಾಮಾಜಿಕ ಸಂಬಂಧವನ್ನು ಕಟ್ಟಲಾಗಿತ್ತು.[63] ಅಳಿಯ ಸಂತಾನಕಟ್ಟಿನಲ್ಲಿ ಬ್ರಾಹ್ಮಣರು ಸೇರ್ಪಡೆಯಾಗದಿದ್ದರೂ, ಈ ಎರಡು ಬೀಡುಗಳಲ್ಲಿನ ಅಧಿಕಾರಗಳನ್ನು ಸುಸೂತ್ರವಾಗಿ ನಡೆಸುವಲ್ಲಿ ಹೊಂದಾಣಿಕೆ ಮಾಡಿ ತುಳುನಾಡಿನ ಹದಿನೆಂಟು ಬಳಿಗಳನ್ನು ತಮ್ಮ ಕಪಿಮುಷ್ಠಿಯಲ್ಲಿಡಲು ಪ್ರಯತ್ನಿಸಿದರು. ಇದಲ್ಲದೇ ಕ್ಷತ್ರಿಯ, ಜೈನ, ಮಾಸಾಧಿಕ, ಮಲವರ, ನಾಯಿಮಾರ, ಸ್ಥಾನಿಕ, ಪದಾರ್ಥಿ ಮುಂತಾದ ಜಾತಿಗಳಿಗೆ ಅವರದೇ ಆದ ರೀತಿಯಲ್ಲಿ ಹಕ್ಕು ಬಾಧ್ಯತೆಗಳನ್ನು ವ್ಯವಸ್ಥೆಗೊಳಿಸಲಾಯಿತು. ಒಟ್ಟಾರೆಯಾಗಿ ಸಾಮಾಜಿಕ ನೆಲೆಗಟ್ಟಿನಲ್ಲಿ ರೂಪಿಸಲ್ಪಟ್ಟ ಈ ಕಟ್ಟು-ಕಟ್ಟಳೆಗಳು ವಸಾಹತುಪೂರ್ವದ ವಾರಸುದಾರಿಕೆಯನ್ನು ವಿನ್ಯಾಸಗೊಳಿಸುವಲ್ಲಿ ಪ್ರಧಾನ ಭೂಮಿಕೆಯನ್ನು ವಹಿಸಿ ಸಮಾಜವನ್ನು ನಿರ್ದಿಷ್ಟ ಚೌಕಟ್ಟಿನಲ್ಲಿ ನಿಯಂತ್ರಿಸಿದವು.[64]

**ಮಾತೃಪ್ರಧಾನ ಮತ್ತು ಪಿತೃಪ್ರಧಾನ ಕುಟುಂಬಗಳ ನೆಲೆಗಳು.**

ತುಳುನಾಡಿನ ಆಡಳಿತ ವ್ಯವಸ್ಥೆಯಲ್ಲಿ ಕುಟುಂಬ ಮೂಲಘಟಕವಾಗಿದ್ದು ಇದರ ಮೂಲಕವೇ ಆಡಳಿತ ವ್ಯವಸ್ಥೆಗಳು ರೂಪಿಸಲ್ಪಟ್ಟು ಮುಂದುವರೆಯುತ್ತಿದ್ದವು. ಮಾತೃವಂಶೀಯ ಕುಟುಂಬದಲ್ಲಿ ಅಲಯದ ಹೆಸರಿನ ಮೂಲಕ ಗಡಿ ಹಿಡಿಯುವವನು ಪುರುಷನೇ ಆದರೂ ಆತನು ತಾಯಿಯ ಪ್ರತಿನಿಧಿಯಾಗಿ ಅಧಿಕಾರ ನಿರ್ವಹಿಸುತ್ತಿದ್ದನು. ತಾಯಿಯ ಕಾಲಾನಂತರ ಆಕೆಯ ಆಸ್ತಿ ಹಿರಿಮಗಳಿಗೆ ಹಸ್ತಾಂತರಗೊಳ್ಳುತ್ತಿತ್ತು. ಈ ಸಂದರ್ಭದಲ್ಲೂ ಸ್ತ್ರೀಯ ಅಧಿಕಾರವನ್ನು ಅನ್ವಯಿಕತೆಯಲ್ಲಿ ಪುರುಷನೇ ನಿರ್ವಹಿಸುತ್ತಿದ್ದನು. ಅಧಿಕಾರದ ಕೊನೆಯಲ್ಲಿ ಆತನು ಅದನ್ನು (ಅಧಿಕಾರವನ್ನು) ಸೋದರಿಯರ ಮಕ್ಕಳಿಗೆ ಬಿಟ್ಟುಕೊಡಬೇಕೆಂಬ ನಿಯಮವನ್ನು ರೂಪಿಸಲಾಗಿತ್ತು. ತಾಯಿಯ ಪ್ರತಿನಿಧಿಯಾಗಿ ಈ ಬಗೆಯಲ್ಲಿ ಅಧಿಕಾರ ನಡೆಸುವುದನ್ನು ಅಳಿಯಕಟ್ಟು ಎಂದು ಕರೆಯಲಾಗುತ್ತಿತ್ತು. ತಾಯಿಯ ಆಸ್ತಿಯು

ಸೈದ್ಧಾಂತಿಕವಾಗಿ ಹೆಣ್ಣುಸಂತಾನಕ್ಕೆ ವರ್ಗಾವಣೆಗೊಂಡು ಮುಂದುವರಿಯುವುದು ಇಲ್ಲಿನ ಸಾಮಾಜಿಕ ಕ್ರಮಗಳಲ್ಲಿ ಒಂದಾಗಿತ್ತು.[65]

ಮಾತೃಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬ ದೈವಕ್ಕಿಂತ ಸ್ತ್ರೀಸ್ವರೂಪದ ಕುಲದೇವತೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತಿತ್ತು. ಕುಟುಂಬ ದೈವಗಳು ಯಜಮಾನನನಿಗೆ ಅಂದರೆ ಪುರುಷನಿಗೆ ನೆರವಾಗುವ ದೈವಗಳೆಂಬ ನಂಬಿಕೆ ಇದ್ದು ಆ ದೈವಗಳು ಕುಟುಂಬದ ಒಗ್ಗಟ್ಟನ್ನು ಕಾಪಾಡುತ್ತವೆಯೆಂಬ ಸಿದ್ಧಾಂತವು ಪ್ರಚಲಿದಲ್ಲಿತ್ತು. ಕುಟುಂಬದೈವದ ಆರಾಧನೆಯು ಕುಟುಂಬದ ಎಲ್ಲಾ ಸದಸ್ಯರ ಇಚ್ಛೆಗನುಗುಣವಾಗಿ ಸಮೂಹ ಪ್ರಜ್ಞೆಯ ರೂಪದಲ್ಲಿ ಮಾಡಲ್ಪಡುತ್ತಿತ್ತು. ಸಾಮಾನ್ಯವಾಗಿ ಕುಟುಂಬದ ಹಿರಿಯ ಪುರುಷ ಈ ಕಾರ್ಯಚಟುವಟಿಕೆಗಳ ಕೇಂದ್ರ ಬಿಂದುವಾಗಿದ್ದು, ದೈವಪ್ರತಿನಿಧಿಯಾಗಿ ಆತನು ಕಾರ್ಯನಿರ್ವಹಿಸುತ್ತಿದ್ದನು.[66]

ಕೆಲವೊಂದು ಸಂದರ್ಭಗಳಲ್ಲಿ ಕುಟುಂಬದ ಅಧಿಕಾರವನ್ನು ತಾಯಿಯ ವಂಶದ ಸೋದರ ಸಮಾನನು ಚಲಾಯಿಸುತ್ತಿದ್ದನಾದರೂ ಆತನಿಗೆ ಆಸ್ತಿ ಹಸ್ತಾಂತರವಾಗುತ್ತಿರಲಿಲ್ಲ. ಕುಟುಂಬದ ಹಿರಿಯನಿಗೆ ಪೂರ್ವಪರಂಪರೆಯಂತೆ ಗಡಿ ಅಧಿಕಾರ ನೀಡಿ ಆತನನ್ನು ಕುಟುಂಬದ ಪೋಷಕ ಹಾಗೂ ರಕ್ಷಕನೆಂದು ಪರಿಗಣಿಸಲಾಗಿತ್ತು. ಇದಕ್ಕೆ ಪೂರಕವಾಗಿ ದೈವಿಕ ನಂಬಿಕೆಗಳನ್ನು ರೂಪಿಸಲಾಗಿತ್ತು. ಕುಟುಂಬದೈವಗಳ ಉಪೇಕ್ಷೆ ಗಂಭೀರ ಪ್ರಮಾದವೆಂದು ಪರಿಗಣಿತವಾಗಿತ್ತು. ಹಣಕಾಸಿನ ಮುಗ್ಗಟ್ಟು, ಸಾಂಕ್ರಾಮಿಕ ರೋಗ, ಆಸ್ತಿ-ಪಾಸ್ತಿಗಳ ವಿಂಗಡನೆ, ಉತ್ತಾರಾಧಿಕಾರದ ಅಂತಃಕಲಹಗಳಾದಾಗ ದೈವಗಳ ನಂಬಿಕೆಯು ನಿರ್ಣಾಯಕವಾಗುತ್ತಿತ್ತಲ್ಲದೇ ಅದು ಕುಟುಂಬದ ಒಗ್ಗಟ್ಟು ಕಾಯ್ದುಕೊಳ್ಳುವಲ್ಲಿ ಸಹಾಯಕವಾಗುತ್ತಿತ್ತು. ಹೀಗೆ ತುಳುನಾಡಿನ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಅಧಿಕಾರ ಗಂಡು ಮಕ್ಕಳಿಗೆ ಹಸ್ತಾಂತರವಾಗುತ್ತಿದ್ದರೂ, ಆಸ್ತಿ ಮಾತ್ರ ಹಿರಿಯ ಮಹಿಳೆಯ ಹೆಸರಿನಲ್ಲಿದ್ದು ಆಕೆಯನ್ನು ಪಟ್ಟದಾರ್ತಿ ಎಂದು ಕರೆಯಲಾಗುತ್ತಿತ್ತು. ಪಟ್ಟದಾಕೆಯ ಹೆಸರಿನಲ್ಲಿ ಉಂಬಳಿ, ಆಸ್ತಿ ಇದ್ದುದರಿಂದ ಕೃಷಿ ಆದಾಯವೂ ಆಕೆಯ ಹೆಸರಿನಲ್ಲಿ ಇರುತ್ತಿತ್ತು. ಆದ್ದರಿಂದ ದೈವ-ದೇವರ ಕಾರ್ಯ, ಮನೆಯ ವಾರ್ಷಿಕ ಆಚರಣೆ, ಕುಟುಂಬದ ಮನೆಯ ದುರಸ್ತಿ, ಕೋಲ, ನೇಮ, ಕಂಬಳ, ಕೃಷಿ ನೀರಾವರಿ ಮತ್ತು ಗ್ರಾಮದ ಇತರ ಕಾರ್ಯಗಳಿಗೆ ತಗಲುತ್ತಿದ್ದ ಖರ್ಚು-ವೆಚ್ಚ ಆಕೆಯ ಹೆಸರಿಗೆ ಜಮಾವಣೆಯಾಗುತ್ತಿತ್ತು.ಆದರೆ ದೈವಕಾರ್ಯಗಳಲ್ಲಿ ಮಾತ್ರ ಯಜಮಾನ ಪಾತ್ರ ಅಥವಾ ಜವಾಬ್ದಾರಿ ಹಿರಿದಾಗಿತ್ತು.[67] ಜೀವಿತಕಾಲದಲ್ಲಿ ಆತನು ಆಸ್ತಿಯನ್ನೇನಾದರೂ ಸಂಪಾದಿಸಿದ್ದಲ್ಲಿ ಆತನ ಮರಣಾನಂತರ ಅದು ಸ್ತ್ರೀಯ ಪಾಲಾಗುತ್ತಿತ್ತು. ಹೀಗೆ ಆಸ್ತಿಯು ಸ್ತ್ರೀಯ ಆಧೀನಕ್ಕೆ ಒಳಪಟ್ಟಿತ್ತು. ಆದರೆ ನಿಜವಾಗಿ ಅದನ್ನು ಪುರುಷ ನಿಯಂತ್ರಿಸುತ್ತಿದ್ದು ಆಡಳಿತ ವ್ಯವಸ್ಥೆಯಲ್ಲಿ ಪುರುಷ ಸದಸ್ಯನೇ ಯಜಮಾನನಾಗಿ ಕಾರ್ಯನಿರ್ವಹಿಸುತ್ತಿದ್ದನು. ಅದಾಗ್ಯೂ ಹಿರಿಯ ಸದಸ್ಯೆ

ಆಸ್ತಿಯ ಯಜಮಾನಿಯಾಗಿ ಕುಟುಂಬದ ಹೊಣೆಗಾರಿಕೆಯನ್ನು ನಿಭಾಯಿಸಬೇಕೆಂಬ ನಿಯಮ ಚಾಲ್ತಿಯಲ್ಲಿತ್ತು.[68]

ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಾತೃಪ್ರಧಾನ ವ್ಯವಸ್ಥೆಗಿಂತ ಭಿನ್ನವಾದ ಚಟುವಟಿಕೆಗಳು ಅಥವಾ ಕ್ರಮಗಳು ಮಾಡಲ್ಪಡುತ್ತಿದ್ದವು. ಸ್ತ್ರೀಯು ಪುರುಷನ ನೇರ ನಿಯಂತ್ರಣಕ್ಕೆ ಒಳಪಡುತ್ತಿದ್ದು ಆಕೆಯನ್ನು ಸಾಕುವ ಅಥವಾ ರಕ್ಷಿಸುವ ಜವಾಬ್ದಾರಿಯನ್ನು ಆತನೇ ನಿರ್ವಹಿಸುತ್ತಿದ್ದನು. ಈ ಸಂದರ್ಭದಲ್ಲಿ ಪುರುಷ ತನ್ನ ಕುಟುಂಬದ ಪ್ರತಿಷ್ಠೆ ಕಾಪಾಡಿಕೊಂಡು ಬರಲು ಯೋಗ್ಯ ಎಂಬುವುದನ್ನು ಖಾತರಿಪಡಿಸಿಕೊಳ್ಳಬೇಕಾಗಿತ್ತಾದರೂ ಅದು ಕೇವಲ ಸಾಂಕೇತಿಕವಾಗಿರುತ್ತಿತ್ತು. ಸಂಕ್ಷಿಪ್ತವಾಗಿ ಹೇಳುವುದಾದರೆ ಒಟ್ಟು ಸಂಸ್ಕೃತಿಯ ಪ್ರಜ್ಞೆಯೂ ಸ್ತ್ರೀಯರ ಬಗೆಗೆ ಕಾಳಜಿ ವ್ಯಕ್ತಪಡಿಸಿತ್ತಾದರೂ ಸಾಮಾಜಿಕ ನಿಯಂತ್ರಣ ಪುರುಷರಲ್ಲಿ ಕೇಂದ್ರೀಕೃತವಾಗಿ ಆತನೇ ಕುಟುಂಬದ ಘನತೆ, ಗೌರವವನ್ನು ಕಾಪಾಡುವನೆಂದು ನಂಬಲಾಗಿತ್ತು.[69] ತುಳುನಾಡಿನಲ್ಲಿ ಮಾತೃಪ್ರಧಾನ ವ್ಯವಸ್ಥೆಯನ್ನು ಅನುಸರಿಸುವ ಸಮುದಾಯಗಳಲ್ಲಿ ಪುರುಷರ ಅಂತಸ್ತು ಹಾಗೂ ಗೌರವಗಳು ಸ್ತ್ರೀಯ ಚಾರಿತ್ರ್ಯ ಅಥವಾ ಪರಿಶುದ್ಧತೆಯನ್ನು ಅವಲಂಬಿಸಿದೆಯೆಂಬ ನಂಬಿಕೆಯಿತ್ತಾದರೂ, ಆ ಬಗೆಯ ನಂಬಿಕೆ ಪುರುಷನೆಲೆಯ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಕಂಡುಬರುತ್ತಿರಲಿಲ್ಲ. ಅಂತೆಯೇ ಮನೆಯ ಹಿರಿಯ ಹೆಣ್ಣು ತವರು ಮನೆಗೆ ಹಿರಿಯವಳಾಗಿರಬೇಕಾದ ಸಂದರ್ಭಗಳಲ್ಲಿ ಆಕೆಯ ಗಂಡ ಅವಳಿಗೆ ಸಹಕರಿಸಲು ಹೆಂಡತಿಯ ಮನೆಯಲ್ಲಿ ಬಂದು ನೆಲೆಸುವ ವ್ಯವಸ್ಥೆಯು ಜಾರಿಯಲ್ಲಿತ್ತು. ಹಾಗೇಯೆ ಹೆಂಡತಿಯ ತವರಲ್ಲಿ ಪುರುಷ ನೆಲೆಸಬೇಕಾದರೆ ಅಲ್ಲಿ ಗಂಡು ಸಂತಾನದ ಕೊರತೆಯಿರಬೇಕು ಅಥವಾ ಅಲ್ಲಿರುವ ಪುರುಷ ಕುಟುಂಬದ ಜವಾಬ್ದಾರಿಯನ್ನು ಹೊರಲು ನಿರಾಕರಿಸಿದಾಗ ಮಾತ್ರ. ಸ್ತ್ರೀಯು ಪತಿ ಮನೆಯಿಂದ ತವರುಮನೆಗೆ ತಾತ್ಕಾಲಿಕವಾಗಿ ಭೇಟಿನೀಡುವ ಅಥವಾ ವಾಪಾಸಾಗುವ ವ್ಯವಸ್ಥೆಯು ಆಕೆಗೆ ತನ್ನ ಪತಿ ಮನೆಯಲ್ಲಿನ ಜವಾಬ್ದಾರಿಯ ಒತ್ತಡದಿಂದ ಬಿಡುಗಡೆ ಎಂದು ಭಾವಿಸಲಾಗುತ್ತಿತ್ತು.[70] ಆದರೆ ಕುಟುಂಬದ ಪರಿಶುದ್ಧತೆಯ ರಕ್ಷಣೆಗೋಸ್ಕರ ಸ್ತ್ರೀಯರ ಮೇಲೆ ಪುರುಷನ ಹತೋಟಿಯನ್ನು ಸ್ಥಾಪಿಸುವ ಅಥವಾ ಆಕೆಯ ಹೆಸರಿನಲ್ಲಿದ್ದ ಆಸ್ತಿ ಅಥವಾ ಸಂಪತ್ತನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಪುರುಷ ನೋಡಿಕೊಳ್ಳುವ ವ್ಯವಸ್ಥೆಗಳು ನಿಧಾನವಾಗಿ ಪ್ರವರ್ಧಮಾನಕ್ಕೆ ಬಂದವು.[71] ಇದು ಮುಂದೆ ಪಿತೃಪ್ರಧಾನ ವ್ಯವಸ್ಥೆಯ ರೂಪಿಸುವಿಕೆಗೆ ಅನುಕೂಲ ವೇದಿಕೆಯನ್ನು ಒದಗಿಸಿಕೊಟ್ಟಿತು. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯು ಪ್ರಮುಖವಾಗಿ ಎರಡು ಹಕ್ಕುಗಳನ್ನು ಮಾತ್ರ ಅನುಭವಿಸುತ್ತಿದ್ದು ಅವುಗಳೆಂದರೆ ಪತ್ನಿಯ ಸ್ಥಾನಮಾನ ಮತ್ತು ವಂಶಕುಡಿಯ ಮಾತೃತ್ವ. ಆದರೆ ಮಾತೃವಂಶೀಯ ವ್ಯವಸ್ಥೆಯಲ್ಲಿ ಪತ್ನಿಯ ಜವಾಬ್ದಾರಿ ಪತಿಗೆ

ಹಾಗೂ ಮಕ್ಕಳ ಜವಾಬ್ದಾರಿಗಳು ಸೋದರಮಾವನಿಂದ ನಿರ್ವಹಿಸಲ್ಪಡುತ್ತಿದ್ದವು. ಅಣ್ಣ ತಂಗಿಯರ ಬಂಧವು ರಕ್ತ ಬಾಂಧವ್ಯ ಪದ್ಧತಿಯ ವಿಶಿಷ್ಟ ಲಕ್ಷಣವಾಗಿತ್ತು. ಸ್ತ್ರೀ–ಪುರುಷರ ಮಧ್ಯೆ ಇದ್ದ ಸಾಮಾಜಿಕ ಹಕ್ಕುಬಾಧ್ಯತೆಗಳು ವೈವಿಧ್ಯ, ಗಹನ ಹಾಗೂ ಸಂಕೀರ್ಣವೂ ಆಗಿದ್ದು ಮಾನವನ ಬದುಕಿನ ಧ್ಯೇಯಗಳಾದ ಸಮೃದ್ಧಿ ಮತ್ತು ನಿರಂತರತೆಯ ಮಹದಾಶಯವೂ ಇವುಗಳಿಂದ ಸಾಧಿತವಾಗುತ್ತಿದ್ದವು.[72]

**ಕೌಟುಂಬಿಕ ಯಜಮಾನಿಕೆ, ಪೂರ್ವಿಕತೆ**

ಅವಿಭಕ್ತ ಕುಟುಂಬಗಳು ವಸಾಹತುಪೂರ್ವದಲ್ಲಿ ಹಿರಿಮೆ–ಗರಿಮೆಯ ಸಂಕೇತವಾಗಿದ್ದು ಕುಟುಂಬದ ಜನಸಂಖ್ಯೆ ಹೆಚ್ಚಿದಷ್ಟೂ ಸಮಾಜದಲ್ಲಿ ಆ ಮನೆಯ ಪ್ರತಿಷ್ಠೆ ಹೆಚ್ಚುತ್ತಿತ್ತು. ಒಂದು ವೇಳೆ ಕುಟುಂಬದ ಹಿರಿಯನಿಗೆ ಗ್ರಾಮದ ಜವಬ್ದಾರಿ ನೀಡಲ್ಪಟ್ಟಿದ್ದಲ್ಲಿ ಅವನಿಗೆ ಮರ್ಯಾದೆ ಸಲ್ಲುತಿತ್ತು. ಕುಟುಂಬದ ಒಳಗೆ–ಹೊರಗೆ ನಡೆಯುತ್ತಿರುವ ಎಲ್ಲಾ ಕೆಲಸ ಕಾರ್ಯಗಳಿಗೂ ಅವನೇ ಜವಾಬ್ದಾರನಾಗಿದ್ದು ಗ್ರಾಮಾಧಿಕಾರದ ಹೊಣೆಗಾರಿಕೆಯ ಎಲ್ಲವನ್ನೂ ಯಜಮಾನನೇ ನಿರ್ವಹಿಸುತ್ತಿದ್ದನು. ಹೀಗೆ ಸ್ಥಳೀಯ ಆಡಳಿತದ ವ್ಯಾಪ್ತಿಯಲ್ಲಿ ಯಜಮಾನಿಕೆಯನ್ನು ಹೊಂದಿರುವ ಹಿರಿಯನ ಪಾತ್ರ ಮಹತ್ವದಾಗಿತ್ತಲ್ಲದೇ ವಾರ್ಷಿಕ ಜಾತ್ರೆಯ ಸಂದರ್ಭದಲ್ಲಿ ಹಾಜರಿದ್ದು, ನಡಾವಳಿಯನ್ನು ನಡೆಸಿ, ದೈವಕ್ಕೆ ಗೌರವ ಸೂಚಕವಾಗಿ ಕಾಣಿಕೆಯನ್ನು ಒಪ್ಪಿಸಬೇಕಾಗಿತ್ತು. ಕುಟುಂಬದ ಪರವಾಗಿ ದೈವಕ್ಕೆ ನಡೆಯತಕ್ಕ ಗೌರವಾಚರಣೆಗಳನ್ನು ಅವನೇ ನಡೆಸಿ ಸಂಬಂಧಪಟ್ಟ ಉತ್ಸವಾಚರಣೆಗಳಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಸಾರ್ವಜನಿಕರಿಗೆ ಮುಂದುವರೆಯಲು ಅವಕಾಶ ಕೊಡುತ್ತಿದ್ದನು.[73]

ತುಳುನಾಡಿನಲ್ಲಿ ಕುಟುಂಬದ ಮೂಲಕ ರೂಪುಗೊಳ್ಳುವ ಅಧಿಕಾರಗಳಲ್ಲಿ ಕೃಷಿಕರು ಯಾವ ಸಮುದಾಯದವರೇ ಆದರೂ ಕಟ್ಟುಕಟ್ಟಳೆಯನ್ನು ಪೂರ್ವದ ಅಥವಾ ಪೂರ್ವಿಕರ ಹೆಸರಿನಲ್ಲಿ ಮಾಡಿಕೊಂಡು ಬರಬೇಕಾಗಿತ್ತು. ಈ ರೀತಿಯ ಪೂರ್ವದ ಅಥವಾ ಅಲಯದ ಹೆಸರುಗಳು ಬಹಳಷ್ಟಿದ್ದು, ಅಲಯದ ಅಧಿಕಾರದ ಹೆಸರುಗಳಿರುವ ಬಹಳಷ್ಟು ಮನೆತನಗಳನ್ನು ಇತಿಹಾಸದ ಸಂಶೋಧನೆಗಳು ಗುರುತಿಸಿವೆ.[74] ಇವುಗಳಲ್ಲಿ ಕೆಲವು ಕುಲನಾಮ, ನಾಡುಘಟಕಗಳ, ಕಂದಾಯದ, ಮಾಗಣೆಯ, ಧಾರ್ಮಿಕ ವ್ಯವಸ್ಥೆಯ, ಪಾರುಪತ್ಯಗಾರದ, ರಾಜನ ಅರಮನೆಯ ಮತ್ತು ದೈವಗಳ ಆಯನಗಳ ಜವಬ್ದಾರಿ ಮುಂತಾದವುಗಳ ಹೊಣೆ ಇರುವ ಮನೆತನಗಳನ್ನಲ್ಲದೇ, ಸೇನಾಧಿಪತಿಗಳೆಂದು ಪಾಡ್ದನಗಳಲ್ಲಿ ಉಲ್ಲೇಖಿತರಾದ ಮನೆತನಗಳ ಅಧಿಕಾರವನ್ನು ನಿರ್ವಹಿಸುವ ಸಮುದಾಯಗಳಲ್ಲಿ ಈ ಅಲಯದ ಹೆಸರುಗಳು ಚಾಲ್ತಿಯಲ್ಲಿದ್ದದ್ದು ಕಾಣಸಿಗುತ್ತದೆ.

ಕೃಷಿ ಅಧಿಕಾರ ರಚನೆಯಲ್ಲಿ ಕುಟುಂಬಗಳ ಪೂರ್ವಪರಂಪರೆಯ ಹೆಸರುಗಳು (ಅಲಯದ ಹೆಸರುಗಳು) ಮುಖ್ಯವಾಗಿರುವುದರಿಂದ ಕೃಷಿ ಅಧಿಕಾರ ವಾರಸುದಾರಿಕೆಯ ಅರ್ಥೈಸಿಕೊಳ್ಳುವಲ್ಲಿ ಅವುಗಳು ಪ್ರಮುಖ ಪಾತ್ರವಹಿಸುತ್ತವೆ. ಈ ಪ್ರದೇಶದ ಕೃಷಿ ಅಧಿಕಾರದ ಮನೆತನಗಳ ಹೆಸರುಗಳು ಬೆರ್ಮರ ಅಲಯದ ಪೂರ್ವಪರಂಪರೆಯ ಹೆಸರುಗಳಾಗಿ ದಾಖಲಿಸಲ್ಪಟ್ಟಿದ್ದು ಇತಿಹಾಸದ ಸಂಶೋಧನೆಗಳು ಅವುಗಳನ್ನು ಪಟ್ಟಿಮಾಡಿವೆ. ಅವುಗಳಲ್ಲಿ ಮುಖ್ಯವಾದುದೆಂದರೆ, ಅಜಿಲ, ಅಜರಿ, ಅಡಪ, ಅರಸ, ಅರಿಗ, ಆಳ್ವ, ಚೌಟ, ಕಡಂಬ, ಕಯ್ಯ, ಕಂಬಳಿ, ಕಾವ, ಕಾಜವ, ಕಿಲ್ಲೆ, ಕೊಟ್ಯಾರಿ, ಕೊಂಡ್ಯಾಲ್, ಬಂಗ, ಗಾಂಭೀರ, ತೋಳಾರ, ನಾನಯ, ನಾಯರ್, ನಾಯಿರಿ, ಮಲಿಯಾಳ, ನಾಯ್ಗ, ಪಕ್ಕಳ, ಸೆಟ್ಟಿ, ಪಯ್ಯ, ಪಯ್ಯಡ್ರಾಲ್, ಪಾಂಡ್ಯ, ಪಡಿಯಾರ್, ಪೂವಣಿ, ಪೂಂಜ, ಪೆರ್ಗಡೆ, ಬಂಟ, ಬಳ್ಳಾಲ, ಬಂಡ್ರಿಯಾಲ್, ಬಾಂದಾರ್, ಮಾಡ, ಮಂಗೂಲಿದಾರ್, ಮಣಾಲ್, ಮುದ್ಯ, ಮುಕಾಲ್ದಿ, ಮೇರ್ಡಿ, ಅರಾಲ್, ರಾವುತ, ವರ್ಮ, ಸೇಮಿತ, ಸೆಟ್ಯಾಲ್, ಸಾಂತ, ಸೂಡ, ಸೆರ್ವೆಗಾರ್ ಮುಂತಾದವುಗಳು.[75] ಇವುಗಳೆಲ್ಲಾ ಕೃಷಿಪ್ರಧಾನ ಒಕ್ಕಲುಗಳಾದ ಜೈನ, ಒಕ್ಕಲ್ಮ, ಬಿಲ್ಲವ, ಕುಲಾಲ್, ಗಟ್ಟಿ ಇವಲ್ಲದೇ ಪರಿಶಿಷ್ಟ ಜಾತಿ ಪಂಗಡಗಳಲ್ಲಿ, ಮುಖ್ಯವಾಗಿ ಬಳಿ ಹೊಂದಿರತಕ್ಕ ಕೃಷಿ ಕುಟುಂಬಗಳಲ್ಲಿ ಈ ಪೂರ್ವಪರಂಪರೆಯ ಹೆಸರುಗಳಿರುವುದು ಸರ್ವೇಸಾಮಾನ್ಯ. ಇದಲ್ಲದೇ ಇನ್ನು ಹಲವಾರು ಅಲಯದ ಹೆಸರುಗಳಿದ್ದು, ಅವುಗಳ ಬಗ್ಗೆ ಸಾಕಷ್ಟು ಅಧ್ಯಯನಗಳಾಗದೇ ಇರುವುದರಿಂದ ಸ್ಪಷ್ಟಪಡಿಸುವುದು ಕ್ಲಿಷ್ಟಕರ. ಬಳಿ ಹೊಂದಿರುವ ಸಮುದಾಯಗಳಲ್ಲಿ ಕೃಷಿ ಅಧಿಕಾರ ರೂಪುಗೊಳ್ಳುವ ಕಾರ್ಯವಿಧಾನಗಳು ಸಾಮಾನ್ಯವಾಗಿದ್ದು ಅಧಿಕಾರ ಮತ್ತು ಆಸ್ತಿ ಇಲ್ಲದ ಸಮುದಾಯಗಳು ತಮ್ಮ ಯಜಮಾನ ಸಂಸ್ಕೃತಿಯನ್ನು ಅನುಸರಿಸಿ ಆಚರಣೆಗಳಲ್ಲಿ ಭಾಗವಹಿಸುತ್ತಿದ್ದುದ್ದನ್ನು ಈ ಸಂದರ್ಭಗಳಲ್ಲಿ ಕಾಣಬಹುದಾಗಿದೆ.ಈ ಆಚರಣೆಗಳ ಅನುಕರಣೆ ಜೈನರ ಅಧಃಪತನದ ನಂತರ ಬಲಿಷ್ಠಗೊಂಡ ಒಕ್ಕಲುಗಳು ಮುಂದುವರೆಸಿಕೊಂಡು ಬಂದಿರುವ ಬಗ್ಗೆ ಇತಿಹಾಸ ಪುಟಗಳು ಮಾಹಿತಿ ನೀಡುತ್ತವೆ. ಆದರೆ ಈ ಅಲಯದ ಹೆಸರುಗಳು ಕಾಲಾನುಕ್ರಮದಲ್ಲಿ ಜಾತಿವಾಚಕವಾಗಿ ಬಳಸಲ್ಪಟ್ಟಿದ್ದು ಅದು ಒಕ್ಕಲ್ಮರಲ್ಲಿ ಹೆಚ್ಚಾಗಿತ್ತು. ಮಾತ್ರವಲ್ಲದೇ ಗುತ್ತುಗಳನ್ನು ಕೇವಲ ಒಕ್ಕಲ್ಮರಿಗೆ ಮಾತ್ರ ಸೀಮಿತವಾಗಿಸಿರುವುದು ಅವರ ಬಗ್ಗೆ ಅಧ್ಯಯನ ಮಾಡಿದ ಹಲವಾರು ಸಂಶೋಧನೆಗಳು ತಿಳಿಸುತ್ತವೆ.[76] ಅಂತೆಯೇ ತುಳುನಾಡಿನ ಸಾಂಪ್ರದಾಯಿಕ ಬರಹಗಾರರು ಮತ್ತು ಚರಿತ್ರಕಾರರು ಕೃಷಿ ಅಧಿಕಾರವನ್ನು ಒಳಗೊಂಡಂತೆ ಒಕ್ಕಲ್ಮರಲ್ಲಿ ಮತ್ತು ಜೈನರಲ್ಲಿ ಗಡಿ ಮತ್ತು ಪಟ್ಟದ ಸಂಪ್ರದಾಯ ಮಾತ್ರ ಇದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕನುಗುಣವಾಗಿ ಇಂದಿರಾಹೆಗ್ಡೆಯವರ ಪ್ರಕಾರ ಪಟ್ಟ ಪ್ರಾಪ್ತಿಯಾಗುವುದು ಕೇವಲ ಒಕ್ಕಲ್ಮರಿಗೆ ಎಂಬುವುದು ತಪ್ಪು ಕಲ್ಪನೆ. ಒಕ್ಕಲ್ಮರಲ್ಲದೇ ಬಳಿ

ಅನುಸರಿಸುವ ಹೆಚ್ಚಿನ ಸಮುದಾಯಗಳಲ್ಲಿ ಗುತ್ತು ಮಾದರಿಯಲ್ಲಿಯೇ ಗಡಿ ಹಿಡಿಯುವ ಇಲ್ಲವೇ ಪಟ್ಟ ಪ್ರಧಾನವಾಗುವ ಸಂಪ್ರದಾಯ ಆಚರಣೆಗಳು ಕಾರ್ಯರೂಪದಲ್ಲಿದ್ದು ಕೇವಲ ಒಕ್ಕಲ್ಮರಿಗೆ ಮಾತ್ರ ಪಟ್ಟ ಪ್ರಾಪ್ತಿಯಾಗುತ್ತಿತ್ತು ಎಂಬುವುದು ತಪ್ಪು ಕಲ್ಪನೆಯಾಗಿದೆ.[77] ಮಾತೃವಂಶೀಯ ನೆಲೆಗಟ್ಟಿನ ಬಿಲ್ಲವರಲ್ಲೂ ಪಟ್ಟ ಪ್ರಾಪ್ತಿಯಾಗುವುದು ಸಾಮಾನ್ಯ ವಿಚಾರವಾಗಿತ್ತು. ಅಲ್ಲದೇ ಪೂರ್ವಕಾಲದಿಂದಲೂ ಕೃಷಿ ಅಧಿಕಾರ ಹೊಂದಿದ್ದ ಹೆಚ್ಚಿನ ಬಳಿ ಅನುಸರಿಸುವ ಸಮುದಾಯಗಳಲ್ಲಿ ಗಡಿ ಸಂಪ್ರದಾಯ ಚಾಲ್ತಿಯಲ್ಲಿದ್ದದ್ದು ದಾಖಲಾಗಿವೆ. ತುಳುನಾಡಿನ ಕೃಷಿ ರಚನೆಯ ಅಧಿಕಾರದಲ್ಲಿ ಬಳಿ ಹೊಂದಿರುವ ಸಮುದಾಯಗಳ ಬಲಾಢ್ಯರು ಪಟ್ಟದ ಹೆಸರುಗಳನ್ನು ಪಡೆದುಕೊಂಡಿರುವುದು ಇತಿಹಾಸದಲ್ಲಿ ಉಲ್ಲೇಖವಾಗಿದೆ.[78] ಇದಲ್ಲದೇ 'ಗುತ್ತು, ಬೂಡು, ಬರ್ಕೆ, ಬಾವ, ಪರಾಡಿ, ನಟ್ಟಿಲ್ಲು, ಭಂಡಾರ ಮನೆತನಗಳಲ್ಲಿಯೂ ಗಡಿಯ ಕ್ರಮ ಇತ್ತು.[79] 'ಕೃಷಿ ಅಧಿಕಾರದ ಮನೆಗಳು ದೈವ ಸಮ್ಮುಖದಲ್ಲಿ ಅಥವಾ ದೈವ ಸಾಕ್ಷಿಯಾಗಿ ಗಡಿ ಅಧಿಕಾರ ನೀಡುವ ಸಂಪ್ರದಾಯಗಳು ತುಳುನಾಡಿನಲ್ಲಿ ಸಾಕಷ್ಟಿತ್ತು.[80] ಪೂರ್ವದಲ್ಲಿ ಕುಟುಂಬ, ಗುತ್ತು, ಗ್ರಾಮ, ಮಾಗಣೆ, ಸೀಮೆ ಇತ್ಯಾದಿಗಳ ಆಡಳಿತ ಅಧಿಕಾರಗಳು ಚಾವಡಿ ದೈವಗಳ ಹೆಸರಿನಲ್ಲಿ ಗಡಿ ನುಡಿ ಪಡೆದುಕೊಂಡು ರಾಜಕೀಯ ಅಧಿಕಾರವನ್ನು ಮಾನ್ಯ ಮಾಡಿಕೊಳ್ಳುತ್ತಿದ್ದವಲ್ಲದೇ ಗಡಿ ಹಿಡಿದವನು ಕುಟುಂಬ ದೈವದ ಪ್ರತಿನಿಧಿಯಾಗಿ ಗೌರವವನ್ನು ಪಡೆದುಕೊಳ್ಳುತ್ತಿದ್ದನು. ಅವರ ತೀರ್ಮಾನ ಹೆಚ್ಚಿನ ಸಂದರ್ಭಗಳಲ್ಲಿ ಅಂತಿಮ ರೂಪದ್ದಾಗಿರುತ್ತಿತ್ತು.[81] ಪ್ರತೀ ಗ್ರಾಮಗಳಲ್ಲೂ ಆಯಾಯ ಜಾತಿಗೂ ಗುರಿಕಾರರ ನೇಮಕವಾಗುತ್ತಿತ್ತಲ್ಲದೇ ಮಾತೃವಂಶೀಯತೆಗೆ ಅನುಗುಣವಾಗಿ ಬಳಿ ಆಧಾರಿತ ಕುಟುಂಬದ ಹಿರಿಯನೇ ಪ್ರತೀ ಜಾತಿಯಲ್ಲೂ ಗುರಿಕಾರನಾಗುತ್ತಿದ್ದನು.[82] ಪಟ್ಟದರಸನ ಹೆಸರಿನ ಆಸ್ತಿ ಮತ್ತು ಒಡವೆಗಳು ಮುಂದಿನ ಪಟ್ಟದ ಅರಸನಿಗೆ ಸಲ್ಲುವ ರೀತಿಯಲ್ಲಿಯೇ ಅಜಲಿನ ಅಧಿಕಾರದ ಮನೆತನದ ವ್ಯಕ್ತಿ ತನ್ನ ಪರಂಪರೆಯ ಅಧಿಕಾರ ಪಡೆದುಕೊಳ್ಳುವ ಸಂದರ್ಭದಲ್ಲಿ ವೃತ್ತಿ ನಾಮದ ಪರಂಪರೆಯನ್ನು ಪಡೆದುಕೊಳ್ಳುತ್ತಿದ್ದನು. ತುಳು ಸಂಪ್ರದಾಯದ ಪ್ರಕಾರ ಅಧಿಕಾರದ ಗದ್ದುಗೆ ಏರುವವರು ಪೂರ್ವಪರಂಪರೆಯ ಹೆಸರಿನಿಂದ ಪಟ್ಟ ಪಡೆದುಕೊಳ್ಳಬೇಕಾಗಿತ್ತು.

ತುಳುನಾಡಿನಲ್ಲಿ ನಾಗಬೆರ್ಮೆರ 'ಆಲಡೆಯನ್ನು'[83] ವಂಶದ ಮೂಲ ಅಥವಾ ಆದಿನೆಲೆ ಎಂದು ನಂಬಿಕೊಂಡು ಬರುವ ಕುಟುಂಬಗಳಲ್ಲಿ ನಾಗಾರಾಧನೆಯು ಪ್ರಧಾನವಾಗಿದ್ದು, ಅದು ಕೌಟುಂಬಿಕ ವಾರಸುದಾರಿಕೆಯ ಸ್ವರೂಪದ್ದಾಗಿತ್ತು.[84] ಈ ನೆಲೆಯ ವಂಶಗಳು ಹಲವಾರು ಸಂಪ್ರದಾಯಗಳಲ್ಲಿ ನಂಬಿಕೆ ಇರಿಸಿಕೊಂಡಿದ್ದು ಈ ಕುಟುಂಬಗಳಲ್ಲಿ ಸೂತಕವಾದರೆ ಶುಭಕಾರ್ಯಗಳನ್ನು ಮಾಡುವಂತಿರಲಿಲ್ಲ.[85] ನಾಗ ಮತ್ತು ಬೆರ್ಮೆರ್ ಕುಲದೈವಗಳಾಗಿರುವುದರಿಂದ ಕುಟುಂಬದ ಯಜಮಾನಿಕೆಗೆ ಸಂಬಂಧವಿರಲಿಲ್ಲ. ಕುಟುಂಬದ

ಯಜಮಾನ ಅದರ ವ್ಯವಸ್ಥಾಪಕನಾಗಿ ಕೆಲಸ ಮಾಡಬಹುದಿತ್ತೇ ವಿನಹಃ ಬೇರೆ ಯಾವ ಜವಬ್ದಾರಿಯನ್ನು ವಹಿಸುವಂತಿರಲಿಲ್ಲ. ಈ ಕುಲದೈವಗಳು ತನ್ನ ಸಂತಾನದ ಅಥವಾ ವಂಶದ ಸದಸ್ಯರನ್ನು ಮಾತ್ರ ಗುರುತಿಸುವ ಕ್ರಮ ಚಾಲ್ತಿಯಲ್ಲಿತ್ತು. ನಾಗಬೆರ್ಮರ ವಂಶಸ್ಥರು ಅಥಾವ ಮೂಲ ಮನೆಯವರು ಬೇರೆ ಕಡೆ ಹೋಗಿ ನೆಲೆಸಿದರೂ ದೈವಗಳಿಗೆ ಅಂದರೆ ನಾಗನಿಗೆ ತನುವನ್ನು ಎರೆಯಲೇಬೇಕಾಗಿತ್ತು. ಹೀಗೆ ನಾಗಬೆರ್ಮರು ಕುಟುಂಬ ಸಂತಾನದ ವಾರಸುದಾರಿಕೆಯ ಮೇಲೆ ಹಿಡಿತವಿರಿಸಿಕೊಂಡಿದ್ದರಿಂದ ಇದನ್ನು ಸಂತಾನದೇವತೆಯಾಗಿ ಅಥವಾ ಫಲಸಮೃದ್ಧಿಯ ದೇವತೆಯನ್ನಾಗಿ ನಂಬಿಕೊಂಡು ಬರಲಾಗಿತ್ತು. ಬಳಿ ಸಂಪ್ರದಾಯ ಇರುವ ತುಳುವರಲ್ಲಿ ಕುಲದೇವತೆಯ ತಾಣವನ್ನು ಬೆರ್ಮರ ಅಲಡೆಯ ಜಾಗ ಅಥವಾ ಅಲಯದ ಬೆರ್ಮರ ಪ್ರದೇಶವೆಂದು ಕರೆಯಲಾಗುತ್ತಿತ್ತು. ಬೆರ್ಮರ ಅಲಡೆಯನ್ನು ಅಲಯದ ಹೆಸರು ಎಂದು ಕರೆಯಲಾಗುತ್ತಿತ್ತು. ಗದ್ದುಗೆ ಏರುವ ಸಂದರ್ಭಗಳಲ್ಲಿ ಕಾಳಗವಾಗುತ್ತಿದ್ದ ಉದಾಹರಣೆಗಳು ಸಾಕಷ್ಟು ದೊರೆಯುತ್ತಿಲ್ಲವಾದರೂ ಇದು ಏರ್ಪಟ್ಟ ಪ್ರದೇಶಗಳಲ್ಲಿ ಅಥವಾ ಕುಟುಂಬಗಳಲ್ಲಿ ಪರಂಪರೆಯ ಪ್ರಕಾರ ಇಂದಿಗೂ ಎರಡು ಪಂಗಡದೊಳಗೆ ಅಂಬೋಡಿ ಕಳದಲ್ಲಿ ಸಾಂಕೇತಿಕವಾಗಿ ಯುದ್ಧ ಮಾಡಲಾಗುತ್ತದೆ. ಕಾಳಗದಲ್ಲಿ ಗೆದ್ದವರು ಬೆರ್ಮರ ಗದ್ದುಗೆಯನ್ನು ಏರಿ ಆ ಗದ್ದುಗೆಯ ಪೂರ್ವಪರಂಪರೆಯ ಹೆಸರಿನಿಂದ ಗುರುತಿಸಿಕೊಳ್ಳುವ ಸಂಪ್ರದಾಯವಿತ್ತು.[86] ಬೆರ್ಮಸ್ಥಾನಗಳ ಅಧ್ಯಯನದಲ್ಲಿ ಬೆಳ್ಮ ಕೆಳಗಿನ ಮನೆಯ ಬ್ರಹ್ಮಅಲಡೆಯ ಪೂರ್ವದ ಗದ್ದುಗೆಯ ಹೆಸರು ಪಯ್ಯ ಎಂಬುವುದಾಗಿದ್ದು ಈ ಅಲಡೆ ಪೂರ್ವದಲ್ಲಿ ಜೈನರಿಂದ, ಬ್ರಾಹ್ಮಣರಿಗೆ, ವೀರಶೈವರಿಗೆ ಪುನಃ ಬ್ರಾಹ್ಮಣರಿಗೆ ಹಸ್ತಾಂತರವಾಗಿದ್ದರೂ ಪೂರ್ವದ ಅಲಯದ ಹೆಸರು ಬದಲಾಗಲಿಲ್ಲ.[87]

ತುಳುನಾಡಿನಲ್ಲಿ ಒಂದು ಕುಟುಂಬದ ಸದಸ್ಯರ ಸಂಖ್ಯೆ ಅಥವಾ ಶಾಖೆ (ಕವಲು, ಕವರ್) ಎಷ್ಟೇ ಇದ್ದರೂ ಎಲ್ಲಾ ಶಾಖೆಗಳು ಮೂಲಕುಟುಂಬದಲ್ಲಿ ಸಂಪರ್ಕ ಇರಿಸಿಕೊಂಡಿದ್ದಲ್ಲಿ ಆ ಎಲ್ಲಾ ಮನೆಗಳಿಗೂ ಒಬ್ಬನೇ ಯಜಮಾನನಾಗಿರುತ್ತಿದ್ದನು. ಕುಟುಂಬದ ಆ ಹಿರಿಯ ಯಜಮಾನ ಕುಟುಂಬದ ಬೇರೆ ಬೇರೆ ಆಡಳಿತ–ಅಧಿಕಾರವನ್ನು ಕುಟುಂಬದ ಶಾಖೆಗಳಿಗೆ ಅಥವಾ ಸದಸ್ಯರಿಗೆ ಹಂಚುತ್ತಿದ್ದನು. ಅಂತೆಯೇ ಸಂಪ್ರದಾಯಗಳ ಪ್ರಕಾರ ಕುಟುಂಬದ ಹಿರಿಯ ಸದಸ್ಯನೇ ದೈವದ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುವುದರ ಜೊತೆಗೆ ಕುಟುಂಬದ ನಿರ್ಧಾರ ತೆಗೆದುಕೊಳ್ಳುತ್ತಿದ್ದನು. ಕುಟುಂಬದ ಎಲ್ಲಾ ಕಾರ್ಯಕ್ರಮ ಅಥವಾ ಆಚರಣೆಗಳು ಅವನ ಯಜಮಾನಿಕೆಯಲ್ಲಿಯೇ ನಡೆಯುತ್ತಿದ್ದವು. ಒಂದುವೇಳೆ ಕುಟುಂಬದ ಹಿರಿಯ ಸ್ತ್ರೀಯಾಗಿದ್ದ ಸಂದರ್ಭದಲ್ಲಿ ಪುರುಷ ಮಾಡುತ್ತಿದ್ದ ಎಲ್ಲಾ ಕಾರ್ಯಕ್ರಮಗಳನ್ನು ಆಕೆ ನಿರ್ವಹಿಸುತ್ತಿದ್ದಳು. ಕುಟುಂಬದ ಆಸ್ತಿಯು ಮನೆಯ ಹಿರಿಯ ಅಥವಾ ಕೆಲವು ಸಂದರ್ಭಗಳಲ್ಲಿ ಹಿರಿಯ ಸ್ತ್ರೀಯ

ಅಧಿಕಾರಕ್ಕೆ ಒಳಪಡುತ್ತಿತ್ತು. ಆಸ್ತಿಯು ಸ್ತ್ರೀಯರ ಹೆಸರಿನಲ್ಲಿ ಇದ್ದಾಗ ಕೆಲವೊಂದು ಬಾರಿ ಮನೆಯ ಪುರುಷ ಯಜಮಾನ ಅಧಿಕಾರಪೂರ್ವಕವಾಗಿ ಆಸ್ತಿಯನ್ನು ಅನುಭವಿಸುತ್ತಿದ್ದನು. ಆದರೆ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಈ ಬಗೆಯ ಆಸ್ತಿಗೆ ಸಂಬಂಧಿಸಿದ ಅಧಿಕಾರದ ಪ್ರಯೋಗವಾಗುತ್ತಿದ್ದರೂ ಆಸ್ತಿ ಮಾತ್ರ ತಾಯಿಮೂಲದಲ್ಲೇ ಇದ್ದು ಸಹೋದರಿಗೆ ಇಲ್ಲವೇ ಸಹೋದರಿಯ ಮಕ್ಕಳಿಗೆ ಸಂಬಂಧಪಟ್ಟಿತ್ತು. ಹೀಗೆ ಈ ಪ್ರದೇಶದ ಕುಟುಂಬಗಳಲ್ಲಿ ಅಧಿಕಾರ ಪೂರ್ವದ ಸಂಪ್ರದಾಯದಂತೆ ನಡೆದುಕೊಂಡು ಬರುತ್ತಿತ್ತು. ಆದರೆ ಅಧಿಕಾರ ಅಥವಾ ಯಜಮಾನಿಕೆಯ ಸಂಕೇತವಾಗಿರುವ ಪಟ್ಟ ಅಥವಾ ಗಡಿ ಸಂಪ್ರದಾಯ ಆರಂಭಗೊಂಡ ಕಾಲಕ್ಕೆ ಸಂಬಂಧಿಸಿದಂತೆ ನಿಖರತೆ ಇಲ್ಲವಾದುದರಿಂದ ಪ್ರಾಯಶಃ ಕೃಷಿಅಧಿಕಾರ ರಚನೆಯಾದಂದಿನಿಂದ ಇದು ಪ್ರಾರಂಭವಾಗಿ ಮುಂದೆ ವಾರಸ ಅಧಿಕಾರವಾಗಿ ಪೂರ್ವಪರಂಪರೆಯ ಹೆಸರಿನಲ್ಲಿ ಮಾನ್ಯಗೊಂಡಿರಬೇಕೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಅದಾಗ್ಯೂ ಗಡಿನುಡಿಯ ಪ್ರಾಚೀನತೆಯ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿದ್ದು, ಅವುಗಳ ಆಧಾರದಲ್ಲಿಯೇ ಇವುಗಳ ಇತಿಹಾಸವನ್ನು ನಿರ್ಧರಿಸಬೇಕಾದ ಅನಿವಾರ್ಯತೆಯಿದೆ.[88]

## ಆಡಳಿತ ಮತ್ತು ಆರಾಧನ ಶ್ರೇಣಿಕರಣ

ತುಳುನಾಡಿನಲ್ಲಿ ಕುಟುಂಬ, ಗುತ್ತು, ಗ್ರಾಮ, ಊರು, ಮಾಗಣೆ, ಸೀಮೆ, ನಾಡು ಇವೇ ಮೊದಲಾದ ಪ್ರಮುಖ ಆಡಳಿತ ಘಟಕಗಳು ಪ್ರಾಚೀನ ಕಾಲದಿಂದಲೂ ಶ್ರೇಣಿಕೃತ ಆಡಳಿತ ಘಟಕಗಳಾಗಿ ಕಾರ್ಯನಿರ್ವಹಿಸಿದ ಬಗ್ಗೆ ಈಗಾಗಲೇ ಚರಿತ್ರೆಗಳು ಉಪಸಂಹಾರಕ್ಕೆ ಬಂದಿವೆ. ಭೌಗೋಳಿಕವಾಗಿ ವಿಸ್ತಾರವಾಗಿದ್ದ ಈ ಪ್ರದೇಶದ ರಾಜಕೀಯ-ಆಡಳಿತ ಅಧಿಕಾರಿಗಳಿಗೆ ಈ ಘಟಕಗಳು ತಮ್ಮ ಮುಂದುವರಿಯುವಿಕೆಗೆ ಅನಿವಾರ್ಯವಾಗಿದ್ದವು. ಆದ್ದರಿಂದ ಈ ಆಡಳಿತ ಘಟಕಗಳನ್ನು ಶಾಶ್ವತಗೊಳಿಸಿ ತಮ್ಮ ನೆಲೆಯನ್ನು ಗಟ್ಟಿಗೊಳಿಸುವ ಉದ್ದೇಶದಿಂದ ಮೇಲ್‌ಹಂತದ ಆಡಳಿತಗಾರರು ಇವುಗಳಿಗೆ ಸಮಾನಾಂತರವಾಗಿ ಇಲ್ಲಿನ ಧಾರ್ಮಿಕ ಆಚರಣೆಗಳನ್ನು ಶ್ರೇಣಿಕೃತ ವ್ಯವಸ್ಥೆಗಳನ್ನಾಗಿ ಪರಿವರ್ತಿಸಿದರು. ದೈವಗಳಲ್ಲಿ ಕುಟುಂಬ, ಗುತ್ತು, ಗ್ರಾಮ, ಊರು, ಮಾಗಣೆ, ಸೀಮೆ ಮತ್ತು ನಾಡುದೈವ ಮುಂತಾದ ವರ್ಗೀಕರಣ ಉನ್ನತ-ಅಧೀನ ಸಂಬಂಧದಲ್ಲಿ ರೂಪಿಸಲಾಯಿತು. ಅರಸನಿಗೆ ಭೌಗೋಳಿಕ ಪ್ರದೇಶಕ್ಕೆ ಸಂಬಂಧಿಸಿದಂತೆ ಶ್ರೇಣಿಕೃತ ಅಧಿಕಾರದ ವ್ಯಾಪ್ತಿ ಇದ್ದಂತೆ, ದೈವಗಳಿಗೂ ಆಧಿಕಾರದ ಶ್ರೇಣಿಕೃತ ವ್ಯಾಪ್ತಿ ನಿರ್ಧರಿಸಲಾಯಿತು. ಈ ಎರಡು ಸಂದರ್ಭಗಳಲ್ಲಿ ಸಂಬಂಧಗಳು ಊಳಿಗಮಾನ್ಯ ಸ್ವರೂಪವನ್ನು ಪಡೆದುಕೊಂಡಿದ್ದವು.[89] ಈ ಶ್ರೇಣಿಕೃತ ರಾಜಕೀಯ ಆಡಳಿತ ಘಟಕಗಳಿಗೆ ಸರಿಸಮಾನವಾಗಿ ಶ್ರೇಣಿಕೃತ ದೈವದ ಆಡಳಿತ ವ್ಯವಸ್ಥೆಯೊಂದು ರೂಪಿಸಲ್ಪಟ್ಟಿರುವುದು ವಾರಸುದಾರಿಕೆಯನ್ನು ದೈವಿಕಗೊಳಿಸಿತು.

ವಿಜಯನಗರದ ಕಾಲದಲ್ಲಿ ಆಡಳಿತದಲ್ಲಿನ ಶ್ರೇಣಿಕರಣಗಳು, ಶ್ರೇಣಿಕೃತ ದೈವಿಕ ವ್ಯವಸ್ಥೆಗಳು, ಅಳಿಯಕಟ್ಟಿನ ಚಿಂತನೆಗಳು, ಪ್ರಬಲ ಸಮುದಾಯಗಳ ವಿಸ್ತರಣೆಗೊಂಡ ಪ್ರಭಾವಗಳು, ಮಾತೃಪ್ರಧಾನತೆಯ ದುರ್ಬಲತೆ ಇತ್ಯಾದಿಗಳು ಪ್ರಮುಖ ಸಾಮಾಜಿಕ ಸ್ಥಿತ್ಯಂತರಗಳಿಗೆ ಕಾರಣವಾದವು. ಈಗಾಗಲೇ ಕೇಂದ್ರೀಕರಣಗೊಂಡ ಭೂಒಡೆತನ ಹಾಗೂ ಅಳಿಯಕಟ್ಟು ಸಂಪ್ರದಾಯದಿಂದ ಬ್ರಾಹ್ಮಣರ ಹೊರಗುಳಿಯುವಿಕೆಯು ಅಧಿಕಾರದ ಸ್ವರೂಪವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸಿದವು. ಬ್ರಾಹ್ಮಣವರ್ಗವು ಅಳಿಯಕಟ್ಟು ವ್ಯವಸ್ಥೆಯ ಪಾಲುದಾರರಾಗದಿದ್ದರೂ ಆ ಕಾಲದ ಸುಮಾರು ನಲ್ವತ್ತೆರಡು ಜಾತಿಗಳು ಈ ವ್ಯವಸ್ಥೆಯಡಿಗೆ ಬಂದು ಸಾಮಾಜಿಕ ವ್ಯವಸ್ಥೆಯಲ್ಲಿ ನೆಲೆ ಕಂಡುಕೊಂಡವು.[90] ಆದರೆ ಬ್ರಾಹ್ಮಣರ ಮಾರ್ಗದರ್ಶನದಲ್ಲಿ ರೂಪಿತಗೊಂಡ ಕಟ್ಟುಕಟ್ಟಳೆಗಳಲ್ಲಿ ಅಳಿಯ ಸಂತಾನಕ್ಕೊಳಪಡುವ ಸಮುದಾಯಗಳು ನಿಯಮ-ಶಾಸ್ತ್ರ ಮೀರಿದಲ್ಲಿ ಶಿಕ್ಷೆಯ ರೂಪದಲ್ಲಿ ಹಲವಾರು ವ್ಯವಸ್ಥೆಗಳನ್ನು ಜಾರಿಗೊಳಿಸಲಾಯಿತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಶಾಸ್ತ್ರಪಾಲಕರಿಗೆ ಗೌರವ-ಪದವಿಗಳನ್ನು ನೀಡುವುದು, ಮಾನ-ಮರ್ಯಾದೆಗಳನ್ನು ನೀಡಿ ಗೌರವಿಸುವುದು, ಉಲ್ಲಂಘಕರಿಗೆ ಜಾತಿಬಹಿಷ್ಕಾರ, ದಂಡವಿಧಿಸುವುದು, ನಿರ್ಬಂಧಿಸುವುದು, ವ್ಯವಸ್ಥೆಯಿಂದ ಹೊರಗಡುವುದು ಇತ್ಯಾದಿಗಳು.[91] ಈ ನಿಯಮಗಳನ್ನು ಶ್ರೇಣಿಕೃತ ಆಡಳಿತ ವ್ಯವಸ್ಥೆಯಲ್ಲಿ ಬರುವ ಅಧಿಕಾರಿಗಳಿಗೂ ಅನ್ವಯಿಸಲಾಯಿತು. ಅಳಿಯಸಂತಾನ ಕಟ್ಟುಗಳಿಗೆ ಒಳಪಡುವವರನ್ನು ಮಕ್ಕಳಕಟ್ಟಿನಿಂದ ಬೇರ್ಪಡಿಸಿದ ಬ್ರಾಹ್ಮಣರು ಆ ವ್ಯವಸ್ಥೆಯ ಭಾಗವಾಗದೆ ಹೊರಗುಳಿದರು. ಇದು ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಸಂಕೇತಿಸುವುದರ ಜೊತೆಗೆ ಮಾತೃಪ್ರಧಾನ ವ್ಯವಸ್ಥೆಯ ಸ್ಥಾನವನ್ನು ಪುರುಷಪ್ರಧಾನ ವ್ಯವಸ್ಥೆಯೊಂದು ಆಕ್ರಮಿಸಿಕೊಂಡಿರುವುದನ್ನು ಸೂಚಿಸುತ್ತದೆ.

**ವಾರಸುದಾರಿಕೆಯ ಕ್ರಿಯೆ-ಸಂಪ್ರದಾಯಗಳು-ಪದಗ್ರಹಣ-ಪಟ್ಟಾಭಿಷೇಕ**

ತುಳುನಾಡಿನ ವಾರಸುದಾರಿಕಾ ಪ್ರಕ್ರಿಯೆಯಲ್ಲಿ ಕಂಡು ಬರುವ ಬಹುಮುಖ್ಯ ಪ್ರಕ್ರಿಯೆಯೆಂದರೆ ಗಡಿ ಹಿಡಿಯುವುದು ಅಥವಾ ಯಜಮಾನಿಕೆಯನ್ನು ಪಡೆಯುವುದು ಅಥವಾ ಯಜಮಾನಿಕೆಯನ್ನು ವಹಿಸಿಕೊಡುವುದು. ಗಡಿ ಹಿಡಿಯುವುದಕ್ಕೆ ಸಂಬಂಧಪಟ್ಟ ಆಡಳಿತ ಘಟಕದ ಕಳವು ಗುತ್ತಿನ ಗುರಿಕಾರ, ಒತ್ತುಗುತ್ತು, ಸತ್ತುಗುತ್ತು, ಪರಾಡಿ, ಬಾವ, ಐದು ಮನೆತನದ ಪಾಲವರು, ಪಟ್ನದವರು, ನಟ್ಟೆಲ್ಲು ನಾಲ್ಕು ಮನೆಯವರು ಮುಂತಾದವರನ್ನು ಒಳಗೊಂಡಿರುವ ಸಭೆಯಾಗಿತ್ತು. ಗಡಿ ಅಧಿಕಾರ ಪಡೆಯುವುದೆಂದರೆ ಗಡಿ ಕೂಟದ ಪರಿಧಿಯೊಳಗೆ ಬರುವ ಎಲ್ಲರ ಮೇಲಿನ ಅಧಿಕಾರ ಹೊಂದುವುದು ಎಂದರ್ಥ. ಗ್ರಾಮದಕೂಟವೂ ಯಾವ ಮಾಗಣೆಗೆ ಸೇರಿದೆಯೋ ಆ ಮಾಗಣೆಯ ಗುರಿಕಾರರ

ಉಪಸ್ಥಿತಿಯೊಂದಿಗೆ ಗಡಿ ಹಿಡಿಯುವ ಪ್ರಕ್ರಿಯೆ ಪ್ರಾರಂಭಗೊಂಡು ಗ್ರಾಮದ ದೈವಕ್ಕೆ ನೇಮ ಕೊಡುವ ಮೂಲಕ ಮುಂದುವರೆಯುತ್ತದೆ.[92] ನೇಮದ ಕ್ರಿಯೆಯಲ್ಲಿ ಗುರಿಕಾರನ ಅನುಮತಿ ಪಡೆದುಕೊಂಡು ದೈವಮಾಧ್ಯಮನು ಆತನ ಪರವಾಗಿ ತನ್ನ ಅಲೌಕಿಕ ಶಕ್ತಿಯಿಂದ ಗ್ರಾಮಸ್ಥರನ್ನು ರಕ್ಷಿಸುವ ಅಥವಾ ವಿಚಾರಿಸಿಕೊಳ್ಳುವ ಅಭಯ ನೀಡುತ್ತದೆ.ಇದು ಲೌಕಿಕವಾಗಿ ಅಧಿಕಾರಕ್ಕೆ ಒಪ್ಪಿಗೆ ಪಡೆದುಕೊಳ್ಳುವ ಉದ್ದೇಶ ಹೊಂದಿದ್ದು ದೈವಪ್ರಸಾದದ ಮೂಲಕ ಅಧಿಕಾರವನ್ನು ಮಾನ್ಯಮಾಡಿಸುವುದಾಗಿತ್ತು. ಇದು ಗ್ರಾಮ, ಮಾಗಣೆ ಅಥವಾ ಸೀಮೆಯ ಅಧಿಕಾರ ಪಡೆದುಕೊಳ್ಳುವ ಗಡಿನುಡಿ ಸಂಪ್ರದಾಯದ ನೈಜ ಅರ್ಥವಾಗಿತ್ತು.[93]

ಕೆಳಸ್ತರದ ಆಡಳಿತ ಗುತ್ತು ಕೇಂದ್ರಿತವಾಗಿದ್ದರಿಂದ ಅಜಲಿಗೊಳಪಟ್ಟ ಎಲ್ಲರೂ ಮಾನ್ಯರಾಗಿದ್ದರು. ಗುತ್ತಿನ ಮನೆತನದ ಹಿರಿಯ ವ್ಯಕ್ತಿಗೆ ಪಟ್ಟ ಇಲ್ಲವೇ ಗಡಿಯ ಕ್ರಿಯಾವಿಧಿಗಳನ್ನು ನೀಡಲಾಗುತ್ತಿತ್ತು. ಗ್ರಾಮ, ಮಾಗಣೆ ಹಾಗೂ ಸೀಮೆಗೆ ಒಳಪಟ್ಟ ಕಾರ್ಯಭಾಗದ ಹೊಣೆ ಹೊತ್ತ ಮುಖ್ಯಸ್ಥನ ಉಪನಾಮ, ವೃತ್ತಿನಾಮ ಇಲ್ಲವೇ ನಾಮಧಾರಣೆ ಧರ್ಮನೇಮಗಳ ಮೂಲಕ ಆಗುತ್ತಿತ್ತು. ಪೂರ್ವಪರಂಪರೆಯ ಮತ್ತು ಅಧಿಕಾರದ ಗದ್ದುಗೆಯ ಹೆಸರು ವ್ಯಕ್ತಿಯ ಪ್ರತ್ಯೇಕತೆಯನ್ನು ಗುರುತಿಸುವ ಮಾನದಂಡವಾಗಿತ್ತು. ಆ ಕಾರಣಕ್ಕಾಗಿ ಗ್ರಾಮಾಡಳಿತದ ಉಪನಾಮಗಳನ್ನು ಅನ್ಯರು ಉಪಯೋಗಿಸುವ ಸಂಪ್ರದಾಯವಿರಲಿಲ್ಲ.

ತುಳು ಸಂಪ್ರದಾಯಕ್ಕೆ ಅನುಗುಣವಾಗಿ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಗೆ ತನ್ನ ಪತಿಯ ಮನೆಯ ಅಧಿಕಾರವನ್ನು ನೀಡಲಾಗುತ್ತಿರಲಿಲ್ಲ. ಉದಾಹರಣೆಗೆ ಅಲೂಪ ರಾಜಕುಮಾರಿಯಾಗಿದ್ದ ಮೂರನೇ ಹೊಯ್ಸಳ ಬಳ್ಳಾಲನ ಪಟ್ಟದರಸಿ ಚಿಕ್ಕಾಯಿತಾಯಿ ಹೊಯ್ಸಳ ರಾಣಿಯಾಗಿ ಗುರುತಿಸಲ್ಪಡಲಿಲ್ಲ, ವಿನಹಃ ತುಳುವ ರಾಣಿಯಾಗಿಯೇ ಮುಂದುವರಿದಳು. ಆಕೆಯನ್ನು ಬಳ್ಳಾಲತಿ ಎಂದು ಮಾನ್ಯ ಮಾಡಲಾಗಿಲ್ಲ. ಉಳ್ಳಾದರಾಣಿ ಅಬ್ಬಕ್ಕಳು ಚೌಟಳಾಗಿದ್ದಳೆ ವಿನಹ ಬಂಗಳಾಗಿಲ್ಲ. ಇವೆಲ್ಲವೂ ಕೃಷಿ ಅಧಿಕಾರ ರಚನೆಯಲ್ಲಿ ಬಂಧು-ಬಂಧತೆಗೆ ಉತ್ತಮ ಉದಾಹರಣೆ. ಹೀಗೆ ವಸಾಹತುಪೂರ್ವದಲ್ಲಿ ತುಳುನಾಡಿನ ಆಡಳಿತ ವ್ಯವಸ್ಥೆ ಬಂಧು-ಬಂಧ, ಪೂರ್ವಪರಂಪರೆ ಮತ್ತು ಪೂರ್ವದಮರ್ಯಾದೆ ರೂಪದಲ್ಲಿದ್ದು ಕುಟುಂಬ, ಗುತ್ತು, ಗ್ರಾಮ, ಮಾಗಣೆ ಹಾಗೂ ಸೀಮೆಗಳ ಆಡಳಿತಗಳು ಪಟ್ಟದ ಮೂಲಕ ನಿರ್ಣಯಿತವಾಗುತ್ತಿತ್ತು. ಆಡಳಿತವನ್ನು ಅಧಿಕೃತವಾಗಿ ವಹಿಸಿಕೊಳ್ಳುವಲ್ಲಿ ಎರಡು ಹಂತಗಳಿದ್ದು ಗಡಿ ಪಡೆದುಕೊಳ್ಳುವುದರೊಂದಿಗೆ ಗುತ್ತು, ಮಾಗಣೆ ಅಥವಾ ಸೀಮೆಯ ಅಧಿಕಾರದ ಒಡೆತನದ ಹಕ್ಕುದಾರರಾಗುವುದು ಮತ್ತು ಪಟ್ಟವಾಗುವುದರೊಂದಿಗೆ ಒಡೆತನವನ್ನು ನೈಜವಾಗಿ ವಹಿಸಿಕೊಳ್ಳುವುದು. ಅಳಿಯಸಂತಾನ ಕಟ್ಟಿನ ವ್ಯವಸ್ಥೆಯಿರುವಲ್ಲಿ ಅಧಿಕಾರಗ್ರಹಣ ಸಂದರ್ಭದಲ್ಲಿ ಸ್ಥಳ, ಮನೆ, ಅರಸು, ಬಲ್ಲಾಳ ಮತ್ತು ಹೆಗ್ಗಡೆಗಳ 'ಪೂರ್ವದ ಹೆಸರು

ಕರೆಯುವುದು'ಎಂಬ ಸಂಪ್ರದಾಯವಿತ್ತು. ಗ್ರಾಮ, ಮಾಗಣೆ ಅಥವಾ ಸೀಮೆಯ ಒಡೆತನ ಹೊಂದುವವರು ಪಟ್ಟದ ಹೆಸರು ಮತ್ತು ಪೂರ್ವದ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬರಬೇಕಾದ ಕ್ರಮವಿತ್ತು. ನಿಜ ನಾಮದೇಯವಿರುವ ವ್ಯಕ್ತಿಗಳು ಆಳುವ ಅರಸರಾಗಿ ಪಟ್ಟ ಏರಿದಾಗ ಪಟ್ಟದ ಹೆಸರು ಹಾಕುವ ಕ್ರಮ ಜಾರಿಯಲ್ಲಿತ್ತು.[94] ಹುಟ್ಟನಿಂದ ಬಂದ ಹೆಸರನ್ನು ಪಟ್ಟದ ಅಧಿಕಾರ ಪಡೆದುಕೊಂಡ ಮೇಲೆ ತ್ಯಜಿಸಬೇಕಾಗಿದ್ದು, ಅಧಿಕಾರ ಗ್ರಹಣದ ಸಂದರ್ಭದಲ್ಲಿ ನೀಡಲ್ಪಡುವ ಹೆಸರು ಶಾಶ್ವತವಾಗಿ ಮುಂದುವರೆಯುತ್ತಿತ್ತು. ಆದರೆ ಪಟ್ಟವೇರುವ ಅಧಿಕಾರ ತುಳುನಾಡಿನಲ್ಲಿ ಕೇವಲ ಪುರುಷರಿಗೆ ಮಾತ್ರ ಸೀಮಿತವಾಗಿಲ್ಲ. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರಿಗೂ ಪಟ್ಟವೇರುವ ಅವಕಾಶ ನೀಡಲಾಗುತ್ತಿತ್ತು.[95]ಸೀಮೆಯ ಅರಸನಾಗುವ ಸಂದರ್ಭದಲ್ಲಿ ಪಟ್ಟಾಭಿಷೇಕ ಮಾಡಿ, ಅವನಿಗೆ ಅರಸು, ಹೆಗ್ಗಡೆ ಅಥವಾ ಆಳುವ ಎಂದು ಘೋಷಿಸುವ ಅಧಿಕಾರವನ್ನು ಪೂರ್ವಪರಂಪರೆಯ ಮನೆಗಳು ಪಡೆದುಕೊಂಡಿದ್ದವು. ಈ ರೀತಿಯ ಅಧಿಕಾರ ಗ್ರಹಣವನ್ನು ಕೃಷಿಅಧಿಕಾರ ರಚನೆಯ ಪ್ರಭಾವಿ ಸಮುದಾಯ ಇಲ್ಲವೇ ಪ್ರಭಾವಿ ವ್ಯಕ್ತಿಗಳು ನಡೆಸಿಕೊಡುವುದು ರೂಡಿಯಲ್ಲಿತ್ತು. ಸೀಮೆ, ಮಾಗಣೆ ಅಥವಾ ಗ್ರಾಮ ಘಟಕಗಳ ಅಧಿಕಾರವನ್ನು ಅಂತಸ್ತಿಗನುಗುಣವಾಗಿ ನಡೆಸಿಕೊಂಡು ಬರುವುದು ಘಟಕಗಳ ದತ್ತ ಅಧಿಕಾರವಾಗಿದ್ದರೂ ಪೂರ್ವಪರಂಪರೆಯ ಮನೆಗಳು ಘೋಷಣೆ ಮಾಡಿದ ನಂತರವೇ ವ್ಯಕ್ತಿ ಅಧಿಕೃತವಾಗಿ ಅರಸನಾಗುವ ಅರ್ಹತೆಯನ್ನು ಪಡೆದುಕೊಳ್ಳುತ್ತಿದ್ದನು. ಈ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಹಿಂದಿನ ಪಟ್ಟದ ಅರಸನ ಸೋದರಿಯರ ಮಗನಿಗೆ ಅಥವಾ ಆ ಕುಟುಂಬದ ಹಿರಿಯನಿಗೆ ಅಧಿಕಾರ ಪ್ರಾಪ್ತವಾಗುತ್ತಿತ್ತು. ಅದಾಗ್ಯೂ ಪಟ್ಟ ಪಡೆದುಕೊಳ್ಳುವ ಸಂದರ್ಭದಲ್ಲಿ ಅರ್ಹತೆಗಳಿಗೆ ಪ್ರಾಮುಖ್ಯತೆ ನೀಡಲಾಗುತ್ತಿತ್ತಲ್ಲದೇ ಅರ್ಹತೆಗಳಿದ್ದರೆ ಮಾತ್ರ ಪಟ್ಟಾಭಿಷಿಕ್ತನಾಗಬಹುದಿತ್ತು. ಈ ಅರ್ಹತೆಗಳಲ್ಲಿ ಪ್ರಮುಖವಾದವುಗಳೆಂದರೆ ಅಂಗಹೀನನಲ್ಲದಿರುವುದು, ಪ್ರಾಣಿ ಅದರಲ್ಲೂ ನಾಯಿ ಕಚ್ಚಿಸಿಕೊಳ್ಳದಿರುವುದು, ವಿವಾಹಿತನಾಗಿ ಸಪತ್ನಿಕನಾಗಿರುವುದು. ಪ್ರಾತಃಕಾಲ ಮಿಂದು ಬಾಳೆಲೆಯಲ್ಲಿ ಫಲಹಾರ ಸೇವಿಸುವುದು ಇತ್ಯಾದಿಗಳು.

**ಪಟ್ಟಾಭಿಷೇಕದ ಕ್ರಮ**

ಪಟ್ಟಾಭಿಷೇಕದ ಮೊದಲು ಮೂಹೂರ್ತ ನಿಗದಿಪಡಿಸಲಾಗುತ್ತಿದ್ದು, ಇದರ ವಿಧಿ-ವಿಧಾನಗಳ ಪ್ರಕಾರ ಸಹೋದರಿ ಪಟ್ಟಾಭಿಷಿಕ್ತನಿಗೆ ಕಾಲುಂಗುರ ತೊಡಿಸಬೇಕಾಗಿತ್ತು. ನಂತರ ಯಜ್ಞೋಪವಿತ ತೊಡಿಸಿ ಪಟ್ಟದ ದೈವಕ್ಕೆ ಸೊಡರಬಲಿ ಮತ್ತು ಧರ್ಮನೇಮ ನೀಡಿದ ಬಳಿಕ ಮನೆಯಿಂದ ಸೀಮೆ ದೇವಸ್ಥಾನಕ್ಕೆ ಪಂಚ ದೀವಟಿಗೆ, ಸತ್ತಿಗೆ, ಕೊಂಬು, ಕಹಳೆ, ವಾದ್ಯಘೋಷಗಳೊಂದಿಗೆ ಮೇಣೆಯಲ್ಲಿ ತೆರಳಬೇಕಾಗಿತ್ತು. ಸೀಮೆ ದೇವಸ್ಥಾನದಲ್ಲಿ ನಲ್ವತ್ತೆಂಟು

ಕಳಶ ಮಿಂದು ನಂತರ ಪುರೋಹಿತರ ಸಮಕ್ಷಮದಲ್ಲಿ ವಿಶೇಷ ಪೂಜೆ ಸಲ್ಲಿಸಿ ಪ್ರಸಾದ ಪಡೆದುಕೊಂಡು ಸಕಲ ಬಿರುದಾವಳಿ, ವಾದ್ಯ ಘೋಷಗಳೊಂದಿಗೆ ಪುನಃ ಮೇಣೆಯಲ್ಲಿ ಸ್ವಗ್ರಹಕ್ಕೆ ತೆರಳುತಿದ್ದನು. ಪಟ್ಟ ಏರುವ ದಿನದ ಪ್ರಮುಖ ಸಂಪ್ರದಾಯಗಳೆಂದರೆ ಆಡಳಿತ ಘಟಕಗಳ ಮುಖ್ಯಸ್ಥರನ್ನು ಪೂರ್ವಪರಂಪರೆಯಂತೆ ಆಸೀನಗೊಳಿಸುವುದು. ಪಟ್ಟದ ಉಂಗುರ ಪಡೆದುಕೊಳ್ಳುವಲ್ಲಿನ ವಿಧಿ-ವಿಧಾನಗಳನ್ನು ಅನುಸರಿಸುವುದು, ಪಟ್ಟದ ಕತ್ತಿ ಕೊಡುವುದು, ಅಲಯದ ಹೆಸರು ಕರೆಯುವುದು ಮತ್ತು ಪೂರ್ವಸಂಪ್ರದಾಯದ ಇತರ ಆಚರಣೆಗಳು.[96] ಈ ಪ್ರಕ್ರಿಯೆಗಳಲ್ಲಿ ಸೀಮೆಗುತ್ತು, ಮಾಗಣೆಗುತ್ತು, ಗ್ರಾಮಗುತ್ತು ಹಾಗೂ ಒಳಗುತ್ತುಗಳ ಮುಖ್ಯಸ್ಥರಿಗೆ ನಿರ್ದಿಷ್ಟ ಅಧಿಕಾರವಿರುತಿತ್ತು. ಜೊತೆಗೆ ಈ ಸಂದರ್ಭದಲ್ಲಿ ಅಜಲಿನ ಆಧಿಕಾರದವರು ಹಾಗೂ ಊರಿನ ಸಮಸ್ತರು ಹಾಜರಿದ್ದು, ಸಂಬಂಧಪಟ್ಟ ಗುತ್ತಿನ ಅಧಿಕಾರ ಪಡೆದುಕೊಳ್ಳುವವನಿಗೆ ಅರಸುದೈವ ಅಥವಾ ರಾಜನ್‌ದೈವಗಳ ಸಮ್ಮುಖದಲ್ಲಿ ಸೀಮೆಯ ಅರಸ, ಮಾಗಣೆ ಅಧಿಕಾರಿ ಅಥವಾ ಗ್ರಾಮದ ಅಧಿಕಾರಿ ನಿಂತು ಗಡಿ ನೀಡುವ ಸಂಪ್ರದಾಯವಿತ್ತು. ಆ ಬಳಿಕ ಅರಸನಿಗೆ ಪಟ್ಟದ ಅಧಿಕಾರಕ್ಕೆ ಸಂಬಂಧಿಸಿದ ನಾಮ ಪ್ರಧಾನ ಮಾಡಲಾಗುತ್ತಿತ್ತು. ಮನೆಯ ಆರಾಧ್ಯದೈವ ಪಟ್ಟವೇರುವವನ ಮೇಲ್ವಿಚಾರಣೆಗೆ ಒಳಪಡುತ್ತಿತ್ತು. ತುಳುನಾಡಿನ ಒಂದು ಕುಟುಂಬದ ಉಪಕುಟುಂಬಗಳು ಏಷ್ಟೆ ಇದ್ದರೂ ಅವುಗಳು ಮೂಲಬೆರ್ಮ ಮತ್ತು ನಾಗಾರಾಧಕರಾಗಿ ಮುಂದುವರೆಯುತ್ತಿದ್ದು, ಬೆರ್ಮ ತುಳುವರ ಕೃಷಿ ಅಧಿಕಾರ ರಚನೆಯ ಕುಲದೈವವಾಗಿದ್ದರೇ ನಾಗ ಫಲವಂತಿಕೆಯ ಸಂಕೇತವಾಗಿತ್ತು.ಒಂದು ಕುಟುಂಬ ಬೇರೆ ಬೇರೆ ಗುತ್ತುಗಳಲ್ಲಿ ನೆಲೆಸಿದಾಗ ಆ ಗುತ್ತುಗಳ ಚಾವಡಿದೈವ ಅವರ ಕುಟುಂಬ ದೈವವಾಗಿದ್ದರೂ ಕುಲದೈವ ಹಾಗೂ ಬಳಿ ಮಾತ್ರ ಮೂಲಮನೆಯದ್ದೇ ಮುಂದುವರೆಯುತ್ತಿತ್ತು. ಒಂದು ಗ್ರಾಮದ ಆಧಿಕಾರವನ್ನು ಸ್ವೀಕರಿಸಿದ ಕೃಷಿ ಅಧಿಕಾರದ ಕುಟುಂಬಗಳು ಚಾವಡಿದೈವವನ್ನು ನಿರ್ಲಕ್ಷಿಸುವಂತಿರಲಿಲ್ಲ. ನಿರ್ಲಕ್ಷ ಮಾಡಿದಲ್ಲಿ ಗುತ್ತಿನ ಅಥವಾ ಗ್ರಾಮದ ಅಧಿಕಾರವನ್ನು ಕಳೆದುಕೊಳ್ಳುತ್ತಿದ್ದರು. ಆ ದೈವ ಗ್ರಾಮದೈವವಾಗಿದ್ದರಿಂದ ಅಜಲಿನವರನ್ನು, ಊರ ಸಮಸ್ತರನ್ನು ಹಾಗೂ ಕೃಷಿ ಅಧಿಕಾರದ ಯಜಮಾನರನ್ನು ಪ್ರಶ್ನಿಸುವ ಪರಂಪರೆಯಿತ್ತು. ಇದಕ್ಕೆ ಚ್ಯುತಿಬಾರದ ರೀತಿಯಲ್ಲಿ ಪಟ್ಟಾಭಿಷಿಕ್ತನಾದವನು ನಡೆದುಕೊಂಡು ಬರಬೇಕಾಗಿತ್ತು. ಹೀಗೆ ವಸಾಹತುಪೂರ್ವದ ಅಧಿಕಾರ ರಚನೆಯಲ್ಲಿ ಅಧಿಕಾರಸ್ತನು ತನ್ನ ಅಧಿಕಾರವನ್ನು ಭದ್ರವಾಗಿಟ್ಟುಕೊಳ್ಳಲು ಸಾಮಾಜಿಕ ಕಟ್ಟುಕಟ್ಟಳೆಗಳನ್ನು ರೂಪಿಸಿಕೊಂಡಿರುವುದಲ್ಲದೇ ದೈವಗಳನ್ನು ಶ್ರೇಣಿಕೃತಗೊಳಿಸಿ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುತ್ತಿದ್ದನು. ಶ್ರೇಣಿಕೃತಗೊಂಡ ದೈವಗಳು ರಾಜಕೀಯ ಆಡಳಿತ ಘಟಕಗಳ ಭೌಗೋಳಿಕ ಐಕ್ಯವನ್ನು ಕಾಪಾಡಿಕೊಂಡು ಬರುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವು.

ರಾಜಕೀಯ ಅಧಿಕಾರ ಮತ್ತು ಆಸ್ತಿಯ ಒಡೆತನದಂತಹ ಆರ್ಥಿಕ ಸಂಪನ್ಮೂಲಗಳ ಹಕ್ಕುಗಳನ್ನು ವಂಶಪಾರಂಪರ್ಯವನ್ನಾಗಿಸುವ ಉದ್ದೇಶದಿಂದ ಅರಸರು ಅದಕ್ಕನುಗುಣವಾಗಿ ದೈವಗಳ ಆರಾಧನ ಕ್ರಮವನ್ನು ರೂಪಿಸಿಕೊಂಡು ಎಚ್ಚರ ವಹಿಸುತ್ತಿದ್ದರು. ಈ ಎಲ್ಲಾ ಕ್ರಿಯೆಗಳು ಸಾಂಪ್ರದಾಯಿಕ ಸಮಾಜದ ಮೌಲ್ಯಗಳು ಮತ್ತು ಕಟ್ಟುಕಟ್ಟಳೆಗಳನ್ನು ಅದರ ಮೂಲರೂಪದಲ್ಲಿ ವ್ಯತ್ಯಾಸವಾಗದಂತೆ ನೋಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದವು.[97]

ವಸಾಹತುಪೂರ್ವದ ತುಳುನಾಡಿನ ಆಡಳಿತದಲ್ಲಿ ದೈವದ ಕಾರ್ಯ ಆಡಳಿತದ ಪ್ರಮುಖ ಭಾಗವೆಂದು ಪರಿಗಣಿಸಲಾಗಿತ್ತು. ತುಳುನಾಡಿನ ಕೆಲವು ಸಂದರ್ಭಗಳಲ್ಲಿ ಅಜಲು ಪದ್ಧತಿಯಂತೆ ಊರಿನ ಹತ್ತು ಸಮಸ್ತರನ್ನು ಕೂಡಿಸಿ ಗ್ರಾಮದ ಕೆಲಸವನ್ನು ನಿರ್ವಹಿಸಿ, ಧರ್ಮನೇಮದಲ್ಲಿ ತೊಡಗಿಕೊಂಡು ಪಟ್ಟದ ದೈವವನ್ನು ದೈವಮಾಧ್ಯಮನಿಂದ ಮಾನೆಚ್ಚಿ ಬರಿಸಿ, ಸೊಡರಬಲಿ ಬಳಿಕ ಅನ್ನಸಂತರ್ಪಣೆಯೊಂದಿಗೆ ಅಧಿಕಾರ ಪಡೆಯುವ ಪ್ರಕ್ರಿಯೆ ಪೂರ್ಣಗೊಳ್ಳುತಿತ್ತು. ವಸಾಹತುಪೂರ್ವದಲ್ಲಿ ಅಧಿಕಾರ ಪಡೆಯುವ ಈ ಪರಿಕಲ್ಪನೆಗಳು ಕೃಷಿ ಅಧಿಕಾರ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿತ್ತು.[98]

ಸೀಮೆ, ಮಾಗಣೆ, ಗ್ರಾಮಗುತ್ತು ಮತ್ತು ಕುಟುಂಬ ದೈವಗಳು ಕೃಷಿ ಅಧಿಕಾರ ರಚನೆಯ ಆಡಳಿತಕ್ಕೆ ಪೂರ್ವಶಕ್ತಿಯಾಗಿ ಕೆಲಸ ಮಾಡಿವೆಯಾದರೂ ಪ್ರಬಲ ಆರ್ಥಿಕತೆಯ ಪ್ರಭಾವಕ್ಕೆ ಒಳಗಾಗಿರುವುದು ಇತಿಹಾಸದಲ್ಲಿ ದಾಖಲುಗೊಂಡಿವೆ. ಉದಾಹರಣೆಗೆ ಗ್ರಾಮಗಳು ಮಠ ಇಲ್ಲವೇ ದೇವಸ್ಥಾನಗಳ ಅಧಿಕಾರಕ್ಕೆ ಒಳಪಟ್ಟಾಗ ಕೃಷಿ ಹಿಡುವಳಿಗಳನ್ನು ಪಡೆದ ಕೃಷಿ ಒಕ್ಕಲುಗಳು ದೈವಕ್ಕಿಂತ ಮಠಕ್ಕೆ ಆದ್ಯತೆ ನೀಡಿ ಅಧಿಕಾರ ಪಡೆದ ಕೆಲವು ನಿದರ್ಶನಗಳಿವೆ. ಈ ಸಂದರ್ಭಗಳಲ್ಲಿ ಪೂರ್ವಪರಂಪರೆಯೂ ಮಠದ ಅನುಜ್ಞೆಗೆ ಅನುಗುಣವಾಗಿ ಪುನರ್‌ರೂಪಿಸಲ್ಪಡುತ್ತಿದ್ದು[99] ಮಠಕ್ಕೆ ಸಹಕಾರ ನೀಡುತ್ತಿದ್ದ ಸಮುದಾಯಗಳು ಮಾನ್ಯಮಾಡಲ್ಪಟ್ಟರೆ ಮಠದ ಮಾನ್ಯತೆಯನ್ನು ಪ್ರಶ್ನಿಸಿದವುಗಳು ಬಹಿಷ್ಕಾರಕ್ಕೆ ಒಳಗಾಗುತ್ತಿದ್ದವು. ಕೃಷಿ ಆಡಳಿತ ರಚನೆಯಲ್ಲಿ ಅಲಯದ ಹೆಸರುಗಳು ಮುಖ್ಯವಾಗುತ್ತಿದ್ದವು.

ಗಡಿ ಪ್ರತಿನಿಧಿಸುವ ಕೃಷಿ ಅಧಿಕಾರದ ಸಮುದಾಯಗಳ ಅಧಿಕಾರಗಳು ವಂಶಪಾರಂಪರ್ಯವಾಗಿರಲಿಲ್ಲ. ಅಧಿಕಾರವಿರುವ ಒಂದು ಗುತ್ತಿನಮನೆಯಲ್ಲಿ ಕಾರಣಾಂತರಗಳಿಂದ ಇನ್ನೊಂದು ಗುತ್ತುಮನೆಯವರು ನೆಲೆಸಿದಾಗ ತಮ್ಮ ಗುತ್ತಿನ ಇಲ್ಲವೇ ಮನೆಯ ಅಧಿಕಾರವನ್ನು ಬಿಟ್ಟುಬಿಡಬೇಕಾಗಿತ್ತು. ಹೀಗೆ ಬಿಟ್ಟುಬರಬೇಕಾಗಿರುವುದು ಗ್ರಾಮ ನಿಯಮವಾಗಿತ್ತು. ಕೃಷಿ ಅಧಿಕಾರ ರಚನೆಯ ಕುಟುಂಬಗಳ ಆಡಳಿತ ಅಥವಾ ಅಧಿಕಾರವನ್ನು ಅಧಿಕೃತವಾಗಿ ವಿಧಿನಿಯಮಗಳ ಮೂಲಕ ಸ್ವೀಕರಿಸಿ ಗಡಿನಾಮವನ್ನು ಪಡೆಯಬೇಕಾಗುತಿತ್ತು.[100] ಗುತ್ತುಗಳಲ್ಲಿ ಗದ್ದುಗೆ ಏರುವವನಿಗೆ ಗಡಿನಾಮ ಅನ್ವಯವಾಗುವುದರಿಂದ ಗ್ರಾಮದ ಅಧಿಕಾರ ಹೆಚ್ಚಿನ

ಸಂದರ್ಭಗಳಲ್ಲಿ ಮಾತೃವಂಶದ ಮೂಲಕ ಮುಂದುವರೆಯುತ್ತಿತ್ತು. ಗಡಿ ಹಿಡಿದವನೊಂದಿಗೆ ಗ್ರಾಮದ ಇತರ ಸಮುದಾಯಗಳು ಆ ಗ್ರಾಮದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದವು.

ಕೆಳದಿಯ ಅಡಳಿತದ ಕಾಲದಲ್ಲಿ ಜೈನರು ಅವನತಿ ಹೊಂದಿದಾಗ ಕೃಷಿಯನ್ನು ಅವಲಂಬಿಸಿಕೊಂಡಿದ್ದ ಒಕ್ಕಲುಗಳು ಗಡಿ ಹೆಸರಿನ ಮೂಲಕ ಸಮುದಾಯದ ಅಧಿಕಾರವನ್ನು ವೃದ್ದಿಸಿ, ಗಡಿ ಇಲ್ಲವೇ ಆಲಯದ ಹೆಸರುಗಳನ್ನು ಜಾತಿ ಸೂಚಕವನ್ನಾಗಿಸಿದ ಸಾಧ್ಯತೆಗಳನ್ನು ಇತಿಹಾಸ ತಳ್ಳಿ ಹಾಕುವುದಿಲ್ಲ[101]

ಕೆಳದಿ ಅರಸರ ಕಾಲದಲ್ಲಿ ನ್ಯಾಯ ತೀರ್ಮಾನವು ಗ್ರಾಮಸಭೆಯ ಕರ್ತವ್ಯಗಳಲ್ಲಿ ಒಂದಾಗಿದ್ದು, ಗ್ರಾಮಸಭೆಯ ಮುಖ್ಯಸ್ಥರು ಅದನ್ನು ನೆರವೇರಿಸುತ್ತಿದ್ದರು. ಪ್ರತೀ ಗ್ರಾಮದಲ್ಲಿ ನ್ಯಾಯಿಕ ಕಾರ್ಯನಿರ್ವಹಿಸಲು ನಾಲ್ಕುಮಂದಿ ಪ್ರಮುಖರು ಇರುತ್ತಿದ್ದರು. ನ್ಯಾಯಾಂಗವು ಏಣಿ-ಶ್ರೇಣಿ ಸ್ವರೂಪದಲ್ಲಿ ರೂಪಿಸಲ್ಪಡುತ್ತಿದ್ದು, ಗುತ್ತಿನಲ್ಲಿ ಇತ್ಯರ್ಥವಾಗದ ಕಲಹಗಳು ಮಾಗಣೆಗೆ, ಮಾಗಣೆಯಲ್ಲಿ ಪರಿಹಾರ ಕಾಣದವುಗಳು ಸೀಮೆಗೆ, ಸೀಮೆಯಲ್ಲಿ ಇತ್ಯರ್ಥವಾಗದವುಗಳು ನಾಡಿಗೆ ಅಂತಿಮವಾಗಿ ರಾಜ ನ್ಯಾಯ ತೀರ್ಮಾನ ಮಾಡುವ ಕ್ರಮ ಜಾರಿಯಲ್ಲಿತ್ತು. ರಾಜಕೀಯದ ಈ ವ್ಯವಸ್ಥೆಗೆ ಸರಿಸಮಾನವಾಗಿ ತುಳುನಾಡಿನ ಆರಾಧನ ಕೇಂದ್ರಗಳಾದ ದೈವಸ್ಥಾನ, ದೇವಸ್ಥಾನಗಳಲ್ಲೂ ನ್ಯಾಯ ತೀರ್ಮಾನ ಶ್ರೇಣಿಗನುಗುಣವಾಗಿ ಮಾಡಲ್ಪಡುತ್ತಿದ್ದವು.[102] ಬ್ರಾಹ್ಮಣರಿಗೆ ಮತ್ತು ಅವರು ವಾಸ್ತವ್ಯವಿರುವ ಮೂವತ್ತೆರಡು ಗ್ರಾಮಗಳನ್ನು ಸೇರಿಸಿಕೊಂಡ ಬ್ರಾಹ್ಮಣಾಧಿಕಾರದ ಸಭೆಗಳಿಗೆ ಸಂಬಂಧಿಸಿದಂತೆ (ಕೂಟ ಮಹಾಜಗತ್ತು, ಶಿವಳ್ಳಿ 3000, ನೀಲಾವರ ಜಗತ್ತು, ಮುಂತಾದವುಗಳು) ಧಾರ್ಮಿಕ ಕೇಂದ್ರಗಳಲ್ಲಿ ಪ್ರತ್ಯೇಕವಾಗಿ ನ್ಯಾಯ ತೀರ್ಮಾನಗಳು ಮಾಡಲ್ಪಡುತ್ತಿದ್ದವು.[103] ದೈವ ತೀರ್ಮಾನಗಳನ್ನು ಅಥವಾ ದೇವರ ಸಾಕ್ಷಿಯ ತೀರ್ಮಾನಗಳನ್ನು ಒಪ್ಪಿಕೊಳ್ಳದಿದ್ದಾಗ ಹೆಚ್ಚಿನ ಪ್ರಮಾಣದ ಶಿಕ್ಷೆಗಳು ನೀಡಲ್ಪಡುತ್ತಿದ್ದವು. ಶಿಕ್ಷೆಗೆ ಒಳಗಾದವರು ಹೆಚ್ಚಿನ ಪ್ರಕರಣಗಳಲ್ಲಿ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುತ್ತಿದ್ದರು. ಶಿಕ್ಷೆಗೆ ಒಳಪಟ್ಟ ಅಪರಾಧಿ ಒಂದು ವೇಳೆ ಪರವೂರಿಗೆ ಹೋದರೂ ಆತನ ಪೂರ್ವಾಪರಗಳ ಬಗ್ಗೆ ಮಾಹಿತಿ ಕಲೆ ಹಾಕಿ ಅಲ್ಲಿಯೂ ಶಿಕ್ಷೆ ಮುಂದುವರಿಯುವಂತೆ ಮಾಡಲಾಗುತ್ತಿತ್ತು. ವಸಾಹತುಪೂರ್ವದ ಸಾಮಾಜಿಕ ವ್ಯವಸ್ಥೆಯಲ್ಲಿ ಎರಡು ಬಗೆಯ ಬಹಿಷ್ಕಾರ ಪದ್ಧತಿಗಳು ಜಾರಿಯಲ್ಲಿದ್ದವು. ಅವುಗಳೆಂದರೆ ಗ್ರಾಮ ಬಹಿಷ್ಕಾರ ಮತ್ತು ಕುಟುಂಬ ಬಹಿಷ್ಕಾರ. ಗ್ರಾಮ ಬಹಿಷ್ಕಾರಕ್ಕೆ ಸಂಬಂಧಿಸಿದಂತೆ ಬಿ.ಎ ಸಾಲೆತ್ತೂರುರವರು ಈ ಕೆಳಗಿನ ಪ್ರಕರಣವನ್ನು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ: ವರಪಾಡಿ ಗುತ್ತು ಮತ್ತು ಗುಡ್ಡೆಸಾನ ಗುತ್ತಿನ ಕಲಹ, ಪತ್ತೇರಿ ಕೂಟದವರು ವಂಶಪಾರಂಪರ್ಯ ಅಧಿಕಾರ ಕಿತ್ತುಕೊಂಡಾಗ,

ಮೂಲ್ಕಿ ಅರಸರು ಮಾಗಣೆಯ ಅನುಮೋದನೆಯೊಂದಿಗೆ ಮಾಡಿದ ನೇಮಕವನ್ನು ಗ್ರಾಮಕೂಟದವರು ಒಪ್ಪಿಕೊಳ್ಳದಿದ್ದಾಗ ಅರಸ ಇಡೀ ಗ್ರಾಮಕ್ಕೆ ಬಹಿಷ್ಕಾರ ಹಾಕಿರುವುದು.[104] ಪರಿಸ್ಥಿತಿ ನಿಯಂತ್ರಣ ತಪ್ಪಿದಾಗ ಅರಸನ ತೀರ್ಮಾನವನ್ನು ಪ್ರಶ್ನಿಸುವ ಕ್ರಮವೊಂದು ರೂಪಿಸಲ್ಪಟ್ಟಿತ್ತು. ಅರಸನು ಗ್ರಾಮಕೂಟಕ್ಕೆ ವಿರುದ್ಧವಾಗಿ ನಡೆದುಕೊಂಡಾಗ ಆತನಿಗೆ ದಂಡ ವಿಧಿಸುವ ಪರಮಾಧಿಕಾರವನ್ನು ಪತ್ತೇರಿಕೂಟಕ್ಕೆ ನೀಡಲಾಯಿತು.[105] ಈ ಸಂದರ್ಭದಲ್ಲಿ ತುಳುವರ ಅಧಿಕಾರ ವ್ಯವಸ್ಥೆ ಕವಲು ದಾರಿಯನ್ನು ಪಡೆದುಕೊಳ್ಳುತ್ತಿತ್ತು. ಕುಟುಂಬ ಬಹಿಷ್ಕಾರಗಳು ವಸಾಹತುಪೂರ್ವದಲ್ಲಿ ಆಡಳಿತಾತ್ಮಕವಾಗಿ ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಅದರೂ ಬಹಿಷ್ಕಾರ ಶಾಶ್ವತ ರೂಪವನ್ನು ಪಡೆದುಕೊಂಡಿರದೆ ಇದರಿಂದ ಹೊರ ಬರಲು ಕೆಲವು ನಿಯಮಗಳನ್ನು ವ್ಯವಸ್ಥೆ ಮಾಡಲಾಗಿತ್ತು. ಉದಾಹರಣೆಗೆ ಗುತ್ತುಗಳ ಬಾವಿಯ ನೀರು ಕುಡಿಯುವ ಮೂಲಕ ಬಹಿಷ್ಕಾರಕ್ಕೆ ಅಂತ್ಯ ಹಾಕುವುದು ಅಥವಾ ದೈವ-ದೇವಸ್ಥಾನಗಳಲ್ಲಿ ಕೆಲವೊಂದು ಧಾರ್ಮಿಕ ವಿಧಿ-ವಿಧಾನಗಳ ಮೂಲಕ ಪರಿಮಾರ್ಜನೆ ಮಾಡಿಕೊಳ್ಳುವುದು ಇತ್ಯಾದಿ.[106]

## ಗುತ್ತು ಮತ್ತು ವಾರಸುದಾರಿಕೆ

ವಸಾಹತುಪೂರ್ವ ಕಾಲದ ತುಳುನಾಡಿನ ಭೌಗೋಳಿಕ ವ್ಯವಸ್ಥೆಗೆ ಅನುಗುಣವಾಗಿ ಸ್ಥಳೀಯ ಮಟ್ಟದ ರಾಜಕೀಯ ವ್ಯವಸ್ಥೆಗಳು ರೂಪುಗೊಂಡಿದ್ದವು. ಆದರೆ ವಿಸ್ತಾರವಾದ ರಾಜಕೀಯ ನೆಲೆಗಳು ರಚನೆಯಾಗದೇ ಇದ್ದುದರಿಂದ ಕೆಲವೊಂದು ಬಾರಿ ಹೊರಗಿನ ರಾಜಕೀಯ ಗುಂಪುಗಳ ಹಸ್ತಕ್ಷೇಪ ಅಥವಾ ಸಾರ್ವಭೌಮತೆಯನ್ನು ಒಪ್ಪಿಕೊಳ್ಳಬೇಕಾಗಿತ್ತು. ಈ ಸಂದರ್ಭಗಳಲ್ಲಿ ತುಳುನಾಡಿನ ಒಕ್ಕಲುಗಳು ಸಾರ್ವಭೌಮ ಅಧಿಕಾರ ರಚನಾ ವ್ಯವಸ್ಥೆಯ ಅಡಿಪಾಯವಾಗಿ ಕಾರ್ಯನಿರ್ವಹಿಸಿದ್ದವು ಎಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.[107] ಗ್ರಾಮಮಟ್ಟದ ರಾಜಕೀಯ ಮತ್ತು ಸಾಮಾಜಿಕ ಅಧಿಕಾರದ ವ್ಯವಸ್ಥೆಗಳು ತಮ್ಮದೇ ಆದ ಲಾಂಛನ, ಬಿಂಬ ಹಾಗೂ ಕಾನೂನು ಪರಿಧಿಗಳನ್ನು ಪಡೆದುಕೊಂಡಿದ್ದವು.ಈ ಅಧಿಕಾರದ ಪರಿಧಿಯು ವ್ಯವಸ್ಥೆಯ ಅಣಕವಾಗಿರದೇ ಸ್ಪಷ್ಟವಾಗಿದ್ದು, ಸ್ಥಳೀಯವಾಗಿ ಇದೊಂದು ಬಲಿಷ್ಠ ಮತ್ತು ಅಧಿಕೃತ ಆಡಳಿತ ವ್ಯವಸ್ಥೆಯಾಗಿತ್ತು. ಅಧಿಕಾರ ಮತ್ತು ಕಾರ್ಯವ್ಯಾಪ್ತಿ ಕಿರಿದಾಗಿದ್ದರೂ ಆಡಳಿತಾತ್ಮಕವಾಗಿ ಗ್ರಾಮ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು.[108]

ತುಳುನಾಡಿನ ಸ್ಥಳೀಯ ಅಧಿಕಾರ ವ್ಯವಸ್ಥೆಯಲ್ಲಿ ಒಕ್ಕಲುಗಳು ಸಾಕಷ್ಟು ಅಧಿಕಾರವನ್ನು ಪಡೆದುಕೊಂಡಿದ್ದವು. ಒಕ್ಕಲುಗಳಿಗೆ ಭೂವಾರಸುದಾರಿಕೆ ಸಾಮಾಜಿಕ ಮತ್ತು ಆರ್ಥಿಕ ಪ್ರಬಲತೆಯನ್ನು ನೀಡಿದರೆ ಅವುಗಳು ಒಟ್ಟಾಗಿ ರಾಜಕೀಯ ವ್ಯವಸ್ಥೆಯೊಂದಿಗೆ ಸಂಬಂಧ ಬೆಳೆಸಿಕೊಳ್ಳಲು ಅವಕಾಶ ಮಾಡಿಕೊಟ್ಟವು.[109] ಗುತ್ತುಗಳು ಗ್ರಾಮ, ಮಾಗಣೆ ಮತ್ತು

ಊರುಗಳ ಅಧಿಕಾರ ನಿಯಂತ್ರಣಕ್ಕೊಳಪಟ್ಟ ಗ್ರಾಮ ಅಧಿಕಾರ ವ್ಯಾಪ್ತಿಯೊಳಗಿನ ವ್ಯಾಜ್ಯಗಳನ್ನು ಪರಿಹರಿಸಿ ಒಮ್ಮತವನ್ನು ರೂಪಿಸುವ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿತ್ತು. ಗುತ್ತುಗಳು ಗ್ರಾಮ ಪರಿಕಲ್ಪನೆಯ ಆಧಾರವಾಗಿದ್ದು, ಹಲವು ಗುತ್ತುಗಳು ಸೇರಿ ಗ್ರಾಮವಾಗಿ ರೂಪಿಸಲ್ಪಟ್ಟಿತ್ತು. ಹೀಗೆ ತುಳುನಾಡಿನ ಗ್ರಾಮಗಳು ಗುತ್ತಿನೊಂದಿಗೆ ಗುರುತಿಸಿಕೊಂಡಿದ್ದವಲ್ಲದೇ ಬಹುತೇಕ ಗ್ರಾಮಗಳಲ್ಲಿ ಪ್ರಭಾವಿ ಒಕ್ಕಲುಗಳ ಜಹಗೀರುಗಳು ಗುತ್ತುಗಳಾಗಿ ಕಾರ್ಯನಿರ್ವಹಿಸಿದ್ದವು. ತುಳುನಾಡಿನ ಗ್ರಾಮವೊಂದರಲ್ಲಿ ಕನಿಷ್ಠ ಒಂದರಿಂದ ಗರಿಷ್ಠ ಎಂಟರವರೆಗಿನ ಸಂಖ್ಯೆಯ ಗುತ್ತುಗಳು ಒಳಗೊಳ್ಳುತಿದ್ದವು.

ಬೆಳೆಯ ಪ್ರಮಾಣಕ್ಕೆ ಅನುಗುಣವಾಗಿ ಕಂದಾಯವನ್ನು ನಿಗದಿ ಮತ್ತು ವಸೂಲಿ ಮಾಡಿ ಕೇಂದ್ರ ಖಜಾನೆಗೆ ನೀಡುವುದಲ್ಲದೇ ಯುದ್ದದ ಸಮಯದಲ್ಲಿ ಹೆಚ್ಚುವರಿ ಕಂದಾಯವನ್ನು ಸಂಗ್ರಹ ಮಾಡಿ ಕೇಂದ್ರ ಖಜಾನೆಗೆ ತಲುಪಿಸುವ ಕಾರ್ಯವನ್ನು ಗುತ್ತಿನ ಮುಖ್ಯಸ್ಥರು ಮಾಡುತ್ತಿದ್ದರು. ಈ ಅಧಿಕಾರ ಗುತ್ತಿನ ಯಜಮಾನನನ್ನು ಸೇನಾಧಿಪತಿಯ ಸ್ಥಾನಕ್ಕೆ ಸದೃಶ್ಯವಾಗಿ ಏರಿಸುವ ಪ್ರಯತ್ನವಾಗಿತ್ತೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.[110] ಇತಿಹಾಸತಜ್ಞರ ಅಭಿಪ್ರಾಯದಲ್ಲಿ ಗುತ್ತು ತುಳುನಾಡಿನ ಉಳಿಗಮಾನ್ಯ ಸಂಸ್ಕೃತಿಯ ತಳಪಾಯವಾಗಿತ್ತು. ಇದು ಸಾಮಾಜಿಕ ಮತ್ತು ಆರ್ಥಿಕ ಪ್ರಬಲತೆಯ ಸಂಕೇತವಲ್ಲದೇ ಶೋಷಣೆಯ ನೆಲೆಯಾಗಿತ್ತು. ಗುತ್ತಿಗೆ ಸೇರಿದವರು ತಮ್ಮನ್ನು ತಾವೇ ಮೇಲ್ವರ್ಗದವರೆಂದು ಪರಿಗಣಿಸಿ, ಅದರ ವ್ಯಾಪ್ತಿಯಲ್ಲಿ ಬರುವ ಸಮುದಾಯಗಳನ್ನು ಆಧೀನದವರೆಂದು ಗುರುತಿಸಿ ಕೆಳಸ್ಥಾನಮಾನ ನೀಡಿದರು. ಸಂಕ್ಷಿಪ್ತವಾಗಿ ಹೇಳುವುದಾದರೆ ಪ್ರಭಾವಿ ಒಕ್ಕಲುಗಳು ಗುತ್ತಿನ ಮೂಲಕ ತಮ್ಮ ಶ್ರೇಷ್ಠತ್ವ ಮತ್ತು ಪ್ರತ್ಯೇಕತೆಯನ್ನು ಪ್ರತಿಪಾದಿಸುವ ಸಾಧನವನ್ನಾಗಿಸಿದರು.ಕೇರಳದಲ್ಲಿ ಇಲ್ಲಂ ಮತ್ತು ಮನೆಗಳು ಮೇಲ್ವರ್ಗದ ದರ್ಪದ ಸಂಕೇತಗಳಾಗಿರುವಂತೆ ತುಳುನಾಡಿನಲ್ಲಿ ಗುತ್ತುಗಳು ಇದ್ದವು.[111] ಕುಂದಾಪುರದ ಸ್ವಾಮಿಮನೆಗಳೆಂದು ಕರೆಯಲ್ಪಡುವ ಗುತ್ತುಗಳು ಊಳಿಗಮಾನ್ಯದ ಪಳಿಯುಳಿಕೆಗಳಾಗಿವೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವಿಜಯನಗರ ಕಾಲದ ಆರಂಭಿಕ ದಿನಗಳಲ್ಲಿ ಗುತ್ತುಗಳು ಆಡಳಿತ ವ್ಯವಸ್ಥೆಯ ಅಡಿಪಾಯಗಳಾಗಿ ಕಾರ್ಯನಿರ್ವಹಿಸಿದರೆ ನಂತರದ ದಿನಗಳಲ್ಲಿ ಆಡಳಿತ ವ್ಯವಸ್ಥೆಯ ಪೋಷಕ ವ್ಯವಸ್ಥೆಯಾಗಿ ಮಾರ್ಪಾಡು ಹೊಂದಿದವು.

ಪರಂಪರಾನುಗತವಾಗಿ ನೀಡಲ್ಪಡುವ ಸ್ಥಾನಮಾನ ಮತ್ತು ಹೊಣೆಗಾರಿಕೆಗಳಿಗೆ ಕೆಲವೊಂದು ಸೌಲಭ್ಯಗಳನ್ನು ನಿಗದಿ ಮಾಡಲಾಗಿತ್ತಾದರೂ ಅವುಗಳು ಕೆಲವು ಸಂದರ್ಭಗಳಲ್ಲಿ ಶೋಷಣೆಯ ಕೇಂದ್ರಗಳಾಗಿ ಪರಿವರ್ತನೆಗೊಂಡ ಉದಾಹರಣೆಗಳು ಮಾನವ ಇತಿಹಾಸದಲ್ಲಿ

ಸಾಕಷ್ಟಿವೆ. ಅಂತಹ ಸಾಲಿಗೆ ಸೇರುವ ವ್ಯವಸ್ಥೆಯೇ ಗುತ್ತು.ಗುತ್ತುಗಳು ಕೇವಲ ಒಂದು ಸಮುದಾಯ ಅಥವಾ ಒಂದು ಜಾತಿಗೆ ಸೀಮಿತವಾಗಿಲ್ಲವಾದರೂ ಅವುಗಳು ತುಳು ಸಮಾಜದ ಗೌರವದ ಸಂಕೇತಗಳಾಗಿ ಅಥವಾ ಅಧಿಕಾರಕ್ಕೆ ಅಂಟಿಕೊಳ್ಳುವ ಸಾಧನವಾಗಿ ಮಾರ್ಪಾಡುಗೊಂಡಿತ್ತು.ಸ್ಥಳೀಯವಾಗಿ ಕನಿಷ್ಠ ಅಧಿಕಾರ ಪಡೆದುಕೊಂಡಿದ್ದರೂ, ರಾಜಕೀಯ ವ್ಯವಸ್ಥೆಯ ಉನ್ನತ ವರ್ಗದೊಂದಿಗೆ ಸಂಪರ್ಕ ಸಾಧಿಸಿಕೊಳ್ಳಲು ಇದು ಅನುಕೂಲ ಮಾಡಿಕೊಡುತ್ತಿತ್ತು. ಗ್ರಾಮ ಪಂಚಾಯತುಗಳಲ್ಲೂ ಗುತ್ತುಗಳು ಸ್ಥಳೀಯ ಅಧಿಕಾರದ ಕೇಂದ್ರಗಳಾಗಿ ಅಧಿಕಾರ ಚಲಾಯಿಸುವ ಸಂದರ್ಭಗಳು ಇತಿಹಾಸದಲ್ಲಿ ಕಾಣಸಿಗುತ್ತವೆ. ಕೆಲವೊಂದು ಭಾರಿ ಗುತ್ತಿನ ಮನೆಗಳೇ ಪಂಚಾಯತುಗಳಾಗಿ ಕಾರ್ಯನಿರ್ವಹಿಸಿದ್ದ ಸಂದರ್ಭಗಳಿದ್ದವು. ಹೀಗೆ ವಸಾಹತುಪೂರ್ವದ ಗುತ್ತುಗಳು ಗ್ರಾಮದ ಅಧಿಕಾರ ಕೇಂದ್ರಗಳಾಗಿ, ಪ್ರಭಾವಿ ಒಕ್ಕಲುಗಳ ಪ್ರತಿನಿಧಿಯಾಗಿ ಮತ್ತು ಧಾರ್ಮಿಕವಾಗಿ ಧರ್ಮಚಾವಡಿಯಾಗಿ ಸ್ಥಾನಮಾನ ಪಡೆದುಕೊಂಡಿದ್ದವು.[112]

ಅಧಿಕಾರ ಪ್ರತ್ಯೇಕತೆಯ ಕಲ್ಪನೆಯಿಲ್ಲದ ಕಾಲದ ವ್ಯವಸ್ಥೆಯಾಗಿದ್ದ ಗುತ್ತುಗಳು ಸ್ಥಳೀಯ ಅಧಿಕಾರದ ಕೋಟೆಗಳಾಗಿ ರೂಪುಗೊಂಡಿದ್ದವು. ದೈವಗಳ ಸಂಲಗ್ನತೆಯು ಗುತ್ತು ಮನೆತನಗಳಿಗೆ ಹೆಚ್ಚಿನ ಬಲ ನೀಡುತ್ತಿದ್ದವಾದರೂ, ಸಾಂದರ್ಭಿಕವಾಗಿ ಅದು ದುರುಪಯೋಗವೂ ಆಗುತ್ತಿತ್ತು.ಇದಕ್ಕೆ ಇಂಬುಕೊಡುವಂತೆ ಮಾರ್ಗಪರಂಪರೆಯ ಬ್ರಾಹ್ಮಣರು ದೇವರ ಪ್ರತಿನಿಧಿಗಳೆಂದು ತಮ್ಮನ್ನು ತಾವೇ ಹೇಳಿಕೊಂಡು ಪ್ರಭಾವಿ ಒಕ್ಕಲುಗಳಿಗೆ ಅಥವಾ ಗುತ್ತುಗಳಿಗೆ ದೈವಿಕ ಆಶೀರ್ವಾದವನ್ನು ಕೊಡಿಸುವ ನೆಪದಲ್ಲಿ ಜನಸಾಮಾನ್ಯರಲ್ಲಿ ಭಯದ ವಾತಾವರಣವನ್ನು ರೂಪಿಸುತ್ತಿದ್ದರು. ಕೆಲವೊಂದು ಬಾರಿ ಬ್ರಾಹ್ಮಣರು ಮತ್ತು ಪ್ರಭಾವಿ ಒಕ್ಕಲುಗಳು ಅನೌಪಚಾರಿಕ ಒಪ್ಪಂದ ಮಾಡಿಕೊಂಡು ಅಧಿಕಾರ ಹಂಚಿಕೊಳ್ಳುತ್ತಿದ್ದ ಸಂದರ್ಭಗಳಿದ್ದುವಲ್ಲದೇ ಇದು ಗ್ರಾಮೀಣ ಸಮುದಾಯಗಳನ್ನು ನಿಯಂತ್ರಣದಲ್ಲಿಡಲು ಸಹಾಯಕವಾಗುತ್ತಿತ್ತು.[113] ಬುಖಾನನ್ ಪ್ರಕಾರ ತುಳುನಾಡಿನಲ್ಲಿ ಬ್ರಾಹ್ಮಣರು ಆಡಳಿತವರ್ಗದವರಿಗೆ ಅದರಲ್ಲೂ ಸ್ಥಳೀಯ ಮಟ್ಟದ ವ್ಯವಸ್ಥೆಗಳಿಗೆ ಅಧ್ಯಾತ್ಮಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸಿ ಲಾಭ ಪಡೆದುಕೊಳ್ಳುತ್ತಿದ್ದರು.[114] ದೇವರ ಪ್ರತಿನಿಧಿಗಳಾಗಿ ಮಾರ್ಪಟ್ಟಿರುವ ಕಾರಣ ಪ್ರಭಾವಿ ವರ್ಗಗಳು ಅದರಲ್ಲೂ ಗುತ್ತುಗಳು ಬ್ರಾಹ್ಮಣರನ್ನು ಗೌರವಿಸುತ್ತಿದ್ದವು. ಹೀಗೆ ಗುತ್ತುಗಳು ಬ್ರಾಹ್ಮಣರ ಸಹಾಯದಿಂದ ಗ್ರಾಮವನ್ನು ನಿಯಂತ್ರಿಸುತ್ತಿದ್ದವಲ್ಲದೇ ಮತ್ತಷ್ಟು ಗಟ್ಟಿಗೊಂಡು ಅಧಿಕಾರ ಚಲಾಯಿಸುತ್ತಿದ್ದವು.[115]

ಸಾಮಾನ್ಯವಾಗಿ ದೇವಸ್ಥಾನಗಳು ಮೂಲಭೂತವಾಗಿ ಬ್ರಾಹ್ಮಣೀಯ ಸಂಸ್ಥೆಗಳಾದರೂ, ಪ್ರಭಾವಿ ಒಕ್ಕಲುಗಳ, ಅದರಲ್ಲೂ ಗುತ್ತುಗಳ ಪ್ರಭಾವದಿಂದ ಸಾಮಾಜಿಕ ಹಾಗೂ ಆರ್ಥಿಕ ಶಕ್ತಿ

ಕೇಂದ್ರಗಳಾಗಿ ಕಾಣಿಸಿಕೊಳ್ಳುತ್ತಿದ್ದವು. ಸ್ಥಳೀಯ ಅನನ್ಯತೆಗಳನ್ನು ಕಾಯ್ದುಕೊಳ್ಳುವ ಬ್ರಾಹ್ಮಣರು ದೇವರನ್ನು ಪೂಜಿಸುವ ವಿಶೇಷಾಧಿಕಾರ ಪಡೆದುಕೊಂಡರೆ ಪ್ರಭಾವಿ ಒಕ್ಕಲುಗಳು ಸಾಮಾಜಿಕ ಮತ್ತು ಆರ್ಥಿಕ ಶಕ್ತಿಗಳನ್ನು ಹೊಂದಿ, ಒಟ್ಟಾಗಿ ರಾಜಕೀಯ ವ್ಯವಸ್ಥೆಯಲ್ಲಿ ಹೊಂದಾಣಿಕೆಯಲ್ಲಿ ಕಾಣಿಸಿಕೊಳ್ಳುತ್ತಿದ್ದವಲ್ಲದೇ ಪರಸ್ಪರ ಲಾಭ, ಸ್ಥಾನಮಾನ, ಅಧಿಕಾರ, ಗೌರವ ಇತ್ಯಾದಿಗಳನ್ನು ಅನುಭವಿಸುತ್ತಿದ್ದವು. ಈ ಬಗೆಯಲ್ಲಿ ಆಡಳಿತಕ್ಕೆ ಒಳಪಟ್ಟ ಪ್ರಮುಖ ಧಾರ್ಮಿಕ ಕೇಂದ್ರಗಳೆಂದರೆ ಪ್ರಸಿದ್ಧ ದೇವಾಲಯಗಳಾದ ಕೊಲ್ಲೂರು, ಮಾರಣಕಟ್ಟೆ, ಸುಬ್ರಮಣ್ಯ, ಬಾರಕೂರು, ಕಟೀಲು, ನೀಲಾವರ, ಮಂದಾರ್ತಿ, ಪೊಳಲಿ, ಮುಂಡ್ಕೂರು, ಕದ್ರಿ ಮತ್ತು ವಾಮಂಜೂರು, ಕುಂದಾಪುರದ ಶಂಕರನಾರಾಯಣ ಮುಂತಾದವುಗಳು.[116]

ಬ್ರಾಹ್ಮಣರು, ಧಾರ್ಮಿಕ ಸಂಸ್ಥೆಗಳು, ದೇವಸ್ಥಾನ ಮುಂತಾದವುಗಳ ಜೊತೆಗೆ ಗ್ರಾಮಕ್ಕೆ ಉತ್ತರದಾಯಿತ್ವವಾಗಿರುವ ದೈವಾರಾಧನೆಯ ಮೂಲಕವು ಗುತ್ತುಗಳಲ್ಲಿ ತಮ್ಮ ಅಧಿಕಾರ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡಿದ್ದರು. ಈ ವ್ಯವಸ್ಥೆಗಳು ಗುತ್ತಿನ ಅಧಿಕಾರ ವಿನ್ಯಾಸಕ್ಕೆ ಸ್ವಾಭಾವಿಕ ಕಟ್ಟಳೆಯನ್ನು ಕೊಟ್ಟಿದ್ದಲ್ಲದೇ ಒಂದೆಡೆ ಬ್ರಾಹ್ಮಣರೊಂದಿಗಿನ ಹೊಂದಾಣಿಕೆ ಇನ್ನೊಂದೆಡೆ ದೈವಗಳ ಬಳಕೆ ಗ್ರಾಮಜೀವನದ ಮೇಲೆ ದೂರಗಾಮಿ ಪರಿಣಾಮ ಬೀರಿದವು.[117] ಇದು ಸ್ಥಳೀಯವಾಗಿ ಗುತ್ತುಗಳ ಅಧಿಕಾರದ ಬೇರುಗಳನ್ನು ಇನ್ನಷ್ಟು ಆಳಕ್ಕೆ ಇಳಿಸಿದವು. ದೈವಸ್ಥಾನಗಳಂತೆ ಗರಡಿಗಳು ವಾಸ್ತವವಾಗಿ ಬಿಲ್ಲವರ ಆರಾಧನೆಯ ಕೇಂದ್ರಗಳಾಗಿದ್ದರೂ ಜೈನರ ಪತನಾನಂತರ ಪ್ರಭಾವಿ ಒಕ್ಕಲುಗಳ ಅಥವಾ ಗುತ್ತುಗಳ ಹಿಡಿತಕ್ಕೆ ಬಂದವಲ್ಲದೇ ಅಧಿಕಾರದ ಕೇಂದ್ರಗಳಾಗಿಯೂ ರೂಪುಗೊಂಡವು. ಗರಡಿಗಳಲ್ಲಿ ಗುತ್ತುಕೇಂದ್ರಿತ ಅಧಿಕಾರಿ ವರ್ಗಗಳು, ಅಧಿಕಾರವನ್ನು ಚಲಾಯಿಸುವ ವ್ಯವಸ್ಥೆಗಳು ರೂಪಿತಗೊಂಡವು. ಈ ಸಂಬಂಧ ಅಧ್ಯಯನ ಮಾಡಿರುವ ವಿದ್ವಾಂಸರು ಉದಾಹರಣೆಯಾಗಿ ಕೋಟಿಚೆನ್ನಯ್ಯರ ಸಮಾಧಿ ಸ್ಥಳಗಳು ಗುತ್ತಿನ ನಿಯಂತ್ರಣಕ್ಕೆ ಒಳಪಟ್ಟ ಮಾಹಿತಿಯನ್ನು ನೀಡಿದ್ದಾರೆ.[118] ಹೀಗೆ ಗ್ರಾಮಗಳಲ್ಲಿ ಗುತ್ತುಗಳು ಪರಂಪರಾಗತ ವ್ಯವಸ್ಥೆಗಳಾಗಿ, ಪರಮಾಧಿಕಾರದ ಸಂಕೇತಗಳಾಗಿ,ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕೇಂದ್ರಗಳಾಗಿ ರಚನೆಗೊಂಡು ಕಾರ್ಯನಿರ್ವಹಿಸಿದವು.

ಇತಿಹಾಸಕಾರರ ಅಭಿಪ್ರಾಯದಲ್ಲಿ ಗುತ್ತುಗಳ ಸೈದ್ಧಾಂತಿಕ ರಚನಾ ವಿನ್ಯಾಸ ಸಾಮಾಜಿಕ ಮತ್ತು ರಾಜಕೀಯ ಅಧಿಕಾರವನ್ನು ಪ್ರತಿಬಿಂಬಿಸುವಂತಿತ್ತು. ಮಾತ್ರವಲ್ಲದೇ ವಿಭಿನ್ನ ಜಾತಿಗಳ ನಡುವಿನ ಸಂಬಂಧವನ್ನು ನಿಯಂತ್ರಿಸುವ, ತನ್ಮೂಲಕ ಮಿತಿಗಳನ್ನು ವಿಧಿಸುವ ಕೇಂದ್ರಗಳಾಗಿ ರೂಪುಗೊಂಡಿದ್ದವು. ಗುತ್ತು ವಿವಿಧ ಜಾತಿಗಳಿಗೆ ಸಾರ್ವಜನಿಕ ಪ್ರದೇಶಗಳಲ್ಲಿ ಪ್ರವೇಶಾನುಮತಿ ಮತ್ತು ಪ್ರವೇಶಾಧಿಕಾರದ ವಲಯಗಳನ್ನು ಗೊತ್ತುಪಡಿಸಿ, ಸಾಮಾಜಿಕ ವ್ಯವಸ್ಥೆಯಲ್ಲಿ ವಿಭಿನ್ನ ಜಾತಿಗಳು ಅನುಸರಿಸಬೇಕಾದ ನಡಾವಳಿಗಳನ್ನು ರೂಪಿಸುವ ಅಧಿಕಾರ ಪಡೆದುಕೊಂಡಿತ್ತಲ್ಲದೇ

ಅದರ ತೀರ್ಮಾನಗಳು ಜಾತಿಗಳ ಅಂತಸ್ತನ್ನು ಸೂಚಿಸುತ್ತಿತ್ತು.[119] ಅಂತರಿಕವಾಗಿ ಗುತ್ತಿನ ಮನೆಯ ಪ್ರವೇಶಾತಿ ವಲಯಗಳು ಸಹ ಅವುಗಳದ್ದೇ ಆದನಿಷ್ಠುರ ತತ್ವಗಳನ್ನು ಹೊಂದಿದ್ದವು. ಯಜಮಾನ ಮನೆಯ ಯಾವುದೇ ಭಾಗಕ್ಕೆ ಪ್ರವೇಶ ಮಾಡುವ ಅಧಿಕಾರ ಪಡೆದುಕೊಂಡಿದ್ದರೆ, ಸ್ತ್ರೀಯರಿಗೆ ಗುತ್ತಿನ ಚಾವಡಿ ಹಾಗೂ ರಾಜಕೀಯ ಚಟುವಟಿಕೆಯ ಸ್ಥಳಗಳಿಗೆ ಪ್ರವೇಶಾತಿ ಇರಲಿಲ್ಲ. ರಾಜಕೀಯ ಅಧಿಕಾರ ಹೆಚ್ಚಾಗಿ ಪುರುಷಕೇಂದ್ರಿತವಾಗಿದ್ದರಿಂದ, ಸೈಧಾಂತಿಕವಾಗಿ ಯಜಮಾನನು ರಕ್ಷಕ ದೈವಗಳ ಜೊತೆ ಸೇರಿ ಚಲಾಯಿಸುತ್ತಿದ್ದ ಅಧಿಕಾರದಲ್ಲಿ ಪಾಲುದಾರಿಕೆಯನ್ನು ಸಹಿಸುತ್ತಿರಲಿಲ್ಲ.[120]

ಗುತ್ತು ವಸಾಹತುಪೂರ್ವದ ತುಳುನಾಡಿನಲ್ಲಿ ಪ್ರಚಲಿತದಲ್ಲಿದ್ದ ಉಳಿಗಮಾನ್ಯ ಪದ್ಧತಿಯನ್ನು ಸಂಕೇತಿಸುತ್ತಿದ್ದಾದರೂ ಸ್ಥಳೀಯ ಮಟ್ಟದಲ್ಲಿ ಅದು ರಾಜಕೀಯದ ಪ್ರಬಲ ಮೂಲಘಟಕವಾಗಿತ್ತು.ಅವುಗಳ ವಾಸ್ತವಿಕ ಸ್ವರೂಪ ಎಷ್ಟು ಪ್ರಬಲ ಹಾಗೂ ಪರಿಣಾಮಕಾರಿಯಾಗಿತ್ತೆಂದರೆ ನಂತರದ ಶತಮಾನಗಳಲ್ಲಿ ಪ್ರಬಲ ಸಮುದಾಯಗಳೆನಿಸಿಕೊಂಡ ಜೈನರು ಗುತ್ತಿನೊಂದಿಗೆ ಅಧಿಕಾರಕ್ಕಾಗಿ ಸಂಘರ್ಷಕ್ಕಿಳಿಯದೇ ಅವುಗಳನ್ನು ಯಥಾ ಸ್ಥಿತಿಯಲ್ಲಿ ಮುಂದುವರೆಸಿಕೊಂಡೇ ತಮ್ಮ ಅಧಿಕಾರ ಚಲಾಯಿಸಿದರು. ಸಂಕ್ಷಿಪ್ತವಾಗಿ ಹೇಳುವುದೇನೆಂದರೆ ಚರಿತ್ರೆಯಲ್ಲಿ ಅಧಿಕಾರ ನೈಜವಾಗಿ ಕೆಳಹಂತದಿಂದ ಬಿಂಬಿತವಾಗದಿದ್ದರೂ ವಿಸ್ತಾರ ಸಾಮ್ರಾಜ್ಯಕ್ಕೆ ಇವುಗಳು ಮೆಟ್ಟಲಾಗಿದ್ದುಕೊಂಡು ಪ್ರಧಾನ ಭೂಮಿಕೆಯನ್ನು ವಹಿಸಿದ್ದವೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.[121]

ಗುತ್ತುಗಳು ಅಂದಿನ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳಿಗೆ ಅನುಗುಣವಾಗಿ ಅನಿವಾರ್ಯವಾಗಿ ರೂಪುಗೊಂಡರೂ, ನಂತರದ ದಿನಗಳಲ್ಲಿ ಸ್ವತಂತ್ರ ವ್ಯಾಖ್ಯಾನ ಪಡೆದುಕೊಂಡು ಕೃಷಿಲೋಕದ ಪ್ರಧಾನ ಶಕ್ತಿಗಳಾಗಿ ಹೊರಹೊಮ್ಮಿದವು.[122] ಇವುಗಳ ಸಂದರ್ಭದಲ್ಲಿ ಅನ್ಯಮತಗಳೆಂದು ಪರಿಗಣಿಸಲ್ಪಟ್ಟಿದ್ದ ಸಾಮಾಜಿಕ ಗುಂಪುಗಳಾದ ಕ್ರೈಸ್ತರು, ಬ್ಯಾರಿಗಳು ಹಾಗೂ ಇತರರು ಸಮಾಜದ ಉಪಯುಕ್ತ ವ್ಯವಸ್ಥೆಗಳಾಗಿ, ತುಳು ಸಮಾಜದ ಸಮೀಕರಣಗಳಿಗೆ ಒಳಗಾಗಿರುವುದರಿಂದ ಅವರು ಮತಗಳಾಗಿ ಪರಿಗಣಿಸಲ್ಪಡದೇ ಜಾತಿಗಳಾಗಿ ಪರಿಗಣಿಸಲ್ಪಟ್ಟು ಮುಂದುವರಿದವು. ಮೂಲಭೂತವಾಗಿ ಜಾತಿ ಮತ್ತು ಮತಗಳ ನಡುವೆ ಭಿನ್ನತೆಗಳಿದ್ದರೂ, ಗುತ್ತುಗಳ ಪರಿಕಲ್ಪನೆಯ ರಾಜಕೀಯದೊಳಗೆ ಜಾತಿಪಂಗಡಗಳಾಗಿಯೇ ಕಾಣಿಸಿಕೊಂಡವು.[123]

ಸಾಮಾನ್ಯವಾಗಿ ಗುತ್ತುಗಳ ಮೇಲ್ವಿಚಾರಣೆಯಲ್ಲಿದ್ದ ಗ್ರಾಮ ಮತ್ತು ಕುಟುಂಬದ ದೈವಗಳು ಸತ್ಯ ಮತ್ತು ಧರ್ಮದ ಪ್ರತೀಕಗಳೆಂಬ ನಂಬಿಕೆಯಿದ್ದರೂ ಅದರ ಅನ್ವಯಿಕತೆಯಲ್ಲಿ ಕೆಲವೊಂದು ಸಂದರ್ಭಗಳಲ್ಲಿ ಇದಕ್ಕೆಅಪವಾದಗಳಾಗುತ್ತಿದ್ದವು. ಗ್ರಾಮದ ದೈವವು ಗ್ರಾಮದ

ಸಮಸ್ತರನ್ನು ರಕ್ಷಿಸುವ, ಹೊಣೆಗಾರಿಕೆಯನ್ನು ನಿಭಾಯಿಸಿದರೆ .ಕುಟುಂಬದ ದೈವಗಳು ಆಶ್ರಯದಾತರನ್ನು ಕಾಪಾಡಿ ಅವರ ಸಂತತಿಯನ್ನು ಉದ್ಧರಿಸುವ ಶಕ್ತಿಗಳಾಗಿ ಅರ್ಥೈಸಲ್ಪಟ್ಟಿದ್ದವು. ವಾಸ್ತವಿಕವಾಗಿ ದೈವಾರಾಧನೆಯ ವಿಧಿ-ವಿಧಾನಗಳು ಒಂದು ನಿಶ್ಚಿತ ರಾಜಕೀಯ ಅನುಸ್ವರವನ್ನು ಹೊಂದಿರುವುದು ಸ್ಪಷ್ಟ ಎಂಬುವುದು ವಿದ್ವಾಂಸರ ಅಭಿಪ್ರಾಯವಾಗಿದೆ.[124]

ತುಳುನಾಡಿನ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಭೂಮಿಯ ಒಡೆತನವನ್ನು ಕಾಯ್ದುಕೊಳ್ಳುವ ವಿಚಾರ ಮುಖ್ಯವಾಗಿದ್ದರಿಂದ ಭೂಮಿಯ ಒಡೆತನ ಮತ್ತು ರಾಜಕೀಯ ಅಧಿಕಾರಕ್ಕೆ ನೇರವಾದ ಸಂಬಂಧವಿತ್ತು.ಇದು ಗುತ್ತುಗಳ ವ್ಯವಸ್ಥೆಗಳಿಗೆ ಹೆಚ್ಚು ಅನ್ವಯವಾಗುತ್ತಿತ್ತು. ರಾಜಕೀಯ ಅಧಿಕಾರ ಮತ್ತು ಭೂಮಿಯ ಮೇಲಿನ ವಾರಸುದಾರಿಕೆಯನ್ನು ವಂಶಪಾರಂಪರ್ಯವಾಗಿಸಿ ಅದರ ಮೂಲಕ ಗುತ್ತುಗಳನ್ನು ಬಲಪಡಿಸಲು ಸಹಾಯಕವಾಗುವಂತೆ ದೈವಾರಾಧನೆಯ ವ್ಯವಸ್ಥೆಯನ್ನು ರೂಪಿಸಿ ಶ್ರೇಣಿಕೃತಗೊಳಿಸಲಾಗಿತ್ತು. ಇದರಿಂದ ಸಾಮಾಜಿಕ ವ್ಯವಸ್ಥೆ ಕ್ರಮಬದ್ಧಗೊಂಡರೆ ಆ ಕ್ರಮಬದ್ಧ ವ್ಯವಸ್ಥೆಯಲ್ಲಿ ಗುತ್ತು ಸ್ಪಷ್ಟವಾಗಿ ಸ್ಥಳೀಕರಣಗೊಂಡಿತು.[125]

ಗುತ್ತು ರಚನೆಯಲ್ಲಿ ಪ್ರಧಾನ ಪಾತ್ರದಾರಿಗಳಾಗಿದ್ದ ಒಕ್ಕಲುಗಳು ಭೂಒಡೆತನದ ಅಧಿಕಾರ ಪಡೆದುಕೊಂಡು ಅವುಗಳನ್ನು ಕಾನೂನುಬದ್ಧಗೊಳಿಸಿ, ಪ್ರಭಾವಿತರಾಗಿ ಸ್ಥಳೀಯ ಅರಸರ ಅಧಿಕಾರದಲ್ಲಿ ಪಾಲು ಪಡೆದುಕೊಳ್ಳಲು ಪ್ರಯತ್ನಿಸಿದವು. ಅರಸರ ಪಟ್ಟಧಾರಣೆಯ ರೀತಿ-ರಿವಾಜು ಹಾಗೂ ಶಾಸ್ತ್ರವಿಧಿಗಳಲ್ಲಿ ಭಾಗವಹಿಸಿ ಅಧಿಕಾರದೊಂದಿಗಿನ ಸಾಂಸ್ಥಿಕ ಸಂಬಂಧವನ್ನು ದೃಢಗೊಳಿಸಿದರಲ್ಲದೇ ವಿವಿಧ ರಾಜಕೀಯ ಸ್ತರಗಳ ಅಧಿಕಾರವನ್ನು ದತ್ತ ಅಧಿಕಾರವಾಗಿ ವಂಶಪಾರಂಪರ್ಯಗೊಳಿಸಿ ಆಡಳಿತ ಘಟಕಗಳೊಂದಿಗೆ ಸ್ವಾಭಾವಿಕ ಸಂಬಂಧದ ಭಾವನೆ ಮೂಡಿಸುವಲ್ಲಿ ಯಶಸ್ವಿಯಾದರು.[126] ಕುಟುಂಬ, ಗುತ್ತು, ಮಾಗಣೆ, ಸೀಮೆ ಮುಂತಾದವುಗಳ ಅಧಿಕಾರದ ಆಧಾರದಲ್ಲಿ ತುಳುನಾಡಿನ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಿಂತನೆಗಳನ್ನು ವಿನ್ಯಾಸಗೊಳಿಸಿದರು. ಆಡಳಿತದ ಅಧಿಕಾರವು ಗುತ್ತಿಗೆ ಸೇರಿದ್ದರೂ, ಚಾವಡಿ ದೈವಗಳನ್ನು ಆ ಅಧಿಕಾರದಲ್ಲಿ ಪಾಲುದಾರರನ್ನಾಗಿಸಿದರಲ್ಲದೇ ಒಂದು ವೇಳೆ ಗುತ್ತುಗಳು ಅಧಿಕಾರ ಕಳೆದುಕೊಂಡರೂ ದೈವಗಳ ಸ್ಥಾನಮಾನಕ್ಕೆ ಚ್ಯುತಿ ಬರದ ರೀತಿಯಲ್ಲಿ ಅಧಿಕಾರ ನಡೆಸಿದರು. ಹೀಗೆ ವಸಾಹತುಪೂರ್ವ ವ್ಯವಸ್ಥೆಯಲ್ಲಿ ಕೃಷಿ ಅಧಿಕಾರ ರಚನೆಯ ಮೂಲಕ ತನ್ನದೇ ಆದ ವ್ಯವಸ್ಥಿತ ವರ್ತುಲಗಳನ್ನು ಸೃಷ್ಟಿಸಿದ ಪ್ರಬಲ ಅರ್ಥಿಕ ವರ್ಗಗಳು ಅಥವಾ ಒಕ್ಕಲುಗಳು ಮಾತೃಪ್ರಧಾನ ವ್ಯವಸ್ಥೆಯನ್ನು ಪುರುಷಕೇಂದ್ರಿಕೃತ ಅಳಿಯಸಂತಾನ ವ್ಯವಸ್ಥೆಯನ್ನಾಗಿ ಪರಿವರ್ತಿಸಿ ಗ್ರಾಮದ ಅಧಿಕಾರದ ಕೇಂದ್ರ ರಚನೆಯಾದ ಗುತ್ತಿನಲ್ಲಿ ಪುರುಷ ಯಜಮಾನನನ್ನು ಸ್ಥಾಪಿಸಿ ತಮ್ಮ ಪ್ರಬಲ ಆಸ್ತಿತ್ವವನ್ನು ಮುಂದುವರೆಸಿಕೊಂಡು ಬಂದರು.

ತುಳುನಾಡಿನ ಮಾಗಣೆ ಆಡಳಿತ ಹೆಚ್ಚಿನ ಸಂದರ್ಭಗಳಲ್ಲಿ ಜೈನರ ಸುಪರ್ದಿಯಲ್ಲಿದ್ದು ಬಲ್ಲಾಳ ಹೆಗ್ಗಡೆಗಳಿಗೆ ವಿಧೇಯರಾಗಿದ್ದ ಗ್ರಾಮದ ನಾಲ್ಕು ಗುರಿಕಾರರಿಗೆ ಗುತ್ತುಗಳ ಅಧಿಕಾರವನ್ನು ಹಂಚಿಕೆ ಮಾಡಲಾಗುತ್ತಿತ್ತು. ಜೈನರು ತಮ್ಮ ಅಧಿಕಾರವನ್ನು ಮಾಗಣೆಗೆ ಸೀಮಿತಗೊಳಿಸಿ ಗುತ್ತಿನ ಅಧಿಕಾರವನ್ನು ಸ್ಥಳೀಯ ಮಟ್ಟದ ನಾಯಕನಿಗೆ ನೀಡಿ ರಾಜಕೀಯ ತಂತ್ರಗಾರಿಕೆಯನ್ನು ಅನುಸರಿಸಿದರು. ಈ ವ್ಯವಸ್ಥೆ ಮಾಗಣೆಯ ಮಟ್ಟದಲ್ಲಿ ಜೈನರನ್ನು ಪ್ರಶ್ನಾತೀತ ನಾಯಕರನ್ನಾಗಿ ಮಾಡಿದರೆ ಅದೇ ಸ್ಥಾನಮಾನ ಸ್ಥಳೀಯ ಮಟ್ಟದಲ್ಲಿ ಗುತ್ತುಗಳಿಗೆ ನೀಡಿ ಪರಸ್ಪರ ಸಹಕಾರದ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಿದರು.[127] ಇದು ಗುತ್ತುಗಳಿಗೆ ಸ್ವತಂತ್ರವಾಗಿ ಬೆಳೆಯಲು ಅವಕಾಶ ನೀಡಿತಲ್ಲದೇ ಅಧಿಕಾರ-ಆಡಳಿತ ವ್ಯವಸ್ಥೆಯಲ್ಲಿ ತಮ್ಮ ಇರುವಿಕೆಯನ್ನು ಪ್ರಬಲವಾಗಿ ಸಾಬೀತುಪಡಿಸಲು ಸಹಕಾರಿಯಾಯಿತು.

ತುಳುನಾಡಿನಲ್ಲಿ ಗುತ್ತುಗಳ ಪ್ರಬಲತೆ ಅಥವಾ ದುರ್ಬಲತೆ ಅಂದಿನ ಸಾಮಾಜಿಕ, ರಾಜಕೀಯ ಬದಲಾವಣೆಗಳ ಮುಖವಾಣಿಯಾಗಿತ್ತು.[128] ಗುತ್ತಿನ ಮುಖ್ಯಸ್ಥ ಯಜಮಾನನಾಗಿದ್ದರೂ ಕೆಲವು ಸಂದರ್ಭಗಳಲ್ಲಿ ಗುತ್ತನ್ನು ನಿಯಂತ್ರಿಸುವ ಕಾನೂನುಗಳು ಅದರಲ್ಲೂ ಮುಖ್ಯವಾಗಿ ಉತ್ತರಾಧಿಕಾರದ ನಿಯಮಗಳು ಮಾತೃವಂಶೀಯದ್ದಾಗಿತ್ತು. ಆದರೆ ಈ ವ್ಯವಸ್ಥೆಯಲ್ಲಿ ಸ್ತ್ರೀಯರ ಹಕ್ಕುಗಳು ಪ್ರತಿಪಾದಿತವಾದರೂ, ಮಾತೃವಂಶೀಯತೆ ನಿಯಮಗಳು ಪುರುಷ ಯಜಮಾನನ ಯಜಮಾನಿಕೆಯನ್ನು ಪ್ರತಿಬಂಧಿಸಿಲ್ಲ. ಗುತ್ತಿನ ಅಧಿಕಾರವನ್ನು ಅನುಭವಿಸುತ್ತಿದ್ದ ಆತನು ಅದನ್ನು ಗಟ್ಟಿಗೊಳಿಸುವ ಉದ್ದೇಶದಿಂದ ದೈವಿಕ ನೆಲೆಯನ್ನು ಆಧಾರವಾಗಿರಿಸಿಕೊಂಡಿದ್ದನು. ಹೀಗೆ ಗುತ್ತು ಪುರುಷನ ನಿಯಂತ್ರಣಕ್ಕೆ ಒಳಪಟ್ಟಿದ್ದರಿಂದ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಭೂಮಿ ಸ್ತ್ರೀಯ ನಿಯಂತ್ರಣದಲ್ಲಿದ್ದರೂ ಅನ್ವಯಿಕತೆಯಲ್ಲಿ ಪುರುಷ ವಾರಸುದಾರಿಕೆಗೆ ಒಳಪಟ್ಟಿತ್ತು. ಅದಕ್ಕನುಗುಣವಾಗಿ ಕೃಷಿ ನಿರ್ವಹಣೆ, ಸಂಪತ್ತು-ಸಂಪನ್ಮೂಲಗಳ ಅಭಿವೃದ್ಧಿ, ನಾಗಬನ, ದೈವ ಸಂಬಂಧಿ ಆಚರಣೆಗಳು, ಕಂಬಳ, ಕೋಳಿಕಟ್ಟ, ಬೇಟೆ, ಸೈನಿಕ ಚಟುವಟಿಕೆ ಮುಂತಾದವುಗಳೆಲ್ಲವೂ ಪುರುಷ ಕೇಂದ್ರಿತವಾಗಿತ್ತು. ಮೌಖಿಕ ಸಾಹಿತ್ಯದಲ್ಲಿ ಇದಕ್ಕೆ ಅಪವಾದವಾಗಿ ಪುರುಷ ಪ್ರಾಬಲ್ಯವನ್ನು ಮೀರಿ ನಿಂತ ಕೆಲವು ಮಹಿಳೆಯರ ಕಥಾನಕಗಳು ಕಾಣಸಿಗುತ್ತವೆಯಾದರೂ ಅವುಗಳು ಸಾಮಾನ್ಯ ಸ್ಥಿತಿಯಾಗಿರಲಿಲ್ಲ.[129]

ಗುತ್ತುಗಳ ಪ್ರಾಚೀನತೆಗೆ ಸಂಬಂಧಿಸಿದಂತೆ ಸ್ಪಷ್ಟ ಮಾಹಿತಿಗಳು ಸಿಗುವುದಿಲ್ಲ. ಇತಿಹಾಸ ಬರವಣಿಗೆಗಳಿಗಿಂತ ಭಿನ್ನವಾದ ಅತಿರಂಜಿತ ಮಾಹಿತಿಗಳು ಅಥವಾ ಐತಿಹ್ಯಗಳು ಕಾಣಸಿಗುತ್ತವೆಯಾದರೂ ಅವುಗಳಲ್ಲಿ ಹೆಚ್ಚಿನವುಗಳು ಕಾಲ್ಪನಿಕ ಸ್ವರೂಪದವುಗಳಾದ ಕಾರಣ ಗುತ್ತುಗಳ ನೈಜ ಚಿತ್ರಣವನ್ನು ನೀಡುವುದಿಲ್ಲ. ಅಂತೆಯೇ ಗುತ್ತುಗಳಿಗೆ ಸೇರಿದ ಭೂಮಿಗೆ

ಸಂಬಂಧಿಸಿದ ದಾಖಲೆಗಳು ಸಹ ಸ್ಪಷ್ಟವಾಗಿಲ್ಲದ ಕಾರಣ ಜೈನಮನೆತನಗಳ ಇತಿಹಾಸದಿಂದ ಅಥವಾ ಆ ಮನೆತನಗಳಿಗೆ ಸೇರಿದ ಗುತ್ತುಗಳ ಆಧಾರದಲ್ಲಿ ಚರಿತ್ರೆಯನ್ನು ರೂಪಿಸಿಕೊಳ್ಳಬಹುದೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಪ್ರಮುಖ ಕಾರಣ ವಿಜಯನಗರದ ಅರಸರ ಆಳ್ವಿಕೆಯ ಸಂದರ್ಭದಲ್ಲಿ ಸ್ಥಾಪಿಸಲ್ಪಟ್ಟ ಜೈನಗುತ್ತುಗಳಿಗೆ ಸಂಬಂಧಿಸಿದಂತೆ ಕಂಡುಬರುವ ಸ್ಪಷ್ಟ ಮಾಹಿತಿ. ಆದರೆ ಇದನ್ನು ಒಪ್ಪದ ವಿದ್ವಾಂಸರು ಜೈನಗುತ್ತುಗಳನ್ನು ಗುತ್ತುಗಳ ಇತಿಹಾಸ ನಿರ್ಮಾಣದ ಪ್ರತಿನಿಧಿಯೆಂದು ಪರಿಗಣಿಸಲಾಗದು ಎಂಬ ಅಭಿಪ್ರಾಯ ವ್ಯಕ್ತಪಡಿಸಿ, ಈ ಇತಿಹಾಸ ಜೈನೇತರ ಗುತ್ತುಗಳ ಇತಿಹಾಸ ಸಾಬೀತುಪಡಿಸಲು ಸಾಕಾಗುವುದಿಲ್ಲ ಎಂದಿದ್ದಾರೆ.

ಅಳಿದುಳಿದ ಪಳಿಯುಳಿಕೆಗಳ ಆಧಾರದಿಂದ ಕೆಲವೊಂದು ಗುತ್ತುಗಳ ಚರಿತ್ರೆಯನ್ನು ತಿಳಿದುಕೊಳ್ಳಬಹುದಾದರೂ, ಮಧ್ಯಯುಗದಲ್ಲಿ ಆರಂಭಗೊಂಡ ವಾರಸುದಾರಿಕೆಯ ಸ್ತರಗಳನ್ನು ಅವುಗಳ ಆಧಾರದಲ್ಲಿ ನಿಖರವಾಗಿ ತಿಳಿದುಕೊಳ್ಳಲು ಸಾಧ್ಯವಾಗಲಾರದು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉದಾಹರಣೆಗೆ ಪುತ್ತಿಗೆ ಗುತ್ತಿಗೆ ಸಂಬಂಧಿಸಿದ ಗೊಂದಲಗಳು.ಒಂದು ಅಭಿಪ್ರಾಯದ ಪ್ರಕಾರ ಈ ಗುತ್ತು ಸಾಮಾನ್ಯಶಕೆ ಹದಿನಾಲ್ಕನೇ ಶತಮಾನದಲ್ಲಿ ಚೌಟ ಅರಸರು ಹುಟ್ಟು ಹಾಕಿದ್ದರೆಂದಿದ್ದರೂ ಅದಕ್ಕೆ ಭಿನ್ನಾಭಿಪ್ರಾಯ ಇಲ್ಲದಿಲ್ಲ.

ಗುತ್ತುಗಳಿಗೆ ಅವುಗಳ ನಿಯಂತ್ರಣಕ್ಕೊಳಪಟ್ಟ ಭೂಮಿಯ ವಿಸ್ತಾರಕ್ಕೆ ಅನುಗುಣವಾಗಿ ಅಧಿಕಾರ ವ್ಯಾಪ್ತಿ ನಿಗದಿಯಾಗಿತ್ತಾದರೂ ಗುತ್ತಿನ ಯಜಮಾನನ ಹುದ್ದೆಗೆ ಸಂಬಂಧಿಸಿದ ಗೊಂದಲಗಳಿಗೂ ಇತಿಹಾಸದ ಮೂಲಗಳು ಸ್ಪಷ್ಟ ವಿವರಣೆ ನೀಡುವುದಿಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ಪ್ರಭಾವಿಗಳಿಗೆ ಈ ಸ್ಥಾನ ದೊರಕುತ್ತಿತ್ತೆಂದು ಕೆಲವು ಶಾಸನಗಳು ಮಾಹಿತಿ ನೀಡುತ್ತವೆ.[130] ವಿಜಯನಗರ ಕಾಲದಲ್ಲಿ ವಂಡಾರು, ಬಾರಕೂರು ಹೋಬಳಿಗೆ ಸೇರಿದ ಗುತ್ತಾಗಿದ್ದು ತುಳುನಾಡಿನಲ್ಲಿಯೇ ಅತೀ ವಿಸ್ತಾರವಾದ ಕಂಬಳದ ಗದ್ದೆಯನ್ನು ಹೊಂದಿ ಸುಮಾರು ಒಂದು ತಿಂಗಳ ಕಾಲ ಕಂಬಳದಂತಹ ಕ್ರೀಡೆಗಳು ಇಲ್ಲಿ ನಡೆಯುತ್ತಿದ್ದವು ಎಂಬುವುದರ ನೆಲೆಯಲ್ಲಿ ಇದು ಬಹಳಷ್ಟು ಪ್ರಭಾವಿ ಗುತ್ತಾಗಿದ್ದಿರಬೇಕೆಂದು ಚರಿತ್ರಕಾರರು ತೀರ್ಮಾನಿಸಿದ್ದಾರೆ. ತೋಕೂರು ಅಳೂಪರ ಕಾಲದ ಗುತ್ತು ಎಂಬ ಅಭಿಪ್ರಾಯ ವ್ಯಕ್ತವಾಗಿದೆಯಾದರೂ ಇದಕ್ಕೆ ಪೂರಕವಾಗಿ ಇತಿಹಾಸದ ದಾಖಲೆಗಳು ಕಾಣಸಿಗುವುದಿಲ್ಲ. ಜೈನ ಮನೆತನಕ್ಕೆ ಸೇರಿದ ಹೆಬ್ರಿ ಬೀಡಿಗೆ ಸಂಬಂಧಿಸಿದಂತೆಯೂ ಇದೇ ರೀತಿಯ ಅಭಿಪ್ರಾಯಗಳು ವ್ಯಕ್ತವಾಗಿವೆ.[131]

ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿರುವ ಯಡ್ತರೆ, ನಂದಳಿಕೆ ಮತ್ತು ಶಿರ್ವ ನಡಿಬೆಟ್ಟು ಗುತ್ತುಗಳಿಗೆ ಸಂಬಂಧಿಸಿದಂತೆ ಸಿಗುವ ಬರವಣಿಗೆಗಳ ಪ್ರಕಾರ ಈ ಗುತ್ತುಗಳು ನ್ಯಾಯದಾನ

ಮಾಡುವ, ಬಹಿಷ್ಕಾರವನ್ನು ಹಾಕುವ, ಮನ್ನಿಸುವ, ರದ್ದುಪಡಿಸುವ ಅಥವಾ ಬಹಿಷ್ಕೃತರನ್ನು ಸಮಾಜಕ್ಕೆ ಪುನರ್ಸೇರಿಸುವ ಅಧಿಕಾರವನ್ನು ಚಲಾಯಿಸುತ್ತಿದ್ದವು.[132] ಅಂತೆಯೇ ದೊರಕಿರುವ ಮಾಹಿತಿಗಳ ಆಧಾರದಲ್ಲಿ ತಿಂಗಳೆ ಚಾವಡಿ, ಪಾಂಗಾಳ ನಾಣಯ್ಯರ ಗರಡಿ, ಗುಡ್ಡೆಗುತ್ತು, ಬಡಿಲಗುತ್ತು ಮುಂತಾದವುಗಳು ಪ್ರಮುಖ ಗುತ್ತು ಕೇಂದ್ರಗಳಾಗಿದ್ದು, ಕೃಷಿ ಅಧಿಕಾರ ರಚನೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದವು. ಪುತ್ತೂರಿನ ಬೆಳ್ಳಿಪ್ಪಾಡಿ ಗುತ್ತು ಮೂವತ್ತಾರು ಗ್ರಾಮ ಮತ್ತು ಇಪ್ಪತ್ತಾನಾಲ್ಕು ದೇವಸ್ಥಾನಗಳ ಅಧಿಕಾರವನ್ನು ಹೊಂದಿದ್ದ ಪ್ರಧಾನ ಗುತ್ತಾಗಿದ್ದು, ಆ ಪ್ರದೇಶದ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಡಳಿತದ ಸ್ವರೂಪ ನಿರ್ಧರಿಸುವಿಕೆಯಲ್ಲಿ ಪ್ರಧಾನ ಭೂಮಿಕೆಯನ್ನು ನಿಭಾಯಿಸುತ್ತಿತ್ತು. ಇಚ್ಲಂಪಾಡಿ ಗುತ್ತು ಕುಂಬಳೆ ಅರಸರ ಕಾಲದಲ್ಲಿ ನ್ಯಾಯ ತೀರ್ಮಾನದ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತಲ್ಲದೇ ಅರಸನಿಗೆ ಸೈನ್ಯವನ್ನು ಕಟ್ಟಿಕೊಡುವ ಗುರುತರ ಜವಾಬ್ದಾರಿಯನ್ನು ನಿರ್ವಹಿಸುತ್ತಿತ್ತು. ಕದ್ರಿ ದೇವಸ್ಥಾನದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ ಕೊಡಿಯಾಲ್ (ಕುಡ್ಲ) ಗುತ್ತು ಮಂಗಳೂರು ಹೋಬಳಿಯ ಪ್ರಮುಖ ನ್ಯಾಯ ತೀರ್ಮಾನ ಮಾಡುವ ಗುತ್ತಾಗಿ ಮಾನ್ಯತೆಯನ್ನು ಪಡೆದಿತ್ತು.[133] ಮೇಲಿನವುಗಳ ಜೊತೆಗೆ ಶಾಸನಗಳಲ್ಲಿ ಇನ್ನು ಹಲವಾರು ಗುತ್ತುಗಳು, ಅವುಗಳ ಅಧಿಕಾರ ವ್ಯಾಪ್ತಿ ಹಾಗೂ ವಾರಸುದಾರಿಕೆಗಳಿಗೆ ಸಂಬಂಧಿಸಿದ ಉಲ್ಲೇಖಗಳು ಸಿಗುತ್ತವೆ.[134]

ಅಧಿಕಾರದಲ್ಲಿ ಪಾಲು ಪಡಕೊಂಡ ಒಕ್ಕಲುಗಳು ಮತ್ತು ಜೈನರು ಬ್ರಾಹ್ಮಣರ ವಲಸೆ ಪ್ರಾರಂಭಗೊಂಡ ನಂತರ ಸಮಾಜದಲ್ಲಿ ಪ್ರಭಾವಿಗಳಾಗಿ ಸಾಮಾಜಿಕ ಬದಲಾವಣೆಗಳಿಗೆ ಕಾರಣೀಭೂತರಾದರೆಂಬ ಅಭಿಪ್ರಾಯವಿದ್ದರೂ ಕೂಡಾ ಧಾರ್ಮಿಕ ವಿಪ್ಲವಗಳು ಆ ಕಾಲದ ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಗಳಲ್ಲಿ ಆಗಿರುವ ಬದಲಾವಣೆಗಳ ಮೇಲೆ ಪ್ರಭಾವ ಬೀರಿರುವುದನ್ನು ಅಲ್ಲಗಳೆಯುವಂತಿಲ್ಲವೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.[135] ಹೀಗೆ ಧಾರ್ಮಿಕ ಮತ್ತಿನ್ನಿತರ ಕಾರಣದಿಂದ ಮಾಧ್ವರನ್ನು ವಿರೋಧಿಸಿದ ಬಿಲ್ಲವರು ಮತ್ತು ಇತರ ಕೆಳವರ್ಗದವರು ಅಸ್ಪೃಶ್ಯರಾಗಿ ಬಾಳಬೇಕಾಯಿತ್ತಾದರೆ ಮಾಧ್ವರನ್ನು ಬೆಂಬಲಿಸಿದ ಜೈನರು ಮತ್ತು ಒಕ್ಕಲುಗಳು ರಾಜಕೀಯ ಪ್ರಭಾವ ಬಳಸಿ ಭೂಮಿಯ ಮೇಲೆ ಒಡೆತನ ಸಾಧಿಸಿ ಗುತ್ತುಗಳ ರಚನೆಯಲ್ಲಿ ಪ್ರಧಾನ ಪಾತ್ರವಹಿಸಿದರು. ಆದರೆ ಉಡುಪಿಯ ಸುತ್ತಮುತ್ತ ಪ್ರಭಾವಿಗಳಾಗಿದ್ದ ಮೊಗವೀರರು ಗುತ್ತು ಪ್ರಕ್ರಿಯೆಗಳಲ್ಲಿ ಪಾಲುದಾರರಾಗಿದ್ದ ಬಗ್ಗೆ ಇತಿಹಾಸ ಸ್ಪಷ್ಟವಾದ ಮಾಹಿತಿ ನೀಡುವುದಿಲ್ಲ.[136]

ಪ್ರಭಾವಿ ಒಕ್ಕಲುಗಳು ತಮ್ಮ ಭೂಒಡೆತನದ ಕೃಷಿ ಕಾರ್ಯಗಳನ್ನು ಅಸ್ಪೃಶ್ಯರಿಗೆ ಅಥವಾ ಕೆಳವರ್ಗಗಳಿಗೆ ನೀಡುವುದರ ಜೊತೆಗೆ ತಮ್ಮ ರಕ್ಷಣೆಯ ಹೊಣೆಯನ್ನು

ವಹಿಸಿಕೊಟ್ಟರಾದರೂ, ತಮ್ಮ ಅಧಿಕಾರವನ್ನು ಯಥಾಸ್ಥಿತಿಯಲ್ಲಿಡುವ ಉದ್ದೇಶದಿಂದ ಕೆಳವರ್ಗದವರ ರಕ್ಷಕರೆಂದು ತೋರ್ಪಡಿಸಿ ತಮ್ಮ ಸ್ಥಾನ ಗೌರವಗಳಿಗೆ ಚ್ಯುತಿಬಾರದ ರೀತಿಯಲ್ಲಿ ಎಚ್ಚರಿಕೆ ವಹಿಸಿದರು. ಇದರಿಂದ ಗುತ್ತಿನ ಅಧಿಕಾರ ಅವರ ಕೈಯಲ್ಲಿ ಮುಂದುವರೆಯಿತ್ತಲ್ಲದೇ ಅಸ್ಪೃಶ್ಯರು ಒಕ್ಕಲುಗಳ ರಕ್ಷಕರು ಮತ್ತು ಇನ್ನು ಕೆಲವು ಸಂದರ್ಭಗಳಲ್ಲಿ ಒಕ್ಕಲುಗಳು ಅಸ್ಪೃಶ್ಯರ ರಕ್ಷಕರೆಂಬಂತೆ ಬಿಂಬಿಸಲು ಶಕ್ತರಾದರು. ದೈವಗಳ ನೆಪವೊಡ್ಡಿ ಕೆಳವರ್ಗದವರಿಂದ ಸೇವೆ ಪಡೆದುಕೊಂಡು ತಮ್ಮ ಸ್ಥಾನವನ್ನು ಭದ್ರಗೊಳಿಸಲು ಒಕ್ಕಲುಗಳು ಯಶಸ್ವಿಯಾದರೆ, ದೇವಸ್ಥಾನಗಳಲ್ಲಿ ಶಾಸ್ತ್ರ-ವಿಧಿಗಳನ್ನು ನೆರವೇರಿಸಿ ದೇವಕೃಪೆಯನ್ನು ಒದಗಿಸಿಕೊಡುವ ಪ್ರತಿನಿಧಿಗಳೆಂದು ಬಿಂಬಿಸಿಕೊಂಡು ಬ್ರಾಹ್ಮಣರು ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನ ಗಿಟ್ಟಿಸಿಕೊಂಡರು.[137] ಪರಿಣಾಮವಾಗಿ ಸಾಮಾಜಿಕ ಶ್ರೇಣಿಯ ಕೆಳವರ್ಗ ಹಾಗೂ ಅಲ್ಪ-ಸ್ವಲ್ಪ ಅಧಿಕಾರವನ್ನು ಉಳಿಸಿಕೊಂಡಿದ್ದ ಸ್ಥಾನಿಕ ಬ್ರಾಹ್ಮಣರು ದೇವಸ್ಥಾನಗಳ ಮೇಲಿನ ಅಧಿಕಾರ ಕಳೆದುಕೊಂಡು ಸಾಮಾಜಿಕ ವ್ಯವಸ್ಥೆಯಲ್ಲಿ ಅಧೀನ ಸಮುದಾಯಗಳೆನಿಸಿಕೊಂಡವು. ಈ ವ್ಯವಸ್ಥೆ ಗುತ್ತುಗಳ ಕಾರ್ಯಸ್ವರೂಪದಲ್ಲೂ ಪ್ರಭಾವ ಬೀರಿತು. ಸಂಕ್ಷಿಪ್ತವಾಗಿ ಹೇಳುವುದಾದರೆ ಗುತ್ತುಗಳು ಅಂದಿನ ಆಡಳಿತ ವ್ಯವಸ್ಥೆಯ ಅಡಿಪಾಯವಾಗಿ, ತಮ್ಮ ಮೇಲ್‌ಸ್ತರದ ಅಧಿಕಾರ ವ್ಯವಸ್ಥೆಗೆ ವಿಧೇಯರಾಗಿ, ಕೆಳ ಅಥವಾ ಅಧೀನ ಸಮುದಾಯಗಳಿಗೆ ಅಧಿಕಾರ ಕೇಂದ್ರವಾಗಿ, ತನ್ನ ವ್ಯಾಪ್ತಿಯ ಸಮಸ್ತ ಅಧಿಕಾರವನ್ನು ಅನುಭವಿಸುವ ಘಟಕವಾಗಿ-ಹೀಗೆ ವಾರಸುದಾರಿಕೆಯ ಹಲವು ವಲಯಗಳಲ್ಲಿ ಕಾಣಿಸಿಕೊಂಡವು.

### ಗ್ರಾಮ -ಅಧಿಕಾರದ ಸ್ವರೂಪ ಮತ್ತು ವ್ಯಾಪ್ತಿ

ತುಳುನಾಡಿನ ಶ್ರೇಣಿಕೃತ ಆಡಳಿತ ವ್ಯವಸ್ಥೆಯಲ್ಲಿ ಗುತ್ತಿನ ಮೇಲ್‌ಹಂತದಲ್ಲಿ ರಚಿಸಲ್ಪಡುತ್ತಿದ್ದ ಆಡಳಿತ ಘಟಕವನ್ನು ಗ್ರಾಮವೆಂದು ಕರೆಯಲಾಗುತ್ತಿತ್ತು. ಗ್ರಾಮದ ನಂತರ ಮಾಗಣೆ, ಸೀಮೆ, ರಾಜ್ಯ-ಹೀಗೆ ಕ್ರಮಬದ್ಧವಾಗಿದ್ದ ಆಡಳಿತ ವ್ಯವಸ್ಥೆ ತುಳುನಾಡಿನ ರಾಜಕೀಯ ಕೌಶಲ್ಯದ ಪ್ರತೀಕವಾಗಿತ್ತು. ಹಲವು ಗ್ರಾಮಗಳ ಒಕ್ಕೂಟ ಮಾಗಣೆಯಾದರೆ, ಮಾಗಣೆಗಳು ಸೇರಿ ಸೀಮೆ, ಸೀಮೆಗಳು ಸೇರಿ ರಾಜ್ಯವಾಗುತ್ತಿತ್ತು. ನಾಲ್ಕು ಗುತ್ತುಗಳು ಸೇರಿ ಒಂದು ಗ್ರಾಮಾಡಳಿತ ರೂಪುಗೊಳ್ಳುತ್ತಿತ್ತು. ಪ್ರತೀ ಗ್ರಾಮವನ್ನು ನಾಲ್ಕು ಪಾಲು ಮಾಡಿ ನಾಲ್ಕು ಮಂದಿ ಗುರಿಕಾರರಿಗೆ ನೀಡಲಾಗುತ್ತಿತ್ತು. ನಾಲ್ಕು ಭಾಗಗಳ ಗಡಿ ಸ್ಪಷ್ಟವಾಗಿ ಗುರುತಿಸಲ್ಪಡುತ್ತಿದ್ದು ಒತ್ತುವರಿಗೆ ಅವಕಾಶವಿರಲಿಲ್ಲ. ತಮ್ಮ ವ್ಯಾಪ್ತಿಯೊಳಗಿನ ಭೂಮಿಯ ಮೇಲಿನ ಕಂದಾಯವನ್ನು ಈ ಗುರಿಕಾರರು ಸಂಗ್ರಹಿಸಿ ತನ್ನ ಮೇಲ್‌ಹಂತದ ಘಟಕದ ಮುಖ್ಯಸ್ಥನಿಗೆ ನೀಡಬೇಕಾಗಿತ್ತು. ಆದುದರಿಂದ ಪ್ರತಿಯೊಬ್ಬ ಗುರಿಕಾರನನ್ನು 'ಗಡಿ ಹಿಡಿದ ಗುತ್ತಿನವ' ಎಂದು ಕರೆಯಲಾಗುತ್ತಿತ್ತು.[138] ಗುತ್ತು, ಗ್ರಾಮ ವ್ಯಾಪ್ತಿಯ ದೇವಸ್ಥಾನಗಳು, ಚಾವಡಿಗಳುಹಾಗೂ

ದೈವಾರಾಧನೆಯ ಸಮಾರಂಭದ ಮುಖ್ಯಸ್ಥನಾಗಿ ಈತನು ಕಾರ್ಯನಿರ್ವಹಿಸುತ್ತಿದ್ದನು. ಅಥವಾ ಈತನಿಗೆ ಗಡಿ ಮರ್ಯಾದೆ ಸಲ್ಲುತ್ತಿತ್ತು. ಅವುಗಳ ಅಧಿಕಾರ ವ್ಯಾಪ್ತಿ ಗಡಿಯನ್ನು ಸೂಚಿಸುವುದರಿಂದ 'ಗಡಿ ಹಿಡಿದ ಗುತ್ತಿನವ' ಎಂಬ ಹೆಸರು ಬಂದಿರಬೇಕೆಂದು ಇತಿಹಾಸತಜ್ಞರು ಅಭಿಪ್ರಾಯಪಡುತ್ತಾರೆ.

ಗ್ರಾಮದ ಮುಖ್ಯಸ್ಥನಾಗಿದ್ದ ಗ್ರಾಮಾಧಿಕಾರಿ ಅಧಿಕಾರ ಸ್ವೀಕರಿಸುವ ಸಂಧರ್ಭದಲ್ಲಿ ಗುತ್ತುಗಳಲ್ಲಿದ್ದಂತೆ ದೈವಗಳಿಗೆ ನೇಮ ಅಥವಾ ಉತ್ಸವ ಸಲ್ಲಿಸಿ ದೈವಗಳ ಅಣತಿಯಂತೆ ಅಧಿಕಾರ ಸೂಚಕವಾದ ಮುಂಗೈ ಸರಪಳಿ, ತೋಳ ಸರಿಗೆ, ಗಾಲವೊಂಟಿ, ಬಂಟ ಕತ್ತಿ ಮೊದಲಾದ ವಸ್ತುಗಳನ್ನು ಸ್ವೀಕರಿಸಬೇಕಾಗಿತ್ತು. ಈ ಸಂದರ್ಭದಲ್ಲಿ ನಾಲ್ಕು ಗುತ್ತುಗಳಿಗೆ ಮರ್ಯಾದೆಯನ್ನು ಸಲ್ಲಿಸಲಾಗುತ್ತಿತ್ತು.[139] ದೈವನೇಮದ ಸಂದರ್ಭಗಳಲ್ಲಿ ದೈವಕ್ಕೆ (ಗ್ರಾಮ) ಸಂಬಂಧಿಸಿದ ಪೂರ್ವಪರಂಪರೆಯ ಎಲ್ಲಾ ವಸ್ತುಗಳನ್ನು ದೈವದ ಪೀಠದಲ್ಲಿ (ಮುಂಡ್ಯ) ಇಡುವುದು ಸಂಪ್ರದಾಯವಾಗಿತ್ತು.[140]

ಗ್ರಾಮದ ನಿತ್ಯವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ಘಟಕಕ್ಕೆ ಅಜಲು ಎಂದು ಕರೆಯಲಾಗುತ್ತಿತ್ತು. ಅಥವಾ ಗ್ರಾಮಾಡಳಿತದ ಒಟ್ಟು ಘಟಕವನ್ನು ಅಜಲು ಎಂದು ಕರೆಯುತ್ತಿದ್ದರು.[141] ಅಜಲಿನಲ್ಲಿ ವ್ಯಾಪ್ತಿಯಲ್ಲಿ ಎಲ್ಲಾ ಸಮುದಾಯಗಳು ಸೇರುತ್ತಿದ್ದು ಅವುಗಳ ನಿಯಂತ್ರಣ ಗ್ರಾಮಾಡಳಿತದ್ದಾಗಿತ್ತು. ಗ್ರಾಮ ವ್ಯಾಪ್ತಿಯಲ್ಲಿ ಬರುವ ಗುತ್ತುಗಳು ಅಧಿಕಾರ ಕೇಂದ್ರಗಳಾಗಿದ್ದರೂ ಅವುಗಳು ಗ್ರಾಮಾಡಳಿತದ ಘಟಕಗಳಾಗಿದ್ದವು. ಅಜಲುಗಳ ಅಧಿಕಾರ ವಿನ್ಯಾಸಗಳಿಂದ ಗುತ್ತುಗಳು ಗುರಿಕಾರ್ಮೆ (ಯಜಮಾನಿಕೆ) ಯನ್ನು ಪಡೆದುಕೊಂಡಿದ್ದವು.[142] ಗ್ರಾಮಾಡಳಿತವು ಪತ್ತೇರಿಕೂಟದ ಮೂಲಕ ಆರಂಭಗೊಂಡು ವ್ಯವಸ್ಥಿತ ಸ್ಥಳೀಯ ಆಡಳಿತ ಘಟಕವಾಗಿ ರೂಪುಗೊಂಡಿತ್ತು.

## ಗ್ರಾಮ ಶಾಸನಸಭೆ ಮತ್ತು ಧಾರ್ಮಿಕತೆ

ಗ್ರಾಮಕ್ಕೆ ಸೇರಿದ್ದ ಅಧಿಕಾರವನ್ನು ಚಲಾಯಿಸುತ್ತಿದ್ದ ಸಭೆಗೆ ಪತ್ತೇರಿಕೂಟ ಅಥವಾ ಹತ್ತು ಜನರ ಕೂಟ ಎಂದು ಕರೆಯಲಾಗುತ್ತಿತ್ತು. ಈ ಕೂಟದಲ್ಲಿ ಗ್ರಾಮದ ಅಜಲಿನ ಅಧಿಕಾರ ಹೊಂದಿದ್ದ ಎಲ್ಲಾ ಜಾತೀಯ ಗುರಿಕಾರರಿಗೆ ಪ್ರಾತಿನಿಧಿತ್ವ ನೀಡಲಾಗುತ್ತಿತ್ತು. ಗ್ರಾಮಸಭೆ ಅಥವಾ ರಾಜಸಭೆಯೆಂದು[143] ಕರೆಯಲ್ಪಡುತ್ತಿದ್ದ ಈ ರಚನೆಗೆ ಸಂಬಂಧಿಸಿದಂತೆ ಪಾಡ್ದನಗಳಲ್ಲಿ ಸ್ಪಷ್ಟ ಉಲ್ಲೇಖಗಳಿವೆ. ಇದರ ಅಧಿಕಾರ ವ್ಯಾಪ್ತಿಯು ವಿಸ್ತೃತ ಸ್ವರೂಪವನ್ನು ಪಡೆದುಕೊಂಡಿದ್ದು ಗುತ್ತಿನ ಎಲ್ಲಾ ಚಟುವಟಿಕೆಗಳ ಮೇಲ್ವಿಚಾರಣೆ ಈ ಕೂಟಕ್ಕೆ ಸೇರಿತ್ತು. ಸಿರಿಯ ಪಟ್ಟಕ್ಕೆ ಸಂಬಂಧಿಸಿದಂತೆ ತೀರ್ಮಾನ ತೆಗೆದುಕೊಳ್ಳಲು ಈ ಕೂಟದ ಕಳ ಬಸರೂರಿನಲ್ಲಿ ಸಭೆ ಸೇರಿತ್ತೆಂಬುವುದು ಪಾಡ್ದನಗಳಲ್ಲಿ ಕಂಡು ಬರುತ್ತದೆ.ಅಂತೆಯೇ

ಬುದ್ಧಿವಂತಕೋಟಿ-ಚೆನ್ನಯ್ಯರಿಂದ ಹತನಾದಾಗ ಮತ್ತು ಪೆರಿಂಜ ಗುತ್ತಿನ ದೇವುಪೂಂಜನನ್ನು ಸೇನಾಧಿಪತಿಯನ್ನಾಗಿ ಆಯ್ಕೆ ಮಾಡುವ ಸಂದರ್ಭಗಳಲ್ಲಿ ಈ ಸಭೆ ಚರ್ಚಿಸಿದಬಗ್ಗೆಯೂ ಮಾಹಿತಿ ದೊರೆಯುತ್ತದೆ.[144]

ಅಜಲಿನ ಗುರಿಕಾರರಿಗೆ ತಮ್ಮ ಅಧಿಕಾರ ವ್ಯಾಪ್ತಿಯೊಳಗಿನ ಎಲ್ಲಾ ಸಮಸ್ಯೆಗಳನ್ನು ಪರಿಹರಿಸುವ ಸ್ಥಾನಮಾನ ನೀಡಲಾಗಿತ್ತು. ಕುಟುಂಬ ಕಲಹಗಳನ್ನು ತೀರ್ಮಾನಿಸಿ ಶಿಕ್ಷೆ ನೀಡುವ ಅಧಿಕಾರವೂ ಗ್ರಾಮ ಯಜಮಾನನಿಗೆ ಸೇರಿತ್ತು. ಗ್ರಾಮ ನಿಯಮಗಳನ್ನು ಮೀರುವಂತಿಲ್ಲವಾದ್ದರಿಂದ ಕೆಲವೊಂದು ಬಾರಿ ಕಠಿಣ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿತ್ತು. ಈ ತೀರ್ಮಾನಗಳಲ್ಲಿ ಜಾತಿ ಬಹಿಷ್ಕಾರದಂತಹ ಕಠಿಣ ಶಿಕ್ಷೆಗಳು ಸೇರಿದ್ದವು. ಅಳೂಪರ ಕಾಲದಲ್ಲಿ ಅಪರಾಧಿಗಳನ್ನು ಅವರವರ ಜಾತಿಯಿಂದ ಉಚ್ಚಾಟಿಸುವ ಅಥವಾ ಬಹಿಷ್ಕರಿಸುವ ಅಧಿಕಾರವನ್ನು ಪತ್ತೇರಿಕೂಟ ಚಲಾಯಿಸುತ್ತಿತ್ತು. ಗ್ರಾಮಸಭೆಯ ಈ ಅಧಿಕಾರದ ಬಗ್ಗೆ ಅಲೂಪರ ಕಾಲದ ಶಾಸನಗಳಲ್ಲಿ ಸ್ಪಷ್ಟ ಉಲ್ಲೇಖಗಳಿದ್ದು ದಂಡ ವಿಧಿಸಬೇಕಾಗಿ ಬರುವ ಸಂದರ್ಭಗಳನ್ನು ಹೆಸರಿಸಿವೆ.[145]

ಈ ಬಗೆಯಲ್ಲಿ ಅಪರಾಧಿಗಳಿಗೆ ಶಿಕ್ಷೆ ನೀಡುತ್ತಿದ್ದ ಗ್ರಾಮಸಭೆ ಅದಕ್ಕೆ ಪರಿಹಾರವನ್ನೂ ಸೂಚಿಸುತ್ತಿತ್ತು. ಒಕ್ಕಲ್ಮರಲ್ಲಿ ಜಾತಿ ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿಯು ನೇಗಿಲನ್ನು ಪೂಜಿಸುವ ಮೂಲಕ ಮತ್ತೆ ತನ್ನ ಜಾತಿಗೆ ಸೇರಿಸಲ್ಪಡುತ್ತಿದ್ದನು. ಇನ್ನು ಕೆಲವು ಸಂದರ್ಭಗಳಲ್ಲಿ ಪ್ರಮುಖ ಗುತ್ತು ಇಲ್ಲವೇ ಬೀಡುಗಳ ಸ್ವಾಮ್ಯಕ್ಕೆ ಸೇರಿದ ಬಾವಿಯ ನೀರು ಕುಡಿದರೆ ಜಾತಿ ಬಹಿಷ್ಕಾರವನ್ನು ತೆರವುಗೊಳಿಸಲಾಗುತ್ತಿತ್ತು. ಜಾತಿ ಬಹಿಷ್ಕಾರದಿಂದ ಮಹಿಳೆಯೂ ಹೊರತಾಗಿರಲಿಲ್ಲ.[146] ಆದರೆ ಸೀಮೆ ಅಥವಾ ಮಾಗಣೆಯ ವ್ಯಾಪ್ತಿಯೊಳಗೆ ಬರುವ ವಿಚಾರಗಳನ್ನು ಇದು ಮುಟ್ಟುತ್ತಿರಲಿಲ್ಲ. ಅದಾಗ್ಯೂ ಅಂತಹ ವಿಚಾರಗಳು ಯಾವ ವ್ಯಾಪ್ತಿಯಲ್ಲಿ ಬರುತ್ತವೆಯೆಂಬುವುದು ಈ ಕೂಟದಲ್ಲೇ ತೀರ್ಮಾನವಾಗುತ್ತಿತ್ತು. ನಿರ್ದಿಷ್ಟ ಗ್ರಾಮಸೇವೆ ಮಾಡಿದ ವ್ಯಕ್ತಿ ಅಥವಾ ಸಮುದಾಯಗಳಿಗೆ ಗ್ರಾಮಕ್ಕೆ ಸೇರಿದ ಭೂಮಿಯನ್ನು ಉಂಬಳಿಯಾಗಿ ನೀಡುವ ಪದ್ಧತಿಯು ಜಾರಿಯಲ್ಲಿತ್ತು. ಈ ರೀತಿಯಲ್ಲಿ ಭೂಮಿಯನ್ನು ಪಡೆದುಕೊಂಡವರಲ್ಲಿ ಬ್ರಾಹ್ಮಣರು, ಕೊರಗರು ಹಾಗೂ ಬಿಲ್ಲವರ ಸಂಖ್ಯೆ ಹೆಚ್ಚಾಗಿತ್ತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[147] ಅಂತೆಯೇ ಗ್ರಾಮಸಭೆ ಕೆಲವೊಂದು ಕಠಿಣ ನಿಯಮಗಳನ್ನು ರೂಪಿಸುತ್ತಿತ್ತು. ಉದಾಹರಣೆಗೆ ಕಣಂತೂರಿನ ಧರ್ಮ ಅರಸು ತೋಡಕುಕ್ಕಿನಾರ್ ದೈವಕ್ಕೆ ಸಂಬಂಧಿಸಿದ ಗ್ರಾಮದ ವ್ಯಾಪ್ತಿಗೆ ಒಳಪಟ್ಟವರು ಕೃಷಿ ಅಧಿಕಾರದ ಕಟ್ಟುಕಟ್ಟಳೆಯಂತೆ ತಪ್ಪದೇ ದೈವಕಾರ್ಯಗಳಲ್ಲಿ ಭಾಗವಹಿಸಬೇಕೆಂಬುವುದು.[148] ಯುದ್ಧ, ಧಾರ್ಮಿಕ ಚಟುವಟಿಕೆಗಳು ಹಾಗೂ ಸಾಮಾಜಿಕ ವಿಚಾರದ ಗಂಭೀರ ಸಂದರ್ಭಗಳಲ್ಲಿ ಅಜಲು ಮತ್ತು ಪತ್ತೇರಿಕೂಟ

ಒಟ್ಟಾಗಿ ತೀರ್ಮಾನ ತೆಗೆದುಕೊಂಡು ಆಡಳಿತ ನಡೆಸುತ್ತಿದ್ದವು. ಈ ಸಂದರ್ಭಗಳಲ್ಲಿ ಗುತ್ತುಗಳ ಅಭಿಪ್ರಾಯಗಳನ್ನು ಪರಿಗಣಿಸಲಾಗುತ್ತಿತ್ತು.

ಪತ್ತೇರಿಕೂಟದಲ್ಲಿ ಭಾಗಿಯಾಗುವ ಮನೆತನಗಳನ್ನು ಅಜಲಿನ ಮನೆತನಗಳೆಂದು ಕರೆಯಲಾಗುತ್ತಿತ್ತು. ಈ ಮನೆತನಗಳಲ್ಲಿ ಅಧಿಕಾರವು ಮಾತೃಪ್ರಧಾನ ಸ್ವರೂಪವನ್ನು ಪಡೆದುಕೊಂಡಿತ್ತು. ಪತ್ತೇರಿಕೂಟವು ಗ್ರಾಮದ ದೈವ-ದೇವಸ್ಥಾನಗಳ ಸರ್ವಕಾರ್ಯಗಳ ಜವಬ್ದಾರಿಯನ್ನು ನಿರ್ವಹಿಸುತ್ತಿತ್ತು. ಇದರ ಮಾರ್ಗದರ್ಶನದಲ್ಲೆ ಅಥವಾ ಮೇಲ್ವಿಚಾರಣೆಯಲ್ಲಿಯೇ ದೈವಿಕ ಕಾರ್ಯಗಳು ನಡೆಯುತ್ತಿದ್ದವು. ಉದಾಹರಣೆಗೆ ಪಲ್ಲಕ್ಕಿ ಹೊರುವ, ಬಸವನನ್ನು ನೋಡಿಕೊಳ್ಳುವ, ಬೆಲ್ಗೊಡೆ, ದೀವಟಿಗೆ ಹಿಡಿಯುವ, ಮೊಗ ಹೊರುವ, ಮಾರಿ ಓಡಿಸುವ, ದೋಲು ಬಡಿಯುವ, ಪತಾಕೆ ಏರಿಸುವ, ಸವಾರಿ ಬರುವ ಕಡೆ ದೀಪ ಬೆಳಗಿಸುವ, ಕೊಟ್ಟಾರ ಕಾಯುವ, ಅಂಗಳ ಕೆತ್ತುವ, ಕೊಡಿಮರ ಏರಿಸುವ, ಕೊಡಿಮರದ ಹಗ್ಗ ವ್ಯವಸ್ಥೆಗೊಳಿಸುವ, ದೀಪದ ಎಣ್ಣೆ ಒದಗಿಸುವ, ಅಕ್ಕಿ, ಎಳನೀರು, ಬೆಲ್ಲ ಮತ್ತು ಚರು ಬೇಯಿಸುವ ಮುಂತಾದ ಎಲ್ಲಾ ಕಾರ್ಯಗಳು ಈ ಕೂಟದಿಂದಲೇ ನಡೆಯಲ್ಪಡುತ್ತಿದ್ದವು. ಈ ಕಾರ್ಯಗಳು ಮಾತೃವಂಶೀಯ ನೆಲೆಯಲ್ಲಿ ಮಾಡಲ್ಪಡುತ್ತಿದ್ದವು.[149] ಗ್ರಾಮಗಳಲ್ಲಿ ನೀರಿನವ್ಯವಸ್ಥೆ, ನ್ಯಾಯತೀರ್ಮಾನಗಳು, ಗ್ರಾಮ ಅಥವಾ ರಾಜ್ಯದ ಮೇಲಿನ ಆಕ್ರಮಣಗಳು, ಜಾತಿ ಕಲಹಗಳು, ಆಡಳಿತ ವ್ಯವಸ್ಥೆಯ ಸಮರ್ಪಕ ನಿರ್ವಹಣೆ ಇತ್ಯಾದಿಗಳನ್ನು ಆಯಾಯ ಊರಿನ ಕಟ್ಟಳೆಗಳಿಗೆ ತಕ್ಕಂತೇ ಸಭೆ ಸೇರಿ ಚರ್ಚಿಸಿ ತೀರ್ಮಾನಿಸುವುದು ಸಹ ಗ್ರಾಮಸಭೆಯ ಜವಬ್ದಾರಿಯಾಗಿತ್ತು. ಗ್ರಾಮಗಳ ಕಟ್ಟಳೆಗಳು ಗ್ರಾಮದಿಂದ ಗ್ರಾಮಕ್ಕೆ ಭಿನ್ನವಾಗಿರುತ್ತಿತ್ತು. ಪತ್ತೇರಿ ಕೂಟದಲ್ಲಿ ತೀರ್ಮಾನವಾಗದ ವ್ಯಾಜ್ಯಗಳನ್ನು ಮಾಗಣೆ ಇಲ್ಲವೇ ಸೀಮೆಯ ಮುಖ್ಯಸ್ಥರು ತೀರ್ಮಾನಿಸುತ್ತಿದ್ದರು ಇಲ್ಲವೇ ಪರಿಹರಿಸುತ್ತಿದ್ದರು. ಈ ಕೂಟದಲ್ಲಿ ಗ್ರಾಮಗುತ್ತು ಹಾಗೂ ಒತ್ತುಗುತ್ತುಗಳ ಸಲಹೆಗಾರರಾಗಿ ಊರಿನ ಪುರೋಹಿತರಿರುತ್ತಿದ್ದು ಕೆಲವೊಂದು ಸಂದರ್ಭಗಳಲ್ಲಿ ಸೀಮೆಯ ಅರಸರೂ ಗ್ರಾಮಕೂಟಕ್ಕೆ ಬಾಧ್ಯಸ್ಥರಾಗುತಿದ್ದರು.[150] ಸಂಕೀರ್ಣ ವ್ಯಾಜ್ಯಗಳಲ್ಲಿ ನ್ಯಾಯತೀರ್ಮಾನವು ದೈವ ಸಾಕ್ಷಿಯಾಗಿ ಮಾಡಲ್ಪಡುತ್ತಿದ್ದು, ಜನರ ಧಾರ್ಮಿಕ ಭಾವನೆಗಳು ಆಡಳಿತಾತ್ಮಕ ವಿಷಯಗಳಿಗೆ ನೆರವಾಗುತ್ತಿದ್ದವು. ದೈವಗಳ ಪೀಠವಿರುವ ಚಾವಡಿಗಳಲ್ಲಿ ಪತ್ತೇರಿಕೂಟ ಸೇರುತ್ತಿದ್ದುದರಿಂದ ನ್ಯಾಯತೀರ್ಮಾನ ಅತ್ಯಂತ ಪರಿಣಾಮಕಾರಿಯಾಗಿರುತ್ತಿತ್ತು. ಕೆಳದಿ ಅರಸರ ಕಾಲದಲ್ಲಿ ಗ್ರಾಮಸಭೆಯ ಕರ್ತವ್ಯಗಳಲ್ಲಿ ನ್ಯಾಯತೀರ್ಮಾನ ಅತ್ಯಂತ ಪ್ರಮುಖವಾಗಿತ್ತಲ್ಲದೇ ಗ್ರಾಮಮುಖ್ಯಸ್ಥರು ನ್ಯಾಯತೀರ್ಮಾನದ ಅಂತಿಮ ವ್ಯಕ್ತಿಯಾಗಿದ್ದರು. ಹೆಚ್ಚಿನ ವ್ಯಾಜ್ಯಗಳು ಗ್ರಾಮಸಭೆಯಲ್ಲೇ ತೀರ್ಮಾನವಾದರೆ ಕೆಲವು ರಾಜ್ಯಸಭೆಯಲ್ಲಿ ತೀರ್ಮಾನವಾಗುತ್ತಿದ್ದವು. ಪ್ರತೀ ಗ್ರಾಮದಲ್ಲಿ ನ್ಯಾಯತೀರ್ಮಾನಕ್ಕಾಗಿ ನಾಲ್ಕು

ಗುತ್ತುಗಳ ಮುಖ್ಯಸ್ಥರ ಪೀಠ ರಚಿಸಲಾಗುತ್ತಿತ್ತು. ಗುತ್ತುಗಳ ಮೇಲ್‌ನ್ಯಾಯಾಲಯವಾಗಿ ಗ್ರಾಮ, ಗ್ರಾಮಕ್ಕಿಂತ ಮಾಗಣೆ, ಮಾಗಣೆಯ ಮೇಲ್‌ಸ್ತರದಲ್ಲಿ ಸೀಮೆ ಹೀಗೆ-ನ್ಯಾಯಾಂಗ ವ್ಯವಸ್ಥೆಯು ಶ್ರೇಣೀಕೃತ ರೂಪದಲ್ಲಿ ಕಾರ್ಯನಿರ್ವಹಿಸುತ್ತಿತ್ತು.[151]

ಅರಸು ಮನೆತನದವರೂ ಸಹ ತಾವು ವಾಸಿಸುವ ಪ್ರದೇಶದಲ್ಲಿರುವ ಗುತ್ತುಗಳ ನಿಯಮ-ನಿರ್ಣಯಗಳನ್ನು ಪಾಲಿಸಬೇಕಾಗಿತ್ತು. ಇದು ಅರಸನ ಪತ್ನಿ-ಮಕ್ಕಳಿಗೂ ಅನ್ವಯಿಸುತ್ತಿತ್ತು.[152] ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಪುರೋಹಿತರಿಗೆ ನಿರ್ದಿಷ್ಟ ಸ್ಥಾನಮಾನ ಹಾಗೂ ಗೌರವಾದರಗಳನ್ನು ನೀಡಲಾಗುತ್ತಿತ್ತು. ಗ್ರಾಮಗಳ ವಿಂಗಡನೆಯಿಂದ ಪುರೋಹಿತರ ಕಾರ್ಯವ್ಯಾಪ್ತಿ ನಿರ್ಧಾರವಾಗುತ್ತಿತ್ತು.[153] ಊರಿನ ಪೌರೋಹಿತ್ಯವೂ ನಿರ್ದಿಷ್ಟ ಬ್ರಾಹ್ಮಣ ಮನೆತನಕ್ಕೆ ಪೂರ್ವಕಟ್ಟಳೆಗೆ ಅನುಗುಣವಾಗಿ ಸೇರುತ್ತಿತ್ತು. ಈ ನಿಯಮದಲ್ಲಿ ಯಾವುದೇ ಬದಲಾವಣೆಗೆ ಅವಕಾಶವಿಲ್ಲದಿದ್ದು ಅಜಲಿನ ನಿಯಮದಂತೆ ಆ ಊರಿನ ಪಾಳೆಯಗಾರನಿಗೂ ಪರ್ಯಾಯ ಪುರೋಹಿತರನ್ನು ನೇಮಿಸಿಕೊಳ್ಳುವ ಸ್ವಾತಂತ್ರ್ಯವಿರಲಿಲ್ಲ. ಸೂತಕದ ಸಂದರ್ಭದಲ್ಲೂ ಪರ್ಯಾಯ ವ್ಯವಸ್ಥೆಯನ್ನು ಅಜಲಿನ ಪುರೋಹಿತರೇ ಮಾಡಬೇಕಾಗಿತ್ತು. ಆದರೆ ಬ್ರಾಹ್ಮಣರಿಗೆ ಅನಾನುಕೂಲವಾಗುವ ಸಂದರ್ಭಗಳಲ್ಲಿ ಅಜಲುಗಳನ್ನು ಅಥವಾ ಪೌರೋಹಿತ್ಯದ ವಾರಸುದಾರಿಕೆಯನ್ನು ಇನ್ನೊಬ್ಬರಿಗೆ ಹಸ್ತಾಂತರಿಸುವ ಅಥವಾ ತಾತ್ಕಾಲಿಕವಾಗಿ ಇನ್ನೊಂದು ಪೌರೋಹಿತ್ಯದ ಮನೆತನಗಳಿಗೆ ವರ್ಗಾಯಿಸುವ ಅವಕಾಶ ನೀಡಲಾಗಿತ್ತು. ಪೌರೋಹಿತ್ಯವನ್ನು ಮುಂದುವರೆಸುವ ಆಸಕ್ತಿಯಲ್ಲದ ಮನೆತನಗಳು ಹಿರಿಯರ ಮಾತನ್ನು ಗೌರವಿಸುವ ಉದ್ದೇಶದಿಂದ ಒಲ್ಲದ ಮನಸ್ಸಿನಿಂದಲೇ ಆ ಕಾರ್ಯವನ್ನು ಮಾಡುತ್ತಿದ್ದ ಅಥವಾ ಅಜಲುಗಳ ಅಧಿಕಾರವನ್ನು ದುರುಪಯೋಗಪಡಿಸಿಕೊಂಡ ಘಟನೆಗಳು ಇತಿಹಾಸದಲ್ಲಿ ಸಾಕಷ್ಟು ಕಾಣಸಿಗುತ್ತವೆ.[154]

ಗ್ರಾಮಾಡಳಿತದ ಮುಖ್ಯಸ್ಥ ದೈವದ ಪ್ರತಿನಿಧಿಯಾಗಿ ಕೆಲಸ ಮಾಡುತ್ತಿದ್ದು, ವ್ಯಾಜ್ಯಗಳಿಗೆ ಸಂಬಂಧಿಸಿದಂತೆ ಆತನ ತೀರ್ಮಾನವನ್ನು ದೈವದ ತೀರ್ಮಾನವೆಂದೇ ಬಿಂಬಿಸಲಾಗುತ್ತಿತ್ತು. ಇದಕ್ಕೆ ಪೂರಕವಾಗಿ ಪ್ರತೀ ದೇವಸ್ಥಾನ ಅಥವಾ ದೈವಸ್ಥಾನಗಳಲ್ಲಿ ದೇವರ ಪ್ರತೀಕವೆಂಬಂತೆ ಪ್ರಮಾಣದ ಕಲ್ಲುಗಳನ್ನು ಇಟ್ಟು ಇಲ್ಲವೇ ದೈವಸ್ಥಾನದ ಪ್ರಧಾನ ಬಾಗಿಲುಗಳ ಸನ್ನಿಧಿಯನ್ನು ಆರೋಪಿಯ ಅಪರಾಧೀ ಕೃತ್ಯವನ್ನು ಸಾಬೀತುಪಡಿಸಲು ಗ್ರಾಮ ಮುಖ್ಯಸ್ಥನ ಸಮ್ಮುಖದಲ್ಲಿ ಪ್ರಮಾಣ ಮಾಡಿಸುವ ಪದ್ಧತಿ ಜಾರಿಯಲ್ಲಿತ್ತು. ಗ್ರಾಮದಲ್ಲಿ ಸುಳ್ಳು ಹೇಳಿದರೆ ದೈವ ಶಿಕ್ಷೆ ನೀಡುತ್ತದೆಯೆಂಬ ನಂಬಿಕೆಯೂ ಜಾರಿಯಲ್ಲಿದ್ದುದರಿಂದ ನ್ಯಾಯತೀರ್ಮಾನ ಸಮಗ್ರವಾಗಿ ಮಾಡಲ್ಪಡುತ್ತಿತ್ತು. ಗ್ರಾಮಾಡಳಿತದ ವ್ಯಾಪ್ತಿಯಲ್ಲಿ ಬರುವ ದೈವಗಳ ಭಂಡಾರ ಗ್ರಾಮದ ಮುಖ್ಯಸ್ಥನ ಮನೆಯಿಂದ ಅಧಿಕಾರದ ಚಾವಡಿಗೆ ಅಥವಾ ಬಾಕಿಮಾರ್‌ಗೆ ಬಂದು ಕೋಲ

ಇಲ್ಲವೇ ನೇಮದ ಮೂಲಕ ಪರ್ವಗಳನ್ನು ನೀಡುವ ಕ್ರಮ ಜಾರಿಯಲ್ಲಿತ್ತು.ದೈವಗಳಲ್ಲಿ ರಾಜನ್‌ದೈವ ಪ್ರಧಾನವಾಗಿದ್ದು, ಕೆಳಶ್ರೇಣಿಯ ದೈವಗಳನ್ನು ನಿಯಂತ್ರಿಸುತ್ತದೆಯೆಂದು ನಂಬಲಾಗುತ್ತಿತ್ತು. ಈ ಸಂದರ್ಭಗಳಲ್ಲಿ ದೈವವೇ ವ್ಯಾಜ್ಯಗಳಿಗೆ ನೇರವಾಗಿ ತೀರ್ಮಾನ ಪ್ರಕಟಿಸಿ ಆ ತೀರ್ಮಾನವನ್ನು ತಿರಸ್ಕರಿಸುವವರಿಗೆ 'ನಿಟ್ಟು'ಎಂಬ ಶಿಕ್ಷೆಯನ್ನು ನೀಡುತ್ತಿತ್ತು.ಈ ಶಿಕ್ಷೆಯನ್ನು ಒಪ್ಪದೇ ಹೋದರೆ ಅಪರಾಧಿಗೆ ಸಾಮಾಜಿಕ ಬಹಿಷ್ಕಾರದಂತಹ ಕಠಿಣ ಶಿಕ್ಷೆಯನ್ನು ನೀಡಲಾಗುತ್ತಿತ್ತು.[155] ವಾರ್ಷಿಕ ನೇಮ, ಉತ್ಸವದ ಜೊತೆಗೆ ದೈವಗಳಿಗೆ ಇಲ್ಲವೇ ದೇವರುಗಳಿಗೆ ನಿತ್ಯ ಸೇವೆಯನ್ನು ಸಲ್ಲಿಸಲಾಗುತ್ತಿದ್ದು, ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಹೂ-ಪೂಜನ, ಹೂ-ಪನಿಯಾರ, ತಂಬಿಲ-ಕೋಲ ನೇಮ-ಆಯನ, ಬಂಡಿ, ಧರ್ಮನೇಮ-ಪೈಚಿಲ್‌ನೇಮ, ಬಲಿವಾಡುಸೇವೆ, ತ್ರಿಕಾಲಪೂಜೆ, ಸಂಕ್ರಾತಿಪರ್ವ, ರಂಗಪೂಜೆ ಮುಂತಾದವುಗಳು. ಅರಸು ಅಥವಾ ಪ್ರಧಾನ ದೈವಗಳ ಆಚರಣೆ ಹೆಚ್ಚಾಗಿ ಬಿಸುಹಬ್ಬದಂದು ಪ್ರಾರಂಭವಾಗುತ್ತಿತ್ತು.[156]ಅರಸು ದೈವಗಳು ಗ್ರಾಮಾಡಳಿತದ ಯಜಮಾನನನ್ನು ಏಕವಚನದಲ್ಲಿ ಸಂಬೋಧಿಸಿ ತಮ್ಮ ಅಧಿಕಾರ-ಶಕ್ತಿಯನ್ನು ಪ್ರದರ್ಶಿಸುತ್ತಿದ್ದವು. ಉದಾಹರಣೆಗೆ ಸಜಿಪದ ನಾಲ್‌ಕೈತಾಯ (ನಾಲ್ಕು ತೋಳುಗಳಿರುವ)ದೈವ. ಬಿಸು ಹಬ್ಬದಂದು ಗ್ರಾಮ ಪರಿಧಿಗೊಳಪಟ್ಟ ಎಲ್ಲಾ ಮನೆಗಳಿಂದ ಕಪ್ಪ (ತೆರಿಗೆ) ರೂಪದಲ್ಲಿ ವಸ್ತುಗಳನ್ನು ನೀಡುವ ಅಥವಾ ಸಂದಾಯ ಮಾಡುವ ಕ್ರಮ ಜಾರಿಯಲ್ಲಿತ್ತು. ಕಾವೇರಿ ಸಂಕ್ರಮಣದ ಮರುದಿನ ಸಿಂಗೋಡೆಯಂದು (ತುಳು ತಿಂಗಳ ಮೊದಲ ದಿನ)ಮುಂಜಾನೆ ಕೋಳಿ ಕೂಗುವ ಮುನ್ನ ಮೂಲದಾಳುಗಳು ಗ್ರಾಮದೊಡೆಯನ ಮನೆಯ ಮೊಗಸಾಲೆಗೆ ಅಥವಾ ಚಾವಡಿಗೆ ಎದುರಾಗಿ ಅಂಗಳದಲ್ಲಿ ಹೊಡೆಮಂಚವಿಟ್ಟು ಭತ್ತದ ಸೂಡಿಯನ್ನು ತೆಗೆದು ಬಡಿಯಬೇಕಾಗಿತ್ತು. ಪೊಲಿ ಕೂಗುವ ಕರೆಗೆ ಯಜಮಾನ ಎದ್ದು ಮೊದಲೇ ಕಟ್ಟಲಾಗಿರುವ ಅಕ್ಕಿಮುಡಿಗಳನ್ನು ಅಟ್ಟಕ್ಕೆ ಏರಿಸುತ್ತಿದ್ದನು. ಇಂತಹ ಸಂಪ್ರದಾಯಕ್ಕೆ ಉತ್ತಮ ಉದಾಹರಣೆ ಮಾಯಿ ತಿಂಗಳ ಹುಣ್ಣಿಮೆಯಂದು ತಲಪಾಡಿ ನೇಲ್ಯದಲ್ಲಿ ಮುಂಡಾಲರು ಪೊಲಿ ಕೂಗುವ ಸಂಪ್ರದಾಯ ಮತ್ತು ಕೃಷಿ ಉತ್ಪನ್ನಗಳನ್ನು ಊರಿನ ಮಾಡಕ್ಕೆ ಒಪ್ಪಿಸುವ ಪದ್ಧತಿ.[157] ಅರಸು ದೈವದ ನೆಲೆಯಿರುವಲ್ಲಿ ಕೊಡಿಮರ, ಧ್ವಜಕಟ್ಟೆ, ವಾಲಸರಿ ಗದ್ದೆ, ಜಳಕದ ಕೆರೆ, ಬಸವ, ಬಿರುದು-ಬಾವಲಿಗಳು, ಮೇಣೆ, ಸತ್ತಗೆ, ಪಂಚದೀವಟಿಗೆ, ಬಂಡಿ ಇತ್ಯಾದಿಗಳನ್ನು ಸ್ಥಾಪಿಸಲಾಗುತ್ತಿತ್ತು.

ಒಂದು ನಿರ್ದಿಷ್ಟ ಗ್ರಾಮವು ಪ್ರಾಕೃತಿಕ ಹಸುರು, ನೆಲ, ಭತ್ತದಗದ್ದೆ, ತಾಳೆಮರ ಹಸನುಗೊಂಡ ಭೂಮಿ ಮುಂತಾದವುಗಳನ್ನು ಒಳಗೊಂಡಿತ್ತು. ಇಂತಹ ನಿರ್ದಿಷ್ಟ ಮತ್ತು ಸಮೃದ್ಧ ಭೂಮಿಯ ಮುಖ್ಯಸ್ಥನಾಗಿ ಗ್ರಾಮಾಧಿಕಾರಿಯಿರುತ್ತಿದ್ದು, ಆ ಕ್ಷೇತ್ರದ ನಿಯಾಮಾವಳಿಗಳು ಆತನಿಂದಲೇ ರೂಪಿಸಲ್ಪಡುತ್ತಿದ್ದವು. ಆತನ ಸ್ಥಾನಮಾನ ಆತನ

ನಿಯಂತ್ರಣಕ್ಕೆ ಒಳಪಟ್ಟ ಜಮೀನುಗಳ ವೈಶಾಲ್ಯತೆಯ ಅಧಾರದ ಮೇಲೆ ತೀರ್ಮಾನವಾಗುತ್ತಿತ್ತು. ಏಕೆಂದರೆ ತುಳುನಾಡಿನಲ್ಲಿ ಚಿಕ್ಕ ಕ್ಷೇತ್ರದ ಒಡೆಯನು ನೈಜವಾಗಿ ಹೆಚ್ಚು ಸಾರ್ವಭೌಮನಂತೆ ಅಧಿಕಾರ ಚಲಾಯಿಸುತ್ತಿದ್ದನು. ಗ್ರಾಮಾಡಳಿತಕ್ಕೆ ಒಕ್ಕಲುಗಳು ಗೇಣಿಯ ಬದಲಿಗೆ ನಿಷ್ಠೆ, ಕಾಣಿಕೆಗಳನ್ನು ಸಲ್ಲಿಸುವ ಸಂಪ್ರದಾಯವಿದ್ದುದರಿಂದ ಅವಲಂಬಿತರಂತಿರದೇ ಆಶ್ರಿತರಂತಿದ್ದರು.[158]

ಗ್ರಾಮದ ದೈವಸ್ಥಾನಗಳಲ್ಲಿ ನಿಯಮ ಪ್ರಕಾರ ಸೇವೆ ಜರಗುವುದಕ್ಕೆ ನೇಮವೆಂದು ಹೆಸರಿಸಲಾಗಿದ್ದು, ಇದು ಆರಂಭವಾಗುವ ಮುಂಚೆ ಕೈಲು (ಬಾಳೆಗೊನೆ) ಅಥವಾ ಕೋಳಿಗೂಟ ಮೂಹೂರ್ತ ಮಾಡಿ ಊರು, ಪರವೂರಿಗೆ ಹೇಳಿಕೆ ಅಥವಾ ಆಹ್ವಾನಗಳನ್ನು ನೀಡಲಾಗುತ್ತಿತ್ತು. ನೇಮದ ಪ್ರಕ್ರಿಯೆಗಳು ಗ್ರಾಮಾಡಳಿತದ ಅಜಲಿಗನುಗುಣವಾಗಿ ನಡೆಯುತ್ತಿತ್ತು. ದೈವಕ್ಕೆ ನೇಮಕೊಡುವುದೆಂದರೆ ಊರಿನ ಆಯಕಟ್ಟಿನ ಸ್ಥಳಗಳಲ್ಲಿ ನಿಶ್ಚಿತ ದಿನದಂದು ಗ್ರಾಮಾಧಿಕಾರಿ ತನ್ನ ಅಧಿಕಾರವನ್ನು ಮತ್ತು ಅಧಿಕಾರದ ವ್ಯಾಪ್ತಿಯನ್ನು ಖಾತರಿಪಡಿಸುವುದು ಎಂದರ್ಥ. ಆ ಸಂದರ್ಭದಲ್ಲಿ ತನ್ನ ವ್ಯಾಪ್ತಿಯ ಪ್ರಜೆಗಳನ್ನು ಒಟ್ಟುಸೇರಿಸಿ, ತಾನು ಒಡ್ಡೋಲಗಕ್ಕೆ ಒಳಪಟ್ಟು, ಊರಿನ ಸುಖ-ದುಃಖಗಳನ್ನು ಪರಾಂಬರಿಸುವ ಪ್ರಕ್ರಿಯೆಯಾಗುತ್ತಿತ್ತು.[159] ಗ್ರಾಮಾಧಿಕಾರಿಯ ಸಾರ್ವಭೌಮತೆಯನ್ನು ಧಾರ್ಮಿಕ ನೆಲೆಯಲ್ಲಿ ಸಾಬೀತುಪಡಿಸುವ ಕಲ್ಪನೆಯನ್ನು ಧರ್ಮನೇಮದ ಮೂಲಕವಾಗಿ ಮಾಡಲಾಗುತ್ತಿತ್ತು. ಧರ್ಮನೇಮದ ಚಿಂತನೆಯು ಅಧಿಕಾರ ಪ್ರಾಪ್ತಿಯಾದ ತಕ್ಷಣ ಯಜಮಾನಿಕೆಯನ್ನು ತೋರ್ಪಡಿಸುವ ಧಾರ್ಮಿಕ ಹಾಗೂ ಸಾಂಸ್ಕೃತಿಕ ರಾಜಕಾರಣದಂತಿರುತ್ತಿತ್ತು. ಪಾರಿಭಾಷಿಕವಾಗಿ ಧರ್ಮನೇಮವನ್ನು 'ಅಣ್‌ಕೊರ್ಪುನಿ' ಅಥವಾ 'ಯಜಮಾನಿಕೆಯನ್ನು ವಹಿಸುವುದು' ಎಂದು ಕರೆಯುತ್ತಿದ್ದರು. ಧರ್ಮನೇಮ ನಿಜವಾಗಿ ಪುರುಷಪ್ರಧಾನತೆಯನ್ನು ಪ್ರಕಟಪಡಿಸುವ ಚಟುವಟಿಕೆಯಾಗಿದ್ದು, ಇದು ನಡೆಯುವ ಪ್ರಾದೇಶಿಕ ವ್ಯಾಪ್ತಿಯಲ್ಲಿ ಎಲ್ಲವನ್ನು ತನ್ನ ಕಕ್ಷೆಯೊಳಗೆ ಸೇರಿಸುವ ಉದ್ದೇಶವನ್ನು ಹೊಂದಿತ್ತು.[160] ಈ ಬಗೆಯ ಸಾಂಸ್ಕೃತಿಕ ಯಜಮಾನಿಕೆಯು ವೈದಿಕ ಯಜ್ಞಯಾಗಗಳಲ್ಲಿ ಕಂಡುಬರುತ್ತಿತ್ತು.

### ಕಂಬಳ ಮತ್ತು ಅಧಿಕಾರದ ಸಮೀಕರಣ

ಗ್ರಾಮಾಡಳಿತ ವ್ಯವಸ್ಥೆಯ ವ್ಯಾಪ್ತಿಯಲ್ಲಿ ಕಂಡು ಬರುತ್ತಿದ್ದ ಅತ್ಯಂತ ಪ್ರಮುಖವಾದ ಕ್ರೀಡೆಯೆಂದರೆ ಕಂಬಳ. ಇದು ಕೃಷಿ ಕೇಂದ್ರಿಕೃತವಾಗಿದ್ದು, ಗ್ರಾಮದ ಯಜಮಾನನ ಪ್ರತಿಷ್ಠೆಯನ್ನು ಬಿಂಬಿಸುವ ಕ್ರೀಡೆಯಾಗಿತ್ತು. ಕಂಬಳ ಕೇವಲ ಮನೋರಂಜನೆಯ ಉದ್ದೇಶವಾಗಿರದೇ ಗ್ರಾಮದ ಕೃಷಿ ನಂಬಿಕೆಗಳು, ವಾಡಿಕೆಗಳು, ಜನಪದ ನಂಬಿಕೆಗಳು, ಸಾಮಾಜಿಕ ಶ್ರೇಣಿಕೃತ ವ್ಯವಸ್ಥೆ ಮತ್ತು ರಾಜಕೀಯ ವ್ಯವಸ್ಥೆಗಳ ಸ್ವರೂಪವನ್ನು ಸಂಕೇತಿಸುವ ಕಲೆಯಾಗಿತ್ತು.[161] ಸಾಮಾನ್ಯಶಕೆ ಹದಿನೈದನೇ ಶತಮಾನಕ್ಕೆ ಸೇರಿದ ಶಾಸನಗಳಲ್ಲಿ

ಗ್ರಾಮಮಟ್ಟದಲ್ಲಿದ್ದ ಕಂಬಳದ ಗದ್ದೆಗಳಿಗೆ ಸಂಬಂಧಿಸಿದ ಉಲ್ಲೇಖ ದೊರಕುವುದರಿಂದ ಮಧ್ಯಯುಗದ ಕಾಲದಲ್ಲಿ ಈ ಕ್ರೀಡೆ ಕೃಷಿ ಅಧಿಕಾರ ವ್ಯವಸ್ಥೆಯಲ್ಲಿ ಜನಪ್ರಿಯವಾಗಿತ್ತೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. 1691 ಸೂರಾಲು ತಾಮ್ರಶಾಸನ ಕಂಬಳದ ಬಗ್ಗೆ ಸ್ಪಷ್ಟ ಉಲ್ಲೇಖವನ್ನು ನೀಡಿದೆ.[162] ಕಂಬಳವು ಗೌರವ, ಅಧಿಕಾರ ಹಾಗೂ ಸ್ಥಾನಮಾನಗಳ ಸಂಕೇತವಾಗಿದ್ದರಿಂದ ಅದರಲ್ಲಿ ಭಾಗವಹಿಸಲು ಸಿಗುವ ಆಮಂತ್ರಣ ಮನೆತನಗಳಿಗೆ ಪ್ರತಿಷ್ಠೆಯ ವಿಷಯವಾಗಿತ್ತು. ಅಂತೆಯೇ ಕಂಬಳ ರಾಜಕೀಯ ಮತ್ತು ಶ್ರೇಣಿಕೃತ ವ್ಯವಸ್ಥೆಯನ್ನು ಬಿಂಬಿಸುವ ಸಾಧನವಾಗಿದ್ದರಿಂದ ಅದಕ್ಕೆ ಸಂಬಂಧಿಸಿದ ಆಚರಣೆಗಳು ಸಾಮಾಜಿಕ ಅಂತಸ್ತು, ವೈಭವ, ರಾಜಕೀಯ ಸಾಮರ್ಥ್ಯ ಇತ್ಯಾದಿಗಳನ್ನು ಅನಾವರಣಗೊಳಿಸುತ್ತಿತ್ತು.[163] ಕೃಷಿ ಅಧಿಕಾರ ರಚನೆಯಲ್ಲಿ ಮೇಲಾಧಿಕಾರಿ-ಕೆಳಧಿಕಾರಿಗಳ ಸ್ಥಾನಮಾನವನ್ನು ಕಂಬಳ ಸೂಚಿಸುತ್ತಿದ್ದು ಅಧಿಕಾರದ ಅಭಿವ್ಯಕ್ತಿಯಾಗಿತ್ತು. ಉದಾಹರಣೆಗೆ ವಿಜಯನಗರ ಕಾಲದಲ್ಲಿ ನಡೆಯುತ್ತಿದ್ದ ಮಹಾನವಮಿ ಹಾಗೂ ಮೈಸೂರು ಅರಸರ ಕಾಲದಲ್ಲಿ ನಡೆಯುತ್ತಿದ್ದ ನವರಾತ್ರಿ ಉತ್ಸವಗಳಲ್ಲಿದ್ದಂತೆ ಕಂಬಳಗಳಲ್ಲಿ ಆಧೀನದವರು, ಮೇಲಿನವರಿಗೆ ತಾಂಬೂಲ ಗೌರವವನ್ನು ಸಲ್ಲಿಸಬೇಕಿತ್ತು. ಗ್ರಾಮದ ಪೂಕರೆಕಂಬ ನೆಡುವ ಆಚರಣೆಯಲ್ಲಿ ಕಂಬಳ ನಡೆಸುವ ವ್ಯಕ್ತಿಗೆ ಮನೆತನದ ಗೌರವವನ್ನು ನೀಡಲಾಗುತ್ತಿತ್ತು.[164] ಈ ಕಂಬವು ಗೌರವ ಮತ್ತು ಅಧಿಕಾರದ ಲಾಂಛನವಾಗಿದ್ದರಿಂದ ಒಂದುವೇಳೆ ಇದು ಕಳವಾದರೆ ಯಜಮಾನನ ಅಧಿಕಾರದ ಗೌರವಗಳಲ್ಲಿ ಚ್ಯುತಿಯಾಯಿತೆಂದು ತಿಳಿಯಲಾಗುತ್ತಿತ್ತು.[165]

ಸಾಮಾನ್ಯವಾಗಿ ಚಾವಡಿದೈವ, ನಾಗಬೆರ್ಮೆ ಹಾಗೂ ಮನೆದೈವಗಳ ಆರಾಧನೆಯೊಂದಿಗೆ ಕಂಬಳವು ಆರಂಭಗೊಳ್ಳುತ್ತಿತ್ತು. ದೈವಗಳ ಈ ಬಗೆಯ ಆರಾಧನಾ ಚಟುವಟಿಕೆಯಲ್ಲಿ ವಂಶಪಾರಂಪರ್ಯವಾಗಿ ದೈವಗಳ ಜವಾಬ್ದಾರಿ ಹೊತ್ತ ಮನೆತನದ ಎಲ್ಲಾ ಕರ್ಮಿಗಳು ಕಡ್ಡಾಯವಾಗಿ ಭಾಗವಹಿಸಬೇಕಾಗಿತ್ತು. ಇದು ಗ್ರಾಮಾಧಿಕಾರದ ದೃಢೀಕರಣ ಮಾತ್ರವಲ್ಲದೇ ವ್ಯಾಪ್ತಿಗೆ ಒಳಪಡುವ ಸಮುದಾಯಗಳ ವಿಧೇಯತೆಯನ್ನು ಪರೀಕ್ಷೆ ಮಾಡುವ ಸಂದರ್ಭವೂ ಆಗಿತ್ತು. ಇನ್ನೊಂದು ಅರ್ಥದಲ್ಲಿ ಇದು ಆಡಳಿತಾಧಿಕಾರವನ್ನು ಶಾಸನಬದ್ಧಗೊಳಿಸುವ ತಂತ್ರವೂ ಆಗಿತ್ತು.[166]

ಹೀಗೆ ಗ್ರಾಮಾಡಳಿತವು ಪತ್ತೇರಿ ಕೂಟದ ಮೂಲಕ ಸಂಪನ್ನಗೊಂಡು ಒಂದು ವ್ಯವಸ್ಥಿತ ಸ್ಥಳೀಯ ಆಡಳಿತ ಘಟಕವಾಗಿ ರೂಪುಗೊಂಡಿತ್ತು. ಇಲ್ಲಿನ ಆಡಳಿತವೂ ಸಂಪೂರ್ಣವಾಗಿ ಆರ್ಥಿಕತೆಯ ಮೂಲವಾದ ಭೂಮಿಯ ಉತ್ಪನ್ನದ (ಕೃಷಿ ಅಧಿಕಾರ) ಸುತ್ತ ಅವಲಂಬನೆಗೆ ಒಳಗಾಗಿತ್ತು. ಗ್ರಾಮಮಟ್ಟದ ಅಧಿಕಾರದಲ್ಲಿ ವಾರಸುದಾರಿಕೆಯ ಸ್ತರಗಳ ಈ ಪರಂಪರಾಗತ

ಆಡಳಿತ ವ್ಯವಸ್ಥೆಯನ್ನು ಕಾಯ್ದಿಡುವಲ್ಲಿ ಹಲವಾರು ಅಧಿಕಾರಿ ವರ್ಗಗಳು ಜವಬ್ದಾರಿ ಹೊಂದಿದ್ದವು.

**ವಾರಸುದಾರಿಕೆಯ ಇತರ ಸ್ತರಗಳು: ಊರು, ಮಾಗಣೆ, ಸೀಮೆ ಮತ್ತು ನಾಡು**

ತುಳುನಾಡಿಗೆ ಸಂಬಂಧಿಸಿದ ಇತಿಹಾಸದಲ್ಲಿ ಆಡಳಿತ ಘಟಕದ ಕೆಳಸ್ತರದ ರಚನೆಗಳ ಬಗ್ಗೆ ಸ್ಪಷ್ಟ ಚಿತ್ರಣ ಸಿಗುತ್ತವೆಯಾದರೂ ಗ್ರಾಮದ ಮೇಲ್‌ಹಂತದ ಆಡಳಿತ ಘಟಕಗಳಾದ ಊರು, ಮಾಗಣೆ, ಸೀಮೆ ಹಾಗೂ ನಾಡುಗಳಿಗೆ ಸಂಬಂಧಿಸಿದಂತೆ ಸ್ಪಷ್ಟ ದಾಖಲೆ ಸಿಗುವುದಿಲ್ಲ. ಅದಾಗ್ಯೂ ಈ ಘಟಕಗಳು ಏಣಿ-ಶ್ರೇಣಿ ಸ್ವರೂಪದಲ್ಲೇ ಅಥವಾ ಪಿರಮಿಡ್ಡಿನ ರೂಪದಲ್ಲಿಯೇ ಇದ್ದವು ಎಂಬುವುದು ಕೆಲವು ವಿದ್ವಾಂಸರ ಅಭಿಪ್ರಾಯ. ಅಳೂಪರ ಕಾಲದ ಶಾಸನಗಳು, ಸಾಮಾನ್ಯಶಕೆ ಏಳನೇ ಶತಮಾನದ ವಡ್ಡರ್ಸೆ ಮತ್ತು ಉದ್ಯಾವರ ಶಾಸನಗಳು ಈ ಆಡಳಿತ ಘಟಕಗಳ ಬಗ್ಗೆ ಸಾಂದರ್ಭಿಕ ಉಲ್ಲೇಖಗಳನ್ನು ನೀಡುತ್ತವೆ.[167] ಗ್ರಾಮಾಡಳಿತದ ಮೇಲ್‌ಸ್ತರವಾಗಿ ಊರು ಎಂಬ ಆಡಳಿತ ಘಟಕವಿದ್ದು ಅದರ ಆಡಳಿತದ ಅಧಿಕಾರಿಗಳನ್ನು ನಾಯ್ಗರೆಂದು ಕರೆಯಲಾಗಿತ್ತು.[168] ಪೆರ್ಗಡೆ ಊರಿನ ಇನ್ನೊರ್ವ ಆಡಳಿತಾಧಿಕಾರಿಯಾಗಿದ್ದು, ಆತನ ಸ್ಥಾನಮಾನಗಳ ಬಗ್ಗೆ ನಿಖರ ವಿವರಣೆಗಳು ಇತಿಹಾಸದಲ್ಲಿ ದಾಖಲಾಗಿಲ್ಲ. ಕೆ. ವಿ. ರಮೇಶ್ ಅವರು ಹೇಳುವಂತೆ ಪೆರ್ಗಡೆ ಊರಿನ ಆಡಳಿತದ ಮುಖ್ಯಸ್ಥನಾಗಿದ್ದನು.[169] ಅಳೂಪರ ಕಾಲದಲ್ಲಿ ಊರಿನ ಮುಖ್ಯಸ್ಥನಾಗಿದ್ದ ಪೆರ್ಗಡೆಯು ಎರಡು ಬಗೆಯ ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗಿತ್ತು. ಅವುಗಳೆಂದರೆ ಊರಿನ ದೇವಾಲಯಗಳ ಉಸ್ತುವಾರಿ ಹಾಗೂ ಗ್ರಾಮ ಮತ್ತು ಗುತ್ತುಗಳಿಂದ ತೆರಿಗೆಯನ್ನು ಸಂಗ್ರಹಿಸಿ ಮಾಗಣೆಗೆ ಕಂದಾಯ ರೂಪದಲ್ಲಿ ಸಲ್ಲಿಸುವುದು.[170] ಸಾಮಾನ್ಯಶಕೆ 1267ರ ಪುತ್ತಿಗೆ ಶಾಸನವು ಊರಿನ ಆಡಳಿತದ ಮುಖ್ಯಸ್ಥನ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡುತ್ತದೆ.[171] ಹೀಗೆ ಅಳೂಪರ ಆಡಳಿತ ಕಾಲದಲ್ಲಿ ಊರು ಹಾಗೂ ನಾಡಿನ ಆಡಳಿತಗಳ ಬಗ್ಗೆ ಉಲ್ಲೇಖವಿದ್ದು ಅದರ ಪ್ರಕಾರ ಹಲವು ಊರುಗಳ ಒಟ್ಟು ಆಡಳಿತದ ವ್ಯವಸ್ಥೆಯು ನಾಡಿನ ರೂಪದಲ್ಲಿ ಕೇಂದ್ರೀಕರಣಗೊಂಡಿತ್ತು.[172] ಅಂದರೆ ಹಲವು ಊರುಗಳ ಆಡಳಿತ ವ್ಯವಸ್ಥೆಗಳು ನಾಡಿನ ನಿಯಂತ್ರಣಕ್ಕೆ ಒಳಗಾಗಿದ್ದವು.

ವಿಜಯನಗರ ಆಡಳಿತದ ಕಾಲದಲ್ಲಿ ಆಡಳಿತ ವ್ಯವಸ್ಥಿತಗೊಂಡರೂ ತುಳುನಾಡಿನ ಕೆಳಹಂತದ ಆಡಳಿತದ ಘಟಕಗಳು ಹೆಚ್ಚು ಹಸ್ತಕ್ಷೇಪಕ್ಕೆ ಒಳಗಾಗಿಲ್ಲ. ಅಂದರೆ ಅವುಗಳು ಹೆಚ್ಚು ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿದ್ದವು. ಆದರೆ ಮೇಲ್‌ಹಂತದ ಆಡಳಿತ ಘಟಕಗಳು ಹೆಚ್ಚು ಕ್ರಮಬದ್ಧಗೊಂಡಿರಲಿಲ್ಲ. ರಾಜಕೀಯವಾಗಿ ಗುತ್ತು ಹಾಗೂ ಗ್ರಾಮಗಳು ತಮ್ಮ ಮೇಲ್‌ಹಂತದ ಆಡಳಿತದ ಘಟಕಗಳ ಜೊತೆ ಸಹಕಾರ ಮನೋಭಾವನೆಯನ್ನು ಹೊಂದಿದ್ದರಿಂದ ಅವರ ಉನ್ನತ ಅಧಿಕಾರವನ್ನು ಒಪ್ಪಿಕೊಂಡಿದ್ದರು. ಮೇಲ್‌ಹಂತದ

ಘಟಕಗಳಲ್ಲಿ ಸ್ಥಾಪಿಸಲ್ಪಟ್ಟಿದ್ದ ವ್ಯವಸ್ಥೆಗಳೆಂದರೆ ಮಾಗಣೆ, ಸೀಮೆ ಹಾಗೂ ನಾಡು. ಇವುಗಳ ಸ್ವರೂಪ, ರಚನಾಕ್ರಮ, ಅಧಿಕಾರ ವ್ಯಾಪ್ತಿ ಹಾಗೂ ಮುಖ್ಯಸ್ಥರುಗಳಿಗೆ ಸಂಬಂಧಿಸಿದಂತೆ ಅಸ್ಪಷ್ಟ ಮಾಹಿತಿ ಸಿಗುತ್ತವೆಯಾದರೂ ಅವುಗಳು ಯಾವ ಕಾಲದಲ್ಲಿ ಪ್ರಚಲಿತಕ್ಕೆ ಬಂದವೆಂಬುವುದು ಸ್ಪಷ್ಟವಾಗಿ ಇತಿಹಾಸದಲ್ಲಿ ದಾಖಲಾಗಿಲ್ಲ. ಅದಾಗ್ಯೂ ವಿಭಿನ್ನ ಕಾಲಘಟ್ಟಕ್ಕೆ ಸೇರಿದ ಶಾಸನಗಳು ಇವುಗಳ ಬಗ್ಗೆ ಕೆಲವು ಮಾಹಿತಿಗಳನ್ನು ನೀಡಿವೆ.[173]

ತುಳುನಾಡನ್ನು ತುಳುದೇಶ, ರಾಜ್ಯ, ಮಂಡಲ ಎಂದೂ ಕರೆಯಲಾಗುತ್ತಿದ್ದು, ಕೆಲವು ಸಂದರ್ಭಗಳಲ್ಲಿ ದೇಶವನ್ನು ಒಂದು ಊರಿಗೆ ಸಮಾನಾಗಿ ಸಂಭೋಧಿಸಿದ ಉದಾಹರಣೆಗಳೂ ಇವೆ.[174] ಆಡಳಿತದ ದೃಷ್ಟಿಯಿಂದ ತುಳುನಾಡನ್ನು ಎರಡು ಪ್ರಾಂತ್ಯಗಳನ್ನಾಗಿ ವಿಭಜಿಸಿ ಅವುಗಳನ್ನು ತುಳುರಾಜ್ಯಗಳೆಂದು ನಾಮಕರಣ ಮಾಡಲಾಗಿತ್ತು.[175] ಆದರೆ ಕೆಲವು ಶಾಸನಗಳು ತುಳುಪ್ರದೇಶವನ್ನು ಮಂಡಲ ಎಂಬುವುದಾಗಿ ಉಲ್ಲೇಖಿಸುತ್ತವೆ.[176] ಪ್ರಾಂತ್ಯವನ್ನು ಸ್ಥಳ ಎಂಬುವುದಾಗಿ ಕರೆದ ಉಲ್ಲೇಖಗಳಿದ್ದರೂ ಸ್ಥಳ ಪ್ರಾಂತ್ಯದ ವಿಭಾಗವೇ ಆಗಿತ್ತು.[177]

ರಾಜಕೀಯ ಮೇರೆಗಳನ್ನು ಗುರುತಿಸುವಾಗ ನಾಡು ಮತ್ತು ಸೀಮೆ ಸಾದೃಶ್ಯವಾದ ಒಂದೇ ಅರ್ಥವನ್ನು ಕೊಡುತ್ತವೆ. ಹಲವು ಗ್ರಾಮಗಳ ಕೂಡಿಕೆಯನ್ನು ಮಾಗಣೆ ಹಾಗೂ ಹಲವು ಮಾಗಣೆಗಳ ಒಟ್ಟುಸೇರುವಿಕೆಯನ್ನು ಸೀಮೆ ಎಂದು ಕರೆಯಲಾಗಿತ್ತು. ಅಂದರೆ ಗ್ರಾಮ ಮಾಗಣೆಯ ಒಂದು ಭಾಗವಾಗಿದ್ದರೆ, ಮಾಗಣೆ ಸೀಮೆಯ ಒಂದು ಭಾಗವಾಗಿತ್ತು.ಮಾಗಣೆಗಳ ಅಧಿಕಾರ-ಆಡಳಿತ ಜೈನ ಬಲ್ಲಾಳ ಅಥವಾ ಹೆಗ್ಗಡೆಗಳ ವ್ಯಾಪ್ತಿಗೆ ಒಳಪಟ್ಟಿದ್ದವು. ಗ್ರಾಮಮಟ್ಟದ ಅಧಿಕಾರದ ಮಾದರಿಯಲ್ಲಿಯೇ ಮಾಗಣೆ ಮತ್ತು ಸೀಮೆಗಳ ಅಧಿಕಾರದ ರೀತಿ-ರಿವಾಜುಗಳು ಮಾಡಲ್ಪಡುತ್ತಿದ್ದವು. ಸೀಮೆಯ ಅಧಿಕಾರವು ಸಹ ಮಾಗಣೆಯಂತೆ ಜೈನ ಬಲ್ಲಾಳರ ವ್ಯಾಪ್ತಿಗೆ ಒಳಪಟ್ಟಿತ್ತು. ಮಾಗಣೆಯ ಗುರಿಕಾರರನ್ನು ಅವರ ಸಾಮರ್ಥ್ಯ ಮತ್ತು ಸ್ವರೂಪಕ್ಕೆ ಅನುಗುಣವಾಗಿ ನಾಲ್ಕು ವಿಭಾಗ ಮಾಡಲಾಗಿತ್ತು. ಆಡಳಿತಾತ್ಮಕವಾಗಿ ಸಮರ್ಥರಾಗಿದ್ದ ಮೊದಲನೇ ಮತ್ತು ಎರಡನೇ ಗುರಿಕಾರರನ್ನು ಭಾವದವರು, ಮೂರನೇ ಗುರಿಕಾರನನ್ನು ಬಾಳಿಕೆಯುವ ಹಾಗೂ ನಾಲ್ಕನೇ ಗುರಿಕಾರನನ್ನು ಪರಾರಿಯವನು ಎಂಬುವುದಾಗಿ ಮಾನ್ಯ ಮಾಡಲಾಗುತ್ತಿತ್ತು. ಸೀಮೆಯ ಬಲ್ಲಾಳನಿಗೆ ಪಟ್ಟವಾಗುವ ಸಮಯದಲ್ಲಿ ಮೊದಲನೇ ಗುರಿಕಾರ ಬಲ್ಲಾಳರ ಕೈಹಿಡಿದು ಪಟ್ಟದ ಮಂಚದ ಮೇಲೆ ಕೂರಿಸುವ ಅಧಿಕಾರ, ಎರಡನೇ ಗುರಿಕಾರನಿಗೆ ಬಲ್ಲಾಳನ ಕೈಗೆ ಪಟ್ಟದುಂಗುರ ತೊಡಿಸುವ ಅಧಿಕಾರ, ಮೂರನೇ ಗುರಿಕಾರನಿಗೆ ಪಟ್ಟದ ಕತ್ತಿ ನೀಡುವ ಅಧಿಕಾರ, ನಾಲ್ಕನೇ ಗುರಿಕಾರನಿಗೆ ಪಟ್ಟದ ಹೆಸರನ್ನು ಕರೆಯುವ ಅಧಿಕಾರ-ಹೀಗೆ ಮಾಗಣೆ ಅಧಿಕಾರಗಳನ್ನು ಕಾರ್ಯಾತ್ಮಕವಾಗಿ ವಿಭಾಗ ಮಾಡಲಾಗಿತ್ತು. ಗುರಿಕಾರರ ಈ ಅಧಿಕಾರವು ಮುಂದೆ ವಂಶಪಾರಂಪರ್ಯದ ಹಕ್ಕಾಗಿ ಪರಿವರ್ತನೆಗೊಂಡಿತ್ತು. ಈ

ವ್ಯವಸ್ಥೆಯು ಮಾಗಣೆ ಹಾಗೂ ಸೀಮೆಗಳನ್ನು ಕ್ರಮಬದ್ಧಗೊಳಿಸಿ ಅಧಿಕಾರಯುತವನ್ನಾಗಿ ಮಾಡುವ ಉದ್ದೇಶವಿತ್ತಲ್ಲದೇ ಸ್ಥಳೀಯ ಆಡಳಿತ ವ್ಯವಸ್ಥೆಗಳನ್ನು ಶ್ರೇಣಿಕೃತಗೊಳಿಸುವ ಉದ್ದೇಶವನ್ನೂ ಹೊಂದಿತ್ತು. ಅಧಿಕಾರವನ್ನು ದೈವಿಕ ನೆಲೆಯಲ್ಲಿ ರಚಿಸುವ ಉದ್ದೇಶದಿಂದ ದೈವ-ದೇವಸ್ಥಾನಗಳನ್ನು ಆಡಳಿತದ ಅಂತಸ್ತುಗಳಿಗುಣವಾಗಿ ರೂಪಿಸಲಾಗಿದ್ದು, ಪ್ರತೀ ಗ್ರಾಮ, ಮಾಗಣೆ ಹಾಗೂ ಸೀಮೆ ಮಟ್ಟದಲ್ಲಿ ಇವುಗಳನ್ನು ಶ್ರೇಣಿಕೃತವಾಗಿ ವ್ಯವಸ್ಥೆಗೊಳಿಸಲಾಗಿತ್ತು. ಸೀಮೆಯ ದೇವರ ಉತ್ಕೃಷ್ಟತೆಯನ್ನು ಸಾರುವ ಉದ್ದೇಶದಿಂದ ದೇವರ ಹೆಸರನ್ನು ಪಟ್ಟದ ಉಂಗುರದ ಮೇಲೆ ಕೆತ್ತಿಸಲಾಗುತ್ತಿತ್ತು.ಮಾತ್ರವಲ್ಲ ಇದು ಸೀಮೆಯ ಅಧಿಕಾರ ದೈವಿಕ ನೆಲೆಗಳಲ್ಲಿ ಸಾಮೀಪ್ಯಗೊಂಡಿತ್ತಲ್ಲದೇ ಪ್ರಶ್ನಾತೀತ ಸ್ವರೂಪವನ್ನು ಪಡೆದುಕೊಂಡಿತು.

ಸೀಮೆ ದೇವಸ್ಥಾನಗಳ ವರ್ಷಾವಧಿ ಉತ್ಸವಗಳಿಗೆ ಸಂಬಂಧಿಸಿದಂತೆ ಕೆಲವೊಂದು ಅಲಿಖಿತ ಅಥವಾ ಮೌಖಿಕ ಸಂಪ್ರದಾಯಗಳನ್ನು ಹುಟ್ಟುಹಾಕಲಾಯಿತು. ಅದರಲ್ಲಿ ಮುಖ್ಯವಾದುದೆಂದರೆ ವರ್ಷಾವಧಿ ಆಚರಣೆಯನ್ನು ಬಲ್ಲಾಳ, ಭಾವ, ಬಾಳಿಕೆ, ಪರಾರಿ ಮತ್ತು ಮಾಗಣೆಯವರು ಒಟ್ಟುಸೇರಿ ನಿರ್ಧರಿಸಿ ಬಾಳೆಗೊನೆ ಕಡಿಯುವುದು ಅಂದರೆ ಉತ್ಸವದ ಆರಂಭದ ಘೋಷಣೆ; ದೈವಸ್ಥಾನದ ಉತ್ಸವವಾದರೆ ಕುಕ್ಕುಟ ಗೂಟ ಹೊಡೆಯುವುದು, ಉತ್ಸವದ ಆರಂಭ ಘೋಷಣೆಯಾದ ಮೇಲೆ ಆ ಸೀಮೆಯ ಪರಿಧಿಯೊಳಗೆ ದೇವರಕಾರ್ಯ ಬಿಟ್ಟು ಬೇರೆ ಯಾವುದೇ ಶುಭಾಶುಭ ಕೆಲಸಗಳನ್ನು ಮಾಡಕೂಡದೆಂಬ ಹಾಗೂ ಸೀಮೆ ಬಿಟ್ಟು ಯಾರೂ ಪರವೂರಿಗೆ ಹೋಗಿ ತಂಗಬಾರದೆಂಬ ಆಜ್ಞೆಗಳನ್ನು ಕಟ್ಟುಕಟ್ಟಳೆಗಳ ಹೆಸರಿನಲ್ಲಿ ವಿಧಿಸಲಾಯಿತು. ಉತ್ಸವಾದಿಗಳ ಸಮಯದಲ್ಲಿ ಮಾಗಣೆ ಗುರಿಕಾರರು ದೇವರ ಇಲ್ಲವೇ ದೈವದ ಭಂಡಾರ ಸಮೇತ ಉತ್ಸವದ ಕಳಕ್ಕೆ ಬಂದು ಉತ್ಸವದ ವ್ಯವಸ್ಥೆಯನ್ನು ಖಾತರಿಪಡಿಸಿಕೊಂಡ ನಂತರ ಅಧಿಕಾರ ಪಡೆದ ನಾಲ್ಕು ಮಾಗಣೆಯವರು ರಾಜವೈಭವದಿಂದ ಬಲ್ಲಾಳನನ್ನು ಬೀಡಿನಿಂದ ಕರೆದುಕೊಂಡು ಬರುತ್ತಿದ್ದರು.[178] ಈ ರೀತಿಯ ವಾಡಿಕೆಯನ್ನು ಉತ್ಸವ, ಕ್ರೀಡೆ, ಪಟ್ಟಾಧಾರಣೆ, ಅಂತೇಷ್ಠಿಯ ಸಂದರ್ಭಗಳಲ್ಲೂ ಅವುಗಳ ಪ್ರಾಮುಖ್ಯತೆಗೆ ಅನುಗುಣವಾಗಿ ಅನುಸರಿಸಲಾಗುತ್ತಿತ್ತು.[179]

ಹೀಗೆ ಗುತ್ತು, ಗ್ರಾಮ, ಊರು, ಮಾಗಣೆ, ಸೀಮೆ ಹಾಗೂ ನಾಡುಗಳನ್ನೊಳಗೊಂಡ ಆಡಳಿತ ಘಟಕಗಳು ತುಳುನಾಡಿನ ಪ್ರಬುದ್ಧ ಆಡಳಿತ ವೈಖರಿ, ಹಾಗೂ ಕೌಶಲ್ಯತೆಗೆ ಸಾಕ್ಷಿಯಾಗಿದ್ದವು. ಈ ಘಟಕಗಳು ಶ್ರೇಣಿಕೃತಗೊಂಡು ಅಧಿಕಾರ-ಆಡಳಿತದ ವ್ಯಾಪ್ತಿ ಸ್ಪಷ್ಟವಾಗಿ ನಿಗದಿಮಾಡಲಾಗಿದ್ದರಿಂದ ಯಾವುದೇ ಸಂದರ್ಭದಲ್ಲಿ ಸಂಘರ್ಷಗಳಿಗೆ ಅವಕಾಶವಿರಲಿಲ್ಲ. ಸಾಂದರ್ಭಿಕವಾಗಿ ಪ್ರಜಾಪ್ರಾತಿನಿಧಿಕ ಸ್ವರೂಪ ಪಡೆದುಕೊಳ್ಳುತ್ತಿದ್ದ ಈ ವ್ಯವಸ್ಥೆ ಕೆಲವು ಪರಿಸ್ಥಿತಿಯಲ್ಲಿ ಉನ್ನತ-ಅಧೀನ ಸಂಬಂಧವಾಗಿ ಮಾರ್ಪಾಡುಗೊಳಗಾಗುತ್ತಿತ್ತು. ಈ

ಕಾರಣದಿಂದ ವಸಾಹತಿನ ಹಲವಾರು ವಿದ್ವಾಂಸರು ಹಾಗೂ ವಸಾಹತುಶಾಹಿಯ ಪ್ರವರ್ತಕರು ತುಳುನಾಡಿನ ಆಡಳಿತ ವ್ಯವಸ್ಥೆ ದೇಶಕ್ಕೇ ಮಾದರಿಯಾಗಿತ್ತೆಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.[180] ಈ ಎಲ್ಲಾ ಹಂತಗಳ ಆಡಳಿತ ವ್ಯವಸ್ಥೆಗಳಲ್ಲಿ ವಾರಸುದಾರಿಕೆಯು ಕ್ರಮಬದ್ಧವಾಗಿ ಹಾಗೂ ಸ್ಪಷ್ಟವಾಗಿ ರೂಪಿಸಲ್ಪಟ್ಟಿತ್ತು. ಜೊತೆಗೆ ಭೂ, ರಾಜಕೀಯ ಅಧಿಕಾರ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ವಾರಸುದಾರಿಕೆಗಳು ಸಹ ಸ್ಪಷ್ಟರೂಪ ಪಡೆದುಕೊಂಡಿದ್ದವು.

**ತುಳುನಾಡಿನ ಸಾಂಸ್ಕೃತಿಕ-ಧಾರ್ಮಿಕ ಸ್ಥಿತಿಗತಿ**

ತುಳುನಾಡಿನಲ್ಲಿ ಪ್ರಾಚೀನ ಕಾಲದಿಂದಲೇ ಶ್ರೇಣಿಕೃತ ಆಡಳಿತ ಘಟಕಗಳು ಕಾರ್ಯನಿರ್ವಹಿಸುತ್ತಿದ್ದವು. ನಾಡು, ಸೀಮೆ, ಮಾಗಣೆ, ಗ್ರಾಮ, ಊರು, ಗುತ್ತು, ಕುಟುಂಬ ಮುಂತಾದವುಗಳು ಪ್ರಮುಖ ಆಡಳಿತ ಘಟಕಗಳಾಗಿ ಇದ್ದುಕೊಂಡು ಭೌಗೋಳಿಕವಾಗಿ ವಿಸ್ತಾರವಾದ ಪ್ರದೇಶದ ಆಡಳಿತ ನಡೆಸಲು ಈ ಘಟಕಗಳು ಅನಿವಾರ್ಯವಾಗಿದ್ದವು.[181] ವಿಜಯನಗರದ ಆಡಳಿತದ ಅವಧಿಯಲ್ಲಿ ದೈವಾರಾಧನೆಯಂತಹ ಚಟುವಟಿಕೆಗಳಿಗೆ ಅಡಿಪಾಯವಾಗಿದ್ದ ಈ ಘಟಕಗಳು ಆಡಳಿತ ಘಟಕಗಳಲ್ಲಿ ಮಿಳಿತಗೊಂಡು ಪ್ರಾಮುಖ್ಯತೆಯನ್ನು ಪಡೆದವು.[182] ದೈವದ ಪ್ರತಿನಿಧಿಗಳಾಗಿ ಹೆಚ್ಚಿನ ಸಂದರ್ಭಗಳಲ್ಲಿ ಗುರುತಿಸಲ್ಪಡುತ್ತಿದ್ದ ಈ ಘಟಕಗಳ ಮುಖ್ಯಸ್ಥರು ತಮ್ಮ ಸ್ಥಾನದ ಬಲದಿಂದ ರಾಜಕೀಯ ಕ್ಷೇತ್ರದಲ್ಲಿ ಕೈಯಾಡಿಸುವುದರ ಜೊತೆಗೆ ಆಡಳಿತ ಮತ್ತು ನ್ಯಾಯಾಂಗ ವ್ಯವಸ್ಥೆಗಳನ್ನು ಧಾರ್ಮಿಕ ನೆಲೆಯಲ್ಲಿಯೇ ಪುನರ್‌ರಚಿಸುವ ಕಾರ್ಯದಲ್ಲಿ ತೊಡಗಿದರು. ಭೂಮಿಯ ಒಡೆತನ ಮತ್ತು ವಾರಸುದಾರಿಕಾ ಅಧಿಕಾರವನ್ನು ತಮಗೆ ಅನುಕೂಲವಾಗುವಂತೆ ಯಥಾಸ್ಥಿತಿಯಲ್ಲಿ ಮುಂದುವರೆಸಿಕೊಂಡು ಬಂದ ಇವುಗಳು ಅಧಿಕಾರದ ಯಜಮಾನಿಕೆಯ ಮೂಲಕ ಜನರ ನಂಬಿಕೆಗಳನ್ನು ರೂಪಿಸುವ ಕ್ರಿಯೆಯಲ್ಲಿ ಮಹತ್ತರ ಪಾತ್ರವಹಿಸಿದವು.

ಸಾಮಾಜಿಕ ಆಡಳಿತ ವ್ಯವಸ್ಥೆಯಲ್ಲಿ ಸೀಮೆ, ಮಾಗಣೆ, ಗುತ್ತು ಮುಂತಾದವುಗಳು ಪ್ರಮುಖ ಕೇಂದ್ರಗಳಾಗಿದ್ದುಕೊಂಡು ಆಡಳಿತ ನಡೆಸುವ ಭೌಗೋಳಿಕ ವ್ಯಾಪ್ತಿಗೆ ಅನುಸಾರವಾಗಿ ಕುಟುಂಬದಿಂದ ಆರಂಭಗೊಂಡು ಸೀಮೆಯ ವರೆಗಿನ ಹಂತಗಳಲ್ಲಿ ಅಲೌಕಿಕ ಶಕ್ತಿಗಳ ಜೊತೆಗೆ ಗುರುತಿಸಿಕೊಂಡು ಆಡಳಿತಕ್ಕೆ ಹೊಸ ಭಾಷ್ಯವನ್ನು ಬರೆದವು.[183] ಈ ಬೆಳವಣಿಗೆಗಳ ಹಿಂದಿರುವ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದಾಗ ಗ್ರಾಮೀಣ ವ್ಯವಸ್ಥೆಯಲ್ಲಿ ಪ್ರಬಲ ವರ್ಗಗಳು ಭೂಮಿ ಒಡೆತನದಿಂದ ಅಧಿಕಾರಗಳನ್ನು ಪಡೆದು, ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಭಾವಿಗಳಾಗಿ, ಧಾರ್ಮಿಕ ಮತ್ತು ಸಾಂಸ್ಕೃತಿಕ ಅಧಿಕಾರದಲ್ಲಿ ನಿರಂತರತೆಯನ್ನು ಕಾಯ್ದುಕೊಳ್ಳುವಲ್ಲಿ ಯಶಸ್ಸನ್ನು ಪಡೆದಿದ್ದಾರೆ[184] ಮಾತ್ರವಲ್ಲ ಅಧಿಕಾರದಲ್ಲಿ ಬಲಪ್ರಯೋಗಗಳಿಗೆ ಅವಕಾಶ ನೀಡದೇ, ಸಾರ್ವಭೌಮತೆಯ ಸಮ್ಮತಿಯೊಂದಿಗೆ ತಮ್ಮ ವ್ಯಾಖ್ಯಾನದ ಕಲ್ಯಾಣರಾಜ್ಯ ಅಥವಾ

ಸತ್ಯ-ಧರ್ಮದ ನಾಡನ್ನು ಸ್ಥಾಪಿಸುವಲ್ಲಿ ಯಶಸ್ಸನ್ನು ಪಡೆದಿದ್ದಾರೆ.[185] ತುಳುನಾಡಿನ ಸಾಂಸ್ಕೃತಿಕ ಮೌಲ್ಯ ಮತ್ತು ಸಾಮಾಜಿಕ ರಚನೆಗಳಲ್ಲಿ ಈ ಬಗೆಯ ಅಧಿಕಾರ-ಅಂತಸ್ತು-ಸ್ಥಾನಮಾನಗಳು ಕೃಷಿ ಅಧಿಕಾರದ ರಚನೆಯ ವ್ಯಾಖ್ಯಾನವಾಗಿರುವುದು ಕಾಣಬಹುದು.[186] ಸಂಕ್ಷಿಪ್ತವಾಗಿ ಹೇಳುವುದಾದರೆ ತುಳುನಾಡಿನ ಭೂಮಿಯ ಮೇಲಿನ ಒಡೆತನದ ಪರಿಕಲ್ಪನೆ ಅಲೌಕಿಕ ಶಕ್ತಿ, ದೈವಾರಾಧನೆ, ಜನರ ನಂಬಿಕೆ ಮತ್ತು ಲೌಕಿಕ ಶಕ್ತಿಯ ಅಧಿಕಾರದ ಕಲ್ಪನೆ ವಸಾಹತುಪೂರ್ವ ವಾರಸುದಾರಿಕಾ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳುವಲ್ಲಿ ಅಡಿಪಾಯಗಳಾಗಿವೆ.[187]

## ---ಕೊನೆಟಿಪ್ಪಣಿ---

[1] ಸೌ.ಇ.ಇ ಸಂ. 7 ನಂ. 177, 185.

[2] ಸೌ.ಇ.ಇ ಸಂ. 9 ಭಾಗ 1 ನಂ. 395.

[3] ಸೌ.ಇ.ಇ ಸಂ. 7 ನಂ. 362.

[4] ಸೌ.ಇ.ಇ ಸಂ. 7 ನಂ. 330.

[5] ಸೌ.ಇ.ಇ. ಸಂ. 9 ಭಾಗ 2 ನಂ 578, ಎ.ಆರ್.ಎಸ.ಐ,ಇ 1970 ನಂ. 224, 1961–62 ನಂ 623.

[6] ಎಸ್.ಡಿ ಶೆಟ್ಟಿ ಉಜಿರೆ, ತುಳುನಾಡಿನ ಜೈನಧರ್ಮ, 2002 ಪುಟಗಳು 189–192.

[7] ತುಳುನಾಡಿನಲ್ಲಿ ಧನಿ–ಒಕ್ಕಲು ಮಕ್ಕಳ ಸಂಬಂಧ, ಜೈನ–ಒಕ್ಕಲ್ಮರ ಸಂಬಂಧ ಇವೇ ಮೊದಲಾದವುಗಳು.

[8] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801–1970, ಪುಟ 12–13.

[9] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801–1970, ಪುಟ 14.

[10] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801–1970, ಪುಟ 13.

[11] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್ 1801–1970, ಪುಟ 15.

[12] ಶಿವರಾಮ ಕಾರಂತರ ಛೋಮನ ದುಡಿ ವಿಸ್ತೃತ ಮಾಹಿತಿಯನ್ನು ಕೊಡುತ್ತದೆ. ಗುತ್ತು ಕೇಂದ್ರಿತ ವ್ಯವಸ್ಥೆಯಲ್ಲಿ ಗೇಣಿದಾರರು, ಮೂಲದ ಮಾನಿಯೆರ್, ಭೂರಹಿತ ಶ್ರಮಿಕವರ್ಗ ಪಡುವ ಕಷ್ಟ ಕಾರ್ಪಣ್ಯಗಳು ಹಲವಾರು ತುಳು ಕಾದಂಬರಿಗಳಲ್ಲಿ ಬಿಂಬಿತಗೊಂಡಿದೆ.

[13] ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ್ ಟ್ರಾನ್ಸಿಷನ್, 1801–1970, ಪುಟ 22.

[14] ಜಗದೀಶ ಶೆಟ್ಟಿ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂ.ವಿ.ವಿ, ಪುಟಗಳು 60–61.

[15] ತುಳುನಾಡಿನ ಸಂದರ್ಭದಲ್ಲಿ ಹೆಚ್ಚು ಚೆನ್ನಾಗಿ ತೋರುವ ಆಡಿಪಾಯದ ಆಡಳಿತ ವ್ಯವಸ್ಥೆಯೆಂದರೆ ಅದರ ಪ್ರೇರಕ ಶಕ್ತಿಯನ್ನು ಕೆಳಗಿನಿಂದ ನೋಡುವುದು. ಗ್ರಾಮದ ಮುಖ್ಯ ಮನೆತನಗಳನ್ನು ಆಥಾವ ಗುತ್ತುಗಳನ್ನು ಅಧಿಕಾರದ ಸಕ್ರಿಯ ಕೇಂದ್ರಗಳಾಗಿ ಗುರುತಿಸುವುದು. ಈ ಗುರುತಿಸುವಿಕೆ ಭೂನಿಯಂತ್ರಣ, ಸಂಪತ್ತು ಮತ್ತು ಪ್ರಭಾವಗಳ ಬಲದಿಂದ ಅವರು ಗಳಿಸಿದ ಹಿರಿಮೆಗೆ ಸಂದ ಮನ್ನಣೆ. ಕಂದಾಯದ ಅಧಿಕಾರಿಗಳಾಗಿ ಮಾಡಿದ ನೇಮಕ ಅವರಿಗೊಂದು ಹೊಣೆಯನ್ನು ಮಾತ್ರವಲ್ಲ ರಾಜಕೀಯ ರಚನೆಯ ಪಾಲುದಾರರನ್ನಾಗಿ ಮಾಡುವುದರ ಮೂಲಕ ಅಧಿಕಾರ ಮತ್ತು ಗೌರವವನ್ನು ಪಡೆಯಲು ಸಹಾಯಕವಾಯಿತ್ತಲ್ಲದೇ ಕೃಷಿ ಭೂಮಿಯ ಮೇಲೆ ಹತೋಟಿಯನ್ನು ಸಾಧಿಸುವಂತಾಯಿತು.

[16] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ.

[17] ಶೈಲಾ ಟಿ.ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟಗಳು 145–148, 224–238, 267. ವಹಾಭ್ ದೊಡ್ಡಮನೆ, ತುಳುನಾಡಿನ ಮುಸ್ಲಿಮರು, ಮಂಗಳೂರು, 2008 ಪುಟಗಳು 197–199.

[18] ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಕರ್ನಾಟಕದಲ್ಲಿ ಕೃಷಿ ವ್ಯವಸ್ಥೆ 8ನೇ ಶತಮಾನದಲ್ಲಿ ರೂಪುಗೊಂಡಿದೆ ಎಂಬ ಉಲ್ಲೇಖ ಶಾಸನಗಳಲ್ಲಿವೆ ಎಂದು ಸಮರ್ಥಿಸಿಕೊಂಡಿದ್ದಾರೆ.

[19] ವಿವೇಕ ರೈಯವರು ದೈವ ಪ್ರಸರಣಕ್ಕೆ ಸಂಬಂಧಿಸಿದಂತೆ ವಿಜಯನಗರದ ಕಾಲವನ್ನು ಪ್ರಶಸ್ತ ಕಾಲವೆಂದು ಚರ್ಚಿಸಿದ್ದಾರೆ, ಮಾತ್ರವಲ್ಲ ದೈವ ಪ್ರಸರಣಕ್ಕೆ ಸಂಬಂಧಿಸಿದಂತೆ ಶಾಸನಗಳ ಲಭ್ಯತೆಯನ್ನು ಮುಂದಿಟ್ಟು ಸಮರ್ಥಿಸಿದ್ದಾರೆ.

[20] ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪುಟ 19. ಮೋಹನಕೃಷ್ಣ ರೈ, ತುಳುಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟಗಳು 36–37.

[21] ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ, ಪುಟಗಳು 47–48.

[22] ನಾಗೇಂದ್ರ ರಾವ್ ಬ್ರಾಹ್ಮಣಾಸ್ ಆಫ್ ಸೌತ್ ಇಂಡಿಯಾ, 2005. ಪುಟಗಳು 43–44.

[23] ಶೆಟ್ಟಿ. ಎಸ್. ಡಿ., ಜೈನಧರ್ಮ, ಒಂದು ಸಾಂಸ್ಕೃತಿಕ ಅಧ್ಯಯನ, ರಾ.ಕ.ಗೋ.ಪೈ ಸಂಶೋಧನ ಕೇಂದ್ರ ಉಡುಪಿ; 2002.

[24] ಸುಬ್ಬಣ ರೈ ಎ., ದಕ್ಷಿಣಕನ್ನಡ ಜಿಲ್ಲೆಯ ಐತಿಹ್ಯಗಳು, ಮಾಣಿ ಜೂನಿಯರ್ ಛೇಂಬರ್ ಮಾಣಿ, 1994 ಪುಟ 10.

[24] ರಾಜನ್ ಗುರುಕ್ಕಳ್, ಟ್ರೈಬ್ಸ್, ಫಾರೆಸ್ಟ್ ಎಂಡ್ ಸೋಷಲ್ ಫಾರ್ಮೇಶನ್ ಇನ್ ಅರ್ಲಿ ಸೌತ್ ಇಂಡಿಯಾ, ಸಂಪಾದನೆ, ಬಿ. ಬಿ ಚೌಧರಿ, ಅರುಣ್ ಬಂಡೋಪಾಧ್ಯಾಯ, ಐ.ಎಚ್. ಸಿ 2004, ಪುಟ 65.

[25] ವಾಮನ ನಂದಾವರ, ಕೋಟಿ-ಚೆನ್ನಯ್ಯ ಜಾನಪದೀಯ ಅಧ್ಯಯನ, ಹೇಮಾಂಶು ಪ್ರಕಾಶನ ಮಂಗಳೂರು, 2001.

[26] ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ ಪುಟಗಳು 45-47.

[27] ಕೆ.ಚಿನ್ನಪ್ಪ ಗೌಡ, ಭೂತಾರಾಧನೆ ಜಾನಪದೀಯ ಅಧ್ಯಯನ, ಮದಿಪು ಪ್ರಕಾಶನ ಮಂಗಳಗಂಗೋತ್ರಿ, 1990 ಪುಟಗಳು 194-195.

[28] ಕೆ.ಚಿನ್ನಪ್ಪ ಗೌಡ, ಭೂತಾರಾಧನೆ ಜಾನಪದೀಯ ಅಧ್ಯಯನ, ಮದಿಪು ಪ್ರಕಾಶನ ಮಂಗಳಗಂಗೋತ್ರಿ, 1990 ಪುಟಗಳು 193-194.

[29] ಪುರುಷೋತ್ತಮ ಬಿಳಿಮಲೆ, ಕರಾವಳಿ ಜಾನಪದ, ಶಾರದ ಪ್ರೆಸ್ ಮಂಗಳೂರು.1990 ಪುಟಗಳು 1-2.

[30] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, 2005 ಅಂಕಿತ ಪ್ರಕಾಶನ ಬೆಂಗಳೂರು.4 ಪುಟಗಳು 118-119.

[31] ಆಶಾಲತಾ ಸಿ.ಕೆ, ತುಳುವರ ಬಳಿ ಪದ್ಧತಿ-ಸ್ವರೂಪ ಮತ್ತು ಅನ್ವಯಿಕತೆ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂ.ವಿ. ವಿ, ಮಂಗಳಗಂಗೋತ್ರಿ; 2010.

[32] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟ 24.

[33] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟ 18.

[34] ಆಶಾಲತಾ ಸಿ.ಕೆ, ತುಳುವರ ಬಳಿ ಪದ್ಧತಿ-ಸ್ವರೂಪ ಮತ್ತು ಅನ್ವಯಿಕತೆ ಅಪ್ರಕಟಿತ ಸಂಶೋಧನ ಪ್ರಬಂಧ, ಮಂ. ವಿ. ವಿ ಮಂಗಳಗಂಗೋತ್ರಿ; 2010.

[35] ಇಂದಿರಾ ಹೆಗ್ಡೆ. ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಪುಟ-206.

[36] ಕೆ.ವಿ ರಮೇಶ, ಎಂ.ಜೆ ಶರ್ಮಾ, ತುಳುನಾಡಿನ ಶಾಸನಗಳು; ನಂ 10-1978, 15, 16, 33-2742, 43-1978, 45-1204, 36-1978. ಸೌ.ಇ.ಇ ಸಂ.7, ನಂ 373, ಸೌ.ಇ.ಇ ಸಂ.9, ಭಾಗ 2 ನಂ 448, 460, 473.

[37] ದೇವಿಪ್ರಸಾದ ಚಟ್ಟೋಪಾದ್ಯಾಯ, ಲೋಕಾಯತ, ಸಂಗ್ರಹಾನುವಾದ ಜಿ ರಾಮಕೃಷ್ಣ, ಬೆಂಗಳೂರು 2011, ಪುಟ 170.

[38] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟ 117.

[39] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟ 17.

[40] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟಗಳು 17-35.

[41] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟ 17-19

[42] ದೇವಿಪ್ರಸಾದ ಚಟ್ಟೋಪಾದ್ಯಾಯ, ಲೋಕಾಯತ, ಸಂಗ್ರಹಾನುವಾದ ಜಿ ರಾಮಕೃಷ್ಣ, ಬೆಂಗಳೂರು 2011, ಪುಟ 168.

[43] ಮೋಹನಕೃಷ್ಣ ರೈ ತುಳುನಾಡ ಸಿರಿ; ಬದುಕು ಹೋರಾಟದ-ಕಥನ ಪ್ರಸರಾಂಗ, ಕ.ವಿ.ವಿ ಹಂಪಿ; 2010 ಪುಟಗಳು 29-31. ಜಿ.ಆರ್ ಗ್ಲೆಗ್, ಲೈಫ್ ಅಫ್ ಥಾಮಸ್ ಮುನ್ರೋ, ಲಂಡನ್; 1861

[44] ಕಾಂಚ ಈಳಯ್ಯ, ಪೋಸ್ಟ್ ಹಿಂದು ಇಂಡಿಯಾ, ಪ್ರೊಡಕ್ಟಿವ್ ಸೋಲ್ಜರ್ಸ್, ಸಬಾಲ್ಟರ್ನ್ ಫೆಮಿನಿಸ್ಟ್ ಪುಟಗಳು 49-85.

[45] ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಜಾನಪದೀಯ ಅಧ್ಯಯನ, ಅಂಕಿತ ಪ್ರಕಾಶನ ಬೆಂಗಳೂರು 4, 2005 ಪುಟ 16. ಮೇಲುಕೋಟೆಯ ಜನಿವಾರ ಧಾರಣೆ: ರಾಮಾನುಜಾರ್ಯರ ಪ್ರಭಾವದಿಂದ ಮೇಲುಕೋಟೆಯ ಮೂಲನಿವಾಸಿಗಳು ತಮ್ಮ ಅಧಿಕಾರವನ್ನು ಕಳೆದುಕೊಂಡ ಸಂದರ್ಭದಲ್ಲಿ ಸಾಂಸ್ಕೃತಿಕವಾಗಿ ಜಾತ್ರೆಯ ಸಮಯದಲ್ಲಿ ಧಾರ್ಮಿಕ ರೀತಿ ರಿವಾಜುಗಳಿಗೆ ಅನುಗುಣವಾಗಿ ಒಂದು ದಿವಸದ ಮಟ್ಟಿಗೆ ಬ್ರಾಹ್ಮಣರಂತೆ ಜನಿವಾರ ಧಾರಣೆ ಮಾಡುವ ಸಂಪ್ರದಾಯವನ್ನು ಇಂದಿಗೂ ನಡೆಸಿಕೊಂಡು ಬಂದಿದ್ದಾರೆ. ಹಿ.ಚಿ ಬೋರಲಿಂಗಯ್ಯರ ತುಮಕೂರು ಕುಣಿಗಲ್ ಉಜ್ಜನಿ ಚೌಡಮ್ಮ ದೇವಸ್ಥಾನದ ಆಚರಣೆಗಳಲ್ಲಿ ಒಂದು ತಿಂಗಳ ಅವಧಿಗೆ ಹೊಲೆಯರಿಗೆ ಜನಿವಾರ ತೊಡಿಸುವ ಅಚರಣೆಯ ಬಗ್ಗೆ ಉಲ್ಲೇಖ ಸಿಗುತ್ತದೆ. ಆಹಾರದ ಕಾರಣದಿಂದ ಜಾತಿ ಗೊತ್ತಾಗಿ ಬ್ರಾಹ್ಮಣ ಕನ್ಯೆಯ ಶಾಪ. ವರ್ಷಕ್ಕೊಂದು ಸಲ ಬರುವ ಹಬ್ಬದಲ್ಲಿ ಗಂಡುಮಕ್ಕಳು ಒಂದು ತಿಂಗಳು ಜನಿವಾರ ಧರಿಸಿ ಬ್ರಾಹ್ಮಣರಂತೆ ಇರಬೇಕು.

[46] ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು ಕ.ಸಾ.ಪ ಬೆಂಗಳೂರು 2004. ಪುಟಗಳು 12,13, 38–55.

[47] ಕಾರ್ಯಕ್ಷೇತ್ರದ ಮಾಹಿತಿ: 30 ವರ್ಷಗಳ ಹಿಂದೆ ಊರಿನಲ್ಲಿ ಕೋಣ ಸತ್ತರೆ ಕೊಪ್ಪ (ಕೊರಗರ ವಾಸ್ತವ್ಯದ ನೆಲೆ) ದಲ್ಲಿರುವ ಕೊರಗರಿಗೆ ಕರೆಹೋದ ತಕ್ಷಣ ಕುಟುಂಬ ಸಮೇತರಾಗಿ ಬಹಳಷ್ಟು ಖುಷಿಯಿಂದ ವಿಲೇವಾರಿ ಮಾಡುತ್ತಿದ್ದ ಪ್ರಸಂಗಗಳಿತ್ತು. ಹೀಗೆ ಕೊರಗರು ಸತ್ತ ಪ್ರಾಣಿಗಳನ್ನು ವಿಲೇವಾರಿ ಮಾಡುವುದರೊಂದಿಗೆ ಗ್ರಾಮದ ನೈರ್ಮಲ್ಯ, ಗ್ರಾಮ ಆರೋಗ್ಯದ ಕಾಳಜಿಯಿತ್ತು. ಅಧುನಿಕತೆಯ ಕಾಲದಲ್ಲೂ ಪಟ್ಟಣಗಳಲ್ಲಿ ಕೆಳವರ್ಗದ ಜನ ಹಮಾಲಿಗಳಾಗಿ ಇಲ್ಲವೇ ಪೌರಕಾರ್ಮಿಕರಾಗಿ ದುಡಿಯುತ್ತಿರುವುದು ಸಮರ್ಥನೆಗೊಳಪಡುವ ವಿಚಾರವಾಗಿದೆ.

[48] ಶೈಲಾ. ಟಿ. ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟಗಳು 15–44.

[49] ಚರಿತ್ರೆಯಲ್ಲಿ ಶಿಷ್ಟ ಸಂಸ್ಕೃತಿಯನ್ನು ಪರಿಶಿಷ್ಟಗಳು ಅವಲಂಬಿಸಬೇಕಿತ್ತೇ ವಿನಹ ಪರಿಶಿಷ್ಟವನ್ನು ಯಾವತ್ತೂ ಶಿಷ್ಟ ಒಪ್ಪಿಕೊಂಡಿಲ್ಲ.

[50] ಸೈಯ್ಯದ್ ಅಬ್ದುಲ್ ಬಾರಿ, ನಾನ್ ಅಗ್ರೇರಿಯನ್ ಟ್ಯಾಕ್ಸೇಷನ್ ಇನ್ ಕರ್ನಾಟಕ ಅಂಡರ್ ವಿಜಯನಗರ 1376–1565, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ, 1988.

[51] ಕೆ.ವಿ ರಮೇಶ, ಪ್ರಾಚೀನ ತುಳುನಾಡು, ಪುಟ 59.

[52] ಶೀನಪ್ಪ ಹೆಗ್ಡೆ, ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯಕಟ್ಟು, ಪುಟಗಳು. 102–117.

[53] ಸೈಯ್ಯದ್ ಅಬ್ದುಲ್ ಬಾರಿ,ನಾನ್ ಅಗ್ರೇರಿಯನ್ ಟ್ಯಾಕ್ಸೇಷನ್ ಇನ್ ಕರ್ನಾಟಕ ಅಂಡರ್ ವಿಜಯನಗರ 1376–1565, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ, 1988. ಶೀನಪ್ಪಹೆಗ್ಡೆ, ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯಕಟ್ಟು, ಪುಟಗಳು 102–117.

[54] ತುಳುನಾಡಿಗೆ ಹೊರಗಿನ ರಾಜಕೀಯ ಶಕ್ತಿಗಳ ಪ್ರವೇಶ, ಘಟ್ಟಪ್ರದೇಶಗಳೊಂದಿಗಿನ ವ್ಯಾವಹಾರಿಕಸಂಪರ್ಕ ಬದಲಾವಣೆಗೆ ಅವಕಾಶ ನೀಡಿತ್ತಲ್ಲದೇ ಜೈನರ ಪ್ರವೇಶದಿಂದಾಗಿ ಮಾತೃಪ್ರಧಾನತೆಯು ಕ್ಷೀಣಗೊಂಡು ಆಚರಣಾತ್ಮಕವಾಗಿ ಮಾತ್ರ ಅದರ ಅನನ್ಯತೆಯನ್ನು ಮುಂದುವರೆಸಿರಬಹುದು.

[55] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆಪುಟ 136.

[56] ಕೆ.ಸಾವಿತ್ರಿ, ಮೌನ ಮುರಿದಾಗ, ಪುಟಗಳು 27, 28.

[57] ಪ್ರಖ್ಯಾತ ಚರಿತ್ರಕಾರ ಕಾಲಿಂಗ್‌ವುಡ್ ಅವರ ಅಭಿಪ್ರಾಯದಲ್ಲಿ ಚರಿತ್ರೆ ಅಧ್ಯಯನ ಅಥವಾ ಚರಿತ್ರಾಕಾರನ ಮುಖ್ಯ ಉದ್ದೇಶವೆಂದರೆ ಚರಿತ್ರೆಯ ಘಟನೆಗಳಲ್ಲಿ ಅಡಕವಾಗಿರುವ ವಿಚಾರಗಳನ್ನು ಪುನರ್‌ವಿಮರ್ಶೆಗೆ ಒಳಪಡಿಸಿ, ಅವುಗಳನ್ನು ಅರಿತುಕೊಂಡು ಅವುಗಳ ಹಿಂದಿರುವ ಕ್ರಿಯೆ ಮತ್ತು ಚಿಂತನೆಗಳನ್ನು ಪತ್ತೆಹಚ್ಚುವುದಾಗಿದೆ. ಮಾನವನ ಪ್ರತಿಯೊಂದು ಘಟನೆಯ ಹಿಂದೆ ಹಲವಾರು ಚಿಂತನೆಗಳಿರುವುದರಿಂದ ಮತ್ತು ಆ ಚಿಂತನೆಗಳನ್ನು ಕ್ರಿಯೆಗಳು ಅನುಸರಿಸುವುದರಿಂದ ಏನು ನಡೆಯಿತು ಎನ್ನುವುದು ದೈಹಿಕ ಚಲನೆಗೆ ಸಂಬಂಧಿಸಿದ ಆಥವಾ ಮೇಲ್ನೋಟಕ್ಕೆ ಪ್ರಕಟವಾಗುವ ಅಂಶವಾದರೆ ಯಾಕೆ ನಡೆದಿದೆ ಎಂಬುವುದು ಘಟನೆಯ ಚಿಂತನೆಯ ಭಾಗವಾಗಿದೆ. ಕಾಲಿಂಗ್‌ವುಡ್ ಅವರ ಈ ಅಭಿಪ್ರಾಯಗಳು ತುಳುನಾಡಿನ ವಾರಸುದಾರಿಕೆಯ ಬಗ್ಗೆ ಅರಿತುಕೊಳ್ಳಲು ಅಥವಾ ಮಾತೃಪ್ರಧಾನ ವ್ಯವಸ್ಥೆಯೊಂದು ಪಿತೃಪ್ರಧಾನ ವ್ಯವಸ್ಥೆಗೆ ತೆರೆದುಕೊಳ್ಳಲು ಕಾರಣವಾಗುವ ಅಂಶಗಳನ್ನು ಪತ್ತೆಹಚ್ಚಲು ಮಾರ್ಗದರ್ಶಿ ಸೂಚಿಯಂತಿದೆ.

[58] ಮೋಹನಕೃಷ್ಣ ರೈ, ತುಳುನಾಡ ಸಿರಿ ಬದುಕು–ಹೋರಾಟದ ಕಥನ, ಪ್ರಸಾರಾಂಗ ಕ.ವಿ.ವಿ ಹಂಪಿ:2010 ಪುಟಗಳು 8–12. ವೆಂಕಟೇಶ ಇಂದ್ವಾಡಿ, ಸಿರಿ ಜನಪದ ಕಾವ್ಯ, ಸಂಪಾದನ ಗ್ರಂಥ, ಪ್ರಸಾರಾಂಗ ಕ.ವಿ.ವಿ ಹಂಪಿ; 2010 ಪುಟಗಳು 66–68.

[59] ಅ.ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟಗಳು 132–133. ಪಾಡ್ದನಗಳು ಒಕ್ಕಲ್ಯ, ಬಿಲ್ಲವ, ಮೊಗವೀರ, ಮೋಗೆರರನ್ನು, ಕೊರಗರನ್ನು ಅಕ್ಕ–ತಂಗಿಯ ಮಕ್ಕಳೆಂಬ ಅರ್ಥದಲ್ಲಿ ವ್ಯಾಖ್ಯಾನಿಸಿದೆ.

[60] ಇಚ್ಲಂಗೋಡು ಬಿ.ಎಂ, ತುಳುನಾಡ ಮುಸಲ್ಮಾನರು, ಬ್ಯಾರಿ ಸಂಸ್ಕೃತಿ, 1997, (ಇಲ್ಲಂ ಪದ್ಧತಿಯ ಬಗ್ಗೆ ಮಾಹಿತಿ ನೀಡಿದ್ದಾರೆ) ಪುಟ 47.

[61] ಗೋಪಾಲಕೃಷ್ಣ ಪೈ, ಸ್ವಪ್ನಸಾರಸ್ವತ, 3ನೇ ಮುದ್ರಣ ಬೆಂಗಳೂರು; 2011.

[62] ಪೊಳಲಿ ಶೀನಪ್ಪಹೆಗ್ಡೆ., ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯಸಂತಾನ ಕಟ್ಟು ಪುಟಗಳು 91–97.

[63] ಸತ್ಯಮಿತ್ರ ಬಂಗೇರ, ಅಳಿಯಸಂತಾನ ಕಟ್ಟ್‌ದ ಗುಟ್ಟು, ವಿಶ್ವತುಳು ಸಮ್ಮೇಳನೋ 2009 ಉಜಿರೆ. ಪುಟ 18. (ಅಥಾರಿಟಿ ಒವರ್ ಕಮ್ಯೂನಲ್ ಎಪೇರ್ಸ್)

[64] ಪೊಳಲಿ ಶೀನಪ್ಪಹೆಗ್ಡೆ, ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಸಂತಾನ ಕಟ್ಟು, ಪುಟಗಳು 85–97; ಸತ್ಯಮಿತ್ರ ಬಂಗೇರ, ಅಳಿಯಸಂತಾನ ಕಟ್ಟ್‌ದ ಗುಟ್ಟು, ವಿಶ್ವತುಳು ಸಮ್ಮೇಳನೋ 2009 ಉಜಿರೆ. ಪುಟಗಳು 5–10.

[65] ಅರ್ವದ ಆಳಿಯ ಎಂಬುವುದಾಗಿದ್ದು ಮಗಳ ಗಂಡ ಮರ್ಮ್ಯಯ ಆಗುವುದರಿಂದ ಅರ್ವದನಿಗಿರುವಷ್ಟು ಅಧಿಕಾರ ಮರ್ಮ್ಯಯನಿಗಿರುವುದಿಲ್ಲ. ಪುರುಷನಿಂದ ಪಡೆದ ಅಧಿಕಾರ ಮಕ್ಕಳಿಗೆ ಹಸ್ತಾಂತರವಾಗುವುದು ಮಕ್ಕಳಕಟ್ಟು. ಅಳಿಯಸಂತಾನ ಕಟ್ಟು ಸಂಪ್ರದಾಯದ ಅಧಿಕಾರಕ್ಕೆ ಅನ್ವಯವಾದರೆ ಆಸ್ತಿಗೆ ಅನ್ವಯವಾಗುವುದಿಲ್ಲ.

[66] ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004. ಪುಟಗಳು 8–9.

1. ಬಿ.ಸಿರೋಡಿನ ಅಲೆತ್ತೂರು ಪಂಜುರ್ಲಿ ದೈವಸ್ಥಾನದಲ್ಲಿ ಅಲೆತ್ತೂರು ಅರವತ್ತು ಮುಡಿ ಕೃಷಿಭೂಮಿ ಹೊಂದಿದ್ದ ಕೃಷಿಕ ಸಮುದಾಯ ಅಜಲಿನ ಅಧಿಕಾರವನ್ನು ತನ್ನ ಭೂಮಿ ಕಳೆದುಕೊಂಡು ಅಧಿಕಾರ ಪರಭಾರೆಯಾದರೂ ಕಟ್ಟುಕಟ್ಟಳೆಯ ದಿವಸ ಕೃಷಿ ಭೂಮಿಯ ಮೇಲೆ ಮೂಲಅಧಿಕಾರ ಹೊಂದಿರುವ ಕುಟುಂಬದ ಸದಸ್ಯ ಹಾಜರಿದ್ದರೆ ಮಾತ್ರ ದೈವಕ್ಕೆ ಸಮಾಧಾನವಾಗುವ ಪ್ರಸಂಗ. ಮಾಹಿತಿ ಕೃಷ್ಣಪ್ಪ ತಂದೊಳಿಗೆ.

[67] ಪೀಟರ್. ಜೆ. ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ. ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟ27.

[68] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ಬಂಟ್ವಾಳ ತಾಲೂಕಿನ ಕಣಂತೂರಿನ ಬಲ್ಲಾಯ ಮನೆ, ಬಂಗೇರ ಕುಟುಂಬ–ಯಜಮಾನ್ತಿ. ಶಾರದಾ ಕಣಂತೂರು. ಬಂಟ್ವಾಳ ತಾಲೂಕಿನ ಕಣಂತೂರು ಕುಟುಂಬದ ದೈವಗಳ ಪರ್ವಕಾಲದಲ್ಲಿ ಆಧಿಕಾರ ಹಂಚುವ ಪರಿಪಾಠವನ್ನು ಕಾರ್ಯಕ್ಷೇತ್ರದ ಮೂಲಕ ದಾಖಲಿಸಲಾಗಿದ್ದು ಆಚರಣ ಅಧಿಕಾರ ಪೂರ್ವಸಂಪ್ರದಾಯದಂತೆ ನಡೆಯುತ್ತದೆ.

[69] ಪೀಟರ್.ಜೆ.ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟ 105.

[70] ಪೀಟರ್.ಜೆ.ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987.

[71] ಪೀಟರ್.ಜೆ.ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟಗಳು 102–105.

[72] ಪೀಟರ್.ಜೆ.ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟ 72.

[73] ಪೀಟರ್.ಜೆ.ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟ 125.

[74] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ–ಸಾಂಸ್ಕೃತಿಕ ಅಧ್ಯಯನ, ಕ.ಪು.ಪ್ರಾಧಿಕಾರ ಬೆಂಗಳೂರು 2004.

[75] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ–ಸಾಂಸ್ಕೃತಿಕ ಅಧ್ಯಯನ, ಕ.ಪು.ಪ್ರಾಧಿಕಾರ ಬೆಂಗಳೂರು 2004; ಪುಟಗಳು 316–366.

[76] ರಮಾನಾಥ ಕೋಟೆಕಾರ್, ಬಾಸೆಲ್ ಮಿಷನು ಮತ್ತು ಬಿಲ್ಲವರು ಒಂದು ಅಧ್ಯಯನ, ಮಂಗಳೂರು 2011. ರಮಾನಾಥಕೋಟೆಕಾರ್, ಮುದ್ದು ಮೂಡುಬೆಳ್ಳೆಯವರ ಕಾರ್ಯಕ್ಷೇತ್ರ ಆಧಾರಿತ ಅಧ್ಯಯನ–ಬಿಲ್ಲವರಲ್ಲಿ 100 ಕ್ಕಿಂತಲೂ ಹೆಚ್ಚು ಗುತ್ತುಗಳನ್ನು ಇಲ್ಲವೇ ಪೂರ್ವಪರಂಪರೆಯ ಮನೆಗಳನ್ನು ಪಟ್ಟಿ ಮಾಡಲಾಗಿದೆ.– ಬಿಲ್ಲವರ ಗುತ್ತು ಮನೆತನಗಳ ಲೇಖನಗಳು ಗುರುತು ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದೆ.

[77] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ಗಟ್ಟಿ ಸಮುದಾಯದ ನಾಯಗ, ಮೇಲಾಂಟ ಗಡಿ ಹಿಡಿಯುವ ಸಂಪ್ರದಾಯ ಉಳ್ಳಾಲದ ಸೀಮೆ ದೇವಸ್ಥಾನ ಸೋಮೆಶ್ವರದಲ್ಲಿ ಕಳಶಸ್ನಾನದ ಮೂಲಕ ಪೂರ್ಣಗೊಂಡು, ಆ ದೇವಸ್ಥಾನದ ಪರಂಪರಾಗತ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಹೋಗುವಲ್ಲಿ ಅಧಿಕಾರ ಪಡೆಯುವುದು ಮಾತ್ರವಲ್ಲ ಜೊತೆಗೆ ಆ ಸಮುದಾಯದ ಗುರುಸ್ಥಾನದ ಅಧಿಕಾರವನ್ನು ಪಡೆದ ಪರಂಪರೆಯ ಬಗ್ಗೆ ದಾಖಲಾತಿ ಲಭ್ಯವಿದೆ. ಮಾಹಿತಿದಾರರು. ಶ್ರೀ ಕ್ಷೇತ್ರ ಸೋಮೆಶ್ವರ ವ್ಯವಸ್ಥಾಪನ ಸಮಿತಿ ಸದಸ್ಯ ಕೆ. ರುಕ್ಮಯ ಕೊರಂತೋಡಿ. ಬಂಟ್ವಾಳ ತಾಲೂಕು.

[78] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ಮುಲ್ಕಿ ಸಾಮಂತರ ಸೈನ್ಯದಲ್ಲಿ ಮುಂಡಾಲರು ಮುಖಾರಿಗಳೆಂಬ ಪೂರ್ವಪರಂಪರೆಯ ಹೆಸರಿನಿಂದ ಕರೆಯಲ್ಪಡುವುದು.

[79] ವೇಣೂರಿನ ಅಜಿಲರ, ಮೂಲ್ಕಿಯ ದುಗ್ಗಣ ಸಾವಂತ, ಧರ್ಮಸ್ಥಳ ಹೆಗ್ಗಡೆಯ ಪಟ್ಟಾಭಿಷೇಕ ಆಚರಣೆಗಳು. ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾಗಿ ನೈಜ ರಾಜಕೀಯ ಅಧಿಕಾರವನ್ನು ಕಳೆದುಕೊಂಡಿರುವುದರಿಂದ ಪಟ್ಟದ ಅಧಿಕೃತ ಗ್ರಹಣ ಹೆಚ್ಚಿನ ಕಡೆಗಳಲ್ಲಿ ನಿಂತಿದೆಯಾದರೂ ಆಚರಣಾತ್ಮಕವಾಗಿ ಕೆಲವು ಕುಟುಂಬಗಳು ಪರಂಪರೆಯಿಂದ ದತ್ತವಾದ ಕುಟುಂಬ ಅಧಿಕಾರ ಇಲ್ಲವೇ ಮನೆಯ ವ್ಯಾಪ್ತಿಗೆ ಒಳಪಟ್ಟ ಅಧಿಕಾರಗಳನ್ನು

ಗಡಿಸಂಪ್ರದಾಯಗಳ ಆಚರಣೆಗಳನ್ನು ಮಾಡುವ ಮೂಲಕ ಜೀವಂತವಾಗಿರಿಸಿದೆ. ಮಾಹಿತಿದಾರರು. ಪ್ರೊ. ಕೃಷ್ಣಮೂರ್ತಿ ಕನ್ನಡ ವಿಭಾಗ ಮುಖ್ಯಸ್ಥರು ಗೋವಿಂದದಾಸ ಕಾಲೇಜು ಸುರತ್ಕಲ್.

[80] 1. ಕಾರ್ಯಕ್ಷೇತ್ರದಿಂದ ಪಡೆದ ಮಾಹಿತಿ-ಕುರ್ನಾಡು ಸೀಮೆಯ ಸೋಮನಾಥೇಶ್ವರ ದೇವಸ್ಥಾನದಲ್ಲಿ ನಡೆಯುವ ದೈವಗಳ ಪರ್ವದಲ್ಲಿ ಕೃಷಿ ಅಧಿಕಾರದ ಮನೆಯಿಂದ ಗಡಿ ಹಿಡಿಯುವ ಸಂಪ್ರದಾಯವಿದೆ. ಗಡಿ ಪಡೆದವ ಮುದುಂಞ ಹೆಸರಿನ ಪಟ್ಟದ ಹೆಸರಿನಲ್ಲಿ ಅಲಯದ ಹೆಸರನ್ನು ಪಡೆಯುತ್ತಾನೆ. ಮಾಹಿತಿದಾರರು ಕಿರಣ್ ಅಮ್ಮೆಂಬಳ ಮಾಗಣೆ ಗುರಿಕಾರರು ಅಮ್ಮೆಂಬಳ.

2. ಕಾಸರಗೋಡು ಮಂಜೇಶ್ವರದ ಪಾತೂರಿನ ದುರ್ಗಲಾಪು ಎಂಬಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಧರ್ಮನೇಮಗಳಲ್ಲಿ ಇಲ್ಲವೇ ಪೈಚಿಲ್ ನೇಮಗಳಲ್ಲಿ ಗಡಿ ಪ್ರಧಾನ ಮಾಡುವ ಉತ್ಸವವನ್ನು ದಾಖಲಿಸಿಕೊಳ್ಳಲಾಗಿದೆ. ಬೇರೆ ಬೇರೆ ಕೃಷಿ ಸಮುದಾಯಗಳು ಕಣಂತೂರು ತೋಡಕುಕ್ಕಿನಾರ್, ದುರ್ಗಾಲಾಯ, ಬಂಟಜಾವದೆ ಮತ್ತು ಕೊಟ್ಯತ್ತಜೆ ಉಳ್ಳಾಲ್ತಿ ದೈವಗಳಿಗೆ ಪ್ರಧಾನ ಪಾತ್ರಿಗಳಾಗಿ ಕೆಲಸ ನಿರ್ವಹಿಸುವುದಲ್ಲದೇ, ಗಡಿ ಹಿಡಿದವರು ವರ್ಕಾಡಿ ಮಾಗಣೆ ಹಾಗೂ ಕೋಳ್ಯೂರು ಸೀಮೆಗಳೊಂದಿಗೆ ಆಡಳಿತಾತ್ಮಕ ಸಂಬಂಧಗಳನ್ನು ಹೊಂದಿರುತ್ತಾರೆ. ಗಡಿ ಸಂಪ್ರದಾಯದಿಂದ ಅಲಯದ ಪುದರ್ ಪಡೆಯುವುದರೊಂದಿಗೆ ಗ್ರಾಮದ ದತ್ತ ಅಧಿಕಾರಗಳನ್ನು ಪಡೆದು ಕಾರ್ಯಕಲಾಪಗಳನ್ನು ನಡೆಸಿಕೊಂಡು ಹೋಗುವ ಅಧಿಕೃತ ಅಧಿಕಾರವನ್ನು ಪಡೆದಂತಾಗುತ್ತದೆ. ಮಾಹಿತಿದಾರರು ಬಾಲಕೃಷ್ಣ ಪೊಯ್ಯತ್ತಾಯ. ಕೃಷಿ ಅಧಿಕಾರ ರಚನೆಯ ಮನೆಗಳಲ್ಲಿ ಈಗಲೂ ಗಡಿ ನುಡಿ ಪಡೆದ ವ್ಯಕ್ತಿಗಳಿಗೆ ಪಾರಂಪರಿಕ ಭಕ್ತಿ ಗೌರವಗಳು ಸಲ್ಲುತ್ತವೆ. ಅವರ ಮಾತು ವೇದ ವಾಕ್ಯವಾಗುತ್ತದೆ.

[81] ಮೋಹನಕೃಷ್ಣ ರೈ, ಚರಿತ್ರೆ ಅಧ್ಯಯನ, ಚರಿತ್ರೆ ನಿರ್ಮಾಣ ಮತ್ತು ವರ್ತಮಾನದ ಅಜೆಂಡಾಗಳು. ಪುಟಗಳು 39–48.

[82] ಇಂದಿರಾ ಹೆಗ್ಗಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಪುಟಗಳು 29–31.

[83] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಪುಟಗಳು 418–428. ಕ್ಲಾಸ್ ಪ್ರಕಾರ ಅಲಡೆ ಎಂಬುವುದು ಕುಟುಂಬದ ಧಾರ್ಮಿಕ ಹಾಗೂ ರಾಜಕೀಯ ಕೇಂದ್ರಸ್ಥಾನ ಎನ್ನುತ್ತಾರೆ. ಆದಿ ಅಲಡೆ (ಪ್ರಾಚೀನ ನೆಲೆ) ಎಂಬ ಪದ ತುಳು ಮಾತಾನಾಡುವ ಪ್ರದೇಶದಲ್ಲಿ ಪ್ರಚಲಿತದಲ್ಲಿದೆ. ಪಾಲ್ತಾಡಿ ರಾಮಕೃಷ್ಣ ಆಚಾರ್, ನಾಗಬೆರ್ಮೆ, ಪುತ್ತೂರು, 2009 ಪುಟಗಳು 88–89.

[84] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ನಾಲ್ಕುಮನೆಯ ಕೊಜ್ಜರಣ್ಣಾಯರೆಂದೆ ಪ್ರಸಿದ್ಧಿ ಪಡೆದಿರುವ ಕುಟುಂಬಗಳ ತರವಾಡುಗಳು ನಾಗನಿಗೆ ತನು ಎರೆಯುವ ಸಂದರ್ಭದಲ್ಲಿ ಶೆಡ್ಡೆ ಕುಂಟ್ಯದಲ್ಲಿ ತನು ಎರೆಯಲು ಒಟ್ಟು ಸೇರುವ ಪರಂಪರೆಯನ್ನು ದಾಖಲಿಸಿಕೊಳ್ಳಲಾಗಿದೆ. ಮಾಹಿತಿ ಯಾಧವ ಕುಂಟ್ಯ, ಮೂಡುಶೆಡ್ಡೆ ಮಂಗಳೂರು ತಾಲೂಕು.

[85] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಪುಟ 223.

[86] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ, ಪುಟ 197.

[87] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಃ ಪ್ರಸ್ತುತ ಕೃಷಿ ಸಮುದಾಯವಾದ ಗಟ್ಟಿ ಸಮಾಜದವರು ಪಯ್ಯ ಹೆಸರಿನೊಂದಿಗೆ ಅಲಡೆಯ ಕಾರ್ಯಕಲಾಪಗಳನ್ನು ಅಲಡೆಯ ಪೂರ್ವ ಆಚರಣೆಗಳೊಂದಿಗೆ ನಡೆಸಿಕೊಂಡು ಬರುತ್ತಿದ್ದಾರೆ. ಮಾಹಿತಿದಾರರು ಚಂದ್ರಶೇಖರ ಅಂದಾಡಿಗುತ್ತು ಬಂಟ್ವಾಳ ತಾಲೂಕು.

[88] 1.ಸೌ.ಇ.ಇ. ಸಂ. 9 ಭಾಗ 2 457. ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ, ಪುಟ-307. 4. ಗಣಪತಿ ರಾವ್ ಐಗಳ್ ಎಂ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ 1923, ಪುಟ 382.

[89] ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟ 47.

[90] ಪೊಳಲಿ ಶೀನಪ್ಪ ಹೆಗ್ಡೆ., ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯಸಂತಾನ ಕಟ್ಟು, ಪುಟಗಳು 84–85. ಅಳಿಯಸಂತಾನ ಕಟ್ಟಿಗೆ ಸೇರ್ಪಡೆಯಾದ ಸುಮಾರು 42 ಜಾತಿಗಳ ಪಟ್ಟಿಯ ವಿವರಣೆ ನೀಡಿದ್ದಾರೆ.

[91] ಸತ್ಯಮಿತ್ರ ಬಂಗೇರ, ಅಳಿಯಸಂತಾನ ಕಟ್ಟ್‌ದ ಗುಟ್ಟು, ವಿಶ್ವತುಳು ಸಮ್ಮೇಳನೋ 2009 ಉಜಿರೆ. ಪುಟಗಳು 5–10.

[92] ಜನಪದ ನಿಯಮಗಳ ಜೊತೆ ಶಾಸ್ತ್ರ ಪರಂಪರೆಯ ನಿಯಮಗಳು ದೈವಾರಾಧನೆಯ ನೇಮದಲ್ಲಿ ಸೇರಿವೆ. ನೇಮೋತ್ಸವ ಈಗ ಜಾರಿಯಲ್ಲಿರುವ ಪದ.

[93] ಅ. ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟ 173.

[94] ಕಾರ್ಯಕ್ಷೇತ್ರದ ಮಾಹಿತಿಃ ಅಳದಂಗಡಿಯ ಅಜಿಲರು, ಮೂಲ್ಕಿಯ ಸಾವಂತರು, ಧರ್ಮಸ್ಥಳದ ಹೆಗ್ಗಡೆಯವರ ಸಂದರ್ಭಗಳಲ್ಲಿ ಈ ಪರಂಪರೆಯನ್ನು ದಾಖಲಿಸಿಕೊಳ್ಳಲಾಗಿದೆ. ಮಾಹಿತಿದಾರರು. ಡಾ ಜಯಕುಮಾರ್ ಉಜಿರೆ. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು ಉಜಿರೆ.

[95] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ.

---

[96] ಉದಯವರ್ಮರಾಜ., ತುಳುನಾಡಿನ ಗತವೈಭವ, ಕ.ಸಾ.ಪ, ಕೇರಳ ಕಾಸರಗೋಡು 1998.

[97] ಚಿನ್ನಪ್ಪಗೌಡ, ಭೂತಾರಾಧನೆ ಒಂದು ಜಾನಪದೀಯ ಅಧ್ಯಯನ, ಪುಟಗಳು 195,196.

[98] ಆನಂದಕೃಷ್ಣರ ಮಿತ್ತಬೈಲು ಯಮುನಕ್ಕ, ನಾ.ಮೊಗಸಾಲೆಯವರ ಉಲ್ಲಂಘನೆ ಕಾದಂಬರಿಗಳಲ್ಲಿ ತುಳುನಾಡಿನ ಕೃಷಿ ಭೂಮಿಯ ಅಧಿಕಾರ ರಚನೆಯು ವಾಸ್ತವತೆಯ ಬಗ್ಗೆ ನೈಜ ಚಿತ್ರಣವಿದೆ. ಇದಲ್ಲದೇ ಭೂಸುಧಾರಣೆಯ ನಂತರದ ದಿನಗಳಲ್ಲಿ ಈ ವ್ಯವಸ್ಥೆಗಳು ಹೇಗೆ ಕಾರ್ಯಾಚರಣೆ ಮಾಡುತ್ತಿದ್ದವು ಎಂಬ ಮಾಹಿತಿಯೂ ಸಹ ದಾಖಲಾಗಿದೆ.

[99] ಎಂ.ಎಸ್. ಎ. ಶರ್ಮ, ಉಡುಪಿ ಕ್ಷೇತ್ರದ ನೈಜ್ಯ ಚಿತ್ರ ಮತ್ತು ಚಾರಿತ್ರಿಕ ಹಿನ್ನಲೆ, 1969. ಉಡುಪಿ ಅಷ್ಟಮಠದ ಯತಿ ವಾದಿರಾಜ ಸ್ವಾಮೀಜಿಯವರ ಕಾಲದ ಕೆಲವು ಘಟನೆಗಳನ್ನು ಆಧರಿಸಿದ ವಿಚಾರಗಳ ಸಮರ್ಥನೆ ಇದೆ.

[100] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ, ಪುಟ 312.

[101] ಜೈನರ ಗಂಟು ನಾಡವರಿಗೆ. ಈ ಘಟನೆ ತುಳುನಾಡು ಕೆಳದಿಯ ಆಳ್ವಿಕೆಗೆ ಒಳಪಟ್ಟಾಗ ಜೈನರ ಪ್ರಭಾವ ಕಡಿಮೆಯಾಯಿತ್ತಲ್ಲದೇ, ಜೈನರ ಊಳಿಗದವರಾಗಿದ್ದ ನಾಡವರು ಕೆಳದಿಯ ರಾಜಕೀಯದೊಂದಿಗೆ ಕೈಜೋಡಿಸುವ ಮೂಲಕ ಜೈನರ ಆಸ್ತಿ-ಪಾಸ್ತಿಗಳಿಗೆ ತಾವೇ ಒಡೆಯರಾದರು ಎಂಬ ಐತಿಹ್ಯ ಪ್ರಚಲಿತದಲ್ಲಿದೆ.

[102] ತುಳುನಾಡಿನ ಪ್ರಮುಖ ನ್ಯಾಯಕೇಂದ್ರಗಳು-ಬಾರಕೂರು ಪಂಚಲಿಂಗೇಶ್ವರ, ಮಾರಣಕಟ್ಟೆ ಬ್ರಹ್ಮಲಿಂಗೇಶ್ವರ, ಉದ್ಯಾವರ ಶಂಬುಕಲ್ಲು ದೇವಸ್ಥಾನ, ಕದ್ರಿ ಮಂಜುನಾಥ ದೇವಸ್ಥಾನ, ಕುಡುಮ ಮಂಜುನಾಥ ದೇವಸ್ಥಾನ, ಮಧೂರು ಮಹಾಗಣಪತಿ ದೇವಸ್ಥಾನ, ಕಾನತ್ತೂರು ದೈವಸನ್ನಿಧಿ, ಮಾತ್ರವಲ್ಲದೇ ಆಯಾಯ ಊರಿನ ಸೀಮೆ, ಮಾಗಣೆ, ಊರಿನ ದೇವಸ್ಥಾನ, ದೈವಸ್ಥಾನಮುಂತಾದವುಗಳು ನ್ಯಾಯ ವಿತರಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದವು.

[103] ಹದಿನಾರು ಕಂಬದ ದೇವಸ್ಥಾನಗಳು-ಬ್ರಾಹ್ಮಣರ ಕೂಡುಕಟ್ಟಿನ ದೇವಸ್ಥಾನಗಳು, ವರ್ಕಾಡಿ ಕಾವಿ ಸುಬ್ರಮಣ್ಯ, ಮಂಚಿ ಗೋಪಾಲಕೃಷ್ಣ, ಪಂಜ ಮಹಾಲಿಂಗೇಶ್ವರ ಇತ್ಯಾದಿ, ತುಳುನಾಡಿನ ಬ್ರಾಹ್ಮಣರ ನಡುವೆ ಉಂಟಾಗುತ್ತಿದ್ದ ವ್ಯಾಜ್ಯಗಳನ್ನು ಪರಿಹರಿಸುವ ಕೇಂದ್ರಗಳು ಇಲ್ಲವೇ ನ್ಯಾಯತೀರ್ಮಾನ ನೀಡುವ ನ್ಯಾಯಾಲಯಗಳಾಗಿ ಕೆಲಸ ನಿರ್ವಹಿಸುತ್ತಿದ್ದವು.

[104] ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಪುಟ 18. ಊರಿನ ನೀತಿ ನಿಯಮಗಳಿಗೆ ಚ್ಯುತಿ ತರುವವರಿಗೆ ಬೆಂಕಿ ನೀರು ಕೊಡಬೇಡಿ, ಗಂಧ ನೀರು ಕೊಡಬೇಡಿ ಎಂಬ ನಿಷೇದಾಜ್ಞೆ ಪ್ರಚಲಿತಲ್ಲಿತ್ತು.

[105] ಸಾಲೆತ್ತೂರು ಬಿ.ಎ. ಏನ್ಶ್ಯಂಟ್ ಕರ್ನಾಟಕ; ಹಿಸ್ಟರಿ ಆಫ್ ತುಳುವ, ಓ.ಬು.ಎ ಪೂನಾ; 1936 ಪುಟ 320.

[106] ಅ.ಬಾಲಕೃಷ್ಣ ಶೆಟ್ಟಿ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ ಪುಟ 172.

[107] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ, ವಿ.ಬಿ ಅರ್ತಿಕಜೆ ಪುಟ 53.

[108] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು,ಕನ್ನಡ ಅವೃತ್ತಿ, ವಿ.ಬಿ ಅರ್ತಿಕಜೆ ಪುಟ 69.

[109] ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಉಡುಪಿ; 1975, ಪುಟಗಳು 144-149.

[110] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ ಪುಟ, 54.

[111] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ, 86.

[112] ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಪುಟ 366-388.

[113] ಗುತ್ತು ವ್ಯವಸ್ಥೆಯ ಕಾರ್ಯಚಟುವಟಿಕೆಗಳ ಬಗ್ಗೆ ಉಲ್ಲಂಘನೆ-ನಾ. ಮೊಗಸಾಲೆ, ಮಿತ್ತಬೈಲು ಯಮುನಕ್ಕ-ಅನಂದಕೃಷ್ಣ ಮತ್ತು ನಾಗವೇಣಿಯವರ ಗಾಂಧಿ ಬಂದ ಮುಂತಾದ ಕಾದಂಬರಿಗಳಲ್ಲಿ ವಿಶ್ಲೇಷಣೆಗಳಿವೆ.

[114] ಬುಖಾನನ್ ಪ್ರಾನ್ಸಿಸ್, ಎ ಜರ್ನಿ ಪ್ರಂ ಮದ್ರಾಸ್ ತ್ರೂ ಮೈಸೂರು, ಕೆನರಾ ಎಂಡ್ ಮಲಬಾರ್, ಸಂಪುಟ 111 ಪ್ರಥಮ ಮುದ್ರಣ 1807 ಲಂಡನ್, ರಿಪ್ರಿಂಟ್, ಎ.ಇ.ಎಸ್ ನ್ಯೂ ದಿಲ್ಲಿ 1988, ಪುಟ 17.

[115] ಆನಂದ ಕೃಷ್ಣರ ಮಿತ್ತಬೈಲು ಯಮುನಕ್ಕೆ, ನಾ ಮೊಗಸಾಲೆಯವರ ಉಲ್ಲಂಘನೆ ಕಾದಂಬರಿಗಳಲ್ಲಿ ಈ ಬಗ್ಗೆ ವಿವರಣೆಗಳಿವೆ.

[116] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ. ಪುಟ-90. ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು-ಜಿಲ್ಲಾಧಿಕಾರಿ ಕಛೇರಿ ಮಂಗಳೂರು. 1817ರಲ್ಲಿ ವಸಾಹತು ಸರಕಾರವು ದೇವಸ್ಥಾನಗಳ, ದೈವಸ್ಥಾನಗಳ ಆಡಳಿತವನ್ನು ವಶಕ್ಕೆ ತೆಗೆದುಕೊಂಡು ದೇವಸ್ಥಾನಗಳ ಉಂಬಳಿ, ಉತ್ತಾರ ಜಪ್ತಿ ತಪಶೀಲು ಕಾಣುವ ಅಧಿಕಾರವನ್ನು ರೆವಿನ್ಯೂ ಆಧಿಕಾರಿಗಳಿಗೆ ವಹಿಸಿಕೊಟ್ಟಿತು. ವರ್ಷದ ಅಯವ್ಯಯಗಳನ್ನು ಲೆಕ್ಕಚಾರಕ್ಕೆ ಒಳಪಡಿಸಿ ತಸದೀಕುಗಳನ್ನು ನೀಡಿತ್ತಲ್ಲದೇ ಸ್ಥಳೀಯರ ವಿರೋಧ ಬಾರದ ರೀತಿಯಲ್ಲಿ ವ್ಯವಸ್ಥಾಪನ ಸಮಿತಿಗಳನ್ನು ರಚಿಸಿತು. ಈ ವ್ಯವಸ್ಥಾಪನ

ಸಮಿತಿಯ ಮೂಲಕ ದೇವಸ್ಥಾನಗಳ ಉಸ್ತುವಾರಿಯನ್ನು ಈ ಮೊದಲು ನಿರ್ವಹಿಸುತ್ತಿದ್ದ ಗ್ರಾಮಗಣ್ಕರ ಉಸ್ತುವಾರಿಗೆ ನೀಡಿದರು. 1863ರಲ್ಲಿ ರೆವಿನ್ಯೂ ಅಧಿಕಾರಿಗಳ ಮೂಲಕ ಅಧಿಕಾರ ನಡೆಸುತ್ತಿದ್ದ ಗ್ರಾಮಗಣ್ಕರನ್ನು ಅದರ ಬದಲಾಗಿ ಮತಸ್ಥಾಪನೆಯ ಕಮಿಟಿಯ ಮೂಲಕ ಗ್ರಾಮಗಣ್ಕರನ್ನು ನೇಮಕ ಮಾಡುವ ಪದ್ಧತಿಯನ್ನು ಆರಂಭಿಸಿತು. 1927ರಲ್ಲಿ ಸರ್ಕಾರ ದೇವಸ್ಥಾನಗಳ ಆಡಳಿತ, ವಿಚಾರಕ್ಕಾಗಿ ಹಿಂದು ರಿಲಿಜೀಯಸ್ ಎಂಡೋಮೆಂಟ್ ಬೋರ್ಡು ಎಂಬ ಹೊಸ ಇಲಾಖೆಯನ್ನು ರಚಿಸಿ ಅಸಿಸ್ಟೆಂಟ್ ಕಮೀಷನ್‌ರಗಳ ಮೂಲಕ ದೇವಾಲಯಗಳಿಗೆ ಆಡಳಿತ ಮೊಕ್ತೇಸರರನ್ನು ನೇಮಕ ಮಾಡುವ ಪದ್ಧತಿಯನ್ನು ಜಾರಿಗೆ ತಂದರು.ಈ ಮೂರು ಹಂತಗಳಲ್ಲೂ ಎಂಡೋಮೆಂಟ್ ಸಮಿತಿಗಳಿದಾಗ್ಯೂ ಪ್ರಭಾವಿಗಳು ತಮ್ಮ ಪೂರ್ವಪರಂಪರೆಯ ಅಧಿಕಾರವನ್ನು ಮುಂದೊಡ್ಡಿ ದೇವಸ್ಥಾನಗಳಲ್ಲಿ ತಮ್ಮ ಹತೋಟಿಯನ್ನು ಮುಂದುವರೆಸಿರುವುದನ್ನು ಕಾಣಬಹುದು.

117 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ90.

118 ಬನ್ನಂಜೆ ಬಾಬು ಅಮೀನ್, ತುಳುನಾಡಿನ ಗರಡಿಗಳ ಸಾಂಸ್ಕೃತಿಕ ಅಧ್ಯಯನ, 1990 ಪುಟಗಳು 154–157.

119 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 109.

120 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 111.

121 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟಗಳು 70–71.

238 ಪ್ರಕಾಶಚಂದ್ರಶಿಶಿಲ, ತುಳುನಾಡಿನ ವಾಸ್ತುಶಿಲ್ಪ ಒಂದು ಅಧ್ಯಯನ, ಮಂ.ವಿ.ವಿ ಅಪ್ರಕಟಿತ ಸಂಶೋಧನ ಪ್ರಬಂಧ, 2008, ಪುಟಗಳು 72, 127. ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 111. ಗುತ್ತು ಮನೆಯ ಏರ್ಪಾಡು ಅದರ ಕೃಷಿ ಅಗತ್ಯಗಳು ಮತ್ತು ಅಭ್ಯಾಸಗಳನ್ನು ಪೂರೈಸುವ ಹಲವು ಘಟಕಗಳಿಗೆ ಅವಕಾಶ ಮಾಡಿಕೊಡಬೇಕಾಗಿತ್ತು. ಕರೆಯುವ ದನಗಳು, ಉಳುವ ಎತ್ತು ಕೋಣಗಳು, ಕಂಬಳದ ಕೋಣಗಳಿಗೆ ತಕ್ಕ ಹಟ್ಟಿ, ಸೆಗಣಿ ಸಂಗ್ರಹ ಮತ್ತು ಗೊಬ್ಬರ ತಯಾರಿಕೆಗೆ ಸೂಕ್ತ ಜಾಗ, ತೆನೆ ಬಡಿಯಲು, ಧಾನ್ಯ ಕೇರಲು ಮತ್ತು ಭತ್ತ ಕುಟ್ಟಲು ವಿಶಾಲವಾದ ಅಂಗಳ, ಬೈಹುಲ್ಲಿನ ಮೆದೆಗಳು, ತೆಂಗಿನಕಾಯಿ–ಅಡಿಕೆ ಸುಲಿಯಲು ಜಾಗ, ಕಾಯಿಸಿಪ್ಪೆ, ಗೆರಟೆಗಳ ಸಂಗ್ರಹ, ಧಾನ್ಯ ದಾಸ್ತಾನಿಗೆ ಸ್ಥಳ, ಉಗ್ರಾಣಗಳು, ಕೆಲಸದವರ ಕೋಣೆಗಳು, ಕೆರೆಗಳ ನಿರ್ಮಾಣ ಇತ್ಯಾದಿ ಕೃಷಿ ಮನೆತನಕ್ಕೆ ಅಗತ್ಯವಾದ ಅನುಕೂಲತೆಗಳು. ಪೂರ್ವಪದ್ಧತಿಗನುಗುಣವಾಗಿ ವ್ಯವಸ್ಥೆಗೊಂಡಿದೆ.ಇದಕ್ಕೆಲ್ಲ ಅವುಗಳದೇ ಆದ ವಿಧಿ ನಿಷೇಧಗಳಿದ್ದವು.ಮನೆಯ ಯಾವ ಬದಿ ಯಾವುದಕ್ಕೆ ಪ್ರಶಸ್ತ, ಹೇಗೆ ಮತ್ತು ಯಾವಾಗ ವಿಷಯಗಳನ್ನು ಯೋಚಿಸಬೇಕು.ಯಾವುದನ್ನು ತಪ್ಪಿಸಬೇಕು–ಇವೆಲ್ಲ ನಂಬಿಕೆಯ ಹೊಯ್ದಾಟಕ್ಕೆ ಸೇರಿದೆ.ಋತುಗಳಿಗೆ ಗೌರವ, ಪಂಚಾಂಗ ಮತ್ತು ಅದರ ಮೇಲ್ವಿಚಾರಕರ ಮೇಲೆ ಅವಲಂಬನೆ ಅಥವಾ ಅದರಿಂದಾಚೆಗಿನ ಶಕ್ತಿಗಳಲ್ಲಿ ನಂಬಿಕೆ ಇತ್ಯಾದಿಗಳು ಜಾನಪದ ವಿಶ್ವಾಸಗಳ ಬಾಹ್ಯರೇಖೆ ಮತ್ತು ಸಾರವಾಗಿದೆ. 10132ಅವು ಸಾಮಾಜಿಕ ವೀಕ್ಷಣೆ ಮತ್ತು ಅನುಭವಗಳ ಫಲವಾಗಿದೆ. ಅವು ಜಾನಪದ ವಿವೇಕ ಹಾಗೂ ಶ್ರದ್ಧೆಗಳಾಗಿ ಘನಿಭವಿಸುತ್ತವೆ. ಸ್ಪರ್ಧಿಸುವ ಅಧುನಿಕತೆಯ ಸಂದರ್ಭದಲ್ಲಿ ವೈಜ್ಞಾನಿಕವಾಗಿ ರೂಪುಗೊಂಡದ್ದಾಗಿ ಪಂಥ ಕಟ್ಟುತ್ತವೆ. ಹಟ್ಟಿಗೆ ಸಂಬಂಧಿಸಿದ ಕೆಲವು ವಿಧಿ ನಿಷೇಧಗಳು–ಹಟ್ಟಿಯಲ್ಲಿ ಉಗುಳುವಂತಿಲ್ಲ. ಪಾದರಕ್ಷೆ ಧರಿಸಿ ಪ್ರವೇಶಿಸುವ ಹಾಗಿಲ್ಲ. ಯಾವುದೇ ಜಾನುವಾರುಗಳನ್ನು ಅದರ ಕುಣಿಕೆ ಹಗ್ಗಕ್ಕೂ ದುಡ್ಡು ಕೊಡದೇ ಖರೀದಿಸುವಂತಿಲ್ಲ. ಪಶು ಆಹಾರಕ್ಕೆ ಮಾಂಸ ಸೇರಿಸುವಂತಿಲ್ಲ. ಕೃಷಿಯನ್ನು ಎಂದೂ ಕೇವಲ ಒಂದು ಕಸುಬಾಗಿ ಅಥವಾ ಹೂಡಿಕೆ ಮತ್ತು ಲಾಭಗಳ ವಿಷಯವಾಗಿ ನೋಡಲಾಗಿಲ್ಲ. ಅದೊಂದು ಜೀವ ವಿಧಾನ.ಅದಕ್ಕೆ ಅದರದೇ ಆದ ಲೋಕದೃಷ್ಟಿ, ಭರವಸೆ, ಹಾರೈಕೆ, ಭಯಗಳಿದ್ದವು. ಸುಖ; ಸಂತೋಷ ಸಮೃದ್ಧಿಗಳನ್ನು ಹಾರೈಸುತ್ತಿದ್ದರಿಂದ ಕೆಲವೊಂದು ನಂಬಿಕೆಗಳು ಮತ್ತು ನಿಷೇಧಗಳು ಜನರ ಸಹಜ ಪರಿಚಿತ ಧೋರಣೆಯನ್ನು ಬಿಂಬಿಸುತ್ತವೆ. ಸಂಜೆಯ ದೀಪ ಹಚ್ಚಿದ ಮೇಲೆ ಮನೆ ಗುಡಿಸುವಂತಿಲ್ಲ–ಹಾಗೇ ಮಾಡಿದರೆ ಭಾಗ್ಯಲಕ್ಷ್ಮಿಯನ್ನು ಹೊರಗಿಟ್ಟಂತೆ, ಮನೆಯೊಳಗೆ ಉಪ್ಪು ಚೆಲ್ಲಿದರೆ ಬಡತನವನ್ನು ಆಹ್ವಾನಿಸಿದಂತೆ, ಹೊಸ್ತಿಲ ಮೇಲೆ ತಲೆ ಇಡಬಾರದು, ಕುಳಿತುಕೊಳ್ಳಬಾರದು–ಸಾಲದ ಭಾರವನ್ನು ಹೆಚ್ಚಿಸುತ್ತದೆ. ಹುಂಜ ಹೊಸ್ತಿಲ ಮೇಲೆ ಕೂಗಿದರೆ ಅಮಂಗಳ ಕೂಡಲೇ ಕೊಲ್ಲಬೇಕು. ಮನೆಗೆ ಪಂಚಾಂಗ ಹಾಕುವಾಗ ಆಚರಣಾತ್ಮಕ ಪೂಜೆ ಮಾಡದೇ ಮಣ್ಣನ್ನು ಅಗೆಯಬಾರದು.ಕಟ್ಟಿದ ಮನೆಗೆ ಒಳ್ಳೆಯದು ಮಾಡುವುದಿಲ್ಲ. ಮನೆಯ ನಿಶ್ಚಿತ ದಿಕ್ಕುಗಳಲ್ಲಿ ಕೆಲವು ಮರಗಳನ್ನು ನೆಡಬಾರದು–ಮೂಢನಂಬಿಕೆಗಳಾದರೂ ಇದನ್ನು ಪೂರ್ವದ ವಿಜ್ಞಾನಗಳೆಂದು ಪರಿಕಲ್ಪಿಸಬೇಕು.

123 ಬನ್ನಂಜೆ ಬಾಬು ಅಮೀನ್, ಕೊಡಿಪು ವಿಶ್ವ ತುಳು ಸಮ್ಮೆಳನೋ, ನೆಂಪು ಸಂಚಿ-2009, ಪುಟಗಳು 121-123; ವಹಾಭ್ ದೊಡ್ಡಮನೆ, ತುಳುನಾಡಿನ ಮುಸ್ಲಿಮರು, ಮಂಗಳೂರು 2008 ಪುಟ 37.

124 ಪೀಟರ್. ಜೆ. ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟ 112.

125 ಚಿನ್ನಪ್ಪ ಗೌಡ, ಭೂತಾರಾಧನೆ ಜಾನಪದೀಯ ಅಧ್ಯಯನ, 1990 ಮಂಗಳಗಂಗೋತ್ರಿ, ಪುಟ 194. ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004, ಪುಟ 51.

126 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಇಂಗ್ಲೀಷ್ ಅವೃತ್ತಿ ಪುಟ 57.

127 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಪುಟಗಳು 25-32.

128 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 94.

129 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 95.

130 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 97.

131 ಈ ಗುತ್ತು ಮನೆತನಗಳಲ್ಲಿ ಪ್ರಸ್ತುತ ಜೈನ ಶಾಸ್ತ್ರವಿಧಿಗಳು ನಡೆಯುತಿರುವುದನ್ನು ವಿದ್ವಾಂಸರು ದಾಖಲಿಸಿಕೊಂಡಿದ್ದಾರೆ.

132 ಶಿರ್ವ ನಡಿಬೆಟ್ಟಿನ ಬಾವಿಯ ನೀರು ಕುಡಿದರೆ ಮಾಡಿದ ತಪ್ಪುಗಳು, ಪಾಪಗಳು ಪರಿಹಾರಗೊಳ್ಳುತ್ತವೆ ಎಂಬ ದೈವಿಕ ಶಕ್ತಿಯನ್ನು ಆ ಗುತ್ತಿಗೆ ಮಾನ್ಯ ಮಾಡಲಾಗಿತ್ತು.

133 ಇಂದಿರಾ ಹೆಗ್ಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಪುಟಗಳು 366-388. ನ್ಯಾಯ ತೀರ್ಮಾನಕ್ಕೆ ಸಂಬಂಧಿಸಿ ವಸಾಹತುಶಾಹಿಯ ಆಡಳಿತದ ಕಾಲದಲ್ಲೂ ಹೋಬಳಿಯ ಜಿಲ್ಲಾ ನ್ಯಾಯಲಯ ನೀಡುವ ಮರಣದಂಡನೆ ಶಿಕ್ಷೆ ಕಾರ್ಯಗತ ಆಗುವ ಮೊದಲು ಮಂಗಳೂರು ಹೋಬಳಿಯ ಗುತ್ತುಗಳಾದ ಕುಡ್ಲಗುತ್ತು, ಗುಡ್ಡೆಗುತ್ತು, ಬಡಿಲಗುತ್ತುಗಳ ಗಡಿಯ ಗುತ್ತಿನಾರರು ಕೋರ್ಟಿಗೆ ಬರಬೇಕು. ಶಿಕ್ಷೆ ರದ್ದುಗೊಳಿಸುವ ಇಲ್ಲವೇ ಊರ್ಜಿತಗೊಳಿಸುವ ಅಧಿಕಾರ ಈ ಮೂರು ಗುತ್ತುಗಳ ಗುತ್ತಿನಾರರು ಹೊಂದಿದ್ದರು.

134 ಗಣಪತಿ ರಾವ್ ಐಗಳ್ ಎಂ., ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ 1923, ಪುಟ 383. ಸುರೇಂದ್ರ ರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ, ಪಿ.ಗುರುರಾಜ ಭಟ್ಟರ ಪ್ರಕಾರ ತುಳುನಾಡಿನಲ್ಲಿ ಮಧ್ಯಯುಗೀನಾ ಊಳಿಗ ವ್ಯವಸ್ಥೆಯು ಗುತ್ತುಗಳ ಮೂಲಕ ಕಾರ್ಯನಿರ್ವಹಿಸುತ್ತಿದ್ದು ಒಳಊಳಿಗತೆ ಪ್ರಚಲಿತದಲ್ಲಿ ಇರಲಿಲ್ಲ. ಉಳಿಗಮಾನ್ಯತೆಯ ಸಾಂಸ್ಥಿಕ ಕ್ರಮಾನುಗತತೆ, ಅಧಿಕಾರ, ಹಿಡುವಳಿಗಾರರೊಂದಿಗಿನ ಸಂಬಂಧಕ್ಕೆ ಅನುಗುಣವಾಗಿರುತ್ತದೆ. ತುಳುನಾಡಿನ ಗುತ್ತು ವ್ಯವಸ್ಥೆ ಮಧ್ಯಯುಗೀನಾ ಚರಿತ್ರೆಯ ರಾಜಕೀಯ ಪದರುಗಳಲ್ಲಿ ವ್ಯವಸ್ಥಿತಗೊಂಡಿದೆ. ಗುತ್ತು ಸ್ಥಳೀಯ ರಾಜಕಾರಣದ ಕೇಂದ್ರವಾಗಿ ಸ್ಥಳೀಯ ಜನರಿಗೆ ರಾಜಕಾರಣದ ನೈಜ್ಯ ಭಾವನಾತ್ಮಕ ಕೇಂದ್ರವಾಗಿರಲೂಬಹುದು ಎಂದು ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ.

135 ಎಂ.ಎಸ್.ಎ. ಶರ್ಮ, ಉಡುಪಿ ಕ್ಷೇತ್ರದ ನೈಜ್ಯ ಚಿತ್ರ ಮತ್ತು ಚಾರಿತ್ರಿಕ ಹಿನ್ನೆಲೆ, 1969 ಮಂಗಳೂರು, ಪುಟಗಳು 13-15; ತುಳುಭಾಷೆಯ ಎರಡು ಗಾದೆಗಳು ಈ ನಿಟ್ಟಿನಲ್ಲಿ ಅಧ್ಯಯನಕ್ಕೊಳಪಡಬೇಕಾಗುತ್ತದೆ. ಮಠದ ಸ್ವಾಮಿಗಳು ನಿಟ್ಟೂರು ಸೋಮಲಿಂಗ ದೇವರನ್ನು ತೆಗೆದು ವೆಂಕಟರಮಣ ದೇವರನ್ನು ಆ ಸ್ಥಳದಲ್ಲಿ ಇಡಿಸಿದ ವಿಚಾರದಲ್ಲಿ ಹೆಚ್ಚಿನ ಹೊಡೆದಾಟಗಳು ಆಗಿವೆ. ಈ ವಿಷಯದಲ್ಲಿ ಅಲ್ಲಿನ ಮಾಧ್ವರು ಈಶ್ವರಲಿಂಗಕ್ಕೆ ಅವಹೇಳನ ಮಾಡಿ ತುಳುಭಾಷೆಯಲ್ಲಿ ಆಗ ಪರಿಹಾಸ್ಯ ಮಾಡುತ್ತಿದ್ದುದು ಹೇಗೆಂದರೆ "ನಿಟ್ಟೂರು ಸೋಮಲಿಂಗ ಬೋನತಂಕರ ತಂಜಣತಂಕರ" ಎಂದು ಅದರ ಬದಲಿಗೆ ಊರಿನ ಹರಿಜನರು ಈ ರೀತಿ ಹೇಳುವುದು ವಾಡಿಕೆಯಲ್ಲಿತ್ತು. 'ಚಿಟ್ಟುಪಾಡಿ ಬಲ್ಲಾಳೆರ್ ದಿಂಡುಂಬು ಗುದ್ಯೇರೋ" ಎಂದು. ಈ ಮಾತಿನಿಂದ ಊರಿನ ಜೈನರಾದ ಆಗಿನ ನಿಡಂಬೂರು ಚಿಟ್ಟುಪಾಡಿ ಬಲ್ಲಾಳರುಗಳು ವಾದಿರಾಜರಿಗೆ ಹೆಚ್ಚು ಸಹಾಯಕರಾಗಿದ್ದರೆಂದು ತಿಳಿಯಬಹುದು. ಸಾಮಾನ್ಯಶಕೆ 1582 ರಿಂದ 1645ರ ಕಾಲ ಅನಾಯಕತ್ವದ ಕಾಲ ಎಂದು ಚರಿತ್ರೆಯ ಮೂಲಗಳಿಂದ ಸ್ಪಷ್ಟವಾಗುತ್ತದೆ.ಮಾಧ್ವ ಯತಿ ವಾದಿರಾಜರ ಕಾಲದಲ್ಲಿ ಕೃಷಿ ಅಧಿಕಾರದ ರಚನೆಯ ಜೈನರು ಮತ್ತು ಒಕ್ಕಲ್ಮರು ಮಾಧ್ವರ ಪ್ರಭಾವಕ್ಕೊಳಗಾದರಲ್ಲದೇ ವೈಷ್ಣವ ಚಿಂತನೆಗಳನ್ನು ಅಳವಡಿಸಿಕೊಂಡು ವೆಂಕಟರಮಣನ ಅರಾಧಕರಾದರೆಂಬ ವಿಚಾರಗಳು ಚರಿತ್ರೆಯಿಂದ ತಿಳಿಯಬಹುದು. ಮುಂದೆ ವಾದಿರಾಜರು ರಾಜಕೀಯವಾಗಿಯೂ ಪ್ರಭಾವಿಗಳಾಗಿರುವುದರಿಂದ ಅವರಿಂದ ಪ್ರೇರಿತಗೊಂಡು ಶೈವ-ಜೈನ ಚಿಂತನೆಗಳನ್ನು ರೂಢಿಸಿಕೊಂಡಿದ್ದವರು ವೈಷ್ಣವರಾಗಿ ಇಲ್ಲವೇ ಒಕ್ಕಲ್ಮರಾಗಿ ಪರಿವರ್ತನೆಗೊಂಡಿರುವ ಸಾಧ್ಯತೆಗಳು ಇಲ್ಲದಿಲ್ಲ. ತುಳುನಾಡಿಗೆ ವಲಸೆ ಬಂದ ಬಂದ ಬ್ರಾಹ್ಮಣರು ಬ್ರಾಹ್ಮಣರಲ್ಲದ ಶೂದ್ರಜಾತಿಯವರ ಹುಡುಗಿಯರನ್ನು ಮದುವೆ ಮಾಡಿಕೊಳ್ಳುವ ಪ್ರಸಂಗ ಬಂತು.ಶಿವಳ್ಳಿಯ ಬ್ರಾಹ್ಮಣರು ಒಕ್ಕಲ್ಮರ ಹುಡುಗಿಯರನ್ನು ಮದುವೆ ಮಾಡಿಕೊಂಡದ್ದರಿಂದ ಅವರಿಗೆ ಮದುಮಗಳು (ಮದಿಮಾಳ್) ಎಂದು ಕರೆಯುವ ವಾಡಿಕೆ ಬಂತು; ಬಳಿ ಅನುಸರಿಸುವ ಸಮುದಾಯಗಳು ಮದಿಮಾಳ್

(ಸಮುದ್ರದಲ್ಲಿ ಲಭ್ಯವಿರುವ ಒಂದು ಬಗೆಯ ಮೀನು) ತಿನ್ನಬಾರದೆಂಬ ನಿಷೇಧವೂ ಇದೆ.ಈ ಬಗ್ಗೆ ಅಧ್ಯಯನ ಆಗಬೇಕಾಗಿದೆ.)

136 ಎಂ.ಎಸ್.ಎ. ಶರ್ಮ, ಉಡುಪಿ ಕ್ಷೇತ್ರದ ನೈಜ್ಯಚಿತ್ರ ಮತ್ತು ಚಾರಿತ್ರಿಕ ಹಿನ್ನೆಲೆ, 1969 ಮಂಗಳೂರು ಪುಟಗಳು 43-45, 24-26, 45-50; ಮಟ್ಟುಗುಳ್ಳದ ಐತಿಹ್ಯ-ಮಟ್ಟು ಬ್ರಾಹ್ಮಣರು ಶಿವಳ್ಳಿ ಬ್ರಾಹ್ಮಣರಿಂದ ಕೆಳತರಗತಿಯವರೆಂದು ಅವರನ್ನು ಶಿವಳ್ಳಿಯವರು ತಮ್ಮ ಪಂಕ್ತಿಯಲ್ಲಿ ಕುಳ್ಳಿರಿಸುತ್ತಿರಲಿಲ್ಲ. ಅವರಿಗೆ ಪ್ರತ್ಯೇಕ ಅಡ್ಡಪಂಕ್ತಿ ಕೊಡುತ್ತಿದ್ದರು. ಯಾಕೆಂದರೆ ಮೊದಲು ಅವರು ಮೋಗವೀರರಾಗಿದ್ದರಿಂದ ಸಮಾನ ಅವಕಾಶಗಳನ್ನು ಕೊಡುತ್ತಿರಲಿಲ್ಲ. ಆ ಮೇಲೆ ಒಬ್ಬ ಯತಿ ವಾದಿರಾಜರೆಂಬವರಿಂದ ಶುದ್ಧೀಕರಿಸಿ ಬ್ರಾಹ್ಮಣರಾಗಿ ಮಾಡಲ್ಪಟ್ಟವರು.ಅವರಿಗೆ ಅವರ ಹಿಂದಿನ ಉದ್ಯೋಗ ಮಾಡಲು ಸಾಧ್ಯವಿಲ್ಲವಾದುದರಿಂದ ಈ ವಾದಿರಾಜ ಸ್ವಾಮಿಯು ಅವರಿಗೆ ಕೆಲವು ಗುಳ್ಳದ ಬೀಜಗಳನ್ನು ಕೊಟ್ಟು (ಬದನೇಕಾಯಿ) ಅವರು ಕೃಷಿ ಮಾಡುವಂತೆ ಮಾಡಿ ಅದರಿಂದ ಅವರ ಜೀವನ ನಡೆಸುವಂತೆ ಮಾಡಿದರು.ಇದರಿಂದ ಮಟ್ಟುಗ್ರಾಮದಲ್ಲಿ ಬೆಳೆಯುವ ಬದನೇಕಾಯಿಗೆ (ಮಟ್ಟುಗುಳ್ಳ) ವಾದಿರಾಜಗುಳ್ಳ ಹೆಸರು ಬಂತು.ಈ ಕಾರಣದಿಂದ ಮಟ್ಟುಬ್ರಾಹ್ಮಣರು ಸೋದೆ ಮಠದ ಶಿಷ್ಯರಾಗಿ ಪರಿವರ್ತಿತರಾದರು.

137 ಎಂ.ಎಸ್.ಎ. ಶರ್ಮ, ಉಡುಪಿಯ ಕ್ಷೇತ್ರದ ನೈಜ ಚಿತ್ರ ಮತ್ತು ಚಾರಿತ್ರಿಕ ಹಿನ್ನೆಲೆ-1969 ಮಂಗಳೂರು ಪುಟಗಳು 50-53. ಧಾರ್ಮಿಕ ಧತ್ತಿ ಇಲಾಖೆಯ ಪತ್ರಗಳು-ಜಿಲ್ಲಾಧಿಕಾರಿಗಳ ಕಚೇರಿ ಮಂಗಳೂರು. ಮುಂದುವರೆದು ವಸಾಹತುಶಾಹಿಯ ಕಾಲದಲ್ಲೂ ದೇವಸ್ಥಾನಗಳಲ್ಲಿ ಧಾರ್ಮಿಕ ಶಾಸ್ತ್ರವಿಧಿಗಳ ನೆಪದಿಂದ ವಿಶೇಷವಾಗಿ ಮಾಧ್ವ ಬ್ರಾಹ್ಮಣರು ದಿವಾನ್ ಪೂರ್ಣಯ್ಯನವರ ಮಾರ್ಗದರ್ಶನದೊಂದಿಗೆ ಬ್ರಿಟಿಷರಿಂದ ಅಭಯದಾನ ಪಡೆದರು.

138 ಗಣಪತಿರಾವ್ ಐಗಳ್ ಎಂ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಚರಿತ್ರೆ 1923, ಪುಟ 382.

139 ಅಮೃತ ಸೋಮೇಶ್ವರ, ತುಳು ಪಾಡ್ದನ ಸಂಗ್ರಹ, ಪುಟ 477.

140 ಧಾರ್ಮಿಕ ದತ್ತಿಇಲಾಖೆ ಪತ್ರಗಳು, ಜಿಲ್ಲಾಧಿಕಾರಿಗಳ ಕಛೇರಿ ಮಂಗಳೂರು. ಕುಂಟ್ಳ ಮೂಡುಶೆಡ್ಡೆ ಸಾವಿರಾಳ ಧೂಮಾವತಿ, ವಾಜಂಗಳಾಯ ಕ್ಷೇತ್ರದ ಸುಮಾರು 300 ವರ್ಷಗಳ ಚರಿತ್ರೆಯ ಉಲ್ಲೇಖ ಲಭ್ಯ.

141 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004 ಪುಟಗಳು 12-14: ಅಜಲು ಸಾಂಪ್ರದಾಯಿಕ ಪದವಾಗಿದ್ದು, ಆಯಾ ಸೀಮೆಯ ಅಥವಾ ಮಾಗಣೆಯ, ಅಥವಾ ಗ್ರಾಮದ ನಿತ್ಯ ವ್ಯವಹಾರಗಳಿಗೆ ಸಂಬಂಧಪಟ್ಟ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಘಟಕ. ಜೊತೆಗೆ ಗ್ರಾಮ, ಗ್ರಾಮ ದೇವಸ್ಥಾನ, ದೈವಸ್ಥಾನಗಳ ಆಡಳಿತಾತ್ಮಕ ಜವಬ್ದಾರಿಯನ್ನು ಹಂಚಿಕೊಳ್ಳುತ್ತಿದ್ದ ಗ್ರಾಮದ ಒಟ್ಟು ಘಟಕವನ್ನು ಅಜಲು ಎಂದು ಕರೆಯುತ್ತಿದ್ದರು. ಅಜಲಿನ ಅಧಿಕಾರವು ಪೂರ್ವಪರಂಪರೆಯಿಂದ ಹರಿದು ಬರುತ್ತದೆ.

142 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004ಪುಟ 13.

143 ಮೂಲ್ಕಿಯ ಅರಸರ ಚಾವಡಿಯಲ್ಲಿ ಮುಂಡಾಲರು ಮುಂಡಾಸು ಕಟ್ಟಿ ಎಲ್ಲರಂತೇ ಕುಳಿತುಕೊಳ್ಳುವ ಅಧಿಕಾರ ಹೊಂದಿದ್ದರು. ಇತರ ಸಂದರ್ಭಗಳಲ್ಲಿ ಗುತ್ತಿನ ಆಥಾವ ಬೀಡಿನವರನ್ನುಳಿದು ಇತರ ಯಾವುದೇ ಜಾತಿಯವರು ಮುಂಡಾಸು ಕಟ್ಟುವಂತಿರಲಿಲ್ಲ.

144 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004 ಪುಟ 22.

145 ರಮೇಶ ಕೆ. ವಿ, ಎಂ.ಜೆ ಶರ್ಮ, ತುಳುನಾಡಿನ ಶಾಸನಗಳು, ಶಾಸನ ಸಂಖ್ಯೆ 36.

146 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004 ಪುಟ 24.

147 ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿಗಳು: ಅಜಲಿನ ಭೂಮಿಯನ್ನು ಪಡಕೊಂಡ ಮುಸ್ಲಿಮರು, ಕ್ರೈಸ್ತರು ಅಜಲಿನ ಭೂಮಿಯ ಮುಖಾಂತರ ಅಜಲಿಗೊಳಪಟ್ಟ ಸಂದರ್ಭಗಳನ್ನು ಕಾಣಬಹುದಾಗಿದೆ.

148 ಚಂದ್ರಹಾಸ ಕಣಂತೂರು, ಕಣಂತೂರು ಧರ್ಮಅರಸು ಶ್ರೀ ತೊಡಕುಕ್ಕಿನಾರ್, 1997 ಪುಟಗಳು 63-67. ಬ್ರಾಹ್ಮಣರಿಗೆ ಧರ್ಮಪಡಿ=ಶ್ರಾವಣ ಮಾಸದಲ್ಲಿ ಭಕ್ತರಿಂದ ತಲಾ ಅರ್ಧ ಸೇರುಅಕ್ಕಿ) ಸಂದಾಯವಾಗುವ ಪರಿಪಾಠವೂ ಇತ್ತು. ಕಣಂತೂರು ಅರಸು ಶ್ರೀತೋಡಕುಕ್ಕಿನಾರ್ ದೈವಸ್ಥಾನದ ಮೋಕ್ತೇಸರ ಬಾಲಕೃಷ್ಣ ಪೊಯ್ಯತ್ತಾಯರೊಂದಿಗಿನ ಸಂದರ್ಶನ ತಾರೀಕು 5-2-2012.

149 ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿ, ವಸಂತ ಕುಮಾರ್ ಪೆರ್ಲ, ಮಂಗಳೂರು ಆಕಾಶವಾಣಿಯ ಕಾರ್ಯನಿರ್ವಾಹಕರು.

150 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಪುಟಗಳು 21-22.

151 ಕೆಳದಿ ವೆಂಕಟೇಶ ಜೋಯಿಸ, ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ 170.

152 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004 ಪುಟ 18.

153 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು 2004 ಪುಟ 14.

154 ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿ, ತಾರೀಕು 28-3-2012. ಶಂಕರನಾರಾಯಣಭಟ್ಟ ಪ್ರಧಾನ ತಂತ್ರಿಗಳು ನಡಿಬೈಲು. ಕಾಸರಗೋಡು ಜಿಲ್ಲೆಯ ವರ್ಕಾಡಿ ಮಾಗಣೆಯ ನಡಿಬೈಲು ಪುರೋಹಿತರ ಪರಂಪರೆಯ ಬೀಡು, ಬಾಕ್ರಬೈಲಿನ ಸುತ್ತುಮುತ್ತಲಿನ ಗ್ರಾಮಗಳಲ್ಲಿ ಪ್ರಸಿದ್ಧವಾದುದು ಮಾತ್ರವಲ್ಲ ಮಲ್ಲಾರ್‌ಬೀಡು ದೈವಗಳ ಪ್ರಧಾನ ತಂತ್ರಿಗಳು.

155 ಅ. ಬಾಲಕೃಷ್ಣ ಪೊಳಲಿ, ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ, ಪುಟ 172.

156 ಬನ್ನಂಜೆ ಬಾಬು ಅಮೀನ್, ತುಳು ಜಾನಪದ ಆಚರಣೆಗಳು, ಉಡುಪಿ; 2010 ಪುಟಗಳು 141-203.

157 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ. ಪ ಬೆಂಗಳೂರು 2004 ಪುಟಗಳು 58-59; ಬುಳೆಕಾಣಿಕೆ-ಗೇಣಿ ಕೊಡುವ ಒಕ್ಕಲುಗಳು ಗುತ್ತಿಗೆದಾರನಿಗೆ ಮೊದಲು ಬೆಳೆದ ಫಲಗಳನ್ನು ಒಪ್ಪಿಸಿ ಊಟ ಮಾಡುವ ಸಂಪ್ರದಾಯ.

158 ಪೀಟರ್ ಜೆ ಕ್ಲಾಸ್, ತುಳುವ ದರ್ಶನ, ಕನ್ನಡ ಅನುವಾದ ಎ.ವಿ ನಾವಡ ಮತ್ತು ಸುಭಾಶ್ಚಂದ್ರ, 1987, ಪುಟ 43.

159 ನ್ಯಾಯ ತೀರ್ಮಾನ ಮಾಡುವಲ್ಲೂ ದೈವದ ಮಾಧ್ಯಮನಿಗೆ ಅಧಿಕಾರ ಹೊಂದಿದ ಕೃಷಿ ಅಧಿಕಾರ ರಚನೆಯವರು ಎಡ, ಬಲಗಳಲ್ಲಿ ನಿಂತು ಊರಿನ, ರಾಜ್ಯ ವ್ಯವಸ್ಥೆಯನ್ನು ನ್ಯಾಯ ವ್ಯವಸ್ಥಿತಗೊಳಿಸಬೇಕಾಗುತ್ತದೆ. ನ್ಯಾಯ ತೀರ್ಮಾನ ಮಾಡುವುದು ಕೃಷಿ ಅಧಿಕಾರ ರಚನೆಯ ದತ್ತ ಅಧಿಕಾರವಾಗಿ ಮುಂದುವರೆಯುತ್ತದೆ. ಹೀಗೆ ಪ್ರಬಲ ಅಧಿಕಾರ ವರ್ಗ ತನ್ನ ಅಧಿಕಾರವನ್ನು ಮಾನ್ಯಗೊಳಿಸುವಲ್ಲಿ ಸುಲಭದ ಹಾದಿಯನ್ನು ವ್ಯವಸ್ಥಿತಗೊಳಿಸುತ್ತದೆ. ದೈವದ ಮಾತನ್ನು ಮೀರಿ ನಡೆದರೆ ವ್ಯಕ್ತಿ ಮತ್ತು ಕುಟುಂಬ ಊರಿನಿಂದ ಬಹಿಷ್ಕಾರಕ್ಕೆ ಒಳಪಡುತ್ತಾರೆ. ವರ್ಕಾಡಿ, ಪಾತೂರು, ಕಣಂತೂರು ವ್ಯಾಪ್ತಿಯನ್ನು ಹೊಂದಿರುವ ತೋಡಕುಕ್ಕಿನಾರ್ ಕ್ಷೇತ್ರದಲ್ಲಿ (ವರ್ಕಾಡಿ ಕ್ಷೇತ್ರದಿಂದ ವಿಟ್ಲ ಸೀಮೆಯ ಮಂಕುಡೆಯ ವರೆಗಿನ ಊರು-ಮೂರೂರು ಐದು ಗ್ರಾಮ ಇದನ್ನು ಮೂರು ಪಕ್ಕಾ ಸ್ಥಳವೆಂದು ಕರೆಯುತ್ತಾರೆ.) ನಡೆಯುವ ಪರ್ವಗಳಲ್ಲಿ ಜೈನ, ಬ್ರಾಹ್ಮಣ, ಒಕ್ಕಲುಗಳು (ಭಂಡಾರಿ, ಮೇಲಾಂಟ, ರೈ-ಈ ಮೂರು ಅಲಯದ ಪುದರ್ಗಳಿರುವ ಗುತ್ತುಗಳು) ಮತ್ತು ಆಧೀನಕ್ಕೆ ಬರುವ ಸಮುದಾಯಗಳು (ಕೈರಂಗಳ ಹತ್ತೊಕ್ಲು, ನರಿಂಗಾಣ ಹತ್ತೊಕ್ಲು, ವರ್ಕಾಡಿ ಮೂವತ್ತೆರಡು ಒಕ್ಕಲು, ಗ್ರಾಮದ) ನಿರ್ವಹಿಸುವ ಅಧಿಕಾರದ ಚಲಾವಣೆಗಳನ್ನು ಗಮನಿಸಬಹುದಾಗಿದೆ.

160 ಇಂದಿರಾ ಹೆಗಡೆ, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಪುಟ 459.

161 ನಾಗವೇಣಿ ಎಚ್, ಗಾಂಧಿ ಬಂದ, ಬಳ್ಳಾರಿ 2008, 3ನೇ ಮುದ್ರಣ, ಪುಟಗಳು 1-34. ತುಳುನಾಡಿನ ಕಂಬಳದ ಚಿತ್ರಣ ವಿವರವಾಗಿ ಸಿಗುತ್ತದೆ.

162 ಆನಂತರಾಮ ಕೆ. ದಕ್ಷಿಣದ ಸಿರಿನಾಡು 1997 ಪುಟ 100.

163 ಪುರುಷೋತ್ತಮ ಬಿಳಿಮಲೆ, ಕರಾವಳಿ ಜಾನಪದ, ಪುಟಗಳು 31-49. ಸುರೇಂದ್ರ ರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ, ಪುಟ 180. ಮೂಲ್ಕಿಯ ಅರಸು ಕಂಬಳದಲ್ಲಿ 64 ಮಾಗಣೆಯ ಗುತ್ತುಗಳಿಗೆ ವಿಶೇಷ ಮನ್ನಣೆಯನ್ನು ಕೊಡಲಾಗುತ್ತಿತ್ತು. ಕದ್ರಿ ಕಂಬಳದಲ್ಲಿ ಅತ್ತಾವರ, ಕುತ್ತಾರು, ಇನೋಳಿ, ಬಡಿಲ, ಮುನ್ನೂರು, ಉಳ್ಳಾಲ, ಅಮುಣಂಜೆ, ಪುತ್ತಿಗೆ, ತೋಕೂರು, ಹರೇಕಳ, ಅಡ್ಯಾರು ಗುತ್ತುಗಳಿಗೆ ಮನ್ನಣೆ ನೀಡಲಾಗುತ್ತಿತ್ತು.

164 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ, ಪುಟ 181.

165 ಪೊಳಲಿ ಶೀನಪ್ಪ ಹೆಗ್ಡೆಯವರ ಪ್ರಕಾರ ಕೃಷಿ ಅಧಿಕಾರದ ಅಂತಸ್ತಿಗನುಗುಣವಾಗಿ ಕಂಬಳದ ಪೂಕರೆಯಲ್ಲಿ ಅಂಕಣಗಳಿರುತ್ತವೆ. ಉದಾಹರಣೆಗೆ ಗ್ರಾಮಗುತ್ತು 7 ಅಂಕಣ, ಮಾಗಣೆಗುತ್ತು 9 ಅಂಕಣ, ಸೀಮೆಗುತ್ತು 11 ಅಂಕಣ, ಅರಸ ಅಥವಾ ಹೋಬಳಿಗುತ್ತು 13 ಅಂಕಣಗಳನ್ನು ಒಳಗೊಂಡಿರುತ್ತದೆ. ಈ ಸಂಖ್ಯಾ ಲಾಂಛನ ಕೇವಲ ಕಂಬಳ ಮಾತ್ರವಲ್ಲ, ಅಧಿಕಾರ ಸಂಬಂಧವಾಗಿ ಇನ್ನು ಕೆಲವು ತುಳುವರ ಸಂಸ್ಕಾರ ಕ್ರಿಯೆಗಳಲ್ಲಿ, ಧಾರ್ಮಿಕ ವಿಧಿಗಳಲ್ಲಿ ಸ್ಥಾನ, ಅಂತಸ್ತುಗಳಾಗಿ ಮೆರೆಯಲ್ಪಡುತ್ತವೆ.

166 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 183.

167 ಇ.ಸಿ ಸಂಪುಟ. 9, ಪುಟ 21. ವಡ್ಡರ್ಸೆ, ಎ.ಆರ್ ನಂ. 296 1931-32.

168 ಶೈಲಾ.ಟಿ. ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, 2002, ಬೆಂಗಳೂರು ಪುಟ 136.

169 ಕೆ.ವಿ ರಮೇಶ, ತುಳುನಾಡಿನ ಇತಿಹಾಸ, ಪುಟ 44.

170 ಶೈಲಾ ಟಿ ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಬೆಂಗಳೂರು 2002.ಪುಟ 37.

171 ಸೌ.ಇ.ಇ, ಸಂ.7, ನಂ.354, 1315, ಎ.ಆರ್.ಎಸ್.ಐ.ಇ (1267) 1928-29 ನಂ.500.

172 ಪಿ.ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಕಲ್ಯಾಣಪುರ ಉಡುಪಿ 1975, ಪುಟ 144.

173 ಪಿ.ಗುರುರಾಜ ಭಟ್, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಕಲ್ಯಾಣಪುರ ಉಡುಪಿ 1975, ಪುಟ 144.

174 ಸೌ.ಇ.ಇ, ಸಂ.7, ನಂ-209.

175 ಮಂಗಳೂರು ರಾಜ್ಯ ಮತ್ತು ಬಾರಕೂರು ರಾಜ್ಯ.

176 ಎಮ್.ಎ.ಆರ್, (1387) 1943, ನಂ. 46.

177 ಗುರುರಾಜಭಟ್ ಪಿ, ಸ್ಟಡೀಸ್ ಇನ್ ತುಳುವ ಹಿಸ್ಟ್ರಿ ಅಂಡ್ ಕಲ್ಚರ್, ಕಲ್ಯಾಣಪುರ ಉಡುಪಿ 1975; ಪುಟ 147. ಶೈಲಾ, ಟಿ ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಬೆಂಗಳೂರು 2002; ಪುಟಗಳು 140-141.

178 ಗಣಪತಿ ರಾವ್ ಐಗಳ್ ಎಂ, ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 2004, ಪುಟಗಳು 249-250.

179 ಗಣಪತಿ ರಾವ್ ಐಗಳ್ ಎಂ, ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 2004 ಪುಟಗಳು 252-275. ಶೈಲಾ.ಟಿ. ವರ್ಮ, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, 2002, ಬೆಂಗಳೂರು ಪುಟಗಳು 140-149.

180 ಚರಿತ್ರಕಾರರಾದ ಗಣಪತಿ ರಾವ್ ಐಗಳ್ ಎಂ, ಕೆನರಾದ ಪ್ರಥಮ ಜಿಲ್ಲಾಧಿಕಾರಿ ಥಾಮಸ್ ಮುನ್ರೋ ಮುಂತಾದವರು ಈ ಮೇಲಿನ ಸಮರ್ಥನೆಯನ್ನು ನೀಡಿದ್ದಾರೆ.

181 ಕೆ.ಚಿನ್ನಪ್ಪ ಗೌಡ, ಭೂತಾರಾಧನೆ ಜಾನಪದೀಯ ಅಧ್ಯಯನ, ಮದಿಪು ಪ್ರಕಾಶನ ಮಂಗಳಗಂಗೋತ್ರಿ, 1990 ಪುಟ 195.

182 ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟಗಳು 46, 47.

183 ಕೆ.ಚಿನ್ನಪ್ಪ ಗೌಡ 'ಭೂತಾರಾಧನೆ ಜಾನಪದೀಯ ಅಧ್ಯಯನ', ಮದಿಪು ಪ್ರಕಾಶನ ಮಂಗಳಗಂಗೋತ್ರಿ, 1990. ತುಳುನಾಡಿನ ರಾಜಕೀಯ ಅಧಿಕಾರ ಅಲೌಕಿಕ ವ್ಯವಸ್ಥೆ ಹಾಗೂ ಜನರ ನಂಜಿಕೆಗಳ ನಡುವೆ ಏರ್ಪಟ್ಟ ಒಂದು ಬಗೆಯ ಸೇತುಬಂಧವನ್ನು ಕೂಲಂಕುಷವಾಗಿ ವಿಶ್ಲೇಷಣೆ ಮಾಡಿ. ಆ ಕಾಲಘಟ್ಟದ ಸಾಮಾಜಿಕ-ಧಾರ್ಮಿಕ ಚಟುವಟಿಕೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿದ್ದಾರೆ.

184 ರಾಜೇಂದ್ರಸಿಂಗ್, ಲ್ಯಾಂಡ್, ಪವರ್ ಅಂಡ್ ಪೀಪಲ್ ರೂರಲ್ ಇಲೈಟ್ ಇನ ಟ್ರಾನ್ಸಿಷನ್ 1801-1970, ಪುಟ 73.

185 ಬಿ.ಎ ವಿವೇಕ ರೈ, ತುಳು ಸಾಹಿತ್ಯ ಚರಿತ್ರೆ, ಸಂಪಾದನ ಗ್ರಂಥ, ಪ್ರಸಾರಾಂಗ ಕ.ವಿ.ವಿ ಹಂಪಿ 2007, ಪುಟಗಳು 89-92.

186 ಇಂದಿರಾ ಹೆಗ್ಡೆ, ತುಳುನಾಡಿನ ಗ್ರಾಮಾಡಳಿತ ಮತ್ತು ಅಜಲುಗಳು, ಕ.ಸಾ.ಪ ಬೆಂಗಳೂರು,2004.

187 ತುಳುನಾಡಿನ ಬೀಡುಗಳು, ಗುತ್ತುಗಳು ಅಧಿಕಾರದ ಕೇಂದ್ರಗಳಾಗಿ ಕಾರ್ಯನಿರ್ವಹಿಸಿದ ಕಾಲಘಟ್ಟ. ಜೊತೆಗೆ ಅಳಿಯಕಟ್ಟು ಅಧಿಕಾರ ನಿರಂತರತೆ ಕಾಯ್ದುಕೊಳ್ಳುವಲ್ಲಿನ ಸಾಂಪ್ರದಾಯಿಕ ಅಲಿಖಿತ ನಿಬಂಧನೆಗಳು. ಮುಂದುವರೆದು ಈ ಅಧಿಕಾರದ ಕಲ್ಪನೆ ಶಾಸನಗಳ ರೂಪದಲ್ಲಿ ಚಾರಿತ್ರಿಕ ಪ್ರಾಮುಖ್ಯತೆ ಪಡೆದುಕೊಂಡಿದ್ದ ಬೆಳವಣಿಗೆ ಮುಖ್ಯವಾಗುತ್ತದೆ.

## ವಸಾಹತುಶಾಹಿ-ತುಳುನಾಡು

ಮಧ್ಯಕಾಲದಿಂದ ಆರಂಭಗೊಂಡು ಹಲವು ಶತಮಾನಗಳ ಪ್ರಯತ್ನದ ಫಲವಾಗಿ ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಅದ್ವೀತಿಯ ಸಾಧನೆ ಮಾಡಿದ ಯುರೋಪು ಮಾನವ ಜೀವನದ ವಿಭಿನ್ನ ಕ್ಷೇತ್ರಗಳಿಗೆ ಸಂಬಂಧಿಸಿದ ತನ್ನ ದೃಷ್ಟಿಕೋನದಲ್ಲಿ ಅಮೂಲಾಗ್ರ ಬದಲಾವಣೆ ಮಾಡಿಕೊಂಡಿತು. ಅದರಲ್ಲೂ ಮುಖ್ಯವಾಗಿ ಸಾಮಾನ್ಯಶಕೆ ಹದಿನೇಳು ಹಾಗೂ ಹದಿನೆಂಟನೇ ಶತಮಾನಗಳಲ್ಲಿ ದೈವಿಕತೆ, ವಿಜ್ಞಾನ, ನಿಸರ್ಗ, ಮುಂತಾದವುಗಳಿಗೆ ಸಂಬಂಧಿಸಿದ ಚಿಂತನೆಗಳು ಹೊಸ ರೂಪ ಪಡೆದುಕೊಂಡವು. ವಿಜ್ಞಾನ, ತಂತ್ರಜ್ಞಾನಗಳ ಪ್ರಭಾವಕ್ಕೆ ಒಳಗಾದ ತತ್ವಜ್ಞಾನ, ಕಲೆ ಹಾಗೂ ರಾಜಕೀಯ ಚಿಂತನೆಗಳು ವಸಾಹತುಶಾಹಿ ಎಂಬ ನೂತನ ಸಿದ್ಧಾಂತವೊಂದರ ವಿಕಾಸಕ್ಕೆ ಕಾರಣವಾದರೆ, ಹೆಚ್ಚು ಕಡಿಮೆ ಇದೇ ಸಂದರ್ಭದಲ್ಲಿ ರೂಪಿಸಲ್ಪಟ್ಟ ಚಾರ್ಲ್ಸ್ ಡಾರ್ವಿನನ ಮಾನವನ ವಿಕಾಸವಾದಿ ಚಿಂತನೆಗಳು ವಿಜ್ಞಾನ, ತಂತ್ರಜ್ಞಾನಗಳ ನೆಲೆಗಳನ್ನು ಇಮ್ಮಡಿಗೊಳಿಸಿದವು. ಸಾಮಾನ್ಯಶಕೆ ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಅಡಮ್ ಸ್ಮಿತ್‌ನ ಆರ್ಥಿಕ ಚಿಂತನೆಗಳಿಗೆ ಭದ್ರವಾದ ಸೈದ್ಧಾಂತಿಕ ನೆಲೆಯೊಂದು ಸಿಕ್ಕಿ ವೈಜ್ಞಾನಿಕತೆ ಮತ್ತು ವೈಚಾರಿಕತೆಗಳ ಆಧಾರದಲ್ಲಿ ಸಮಾಜವನ್ನು ಮಾನವನ ಹಿತಕ್ಕಾಗಿ ಪರಿವರ್ತಿಸಬಹುದೆಂಬ ಚಿಂತನೆಗಳು ಮೊಳಕೆಯೊಡೆಯಲು ಕಾರಣವಾದವು. ಒಟ್ಟಾಗಿ ಈ ಬೆಳವಣಿಗೆಗಳು ಮಾನವನ ಚಿಂತನೆ ಹಾಗೂ ತಿಳುವಳಿಕೆಯಲ್ಲಿ ಉಂಟಾದ ಮಹತ್ವದ ಬದಲಾವಣೆಗಳ ಪರ್ವಕಾಲ ಎಂದೆನಿಸಿಕೊಂಡವು.[1]

ಹೀಗೆ ಯುರೋಪಿನಲ್ಲಿ ವಿಕಾಸಗೊಂಡ ಬದಲಾವಣೆಗಳ ಪರ್ವಕಾಲದ ಅಧುನಿಕ ಚಿಂತನೆಗಳನ್ನು ಬಂಡವಾಳವಾಗಿಟ್ಟುಕೊಂಡ ಪಾಶ್ಚಿಮಾತ್ಯರು ಅವುಗಳ ಆಸ್ತಿತ್ವವೇ ಇಲ್ಲದ ಪಶ್ಚಿಮೇತರ ರಾಷ್ಟ್ರಗಳ ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆಗಳ, ಅದರಲ್ಲೂ ಉತ್ಪಾದನ ವಿಧಾನಗಳ ಮೇಲೆ ಹತೋಟಿ ಸಾಧಿಸಿದರು. ಇದರ ಪರಿಣಾಮವಾಗಿ ಸಾಮಾನ್ಯಶಕೆ ಹದಿನೆಂಟನೇ ಶತಮಾನದಲ್ಲಿ ಸಾಮ್ರಾಜ್ಯಶಾಹಿ-ವಸಾಹತುಶಾಹಿ ಚಿಂತನೆಗಳು ಚಿಗುರೊಡೆದು ಪ್ರಪಂಚದಾದ್ಯಂತ ವಸಾಹತುಗಳನ್ನು ಸ್ಥಾಪಿಸುವಲ್ಲಿ ಯಶಸ್ವಿಗೊಂಡರು. ಈ ಪ್ರಕ್ರಿಯೆಯಲ್ಲಿ ಬಹುಮುಖ್ಯ ಪಾತ್ರಧಾರಿಗಳಾಗಿ ಕಾಣಿಸಿಕೊಂಡಿದ್ದು ಇಂಗ್ಲೆಂಡ್, ಫ್ರಾನ್ಸ್, ಡೆನ್ಮಾರ್ಕ್, ಪೋರ್ಚುಗಲ್ ಮುಂತಾದವುಗಳು. ಸಾಮಾನ್ಯಶಕೆ ಹದಿನೆಂಟನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಆರಂಭಗೊಂಡ ಕೈಗಾರಿಕಾ ಕ್ರಾಂತಿಯು ಜಗತ್ತಿನಾದ್ಯಂತ ವಸಾಹತುಗಳನ್ನು ಸ್ಥಾಪಿಸುವ ಪಾಶ್ಚಾತ್ಯರ ಪ್ರಯತ್ನಗಳಿಗೆ ನೀರೆರೆಯಿತು. ಇದರ ಪರಿಣಾಮವಾಗಿ ಇಂಗ್ಲೆಂಡಿನ ಉತ್ಪಾದನ ವಿಧಾನಗಳ ಸ್ವರೂಪದಲ್ಲಿ ಬದಲಾವಣೆ ತಂದಿತ್ತಲ್ಲದೇ ಬಂಡವಾಳ ಸಂಗ್ರಹಿಸಿಕೊಡುವಲ್ಲಿ ನಿರ್ಣಾಯಕವೆನಿಸಿಕೊಂಡಿತು. ಈ ನಿಟ್ಟಿನಲ್ಲಿ ವಸಾಹತೀಕರಣಗೊಂಡ ಭಾರತವೂ ಇಂಗ್ಲೆಂಡಿಗೆ

ಬಂಡವಾಳ ಸಂಗ್ರಹಿಸಿ ಕೊಡುವ ಪ್ರಮುಖ ಕೇಂದ್ರವಾಯಿತಲ್ಲದೇ[2] ಸುಮಾರು ಎರಡು ಶತಮಾನಗಳ ಕಾಲ ವಸಾಹತುಶಾಹಿಯ ದಾಸ್ಯದಲ್ಲಿ ನಲುಗಬೇಕಾಯಿತು.

ಸಾಮಾನ್ಯಶಕೆ ಹತ್ತೊಂಬತ್ತನೇ ಶತಮಾನವು ತುಳುನಾಡಿನ ಇತಿಹಾಸದ ಕಾಲಘಟ್ಟದಲ್ಲಿ ಅತ್ಯಂತ ಪ್ರಮುಖ ಹಾಗೂ ನಿರ್ಣಾಯಕ ಸ್ವರೂಪದ ಸಂದರ್ಭವಾಗಿದ್ದು, ಜಗತ್ತಿನಾದ್ಯಂತ ಕಾಣಿಸಿಕೊಂಡ ಪಾಶ್ಚಾತ್ಯರ ಸಾಮ್ರಾಜ್ಯಶಾಹೀ ಸ್ವರೂಪದ ಆಕ್ರಮಣಕಾರೀ ನಿಲುವು ತುಳುನಾಡಿನಲ್ಲಿಯೂ ನೆಲೆ ಸ್ಥಾಪಿಸುವ ಮೂಲಕ ಪ್ರಕಟಗೊಂಡಿತು. ಹೀಗೆ ನೆಲೆ ಸ್ಥಾಪಿಸಿದ ವಸಾಹತುಶಾಹಿಗೆ ಹೊಸತಾಗಿ ಸೇರ್ಪಡೆಗೊಂಡ ಪ್ರದೇಶಗಳ ಬಗ್ಗೆ ಮಾಹಿತಿ ಕಲೆ ಹಾಕುವುದು ಅವಶ್ಯವಿತ್ತು. ಜೊತೆಗೆ ಆಡಳಿತಾತ್ಮಕವಾಗಿ ಹಲವು ಜರೂರಿನ ಮಾಹಿತಿಗಳ ಸಂಗ್ರಹಣೆ ಅದರ ಪ್ರಮುಖ ಕಾರ್ಯಯೋಜನೆಯಾಗಿ, ವಸಾಹತಿನ ಚರಿತ್ರೆಯ ಅಧ್ಯಯನದ ದೃಷ್ಟಿಕೋನವನ್ನು ನಿರ್ಧರಿಸಬೇಕಿತ್ತು. ಹೀಗೆ ವಸಾಹತುಶಾಹಿ ಕೇವಲ ಆಳ್ವಿಕೆಗೆ ಮಾತ್ರವಲ್ಲ ವಸಾಹತಿನ ಕುರಿತಾದ ಜ್ಞಾನಸಂಗ್ರಹವೂ ಅದರ ಜವಬ್ದಾರಿಯಾಗಿತ್ತು. ಈ ಜ್ಞಾನಸಂಗ್ರಹ ವಸಾಹತು ಆಳ್ವಿಕೆಯನ್ನು ಸಮರ್ಥಿಸುವುದಷ್ಟೆ ಅಲ್ಲದೇ ಅದರ ಅಗತ್ಯತೆಯನ್ನು ಬಯಸುತ್ತದೆ. ಆ ಮೂಲಕ ವಸಾಹತನ್ನು ಒಂದು ಮಾದರಿಯಲ್ಲಿ ಪ್ರಸ್ತುತ ಪಡಿಸಲು ಸಹಕಾರಿ.[3]

ವಸಾಹತುಶಾಹಿಗಳಿಗೆ ತಮ್ಮ ಆಡಳಿತದ ನೆಲೆಯನ್ನು ವಿಸ್ತರಿಸುವ ಉದ್ದೇಶವಿದ್ದುದರಿಂದ ಪೂರ್ವದೇಶಗಳ ಜನರ ಸಾಂಸ್ಕೃತಿಕ ವಿಭಿನ್ನತೆಗಳು, ಜೀವನಕ್ರಮ, ಆಚಾರ-ವಿಚಾರ, ಉಡುಗೆ-ತೊಡುಗೆ, ಭಾಷೆ, ಕಂದಾಯ ವ್ಯವಸ್ಥೆ, ಆಸ್ತಿಯ ಹಕ್ಕುಗಳು, ಸಾಂಸ್ಕೃತಿಕ ಜೀವನ, ಅಧ್ಯಾತ್ಮ-ಒಟ್ಟಿನಲ್ಲಿ ವಾರಸುದಾರಿಕೆಯ ಬಗ್ಗೆ ಅಧ್ಯಯನ ಮಾಡುವುದು ಅನಿವಾರ್ಯವಾಯಿತು.[4] ಪ್ರಾನ್ಸಿಸ್ ಬುಖಾನನ ಅಧ್ಯಯನವು ಕುಟುಂಬ, ಗುತ್ತು, ಗ್ರಾಮ, ಮಾಗಣೆ, ಸೀಮೆ, ನಾಡುಗಳನ್ನು ಈಸ್ಟ್ ಇಂಡಿಯಾ ಕಂಪನಿಯ ಭವಿಷ್ಯಕ್ಕನುಗುಣವಾಗಿ ರೂಪಿಸಿಕೊಳ್ಳಲು ಅನುವು ಮಾಡಿಕೊಟ್ಟಿತ್ತಲ್ಲದೇ ವಸಾಹತುಶಾಹಿಯ ನೀತಿಗಳೆಲ್ಲವೂ ಈ ಹಂತದಲ್ಲಿ ಲಾಭ ಹೆಚ್ಚಳದ ಗುರಿಯನ್ನು ಹೊಂದಿತು. ಹೀಗೆ ತುಳುನಾಡಿನಲ್ಲಿ ವಸಾಹತುಶಾಹಿಯ ಜ್ಞಾನಸಂಗ್ರಹ ಅಧಿಕಾರಯುಕ್ತವಾಗಿ ಬುಖಾನನ್ ಕಲೆ ಹಾಕಿದ್ದರೂ, ಅದಾಗಲೇ ಈ ಪ್ರದೇಶಕ್ಕೆ ಸಂಬಂಧಿಸಿದಂತಹ ಮಾಹಿತಿಗಳು ಯುರೋಪಿನ ಪ್ರವಾಸಿಗರಿಂದ, ಕ್ರೈಸ್ತ ಮತಪ್ರಚಾರಕರಿಂದ ಸಂಗ್ರಹಿತಗೊಂಡಿದ್ದವು.[5] ಜೊತೆಗೆ ಈ ಸಂದರ್ಭದಲ್ಲಿ ವಸಾಹತನ್ನು ಒಳಗೊಂಡಂತೆ ಜಗತ್ತಿನ ಹಲವು ರಾಷ್ಟ್ರಗಳ ಹಾಗೂ ವ್ಯವಸ್ಥೆಗಳ ಕಲ್ಪನೆಗಳು ಅದರ ಕಣ್ಣ ಮುಂದಿದ್ದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ವಸಾಹತಿನ ಬಗೆಗಿನ ಗ್ರೀಕರ ಅತಿರಂಜಿತ ಚಿತ್ರಣಗಳು, ಅರಬ್ಬರ ಶ್ರೇಣಿಕೃತ ವ್ಯವಸ್ಥೆಯ ವಿಶ್ಲೇಷಣೆ, ಒರಿಯಂಟಲ್‌ಗಳ ಬದಲಾಗದ ಸಮಾಜವೆಂಬ ತೀರ್ಮಾನ, ಪಾಶ್ಚಾತ್ಯೇತರರು ಅನಾಗರೀಕರೆಂಬ ಮತಪ್ರಚಾರಕರ ನಿಲುವು ಮತ್ತು ಅವರು ಸೃಷ್ಟಿಸಿದ ಕಲ್ಪನೆಯ ಸಮುದಾಯ, ಸಮಾಜಗಳು,

ಬಂಡವಾಳಶಾಹಿ ವ್ಯಾಪಾರಿ ಕ್ರಮ ಮುಂತಾದವುಗಳು. ಈ ದೃಷ್ಟಿಕೋನಗಳು ತುಳುನಾಡಿನ ಜನಸಮುದಾಯ, ಸಾಮಾಜಿಕ, ಧಾರ್ಮಿಕ ಅಂತಸತ್ವ ಮತ್ತು ಸಾಂಸ್ಕೃತಿಕ ನೆಲೆಗಳ ಹಿನ್ನೆಲೆಗಳೆಲ್ಲವನ್ನೂ ವಿಚಿತ್ರ ಸರಕುಗಳನ್ನಾಗಿಸಿದ್ದವು. ಮಾತ್ರವಲ್ಲ ಇವೆಲ್ಲವೂ ವಸಾಹತುಶಾಹಿಗಳ ದಾಖಲೆ ಮತ್ತು ಪತ್ರಗಳಲ್ಲಿ ವಿಚಿತ್ರ ವಿವರಣೆಗಳಾಗಿಯೂ ಕೂಡಾ ದಾಖಲಿಸಲ್ಪಟ್ಟಿದ್ದವು. ಹೀಗೆ ವಸಾಹತಿನ ಬಗೆಗಿನ ಜ್ಞಾನಸಂಗ್ರಹದ ಅಧ್ಯಯನಗಳು ಆರಂಭದಲ್ಲಿ ವಸಾಹತುಶಾಹಿಗೆ ಮಾರ್ಗದರ್ಶಿಯಾಗಿ ಅಧಿಕಾರದ ನೆಲೆಗಳನ್ನು ಸಮರ್ಥಿಸಿಕೊಳ್ಳಲು ಅವಕಾಶ ನೀಡಿದರೇ, ರಾಜಕೀಯಾಧಿಕಾರದ ಬೇರು ಗಟ್ಟಿಗೊಳ್ಳುತ್ತಿದ್ದಂತೆಯೇ ವಸಾಹತಿನ ಬಗೆಗಿನ ಜ್ಞಾನಸಂಗ್ರಹಗಳು ವಿರೂಪಗೊಳ್ಳಲ್ಪಟ್ಟು ಮೂಲ ವಿಚಾರಧಾರೆಗಳು ವಿಸ್ಮೃತಿಗೆ ಒಳಪಟ್ಟವು.[6] ಇದರ ಪರಿಣಾಮವಾಗಿ ವಸಾಹತುಶಾಹಿಯ ಸಂಸ್ಕೃತಿ, ಭಾಷೆ, ಆಡಳಿತ ಮುಂತಾದವುಗಳು ಪೂರ್ವದ ಪ್ರಪಂಚಕ್ಕೆ ಮಾದರಿ ಮತ್ತು ಶ್ರೇಷ್ಠ ಎಂಬ ಚಿಂತನೆಗಳು ಪ್ರಚಾರಕ್ಕೆ ಬಂದು ವಸಾಹತಿನ ಪಾರಂಪರಿಕ ವ್ಯವಸ್ಥೆಗಳು ಕೀಳು ಮಟ್ಟದವುಗಳೆಂದು ಸಾರಲ್ಪಟ್ಟು ವಸಾಹತಿನ ಮೂಲಚೌಕಟ್ಟುಗಳು ನಿಧಾನವಾಗಿ ಬದಲಾವಣೆಗೆ ತೆರೆದುಕೊಂಡಿತು. ಉದಾಹರಣೆಗೆ ವಸಾಹತಿನ ಸಮುದಾಯ, ಜಾತಿ, ಧಾರ್ಮಿಕ ನಂಬಿಕೆ, ರೀತಿ-ರಿವಾಜು ಮುಂತಾದ ಕ್ಷೇತ್ರಗಳಲ್ಲಿ ಭಿನ್ನತೆ ಮೂಡಿಸಿ ಪರಂಪರೆಗಳನ್ನು ವಿರೂಪಕ್ಕೊಳಪಡಿಸಿರುವ ಪ್ರಯತ್ನ. ಈ ವಿವರಗಳು ವಸಾಹತುಶಾಹಿಯ ಆಡಳಿತಾತ್ಮಕ ದಾಖಲೆ, ಮತಪ್ರಚಾರಕರ ವರದಿ ಹಾಗೂ ಸಾಹಿತ್ಯ ಮುಂತಾದವುಗಳಲ್ಲಿ ಪರಿಶೀಲಿಸಬಹುದು.[7]

ತುಳುನಾಡಿನ ಸಾಂಪ್ರದಾಯಿಕ ಬದುಕು ಮತ್ತು ಭೌಗೋಳಿಕ ಲಕ್ಷಣಗಳು ನಾಗರೀಕತೆಯ ವಿಕಾಸಕ್ಕೆ ಅವಕಾಶ ನೀಡದಿರುವುದರಿಂದ ವಸಾಹತು ಅಧುನಿಕ ಸಮಾಜವಾಗಿ ತನ್ನನ್ನು ತಾನೇ ಪರಿವರ್ತಿಸಿಕೊಳ್ಳುವ ಸಾಮರ್ಥ್ಯ ಪಡೆದುಕೊಂಡಿಲ್ಲ. ಆದ್ದರಿಂದ ಈ ಕಾರ್ಯವನ್ನು ವಸಾಹತುಶಾಹಿ ಆಡಳಿತ ಅತೀ ಜರೂರಾಗಿ ಕೈಗೆತ್ತಿಕೊಳ್ಳಬೇಕಾಗಿದ್ದು ಅದು ಅವರ ಪ್ರಥಮ ಆಧ್ಯತೆಯಾಗಿತ್ತು.[8] ವಸಾಹತುಶಾಹಿ ತನ್ನ ಆಡಳಿತದ ಮಾದರಿಯ ಅಗತ್ಯತೆಯ ಬಗ್ಗೆ ಒತ್ತಡ, ಅದರ ಆಡಳಿತ ಪ್ರಗತಿ ಮತ್ತು ಶಾಂತಿ ಸಮೃದ್ಧತೆಯ ಸಂಕೇತ ಎಂಬುವುದಾಗಿ ತೋರ್ಪಡಿಸುವ ಪ್ರಯತ್ನ ಮುಂತಾದವುಗಳು ವಸಾಹತುಶಾಹಿಯ ನೆಲೆಗಳನ್ನು ವಿಸ್ತರಿಸುವಲ್ಲಿ ಮುನ್ನುಡಿಸಿತು. ವಸಾಹತುಶಾಹಿ ಈ ಎಲ್ಲದವುಗಳ ಜವಬ್ದಾರಿ ವಹಿಸಿಕೊಂಡ ಫಲವಾಗಿ ತುಳುನಾಡಿನಲ್ಲಿರುವ ನೈಸರ್ಗಿಕ ಸಂಪತ್ತಿನ ದೋಚುವಿಕೆ ಕ್ರಮಬದ್ಧಗೊಂಡಿತ್ತಲ್ಲದೇ ಇಲ್ಲಿನ ಆಡಳಿತ ಲಾಭ ತರುವ ದಂಧೆಯಾಯಿತು. ಮುಂದುವರೆದು ತುಳುನಾಡಿನ ಪ್ರತಿಯೊಂದು ವಸ್ತುಗಳು ವ್ಯಾಪಾರಿ ಮೌಲ್ಯಗಳನ್ನು ಒಳಗೊಂಡ ಸರಕುಗಳಾಗಿ ಪರಿಗಣಿಸಲ್ಪಟ್ಟವು.[9] ಪಶ್ಚಿಮ ರಾಷ್ಟ್ರಗಳ ವಸಾಹತುಗಾರರು ಪೂರ್ವದ ಕೃಷಿ ಉತ್ಪಾದನೆ, ಸಾಂಪ್ರದಾಯಿಕ ಕೃಷಿ

ಸಾಮ್ರಾಜ್ಯಶಾಹಿಯ ಅಭಿಲಾಷೆಗಳನ್ನು ಖಂಡಿತ ಈಡೇರಿಸಬಲ್ಲದು. ತುಳುನಾಡು ಕೃಷಿಗೆ ಅನುಕೂಲವಾಗಿರುವುದರಿಂದ ಬಂಡವಾಳ ತೊಡಗಿಸದಿದ್ದರೂ ಲಾಭ ಪಡಕೊಳ್ಳಬಹುದೆಂಬ ಆಶಯ ಮುಂತಾದ ವಸಾಹತುಶಾಹಿ ಸ್ವಹಿತಾಸಕ್ತಿಗಳು ಅದರ ಭವಿಷ್ಯದ ಯೋಜನೆಗಳಿಗೆ ಅನುಗುಣವಾಗಿತ್ತು.[10] ಒಟ್ಟಾರೆ ವಸಾಹತುಶಾಹಿಯ ಚಿಂತನೆಗಳು ಅದರ ಉದ್ದೇಶಗಳಿಗೆ ಬಂಡವಾಳ ಸೃಷ್ಟಿಸಿ, ವಸಾಹತುವನ್ನು ಕೇಂದ್ರವಾಗಿಸಿ ಭವಿಷ್ಯದ ಕಾರ್ಯಯೋಜನೆಗಳ ಸಫಲತೆಗೆ ಸರ್ವಪ್ರಯತ್ನಗಳನ್ನು ಮಾಡಿತು.

ವಸಾಹತುಶಾಹಿಯ ನೂತನ ಕೃಷಿ, ಅರಣ್ಯ ಹಾಗೂ ಕೈಗಾರಿಕ ನೀತಿಗಳು ತುಳುನಾಡನ್ನು ಜಾಗತಿಕ ಮಾರುಕಟ್ಟೆಯ ಕೇಂದ್ರವಾಗಿಸಿದ್ದರಿಂದ ಪಾರಂಪರಿಕವಾಗಿ ಕಾಯ್ದುಕೊಂಡಿದ್ದ ಈ ಭಾಗದ ಕೃಷಿ ಆಧಾರಿತ ಪೂರ್ವದ ಚಿಂತನೆಗಳು ಬದಲಾದವು. ತುಳುನಾಡಿನ ಕೃಷಿ ಆಧಾರಿತ ವ್ಯವಸ್ಥೆಯಲ್ಲಿ ಮಾನವ ಪ್ರಕೃತಿಯ ಆಧೀನಕೊಳಪಟ್ಟರೇ ಪಶ್ಚಿಮದ ಬಂಡವಾಳ ಆಧಾರಿತ ವ್ಯವಸ್ಥೆಯಲ್ಲಿ ಪ್ರಕೃತಿ ಮಾನವನ ಅಧೀನಕ್ಕೆ ಒಳಪಡುವ ಪ್ರಕ್ರಿಯೆ. ವಸಾಹತುಪೂರ್ವದಲ್ಲಿ ದೈವಿಕ ನೆಲೆಗಳಲ್ಲಿ ರಕ್ಷಿಸಲ್ಪಟ್ಟಿದ್ದ ಈ ಪ್ರದೇಶದ ಕಾಡು, (ದೇವರ ಕಾಡು, ಕಾಯ್ದಿಟ್ಟ ಕಾಡು) ಬೆಟ್ಟಗುಡ್ಡ, ಹಾಗೂ ಇತರ ಪ್ರದೇಶಗಳು ಹೊಸದಾಗಿ ಸರ್ವೇ ಹಾಗೂ ಭೂಕಂದಾಯ ನಿಗದೀಕರಣ ಪ್ರಕಿಯೆಗೆ ಒಳಪಟ್ಟು ಸರಕುಗಳಾಗಿ ಆರ್ಥಿಕ ಮೌಲ್ಯೀಕರಣಕ್ಕೆ ವಿಕ್ರಯಿಸಲ್ಪಟ್ಟವು. ಮಾನವ ಪರಿಸರದಂತೆ ಭೌಗೋಳಿಕ ಪರಿಸರವೂ ಬಂಡವಾಳದ ಆಧೀನಕ್ಕೆ ಬಂದು ಅಭಿವೃದ್ಧಿಯ ಹೆಸರಿನಲ್ಲಿ ಹಂತ-ಹಂತವಾಗಿ ವಿಘಟನೆಗೊಂಡಿತು.

ವಸಾಹತುಶಾಹಿಯ ರಾಜಕೀಯಾಧಿಕಾರದ ಆರಂಭದಲ್ಲಿ ಸರ್ವೇಕ್ಷಣೆಗಾಗಿ ನಿಯುಕ್ತಗೊಂಡ ಪ್ರಾನ್ಸಿಸ್ ಬುಖಾನನ್ ಕೆನರಾದ ಮುಖ್ಯವಾಗಿ ತುಳುನಾಡಿನ ಬೆಟ್ಟಗುಡ್ಡಗಳು ಖಾಸಗಿ ಆಸ್ತಿ ನಿಯಮದಡಿ ಬರುವುದಿಲ್ಲವಾದ್ದರಿಂದ ಕೃಷಿ ಮಾಡುವವರು ಈ ಸರಕಾರಿ ಭೂಮಿಗೆ ತೆರಿಗೆ ಕಟ್ಟಬೇಕು ಎಂದು ವರದಿಸಿದ್ದನು.[11] ಮುಂದೊಂದು ಬಾರಿ ಈ ವರದಿ ಸರಕಾರಿ ಆಜ್ಞೆಯ ಮೂಲಕ ಕಾನೂನು ರೂಪಕ್ಕೆ ಬಂದು ವಸಾಹತಿನ ಭೂಮಿಯನ್ನು ಮೌಲ್ಯ ಇರುವ ಸರಕಾಗಿಸಿತು. ಬಂಡವಾಳ ಕೇಂದ್ರಿತ ಅರ್ಥವ್ಯವಸ್ಥೆ ಜಾರಿಗೊಂಡ ಮೇಲೆ ಕೃಷಿಯನ್ನು ಲಾಭದಾಯಕ ಉದ್ದಿಮೆಯನ್ನಾಗಿ ಪರಿವರ್ತಿಸುವ ಪ್ರಯತ್ನಗಳು ನಡೆದವು. ಹಳೆಯ ಕೃಷಿ ಪದ್ಧತಿಯನ್ನು ಸಾಂಪ್ರದಾಯಿಕ ಎಂದು ಕರೆದು ವಾಣಿಜ್ಯ ಬೆಳೆಗಳನ್ನು ಬೆಳೆಯುವುದನ್ನು ಅಧುನಿಕ ಕೃಷಿ ಪದ್ದತಿ ಎಂಬುವುದಾಗಿ ಕರೆಯಲಾಯಿತು. ವಸಾಹತುಶಾಹಿಯ ಈ ಬಗೆಯ ಭೂಮಿಯ ಮೌಲ್ಯೀಕರಣ ನಿಸರ್ಗದೊಂದಿಗೆ ಪೂಜ್ಯ ಭಾವನೆಯನ್ನು ಹೊಂದಿದ್ದ ತುಳುವರನ್ನು ಗೌಣಗೊಳಿಸಿತು.

ಕುಮೇರಿ, ಕುಮ್ಕಿ ಭೂಮಿಯ ಕೃಷಿಯನ್ನು ಅವಲಂಬಿಸಿದ್ದ ಸಮುದಾಯಗಳಿಗೆ ಜೀವನಾಧಾರವಾಗಿದ್ದ ಭೂಮಿ ವಸಾಹತುಶಾಹಿ ಕಾನೂನಿನಡಿಯಲ್ಲಿ ನಿರ್ಬಂಧಕ್ಕೊಳಪಡಿಸಿ ದುಡಿಮೆಯನ್ನು ನಿರಾಕರಿಸಿತು. ಕುಮೇರಿ ಬೇಸಾಯ ತುಳುನಾಡಿನ ಕೆಲಭಾಗಗಳಲ್ಲಿ 8–20 ವರ್ಷಗಳಿಗೊಮ್ಮೆ ಮಾಡುವ ಬೇಸಾಯ ಪದ್ಧತಿಯಾಗಿದ್ದು, ತುಳುನಾಡಿನ ಉತ್ತರಭಾಗದಲ್ಲಿ ಮರಾಠಿ ನಾಯ್ಕರು, ದಕ್ಷಿಣಭಾಗದಲ್ಲಿ ಮಲೆಕುಡಿಯ ಜನಾಂಗದವರು ಈ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದರು.[12] ಕೃಷಿ ಭೂಮಿಗೆ 100 ಯಾರ್ಡುಗಳ ಅಂತರದಲ್ಲಿ ತಾಗಿಕೊಂಡಿರುವ ಅರಣ್ಯ ಭೂಮಿಯನ್ನು ಕುಮ್ಕಿ ಭೂಮಿ ಎಂದು ಕರೆಯುತ್ತಾರೆ. ವಸಾಹತುಶಾಹಿಗಳ ದಾಖಲೆಗಳ ಪ್ರಕಾರ ಕುಮೇರಿ ಬೇಸಾಯಕ್ಕೆ ಒಳಪಡುವ ಪ್ರದೇಶಗಳಲ್ಲಿ ಸರಕಾರಕ್ಕೆ ತೆರಿಗೆ ಕಟ್ಟದೇ ಬೆಲೆಬಾಳುವ ಮರಗಳನ್ನು ನಾಶಮಾಡುವುದು ಅಪರಾಧ ಮಾತ್ರವಲ್ಲ ಆರ್ಥಿಕ ಅಪವ್ಯಯಕ್ಕೆ ಕಾರಣವಾಗುತ್ತದೆ ಎಂಬ ವಾದವನ್ನು ಮಂಡಿಸಲಾಯಿತು. ಸಾಮಾನ್ಯಶಕೆ 1822ರಲ್ಲಿ ಅರಣ್ಯಗಳ ಸರ್ವೇಕ್ಷಣೆ ಪ್ರಾರಂಭಗೊಂಡ ನಂತರ ಮೂಲಪಟ್ಟಾ ಇರುವವರಿಗೆ ಬಂಜರು ಅರಣ್ಯ ಭೂಮಿಯ ಮೇಲೆ ಅಧಿಕಾರವನ್ನು ನೀಡಲಾಯಿತಾದರೂ 1844ರಲ್ಲಿ ಅದನ್ನು ಹಿಂತೆಗೆದುಕೊಳ್ಳಲಾಯಿತು. 1822ರಲ್ಲಿ ಕುಮ್ಕಿ ಭೂಮಿಯೂ ಪರಿಗಣನೆಗೆ ಒಳಪಟ್ಟರೆ 1839ರಲ್ಲಿ ಅದನ್ನು ಕೈಬಿಡಲಾಯಿತು. ಇದಲ್ಲದೇ ಅರಣ್ಯ ಭೂಮಿಯ ಮೇಲಿನ ಕೃಷಿಕರ ಖಾಸಗಿ ಒಡೆತನವನ್ನು ನಿರಾಕರಿಸಿತು. 1850ರಲ್ಲಿ ಕಾನೂನಿನ ಆಧಾರದಲ್ಲಿ ಮೌಲ್ಯಯುಕ್ತ ಮರಗಳನ್ನು ರಕ್ಷಿಸುವ ಕ್ರಮ ಕೈಗೊಳ್ಳಲಾಯಿತು. ಬುಡಕಟ್ಟುಗಳ ಜೀವನಾಧಾರವಾಗಿದ್ದ ಕೊಟ್ಟು–ಕೊಡು ಕೃಷಿ ವ್ಯವಸ್ಥೆಯ ಮೇಲೆ ನಿಗಾ ವಹಿಸಿದ ವಸಾಹತುಶಾಹಿ 1860ರಲ್ಲಿ ಕುಮೇರಿ ಕೃಷಿಯನ್ನು ನಿರ್ಬಂಧಕ್ಕೆ ಒಳಪಡಿಸಿತು. 1874ರಲ್ಲಿ ಅರಣ್ಯದ ಮೇಲಿನ ಖಾಸಗಿ ಒಡೆತನದ ಹಕ್ಕನ್ನು ಕಾಯಿದೆಯಡಿಯಲ್ಲಿ ವಜಾ ಮಾಡಿತು. 1874ರ ಕಾಯಿದೆ ಅರಣ್ಯ ಸರಕಾರದ ಸೊತ್ತು ಎಂಬುವುದಾಗಿ ಘೋಷಿಸಿತು. 1000 ಸ್ಕ್ವೇರ್ ಮೈಲಿಯ ವಿಶಾಲ ಅರಣ್ಯವನ್ನು ಕಾಯ್ದಿಟ್ಟ ಅರಣ್ಯವೆಂದು ಘೋಷಿಸಿ ಬೆಲೆಬಾಳುವ ಮರಗಳನ್ನು ಕಾಯ್ದೆಯಡಿ ತಂದು ರಕ್ಷಿಸುವ ನಾಟಕವಾಡಿತು. ವಾಸ್ತವವಾಗಿ ವಸಾಹತುಶಾಹಿಗೆ ತುಳುನಾಡಿನ ಫಲವತ್ತಾದ ಭೂಮಿ, ಶ್ರೀಮಂತ ಅರಣ್ಯ ಸಂಪತ್ತು ಮುಂತಾದವುಗಳನ್ನು ಭೌತಿಕವಾಗಿ ಸಂಪತ್ತಿನ ಖಜಾನೆಯಾಗಿ ರೂಪುಗೊಳಿಸುವ ಸುಪ್ತ ಉದ್ದೇಶವಿತ್ತು. ವಸಾಹತುಶಾಹೀ ಕಾಡನ್ನು ವಾಸಸ್ಥಳವೆಂದು ಪರಿಗಣಿಸದೇ ಅವುಗಳನ್ನು ವಾಣಿಜ್ಯ ಉತ್ಪನ್ನಗಳ ಮೂಲಗಳೆಂದು ಪರಿಗಣಿಸಲ್ಪಟ್ಟಾಗ ಅದನ್ನು ನಂಬಿಕೊಂಡಿದ್ದಂತಹ ಸಮುದಾಯಗಳು ವಸಾಹತುಶಾಹಿಯೊಡನೆ ಒಪ್ಪಂದ ಇಲ್ಲವೇ ಘರ್ಷಣೆಯನ್ನು ಮಾಡಬೇಕಾಯಿತು. ಪಾರಂಪರಿಕವಾಗಿ ಸೌಲಭ್ಯಗಳನ್ನು ಅನುಭವಿಸುತ್ತಿದ್ದ ಸಮುದಾಯಗಳು ಹಾಗೂ ಬೆಟ್ಟಗಳಲ್ಲಿ ವಾಸಮಾಡುತ್ತಿದ್ದ ಬುಡಕಟ್ಟುಗಳು

ವಸಾಹತುಶಾಹಿಯ ದೋಚುವಿಕೆಗೆ ಅಡ್ಡಿಯಾಗಿದ್ದರು. ಅಡ್ಡಿಯನ್ನು ಕಾಯಿದೆಗಳ ಮೂಲಕ ನಿವಾರಿಸಿ ಸಂಪತ್ತನ್ನು ಅನುಭವಿಸಲು ಉಪಯುಕ್ತ ಕ್ರಮಗಳನ್ನು ಜಾರಿಗೆ ತಂದು ಘೋಷಿತ ನಿರ್ಬಂಧವನ್ನು ವಿಧಿಸಲಾಯಿತು. ಕೃಷಿಯ ವಾಣಿಜ್ಯೀಕರಣ, ಅರಣ್ಯ ಕಾಯಿದೆಗಳನ್ನು ಜಾರಿಗೆ ತಂದು ಬುಡಕಟ್ಟು ಜನರು ವಾಸವಾಗಿದ್ದ ಕಾಡುಪ್ರದೇಶಗಳನ್ನು ಕಾನೂನಿನ ಹಿಡಿತಕ್ಕೆ ತಂದಿರುವುದು ವಸಾಹತುಶಾಹಿಯ ಶೋಷಣೆಯ ಮುಖಗಳು.[13]

ವಸಾಹತುಶಾಹಿ ಕಾನೂನುಗಳನ್ನು ಸಮರ್ಥಿಸಿದವುಗಳು ಅಧಿಕಾರವನ್ನು ಭದ್ರಪಡಿಸಿಕೊಂಡರೆ, ವಿರೋಧಿಸಿದವುಗಳು ವಸಾಹತುಶಾಹಿಯ ವ್ಯವಸ್ಥೆಯಲ್ಲಿ ನೇಪಥ್ಯಕ್ಕೆ ಸರಿದು ನಾಶದಂಚಿಗೆ ತಲುಪಿದವು. ಹೀಗೆ ವಸಾಹತುಶಾಹಿಯ ಕಾನೂನು-ಕಾಯಿದೆಗಳು ತುಳುವರು ಕೃಷಿ ಭೂಮಿಯೊಂದಿಗೆ ಇಟ್ಟುಕೊಂಡಿದ್ದ ಅವಿನಾಭಾವ ಸಂಬಂಧವನ್ನು ನಾಶಪಡಿಸಿ ಪಾರಂಪರಿಕ ಕೃಷಿ ವಾರಸುದಾರಿಕೆಯನ್ನು ಗೌಣಗೊಳಿಸಿತು. ಜೊತೆಗೆ ಕೃಷಿಯ ವಾಣಿಜ್ಯಕರಣದ ಪ್ರಕ್ರಿಯೆ ತುಳುವರ ಜನಜೀವನದ ಮೇಲೆ ಮಹತ್ತರವಾದ ಪರಿಣಾಮಗಳನ್ನು ಬೀರಿತು. ಕೃಷಿ ಸಮಾಜದೊಳಗಿನ ಅಂತರ್‌ಸಂಬಂಧಗಳು ಏರುಪೇರಾಗತೊಡಗಿದವು. ವಾಣಿಜ್ಯ ಬೆಳೆಗಳನ್ನು ಬೆಳೆಯಬೇಕಾದ ಸಂದರ್ಭಗಳು ಎದುರಾದಾಗ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಸಂತ್ರಸ್ತಗೊಂಡ ಸಮುದಾಯಗಳು ಕೃಷಿಭೂಮಿಯ ಮೇಲೆ ತಮಗಿದ್ದ ಅಧಿಕಾರವನ್ನು ಕಳೆದುಕೊಂಡಿದ್ದರಿಂದ ಪಾರಂಪರಿಕ ಕೃಷಿ ಜೀವನ ನಡೆಸುವ ಹಕ್ಕು ಮತ್ತು ಅಧಿಕಾರವನ್ನು ಮರಳಿ ಪಡೆಯಲು ಹೋರಾಟ, ಪ್ರತಿರೋಧವನ್ನು ಮಾಡಬೇಕಾಯಿತು. ಈ ರೀತಿಯ ಉದಾಹರಣೆಗಳು ತುಳುನಾಡಿನ ಚರಿತ್ರೆಯಲ್ಲಿ ಬಹಳಷ್ಟು ದಾಖಲುಗೊಂಡಿವೆ.[14]

ವಸಾಹತುಶಾಹಿ ವ್ಯವಸ್ಥೆಗಳಲ್ಲಾದ ಈ ಬದಲಾವಣೆ ವಸಾಹತಿನ ಕೃಷಿ ಆದಾಯದ ಮೇಲಿನ ಅತಿಯಾದ ಅವಲಂಬಿಕೆಗೆ ಅವಕಾಶ ಮಾಡಿತು. ಅಧಿಕ ಭೂಕಂದಾಯ ಬೇಡಿಕೆಯಿಂದಾಗಿ ಭೂಮಾಲಿಕತ್ವದ ಬೆಳವಣಿಗೆ, ಹೆಚ್ಚುತ್ತಿದ್ದ ಸಾಲಗಳು, ಅದರೊಂದಿಗೆ ಬೆಳೆಗಾರರ ಬಡತನದ ಕಾರಣದಿಂದಾಗಿ ವಸಾಹತಿನ ಕೃಷಿ ವ್ಯವಸ್ಥೆ ನಿಂತ ನೀರಾಗಲು ಆರಂಭಿಸಿತು. ಕೃಷಿ ಚಟುವಟಿಕೆಗಳು ಕ್ಷೀಣಿಸತೊಡಗಿದ ಪರಿಣಾಮವಾಗಿ ಭೂಮಿ ಬಂಜರುಗೊಂಡು ಅತ್ಯಂತ ಕಡಿಮೆ ಬೆಳೆಯನ್ನು ಬೆಳೆಯಲಾಯಿತು.[15] ವಸಾಹತುಪೂರ್ವದಲ್ಲಿ ಉದ್ಯೋಗವನ್ನು ನೆಚ್ಚಿಕೊಂಡಿದ್ದ ಸಮುದಾಯಗಳು ಉದ್ಯೋಗ ವಂಚಿತವಾಯಿತು ಮಾತ್ರವಲ್ಲ ಕೃಷಿ ಅವಲಂಬಿತ ಧಾರ್ಮಿಕ, ಸಾಂಸ್ಕೃತಿಕ ಚೌಕಟ್ಟುಗಳು ನಿಧಾನವಾಗಿ ಶಿಥಿಲಗೊಳ್ಳಲು ಪ್ರಾರಂಭವಾಯಿತು. ಕುಟುಂಬ ವ್ಯವಸ್ಥೆ ಪ್ರಾಮುಖ್ಯತೆಯನ್ನು ಕಳೆದುಕೊಂಡವು. ವಾರಸುದಾರಿಕೆಯ ಸ್ತರಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡು, ಅದನ್ನಾಧರಿಸಿದ ಸಮುದಾಯಗಳು ವಿಘಟನೆಗೊಳ್ಳಲು ಆರಂಭಿಸಿದವು.[16]

ಸರ್ಕಾರ ಮತ್ತು ಭೂಮಾಲಿಕರಿಗೆ ಬೆಳೆಗೆ ಸಮಾನವಾದ ಗೇಣಿ ಕೊಡಬೇಕಾದ ಕೃಷಿಕ ತನ್ನ ಕೃಷಿ ಭೂಮಿಯನ್ನು ಅಭಿವೃದ್ಧಿ ಮಾಡಲು ಯಾವುದೇ ಸಹಾಯ ಇಲ್ಲದ ಕಾರಣ ಅವನು ಕೃಷಿ ಮಾಡುತ್ತಿದ್ದ ಭೂಮಿಯನ್ನು ಸಹ ತನ್ನ ಸ್ವಂತ ಆಸ್ತಿಯನ್ನಾಗಿಸಲು ಸಾಧ್ಯವಿರಲಿಲ್ಲ. ಕೃಷಿಯ ಅಭಿವೃದ್ಧಿಯಿಂದ ದೊರೆಯಬಹುದಾದ ಅನುಕೂಲದ ಬಹುಮುಖ್ಯ ಭಾಗವು ಗೈರುಹಾಜರಿಯ ಭೂಮಾಲಕ ಹಾಗೂ ಹಣ ನೀಡಿಕೆದಾರನ ಖಜಾನೆಗೆ ಹೋಗಿ ಸೇರುತ್ತಿತ್ತು.[17] ವಸಾಹತುಪೂರ್ವದಲ್ಲಿ ಅಧಿಕಾರ ನಡೆಸಿದ್ದ ಬ್ರಾಹ್ಮಣ, ಜೈನ, ಒಕ್ಕಲುಗಳು ವಸಾಹತುಶಾಹಿ ಕಾಲದಲ್ಲೂ ಅಧಿಕಾರವನ್ನು ಅನುಚಾನವಾಗಿ ಮುಂದುವರೆಸಿದ್ದಲ್ಲದೇ, ಮಠ, ಧಾರ್ಮಿಕ ಸಂಸ್ಥೆ ಮುಂತಾದವುಗಳ ಮೂಲಕ ಗೈರುಹಾಜರಿಯ ಭೂಮಾಲಕರಾಗಿ ಅಧಿಕಾರ ನಡೆಸಿದ್ದರು. ಉದಾಹರಣೆಗೆ ಎಡನೀರು ಮಠದ ವ್ಯಾಪ್ತಿಯಲ್ಲಿ ಸಾವಿರಾರು ಎಕರೆ ಭೂಮಿ ರೈತರಿಗೆ ಗೇಣಿ ರೂಪದಲ್ಲಿ ವ್ಯವಸಾಯಕ್ಕೆ ಅನುಕೂಲ ಮಾಡಿ ಗೈರು ಹಾಜರಿಯ ಭೂಮಾಲಕ ಸಂಸ್ಥೆಯಾಗಿ ಕಾರ್ಯನಿರ್ವಹಿಸಿರುವುದು. ಈ ಸಂಸ್ಥೆ ಸುಮಾರು 11 ಹಳ್ಳಿಗಳಲ್ಲಿ 348 ಎಕರೆ ಗದ್ದೆ, 114 ಎಕರೆ ತೋಟ, 216 ಎಕರೆ ಒಣಭೂಮಿಯ ಮಾಲಕನಾಗಿತ್ತು. ಇದೇ ತೆರನಾಗಿ ಕಾಸರಗೋಡಿನ ಅನಂತೇಶ್ವರ ದೇವಸ್ಥಾನವು 24 ಹಳ್ಳಿಗಳಲ್ಲಿ ಭೂಮಿಯ ಒಡೆತನವನ್ನು ಹೊಂದಿತ್ತು. ವರ್ಕಾಡಿ ಗ್ರಾಮದ ಕೂಟತ್ತಾಜೆಯ ಉಳ್ಳಾಲ್ತಿ ದೈವಸ್ಥಾನ ತನ್ನ ಧಾರ್ಮಿಕ ಸರಹದ್ದಿಗೆ ಒಳಪಟ್ಟ ಕೃಷಿಭೂಮಿಯನ್ನು ಹೊಂದುವ ಮೂಲಕ ಆ ಭಾಗದ ಭೂಒಡೆತನವನ್ನು ಹೊಂದಿತ್ತು. ಮಾತ್ರವಲ್ಲ ಹಲವಾರು ಮನೆತನಗಳು ಗೇಣಿಯ ರೂಪದಲ್ಲಿ ಉಳ್ಳಾಲ್ತಿಯ ಭೂಮಿಯನ್ನು ಉಪಭೋಗಿಸಿಕೊಂಡಿರುವುದು ಸಮರ್ಥನೆಗೆ ಒಳಪಡುವ ವಿಚಾರ.[18] ಇದಲ್ಲದೇ ಸರಕಾರಕ್ಕೆ ತೆರಿಗೆ ನೀಡಲು ತೊಂದರೆಯಾದಾಗ ಕೃಷಿ ಭೂಮಿಯನ್ನು ಕೂಟತ್ತಾಜೆ ಉಳ್ಳಾಲ್ತಿ ಭಂಡಾರ ಇಲ್ಲವೇ ಬಂಗ್ರ ಮಂಜೇಶ್ವರದ ಮದನಂತೇಶ್ವರ ದೇವಸ್ಥಾನಕ್ಕೆ ಅಡವಿಟ್ಟ ಘಟನೆಗಳನ್ನು, ಅಳಿಯಸಂತಾನ ಕಾನೂನಿನ ವ್ಯಾಪ್ತಿಗೆ ಒಳಪಟ್ಟ ತರವಾಡು ಭೂಮಿಯನ್ನು ರೂಪಾಯಿ ಹತ್ತಕ್ಕೆ ಅಡವಿಟ್ಟ ವಿಚಾರಗಳನ್ನು ಕಾರ್ಯಕ್ಷೇತ್ರದಲ್ಲಿ ದಾಖಲಿಸಲಾಗಿದೆ. ಈ ವಿಚಾರಗಳನ್ನು ಪರಿಶೀಲನೆಗೆ ಒಳಪಡಿಸಿದಾಗ ವಸಾಹತುಶಾಹಿ ಸಂದರ್ಭದಲ್ಲೂ ದೈವಸ್ಥಾನ-ದೇವಸ್ಥಾನಗಳು ಆರ್ಥಿಕವಾಗಿ ಸ್ಥಿತಿವಂತ ಆಗಿದ್ದವಲ್ಲದೇ, ಅದರೊಂದಿಗೆ ವ್ಯವಹರಿಸಿದ್ದ ವಸಾಹತಿನ ಬಂಡವಾಳಶಾಹಿಗಳು ವಸಾಹತುಶಾಹಿಗೆ ಸಹಯೋಗದ ರೀತಿಯಲ್ಲಿ ಬೆಂಬಲಿಸಿರಬಹುದು. ಮುಂದುವರೆದು ಉಡುಪಿಯ ಅಷ್ಟಮಠ, ಧರ್ಮಸ್ಥಳ, ಕೊಲ್ಲೂರು ಮುಂತಾದ ಹಲವಾರು ದೇವಸ್ಥಾನ, ದೈವಸ್ಥಾನಗಳು ಭೂಮಾಲಕರಾಗಿ ವಸಾಹತುಶಾಹಿ ಕಾಲದಲ್ಲೂ ಪ್ರಾಮುಖ್ಯತೆಯನ್ನು ಪಡೆದಿರುವುದನ್ನು ಕಂದಾಯ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಜೊತೆಗೆ ವಸಾಹತುಶಾಹಿ ಸಂದರ್ಭದಲ್ಲಿ ಹೊಸತಾಗಿ ಭೂಮಿಯ ಮೇಲೆ ಹೂಡಿಕೆ ಮಾಡಿದ್ದ

ಭೂಮಾಲಿಕರು ಮತ್ತು ಹಳೆಯ ಗೈರುಹಾಜರಿಯ ಭೂಮಾಲಕರು ಗೇಣಿ ವಸೂಲಿಯ ವಿನಃ ಬೇರೆ ಯಾವುದೇ ಉಪಯುಕ್ತ ಕೆಲಸ ಮಾಡದೇ ತಮ್ಮ ಗೇಣಿದಾರರನ್ನು ಮತ್ತಷ್ಟು ಹಿಂಡಿ, ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಹೆಚ್ಚು ಆಸಕ್ತರಾಗಿದ್ದರು.[19]

ವಸಾಹತುಶಾಹಿಯ ಕಾನೂನುಗಳು ಭೂಮಿಯ ವಿಭಾಗೀಕರಣ ಮತ್ತು ಹಂಚಿಕೆಯಲ್ಲಿಯೂ ಅಸಮಾನತೆಯನ್ನು ಮುಂದುವರೆಸಿದ್ದರಿಂದ ತುಳುನಾಡಿನಲ್ಲಿ ಅಭಿವೃದ್ಧಿಯನ್ನು ಕಷ್ಟಕರ ಮಾಡಿದ್ದವು. ಇನ್ನೊಂದೆಡೆ ವಸಾಹತುಶಾಹಿ ಸರಕಾರಕ್ಕೆ ತುಳುನಾಡನ್ನು ಅಭಿವೃದ್ಧಿ ಪಡಿಸಬೇಕು ಅಥವಾ ಸ್ಥಳೀಯ ಕೃಷಿ ಹಾಗೂ ವ್ಯಾಪಾರ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಬೇಕು ಎಂಬುವುದು ಆಧ್ಯತೆಯ ವಿಷಯವಾಗಿರಲಿಲ್ಲ ಅಥವಾ ಸರ್ಕಾರದ ಉದ್ದೇಶವೂ ಅದಾಗಿರಲಿಲ್ಲ. ತುಳುನಾಡಿನ ಸಂಪತ್ತನ್ನು ಕಾನೂನುಬದ್ಧವಾಗಿ ದೋಚುವುದರ ಮೂಲಕ ತಾವೆಷ್ಟು ಅಭಿವೃದ್ಧಿಯನ್ನು ಸಾಧಿಸಬಹುದು ಅಥವಾ ತಮ್ಮ ಸಾಮ್ರಾಜ್ಯವನ್ನು ಎಷ್ಟರ ಮಟ್ಟಿಗೆ ಗಟ್ಟಿಗೊಳಿಸಬಹುದು ಎಂಬುವುದು ವಸಾಹತುಶಾಹಿಗಳ ಲೆಕ್ಕಚಾರವಾಗಿತ್ತು. ಇದಕ್ಕೆ ವಿರುದ್ಧವಾಗಿ ಈ ಪ್ರದೇಶದ ಜನರ ಸಂಬಂಧಗಳು ಹೆಚ್ಚಿನ ಸಂದರ್ಭಗಳಲ್ಲಿ ಭಾವನಾತ್ಮಕ ಸ್ವರೂಪ ಪಡೆದುಕೊಂಡಿದ್ದವಾದರೂ ಕೃಷಿಯನ್ನು ಪ್ರಧಾನವಾಗಿಸಿದ ವಸಾಹತುಪೂರ್ವದ ಗ್ರಾಮೀಣ ಪ್ರದೇಶದ ಮುಂದಾಳುಗಳು ಬದುಕನ್ನು ಕಟ್ಟಿಕೊಳ್ಳಲು ವಸಾಹತುಶಾಹಿಯ ಅಂಗವಾಗಿ ಮುಂದುವರೆದರು. ಹೀಗೆ ವಸಾಹತುಶಾಹಿಯ ವ್ಯವಸ್ಥೆ, ಹೇರಿಕೆಯ ರೂಪದಲ್ಲಿ ಬಂದಾಗ ಅದನ್ನು ಪ್ರತಿಭಟಿಸುವ ಸಾಮರ್ಥ್ಯವಾಗಲೀ ಅಥವಾ ಒಪ್ಪಿಕೊಳ್ಳುವ ಮನಸ್ಸಾಗಲೀ ಇಲ್ಲದೇ ಇದ್ದಾಗ ಅನಿವಾರ್ಯವಾಗಿ ವಸಾಹತುಪೂರ್ವದ ನೌಕರಶಾಹಿ ತಮ್ಮದೇ ನೆಲದಲ್ಲಿ ಪರಕೀಯರಾಗಬೇಕಾಯಿತಾದರೂ, ವಸಾಹತುಶಾಹಿಯೊಂದಿಗೆ ಸೇರಿಕೊಂಡು ಗ್ರಾಮದೊಂದಿಗೆ ತಮ್ಮ ಸಾಂಸ್ಕೃತಿಕ ನಂಟನ್ನು ಕಳೆದುಕೊಳ್ಳದೇ ಅಧುನಿಕತೆಯೊಂದಿಗೆ ಸಂಧಾನ ನಡೆಸುವ ಪ್ರೇರಕ ಶಕ್ತಿಯೊಂದಿಗೆ ತಮ್ಮನ್ನು ಗುರುತಿಸಿಕೊಂಡಿತು.[20] ಈ ಸಂದರ್ಭದಲ್ಲಿ ವಸಾಹತುಶಾಹಿ ಮಾದರಿಯೆದುರು ಸ್ಥಳೀಯವಾದುದೆಲ್ಲವೂ ಸಾಂಪ್ರದಾಯಿಕ ಎಂಬ ಹಣೆಪಟ್ಟಿಯಡಿಯಲ್ಲಿ ಬಿಂಬಿತವಾದವು. ಜನರ ಜೀವನೋಪಾಯದ ಮಾರ್ಗಗಳು ಸಾಮ್ರಾಜ್ಯಶಾಹಿಯ ವಜ್ರಾಘಾತಕ್ಕೆ ಒಳಗಾಗಿ ಗ್ರಾಮೀಣ ಬದುಕಿನ ತಳಹದಿ ಪಲ್ಲಟಗೊಂಡಿತು. ಪಾರಂಪರಿಕ ಕೃಷಿವ್ಯವಸ್ಥೆಯ ರಚನೆಗಳಲ್ಲೂ ಬದಲಾವಣೆಗೊಂಡು ತುಳುನಾಡು ಹೊಸ ಯೋಚನೆ, ಯೋಜನೆಯತ್ತ ಮುಂದುವರೆಯಿತು. ಇದನ್ನು ಅನುಸರಿಸಿ, ಹತ್ತೊಂಬತ್ತನೆಯ ಶತಮಾನದ ಮೊದಲಾರ್ಧದ ನಂತರದ ವಸಾಹತುಶಾಹಿ ವ್ಯವಸ್ಥೆಯಲ್ಲಿ ಹೊಸ ಆಸಕ್ತಿಗಳು ಮತ್ತು ಹೊಸ ಆಲೋಚನೆಗಳು ಹುಟ್ಟಿಕೊಂಡವು. ವಸಾಹತುಶಾಹಿ ಆರಂಭಿಸಿದ ಶಿಕ್ಷಣ, ಉದ್ಯೋಗ, ವ್ಯಾಪಾರ, ವ್ಯವಹಾರ,

ವೃತ್ತಿಪರ ಚಟುವಟಿಕೆಗಳಿಂದ ಆಕರ್ಷಿತಗೊಂಡು ಪಾರಂಪರಿಕ ನೆಲೆಗಳಿಂದ ದೂರಸರಿದರು. ಹಳೆಯ ಉಳಿಗಮಾನ್ಯ ಸಂಬಂಧಗಳು ಪಲ್ಲಟಗೊಂಡು ನಗರೀಕರಣದ ಬೆಳವಣಿಗೆಯಿಂದಾಗಿ ಗ್ರಾಮವ್ಯವಸ್ಥೆಗಳು ನೈಜತೆಯನ್ನು ಕಳೆದುಕೊಂಡವು.[21]

ವಾಸ್ತವವಾಗಿ ಸ್ಥಳಿಯ ಭೂಸಂಬಂಧಗಳು, ಅದನ್ನಾಧರಿಸಿದ ಸಮಾಜ ಹಾಗೂ ಅರ್ಥವ್ಯವಸ್ಥೆ ವಸಾಹತುಶಾಹಿಗಳ ಚಿಂತನೆಯ ವ್ಯಾಪ್ತಿಯಿಂದ ಹೊರಗಿದ್ದ ಕಾರಣ, ಕೃಷಿಯ ವಾಣಿಜ್ಯೀಕರಣ ತುಳುನಾಡನ್ನು ಎಲ್ಲಾ ಬಗೆಯ ಕಚ್ಚಾ ಸಾಮಾಗ್ರಿಗಳನ್ನು ನಿರಂತರವಾಗಿ ಪೂರೈಸುವ ವಸಾಹತು ಆಗಬೇಕು ಎನ್ನುವುದು ಬ್ರಿಟಿಷರ ಆಶಯವಾಗಿತ್ತು. ಈ ಹಂತದಲ್ಲಿ ಬ್ರಿಟಿಷ್ ವರ್ತಕರ ಸ್ಥಳೀಯ ಏಜೆಂಟರುಗಳು, ಹಾಗೂ ಗ್ರಾಮಾಡಳಿತದ ಅಧಿಕಾರಿಗಳು ವಸಾಹತುಶಾಹಿ ಧೋರಣೆಗೆ ಪೂರಕವಾಗಿ ವರ್ತಿಸಿ, ರೈತರಲ್ಲಿ ಉಂಟಾದ ಗೊಂದಲದ ಲಾಭವನ್ನು ಪಡೆದರು. ಪರಿಣಾಮವಾಗಿ ಪಾರಂಪರಿಕ ಆಡಳಿತಕ್ಕೆ ಹೊಂದಿಕೊಂಡು ತನ್ನದೇ ಆದ ಸಮಾಜ, ಸಂಸ್ಕೃತಿ, ಕೌಶಲ್ಯಗಳಿಂದ ಜೀವನವನ್ನು ರೂಪಿಸಿಕೊಂಡಿದ್ದ ತುಳುನಾಡಿನ ಸಮುದಾಯಗಳ ನೆಲೆಗಳ ಪಲ್ಲಟ, ವಸಾಹತುಶಾಹಿಯ ಸಂಕೀರ್ಣ ವ್ಯವಸ್ಥೆಯೊಳಗೆ ಅನಿವಾರ್ಯವಾಗಿ ಸಿಲುಕಿ ನಲುಗುವ ಸಂದರ್ಭಗಳು ಸೃಷ್ಟಿಸಲ್ಪಟ್ಟವು.

ತುಳುನಾಡಿನ ಸ್ಥಳೀಯಾಡಳಿತದ ಕೇಂದ್ರಗಳಾಗಿದ್ದ ಗುತ್ತುಗಳು ತಮ್ಮ ಆಸ್ತಿತ್ವಕ್ಕಾಗಿ, ಗ್ರಾಮ ಮಟ್ಟದ ಪ್ರಭಾವದ ಉಳಿವಿಗಾಗಿ ಸರಕಾರಿ ಯಂತ್ರದ ಜೊತೆ ಸಹಯೋಗಿಗಳಾಗಿ ಕಾರ್ಯನಿರ್ವಹಿಸಿದ ಉದಾಹರಣೆಗಳು ಸಾಕಷ್ಟಿವೆ. ಕಂದಾಯ ವಸೂಲಿ ಮಾಡುವ ಉಪಕ್ರಮ, ವಾಣಿಜ್ಯ ವ್ಯವಹಾರ, ಹೂಡಿಕೆ ಮುಂತಾದವುಗಳಲ್ಲಿ ತೊಡಗಿಸಿಕೊಂಡ ಬಂಟವಾಳ, ಮಂಗಳೂರಿನ ಸಾರಸ್ವತರು, ಮುಲ್ಕಿ ದೊಡ್ಡಮನೆ ಕಾಳಪ್ಪ ಶೆಟ್ಟಿ, ಮದಗ ಕೃಷ್ಣಪ್ಪ ಶೆಟ್ಟಿ, ಕೆಂಜೂರು ಸಂಕಯ್ಯ ಶೆಟ್ಟಿ, ಮಾರಳಿ ನಾಗಪ್ಪ ಶೆಟ್ಟಿ, ಹಳ್ಳಿ ಚಂದಯ್ಯ ಶೆಟ್ಟಿ, ತೆಂಕಮನೆ ಕೊಲ್ಲು ಹೆಗ್ಗಡ್ತಿ, ಹಂದಾಡಿ ಪಾಲ್ತಮನೆ ಮೋನಪ್ಪ ಶೆಟ್ಟಿ, ಜಟ್ಟಾ ಸುಬ್ಬಯ್ಯ ಶೆಟ್ಟಿ ಪ್ರಮುಖರು. ಸಾಂಪ್ರದಾಯಿಕವಾಗಿ ಭೂಮಿಯು ಅವರ ಶಕ್ತಿಯ ಆಧಾರವಾಗಿದ್ದು, ಹಳ್ಳಿಯು ಅವರು ಪ್ರಾಮುಖ್ಯ ಪಡೆದ ರಂಗವಾಗಿದ್ದರೇ, ನಗರಗಳಲ್ಲೂ ತಮ್ಮ ಚಾಪನ್ನು ಒತ್ತಲು ಸಿದ್ಧರಿದ್ದರು.

ವಸಾಹತುಶಾಹಿ ಆಡಳಿತ, ಬಾಸೆಲ್ ಮಿಷನಿನ ಆಗಮನ, ಅಧುನಿಕ ಶಿಕ್ಷಣದ ಬೆಳವಣಿಗೆ, ಕೈಗಾರಿಕೆಗಳ ಸ್ಥಾಪನೆ, ಪ್ರಮುಖ ವ್ಯಾಪಾರಿ ಕೊಂಡಿಗಳನ್ನು ಜೋಡಿಸುವ ರಸ್ತೆಗಳ ನಿರ್ಮಾಣ, ದಕ್ಷಿಣದ ವಸಾಹತು ಕೇಂದ್ರಗಳೊಂದಿಗೆ ಸಂಪರ್ಕಿಸುವ ರೈಲು ಮಾರ್ಗಗಳ ರಚನೆ ಮುಂತಾದವುಗಳು. ವಸಾಹತುಶಾಹಿ ತನ್ನ ವ್ಯಾಪಾರ, ಮಿಲಿಟರಿ ಉದ್ದೇಶಗಳಿಗಾಗಿ ಕೆಲವೊಂದು ಪ್ರಯೋಗಗಳನ್ನು ಮಾಡಿತು. ಘಟ್ಟ ಮಾರ್ಗಗಳ ನಿರ್ಮಾಣ, ರೈಲು ಮಾರ್ಗದ ನಿರ್ಮಾಣ, ಸೇತುವೆಗಳ ನಿರ್ಮಾಣ ಮೊದಲಾದ ಕಾಮಗಾರಿಗಳನ್ನು ಕೈಗೆತ್ತಿಕೊಂಡಿತು. ಇವೆಲ್ಲವೂ ಬ್ರಿಟಿಷ್

ಸರಕಾರಕ್ಕೆ ತಕ್ಷಣದ ಲಾಭವನ್ನು ತರುವಂತಿದ್ದವು. ವ್ಯಾಪಾರದ ಸರಕುಗಳನ್ನು ಬಂದರು ಪಟ್ಟಣಗಳಿಗೆ ಸಾಗಿಸಲು ರಸ್ತೆ, ರೈಲು ಮಾರ್ಗಗಳು ಅನಿವಾರ್ಯವಾಗಿದ್ದವು. ಈ ಮೂಲಕ ತುಳುನಾಡಿನ ಅರ್ಥವ್ಯವಸ್ಥೆಯನ್ನು ಅಮೂಲಾಗ್ರವಾಗಿ ಬದಲಾಯಿಸಿ ಬಂಡವಾಳ ಆರ್ಥಿಕತೆಯನ್ನು ಜಾರಿಗೆ ತಂದಿತು.[22] ಈ ಮೂಲಕ ವಸಾಹತುಶಾಹಿ ಕೃಷಿ ಪ್ರಧಾನವಾಗಿದ್ದ ತುಳುನಾಡನ್ನು ಹೆಚ್ಚಿನ ಮತ್ತು ಶೀಘ್ರ ನಗರೀಕರಣದ ಕಡೆಗೆ ಬದಲಾಯಿಸಿತು. ಐತಿಹಾಸಿಕ ಬಂದರು ಪಟ್ಟಣವಾದ ಮಂಗಳೂರು ನಗರ ತುಳುನಾಡಿನ ಇತರ ಭಾಗದ ಕೃಷಿ ಉತ್ಪನ್ನ ವರ್ತಕರನ್ನು ಆಕರ್ಷಿಸಿತಲ್ಲದೇ ಪಾಶ್ಚಾತ್ಯರ ವ್ಯಾಪಾರಕ್ಕೆ ಬಾಗಿಲು ತೆರೆದುಕೊಂಡು ಸರಕು-ಆಮದು-ರಫ್ತು-ಸಂಗ್ರಹ ವ್ಯವಸ್ಥೆಯಿರುವ ವ್ಯಾಪಾರ ಕೇಂದ್ರವೆನಿಸಿ ಕರಾವಳಿಯನ್ನು ತುಳುನಾಡಿನ ಇತರ ಬಂದರು ಹಾಗೂ ಕೃಷಿಯ ಹಿನ್ನಾಡಿನೊಂದಿಗೆ ಸಂಪರ್ಕಿಸಿತು. ಮಾತ್ರವಲ್ಲ ಭೂಮಿಯನ್ನು ಬಂಡವಾಳವನ್ನಾಗಿಸುವ ಕಾರ್ಯಯೋಜನೆಗಳು ರೂಪುಗೊಂಡು ವ್ಯಾಪಾರ ಮತ್ತು ಕೈಗಾರಿಗಳ ಹಿತಾಸಕ್ತಿಗೆ ತಕ್ಕಂತೆ ಅರ್ಥವ್ಯವಸ್ಥೆ ಪುನರ್‌ವ್ಯವಸ್ಥೆಗೊಳಿಸಲ್ಪಟ್ಟಿತ್ತು. ಹೀಗೆ ಬಂಡವಾಳಶಾಹಿ ವ್ಯವಸ್ಥೆ ತುಳುನಾಡಿನಲ್ಲಿ ಕ್ರಮಬದ್ಧಗೊಂಡು ಕಾನೂನು ಮತ್ತು ಸುರಕ್ಷತೆಯ ಖಾತರಿಗಾಗಿ ಆಧುನಿಕ ಆಡಳಿತ ವ್ಯವಸ್ಥೆ ಅಸ್ತಿತ್ವಕ್ಕೆ ಬಂತು. ಒಟ್ಟಾರೆಯಾಗಿ ವಸಾಹತುಶಾಹಿ ಆಡಳಿತದ ಸಂದರ್ಭದ ತುಳುನಾಡು ವ್ಯಾಪಾರ ಕೇಂದ್ರವಾಗಿ, ಆಡಳಿತದ ಕೇಂದ್ರವಾಗಿ, ದೇಶಿಯ ಮತ್ತು ಅಂತರರಾಷ್ಟ್ರೀಯ ವ್ಯಾಪಾರದ ವೇದಿಕೆಯಾಗಿ ವಸಾಹತುಶಾಹಿ ನೆಲೆಯಾಗಿ ಪರಿವರ್ತನೆಗೊಂಡಿತು.

ವಸಾಹತುಶಾಹಿಯ ಸಾರ್ವಭೌಮ ಅಧಿಕಾರೀ ವ್ಯವಸ್ಥೆಯಿಂದಾಗಿ ಇಲ್ಲಿನ ಪರಂಪರಾಗತ ವ್ಯವಸ್ಥೆಗಳು ಸ್ಥಿತ್ಯಂತರಕೊಳಪಟ್ಟು ವಾರಸುದಾರಿಕೆಯ ವ್ಯವಸ್ಥೆಗಳು ಹೊಸ ಭಾಷ್ಯಕ್ಕೆ ಒಳಗಾಗಿ ಮಾನವ-ಮಾನವ ಮತ್ತು ಮಾನವ-ಪರಿಸರ ಇವುಗಳ ನಡುವಿನ ಭಾವನೆಗಳು ಹಾಗೂ ಸಂಬಂಧಗಳು ಹೊಸ ವ್ಯಾಖ್ಯಾನಕ್ಕೊಳಗಾದವು. ವಸಾಹತುಶಾಹಿ ಸರಕಾರದ ವ್ಯಾಪಾರ ಪ್ರವೃತ್ತಿ ತುಳುನಾಡಿನ ಭಾವನಾತ್ಮಕ ಅಂಶಗಳನ್ನು ಪರಿಗಣಿಸದೇ ಕೇವಲ ಲಾಭಗಳಿಸುವುದಕ್ಕೆ ಸೀಮಿತಗೊಳಿಸಿತು. ಪ್ರಭುತ್ವ ವ್ಯವಸ್ಥೆಗೊಳ್ಳುವಲ್ಲಿ ವಸಾಹತುಶಾಹಿಗಳು ತುಳುನಾಡಿನ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಚಾರಗಳಲ್ಲಿ ಯಾವುದೇ ರೀತಿಯಲ್ಲಿ ಹಸ್ತಕ್ಷೇಪ ಮಾಡದ ನೀತಿಯನ್ನು ಅನುಸರಿಸಿದರಾದರೂ ಪ್ರಭುತ್ವ ವ್ಯವಸ್ಥಿತಗೊಂಡ ನಂತರದಲ್ಲಿ ವಸಾಹತಿನ ಸಮಾಜ ಮತ್ತು ಸಂಸ್ಕೃತಿಯನ್ನು ಪರಿವರ್ತನೆಗೊಳಿಸುವ ವಿಚಾರದಲ್ಲಿ ಕಾರ್ಯಪ್ರವೃತ್ತರಾದರು. ವಸಾಹತುಶಾಹಿಗಳು ತುಳುನಾಡಿನಲ್ಲಿ ಆರಂಭಿಸಿದ ಆಧುನೀಕರಣದ ಪ್ರಕ್ರಿಯೆಗಳಿಂದಾಗಿ ವಸಾಹತಿನ ಪಾರಂಪರಿಕ ಆಡಳಿತ, ಸಾಮಾಜಿಕ ವ್ಯವಸ್ಥೆ, ಧರ್ಮ, ಸಂಸ್ಕೃತಿ, ಜೀವನೋಪಾಯದ ಮಾರ್ಗಗಳು, ಕಸುಬು, ಕೌಶಲ್ಯ ಇವೇ ಮುಂತಾದವುಗಳು

ತುಚ್ಛೀಕರಿಸಲ್ಪಟ್ಟು ನಿರ್ಲಕ್ಷ್ಯಕ್ಕೆ ಒಳಗಾದವು. ಚರಿತ್ರಕಾರ ಬಿಪನ್ ಚಂದ್ರರ ಪ್ರಕಾರ ವಸಾಹತುಶಾಹಿಗಳ ಹಸ್ತಕ್ಷೇಪ ಹಾಗೂ ತುಚ್ಛೀಕರಣ ನೀತಿ ಕೇವಲ ಆರ್ಥಿಕ ಕ್ಷೇತ್ರಕ್ಕೆ ಸೀಮಿತವಾಗಿರದೇ ಸಾಮಾಜಿಕ, ರಾಜಕೀಯ, ಆಡಳಿತಾತ್ಮಕ, ಸಾಂಸ್ಕೃತಿಕ ಕ್ಷೇತ್ರಗಳಿಗೂ ಅನ್ವಯಿಸಲ್ಪಟ್ಟಿತು. ದೇಶದ ಸರ್ವಕ್ಷೇತ್ರಗಳು ವಸಾಹತುಶಾಹಿಗಳ ದೃಷ್ಟಿಕೋನಕ್ಕೆ ಸರಿಹೊಂದುವ ರೀತಿಯಲ್ಲಿ ಹಸ್ತಕ್ಷೇಪಕ್ಕೆ ಒಳಗಾದವು.[23]

ವಸಾಹತುಶಾಹಿಗಳು ಇಲ್ಲಿನ ವ್ಯವಸ್ಥೆಗಳನ್ನು ಕಾಪಾಡಿಕೊಂಡು ಮುಂದುವರೆಸುವ ಬದಲು ಅವುಗಳನ್ನು ಪಶ್ಚಿಮದ ಕೈಗಾರಿಕಾ ನೀತಿಗೆ ಸರಿಹೊಂದಿಸಿ ತಮ್ಮ ಉದ್ದೇಶ ಸಾಧನೆಗೆ ಬಳಸಿಕೊಂಡರು. ವಸಾಹತುಶಾಹಿ ಅಧಿಕಾರೀ ವ್ಯವಸ್ಥೆಯನ್ನು ಕ್ರಮಬದ್ಧಗೊಳಿಸುವ ನಿಟ್ಟಿನಲ್ಲಿ ರಾಜಕೀಯಾಧಿಕಾರವನ್ನು ತನ್ನದೇ ವಿಧಾನದಲ್ಲಿ ನ್ಯಾಯಬದ್ಧಗೊಳಿಸಿದ ಆಡಳಿತಗಾರರು ಇಲ್ಲಿನ ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಗಳ ಮೇಲೆ ಸವಾರಿ ಮಾಡಿ ಅದೂವರೆಗೂ ವಸಾಹತುವಿನ ಅಗತ್ಯತೆಗಳಿಗೆ ಬಳಕೆಯಾಗುತ್ತಿದ್ದ ಸಂಪತ್ತನ್ನು ಬ್ರಿಟನ್‌ಗೆ ರವಾನಿಸಿದರು.[24] ಇದರಿಂದಾಗಿ ಸ್ವಾಯತ್ತವಾಗಿದ್ದು ತನ್ನದೇ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ತುಳುನಾಡಿನ ವ್ಯವಸ್ಥೆ ವಸಾಹತುಶಾಹಿಗಳ ಕಪಿಮುಷ್ಠಿಯೊಳಗೆ ಬಂಧಿಸಲ್ಪಟ್ಟು ಅವರ ಅಭಿಲಾಷೆಗಳನ್ನು ಪೂರೈಸುವ ಕೇಂದ್ರಗಳಾಗಿ ಮಾರ್ಪಟ್ಟವು. ತುಳುವರ ಸಾಂಪ್ರದಾಯಿಕ ವ್ಯವಸ್ಥೆಗಳು ನಿಧಾನವಾಗಿ ಕುಸಿತಕ್ಕೆ ಒಳಗಾಗಿ, ದೇಶಿಯ ಕೃಷಿ-ಕೌಶಲ್ಯಗಳು, ಉತ್ಪಾದನ ವಿಧಾನಗಳು ಹಾಗೂ ಜೀವನೋಪಾಯದ ಇತರ ಮೂಲಗಳೆಲ್ಲವೂ ಬಂಡವಾಳಶಾಹಿಗಳ ಉದ್ದೇಶ ಈಡೇರಿಕೆಯ ಸಾಧನಗಳಾಗಿ ಮಾರ್ಪಟ್ಟವು. ತುಳುನಾಡಿನಲ್ಲಿ ವಸಾಹತುಶಾಹೀ ಪ್ರಭುತ್ವ ಆಧುನಿಕತೆಯ ಪ್ರತಿನಿಧಿಯಾಗಿ ತನ್ನ ಹರವನ್ನು ವಿಸ್ತಾರಗೊಳಿಸುತ್ತಾ ಹೋದಂತೆ ತುಳುನಾಡನ್ನು ಪುನರ್‌ರಚಿಸುವ ಹಾಗೂ ತನ್ನ ಅಭಿಲಾಷೆಗಳನ್ನು ಪೂರೈಸಿಕೊಳ್ಳುವ ಪ್ರಯತ್ನದಲ್ಲಿ ಯಶಸ್ಸು ಪಡೆಯಿತು. ಆದರೆ ಸಾಮ್ರಾಜ್ಯಶಾಹಿಯ ಮೂಲಾಂಶಗಳಾಗಿದ್ದ ಹೇರಿಕೆ, ಆಮಿಷ, ಬಲವಂತ, ಹಿಂಸೆ ಮುಂತಾದವುಗಳಿಂದಾಗಿ ತುಳುನಾಡಿನ ಪಾರಂಪರಿಕ ಅಧಿಕಾರ, ಸಾಮಾಜಿಕ-ಬಂಧ, ಸಮುದಾಯಗಳ ಕೌಶಲ್ಯ, ಜೀವನಮೌಲ್ಯಗಳು ಅರ್ಥಹೀನಗೊಂಡ ಕಾರಣ ಬಹುಸ್ವರೂಪಿಯಾಗಿದ್ದ ತುಳುನಾಡು ಏಕತ್ವದೊಳಗೆ ಘನೀಕರಿಸಲ್ಪಟ್ಟಿತು.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಆರಂಭಗೊಂಡಿದ್ದ ಕೈಗಾರಿಕ ಕ್ರಾಂತಿ ಮತ್ತು ಅದರ ಫಲವಾದ ಕೈಗಾರಿಕೆಯಲ್ಲಿ ಬಂಡವಾಳ ಹೂಡಿಕೆಯ ಕಾರಣದಿಂದ ವಸಾಹತುಶಾಹಿ ಸಮಾಜದ ಎಲ್ಲಾ ಮುಖಗಳೂ ವೇಗವಾಗಿ ಬದಲಾಗುತ್ತಿದ್ದವು. ಈ ಚಿಂತನೆ ಇತಿಹಾಸಕಾರರಾದ ಥಾಂಪ್ಸನ್ ಮತ್ತು ಗ್ಯಾರೆಟ್ ಅವರ ಮಾತುಗಳಲ್ಲಿ ಸ್ಪಷ್ಟಗೊಂಡಿವೆ. “ಹಳೆಯ ದರೋಡೆಕಾರರ ಮನಸ್ಸು ಮತ್ತು ಕೆಲಸವು ಅಧುನಿಕ ಕೈಗಾರಿಕೆಗಳು ಮತ್ತು

ಬಂಡವಾಳಗಳಿಗೆ ತಕ್ಕಂತೆ ಬದಲಾಗುತ್ತಿದ್ದವು"[25] ಸಾಮ್ರಾಜ್ಯಶಾಹಿ ಕೈಗಾರಿಕೆಗಳ ಪ್ರಭಾವದಿಂದಾಗಿ ದುಡಿಯುವ ವರ್ಗಗಳು ಮುಖ್ಯವಾಗಿ ತುಳುನಾಡಿನ ಕೃಷಿ ಹಾಗೂ ಗುಡಿಕೈಗಾರಿಕೆಗಳು ತಮ್ಮ ನೆಲೆಯನ್ನು ಕಳೆದುಕೊಂಡು ಸ್ವಾವಲಂಬಿ ಗ್ರಾಮೀಣ ಆರ್ಥಿಕತೆ ನೆಲಕಚ್ಚಿತ್ತು. ಈ ಕೆಟ್ಟ ನಡೆ ಗ್ರಾಮೀಣ ದುಡಿಯುವ ಜನಸಮುದಾಯಗಳನ್ನು ಪಾರಂಪರಿಕ ಬದುಕಿನಿಂದ ಬೇರ್ಪಡಿಸಿದವು ಮಾತ್ರವಲ್ಲ ಅಧುನಿಕ ಕೃಷಿಕಾರ್ಮಿಕರಾಗಿ ಜೀವನ ಪರಿವರ್ತಿಸಿಕೊಂಡು ಸಾಮ್ರಾಜ್ಯಶಾಹಿಯ ಶೋಷಣೆಗೆ ಒಳಗಾಗಿ ಶೋಷಿತರಾದರು.[26] ಜೊತೆಗೆ ವಸಾಹತುಶಾಹಿ ನೀತಿಯ ಫಲವಾಗಿ ಕೃಷಿ ಪ್ರದೇಶದ ಮೇಲಿನ ಒತ್ತಡ ಜನಸಾಮಾನ್ಯರು ಬಡತನ ಮತ್ತು ಗೊಂದಲಕ್ಕೆ ಒಳಗಾಗುವ ಸಂದರ್ಭಗಳು ಏರ್ಪಟ್ಟವು. ಯಂತ್ರನಾಗರೀಕತೆಯ ಕುದುರೆ ಏರಿ ಬಂದ ವಸಾಹತುಶಾಹಿಗಳು ನಮ್ಮ ಜೀವನ ಶೈಲಿಯನ್ನು ಭಗ್ನಗೊಳಿಸಿದರು. ಹಲವು ರೀತಿಯ ಪಾರಂಪರಿಕ ಉದ್ದಿಮೆಗಳು, ಹಳೆಯ ಬೇಸಾಯಪದ್ಧತಿ, ದೇಸಿ ತಳಿಗಳು, ಶಿಕ್ಷಣ ವ್ಯವಸ್ಥೆ, ಸ್ಥಳೀಯ ಭಾಷೆಗಳು ಇತ್ಯಾದಿ ಎಲ್ಲದರ ಮೇಲೂ ತಮ್ಮ ಕಪಿಮುಷ್ಠಿಯ ಹಿಡಿತ ಸಾಧಿಸಿದರು. ವಸಾಹತುಶಾಹಿಗಳು ಇಂಗ್ಲೀಷ್ ಕಲಿಸಿದರು, ಕಾರಕೂನಿಕೆ ಕಲಿಸಿದರು. ನಮ್ಮನ್ನು ಮಾನಸಿಕ ಗುಲಾಮರಾಗಿಸಿದರು. ಹೀಗೆ ವಸಾಹತುಪೂರ್ವದ ಬೆಳವಣಿಗೆಗಳು ವಸಾಹತುಶಾಹಿಯ ಪ್ರಭಾವದಿಂದ ನಿರ್ಗಮಿಸಿದವು. ಕಾರ್ಯಕ್ಷೇತ್ರದ ಮಾಹಿತಿಯಂತೆ ಪಾಡ್ದನದಲ್ಲಿ ಉಲ್ಲೇಖಿತವಾಗಿರುವ ವಿಚಾರವನ್ನು ಪರಾಮರ್ಶೆಗೆ ಒಳಪಡಿಸಿದಾಗ ಮಂಗಳೂರು ತಾಲೂಕಿನ ಕಾವೂರು, ಬೋಳೂರು ವಸಾಹತುಪೂರ್ವದ ಪ್ರಮುಖ ಕೈಮಗ್ಗದ ವಸ್ತ್ರ ತಯಾರಿಕಾ ಘಟಕಗಳಾಗಿದ್ದವು. ವಸಾಹತುಶಾಹಿಯ ಯಂತ್ರಾಧಾರಿತ ವ್ಯವಸ್ಥೆಯಿಂದಾಗಿ ಈ ವಸ್ತ್ರ ತಯಾರಿಕ ಘಟಕಗಳು ನೆಲಕಚ್ಚಿದವು; ಬಾರಕೂರಿನ ಸಾಲೀಕೇರಿಯ ನೇಯ್ಗೆ ಘಟಕಗಳು, ಬಂಟ್ವಾಳ ತಾಲೂಕಿನ ಸಜಿಪ ಗ್ರಾಮದಲ್ಲಿರುವ ಕುಂಬಾರಿಕ ಕೇಂದ್ರ ಹೀಗೆ ತುಳುನಾಡಿನಲ್ಲಿ ಅಸ್ತಿತ್ವದಲ್ಲಿದ್ದ ಈ ರೀತಿಯ ಪಾರಂಪರಿಕ ಗುಡಿಕೈಗಾರಿಕೆಗಳು ನೆಲಕಚ್ಚಿದವು. ಬಾಸೆಲ್‌ಗಳು ಪರಿಚಯಿಸಿದ ಅಧುನಿಕ ಹಂಚಿನ ಕಾರ್ಖಾನೆ ಹಾಗೂ ವಸಾಹತುಶಾಹಿ ಪರಿಚಯಿಸಿದ ಅಲೂಮೀನಿಯಂ ಪಾತ್ರೆ ಬಳಕೆಯಾದಂತೆಲ್ಲ ಕುಂಬಾರಿಕೆಯನ್ನು ನೆಚ್ಚಿಕೊಂಡಿದ್ದ ಸಮುದಾಯಗಳು ನಿರುದ್ಯೋಗವನ್ನು ಅನುಭವಿಸಿದವು. ಜೊತೆಗೆ ಮಿಷನರಿಗಳು ಮತಪರಿವರ್ತನಾ ಕಾರ್ಯದಲ್ಲಿ ತೊಡಗಿಕೊಂಡಾಗಲೂ ವಸಾಹತಿನ ಮತಪರಿವರ್ತಿತರು ಇದೇ ತೆರನಾದ ಸಮಸ್ಯೆಯನ್ನು ಎದುರಿಸಬೇಕಾಯಿತು. ಮತಪರಿವರ್ತಿತಗೊಂಡು ಪಾರಂಪರಿಕ ಉದ್ಯೋಗ ಕಳೆದುಕೊಂಡಿದ್ದರಿಂದ ಬಿಲ್ಲವರು ಮತ್ತು ತೀಯಾ ಸಮುದಾಯದವರು ಜೀವನೋಪಾಯಕ್ಕೆ ಹೊಂದಿಕೊಂಡಂತೆ ಪರ್ಯಾಯ ವ್ಯವಸ್ಥೆಯನ್ನು ಮಾಡಲೇಬೇಕಾದ ಅನಿವಾರ್ಯತೆ ಉಂಟಾಯಿತು. ಸಮಸ್ಯೆಯನ್ನು ಅರಿತುಕೊಂಡ ಮಿಷನರಿಗಳು

ಮತಪರಿವರ್ತಿತರನ್ನು ಹಿಡಿದಿಟ್ಟುಕೊಳ್ಳುವಲ್ಲಿ ಮೂರು ಹಂತಗಳಲ್ಲಿ ಕೈಗಾರಿಕಾ ವ್ಯವಸ್ಥೆಯನ್ನು ಕಾರ್ಯರೂಪಕ್ಕೆ ತಂದರು.[27]

ಬಿಲ್ಲವರ ಮತಪರಿವರ್ತನೆಯ ಸಂಖ್ಯೆ ಹೆಚ್ಚಾಗಿದ್ದರಿಂದ ಅವರಿಗೆ ಪರಂಪರಾಗತ ಕಸುಬುಗಳನ್ನು ನೆಚ್ಚಿಕೊಳ್ಳಲು ಸಾಧ್ಯವಾಗದ್ದರಿಂದ ಆರಂಭದಲ್ಲಿ 2620 ಎಕರೆ ಕೃಷಿ ಭೂಮಿಯನ್ನು ಖರೀದಿಸಿ ಭೋಗ್ಯಕ್ಕೆ ನೀಡಿದರೂ ಸಫಲವಾಗಲಿಲ್ಲ. ಕೊನೆಯ ಪ್ರಯತ್ನವಾಗಿ ಮತಪರಿವರ್ತನೆಗೊಂಡು ಸಾಂಪ್ರದಾಯಿಕ ಕಸುಬುಗಳಿಂದ ದೂರಸರಿದ ಮತಪರಿವರ್ತಿತರು ಕಾರ್ಪೆಂಟರಿ, ನೇಯ್ಗೆ ಕೆಲಸಗಳ ಮೂಲಕ ಜೀವನಕ್ಕೆ ದಾರಿಯನ್ನು ಕಂಡುಕೊಳ್ಳುವಲ್ಲಿ ಸಫಲರಾದರು. ಮುಂದುವರಿದು ಉದ್ಯೋಗ ಕ್ಷೇತ್ರ ಬಡವದಾಗ ಬಾಸೆಲ್‌ಗಳು ಮತಪರಿವರ್ತಿತರಿಗೆ ಬದುಕಲು ಪೂರಕವಾಗಿ ಬಟ್ಟೆಯ ಕಾರ್ಖಾನೆಯಲ್ಲಿ 'ಖಾಕಿ'ಯನ್ನು ಪರಿಚಯಿಸಿತು. ಇದಕ್ಕೆ ಒತ್ತಾಸೆಯಾಗಿ ವಸಾಹತುಶಾಹಿ ಸರಕಾರ ಕೈಜೋಡಿಸುವ ಮೂಲಕ ಮಿಷನರಿಗಳಿಗೆ ಪೂರಕವಾಗಿ ಕೆಲಸ ಮಾಡಿದರು. ವಸಾಹತುಶಾಹಿ ಸರಕಾರ ಖಾಕಿಯನ್ನು ಪೋಲಿಸರ ಸಮವಸ್ತ್ರವಾಗಿ ಪರಿಗಣಿಸಿದ್ದರಿಂದ ಬೇಡಿಕೆ ಜಾಸ್ತಿಯಾಯಿತು. ಇಡೀ ದೇಶಕ್ಕೆ ಖಾಕಿಯನ್ನು ಪರಿಚಯಿಸಿದ್ದರಿಂದ ಮತಪರಿವರ್ತನೆಗೊಂಡವರಿಗೆ ವ್ಯವಸ್ಥಿತವಾಗಿ ಉದ್ಯೋಗ ಅವಕಾಶಗಳನ್ನು ಒದಗಿಸುವಲ್ಲಿ ಬಾಸೆಲ್ ಮಿಷನರಿಗಳು ಸಫಲರಾದರು. ಜೊತೆಗೆ ವಸಾಹತಿನಲ್ಲಿದ್ದ ತಂತ್ರಜ್ಞಾನವನ್ನು ವಿಕಸಿಸಿ ಇಲ್ಲಿನ ಕೌಶಲ್ಯಾಧಾರಿತ ಕುಶಲಕರ್ಮಿಗಳ ಮಾರ್ಗದರ್ಶನದಿಂದ ತಂತ್ರಜ್ಞಾನಗಳನ್ನು ಅಭಿವೃದ್ಧಿಪಡಿಸಿ ನೇಯ್ಗೆ, ಹಂಚಿನ ಕಾರ್ಖಾನೆ ಮುದ್ರಣ ಯಂತ್ರ, ಬುಕ್‌ಬೈಂಡಿಗ್ ಮುಂತಾದ ಕೈಗಾರಿಕೆಗಳು ಸ್ಥಾಪನೆಗೊಂಡವು. ಹಂಚಿನ ನಿರ್ಮಾಣದಲ್ಲಿ ಕುಂಬಾರರು ಪಾರಂಪರಿಕವಾಗಿ ತಯಾರಿಸುತ್ತಿದ್ದ ಹಂಚುಗಳಿಗೆ ಜರ್ಮನ್ ತಂತ್ರಜ್ಞಾನವನ್ನು ಬಳಸಿ ಸುಧಾರಿತ ವಿವಿಧ ನಮೂನೆಯ ಹಂಚುಗಳನ್ನು ತಯಾರಿಸಿರುವುದು. ಹೀಗೆ ಬಾಸೆಲ್‌ಗಳು ಪ್ರಾರಂಭಿಸಿದ ಹಂಚಿನ ಕಾರ್ಖಾನೆ, ಮಿಲ್, ನೇಕಾರಿಕೆ ವ್ಯವಸ್ಥೆಗಳು ಅವರು ಮತಪರಿವರ್ತಿಸಿದ ಸ್ಥಳೀಯರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸಲು ಸಹಕಾರಿಯಾಯಿತು ಮಾತ್ರವಲ್ಲ ಮತಪರಿವರ್ತನೆಗೊಳ್ಳದವರು ಆ ಕಡೆಗೆ ಆಕರ್ಷಿತರಾಗುವಂತೆ ಮಾಡಿತು.[28]

ಆಧುನಿಕ ನಾಗರೀಕತೆಯ ತರ್ಕ ಒಂದು ಏಕರೂಪಿ ಜೀವನಕ್ರಮವನ್ನು ರೂಪಿಸುವುದು. ಹಳೆಯ ಜ್ಞಾನವ್ಯವಸ್ಥೆ, ಭಾವನಾ ಲಯಗಳು ತೀವ್ರ ರೀತಿಯ ಹಿಂಸೆ ಅನುಭವಿಸಿ ಕಣ್ಮರೆಯಾಗುತ್ತವೆ. ಆಧುನಿಕ ಬಂಡವಾಳಶಾಹಿ ನಾಗರೀಕತೆ ತನಗಿಂತ ಭಿನ್ನವಾದ ಲೋಕಗ್ರಹಿಕೆ, ನಂಬಿಕೆ, ಆಚರಣಾ ಕ್ರಮಗಳನ್ನು ನಿರ್ದಯವಾಗಿ ಹೊಸಕಿ ಹಾಕುತ್ತದೆಯಲ್ಲದೇ, ಚರಿತ್ರೆಯನ್ನು ತಿರುವು-ಮುರುವುಗೊಳಿಸಿ ವಸಾಹತಿನಲ್ಲಿರುವವರನ್ನು ವಿಭಜಿಸಿ ಆಳಿ, ಸ್ವಕೀಯ,

ಪರಕೀಯವೆಂಬ ವಿಶ್ಲೇಷಣೆಗಳನ್ನು ಮುಂದಿಟ್ಟಿತ್ತು. ಇದರಿಂದಾಗಿ ತುಳುನಾಡಿನ ವಾರಸುದಾರಿಕೆಯ ನೆಲೆಗಟ್ಟುಗಳು ಛಿದ್ರಗೊಂಡು ಸಮುದಾಯಗಳ ಅನನ್ಯತೆಯ ಚಿಂತನೆಗಳು ಒಡಕಿಗೆ ಒಳಪಟ್ಟವು. ಇದರಿಂದ ಹೊರಬರುವ ಪ್ರಯತ್ನಗಳು ಮಾಡಲ್ಪಟ್ಟವಾದರೂ ವಸಾಹತುಶಾಹಿಯ ಮಾನಸಿಕತೆಯನ್ನು ನೆಚ್ಚಿಕೊಂಡ ಸಮುದಾಯಗಳು ತಮ್ಮ ನೆಲೆಗಳನ್ನು ಭದ್ರಪಡಿಸಿಕೊಳ್ಳುವ ಉದ್ದೇಶದಿಂದ ಈ ಬಗೆಯ ಪ್ರಯತ್ನಗಳಿಗೆ ಕೈಜೋಡಿಸುವಲ್ಲಿ ಹಿಂದೇಟು ಹಾಕಿದವು.[29] ಹೀಗೆ ಯುರೋಪಿನ ವಸಾಹತುಶಾಹೀ ನೀತಿ ತುಳುನಾಡನ್ನು ಹಳೇಯ ವಾರಸುದಾರಿಕಾ ವ್ಯವಸ್ಥೆಗಳಿಂದ ಬೇರ್ಪಡಿಸಿ ಅಧುನಿಕ ಮಾದರಿಯ ನೆಲೆಯೊಂದರಡಿಯಲ್ಲಿ ಪುನರ್‌ರಚಿಸುವ ಹಾಗೂ ಪಶ್ಚಿಮದ ಸಂಸ್ಕೃತಿಯನ್ನು ಹರಡುವ ಪ್ರಯತ್ನದಲ್ಲಿ ಭಾಗಿಯಾಯಿತು.

ತುಳುನಾಡಿನ ಪರಿಕಲ್ಪನೆಯ ಪ್ರಕೃತಿ, ಮಾನವ ಹಾಗೂ ಸಮಾಜ, ದೇವರು, ದೈವ, ಧರ್ಮ, ಸಂಸ್ಕೃತಿ ಮುಂತಾದವುಗಳ ಬಗ್ಗೆ ದೃಷ್ಟಿಕೋನಗಳು ಬದಲಾಯಿತ್ತಲ್ಲದೇ ವಾರಸುದಾರಿಕೆಯ ಆಯಾಮಗಳು ಮತ್ತು ಅವುಗಳ ಧನಾತ್ಮಕ ಚಿಂತನೆಗಳು ಅರ್ಥ ಕಳೆದುಕೊಂಡವು. ಅದಕ್ಕೆ ಪೂರಕವಾಗಿ ವಸಾಹತುಶಾಹಿ ತನ್ನ ಸಾರ್ವಭೌಮತೆಯನ್ನು ದಂಡ, ಬಲಪ್ರಯೋಗ ಹಾಗೂ ಸ್ವಶಕ್ತಿ ಮುಂತಾದ ಪ್ರವರ್ತನೆಗಳನ್ನು ರೂಪಿಸಿಕೊಂಡು ಈ ಪ್ರದೇಶದ ಆಳ್ವಿಕೆಗೆ ಹೊಸ ಆಯಾಮ ನೀಡಿತ್ತು.[30] ಈ ನೆಲೆಯಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿಯೂ ವಸಾಹತುಶಾಹಿಯ ಆಡಳಿತಕ್ಕೆ ಅನುಕೂಲವಾಗುವಂತಹ ವ್ಯವಸ್ಥೆಯೊಂದರ ಹುಟ್ಟಿಗೆ ಮುನ್ನುಡಿಸುವಲ್ಲಿ ಮತಪ್ರಚಾರಕರ ಸಾಮಾಜಿಕ ಸೇವಾ ಕಾರ್ಯಯೋಜನೆ ಜಾರಿಗೆ ಬಂದು ವಸಾಹತಿನಲ್ಲಿ ಮತಪರಿವರ್ತನೆಯ ಚಟುವಟಿಕೆಗಳಿಗೆ ಚಾಲನೆ ದೊರಕಿತು. ಕ್ಯಾಥೋಲಿಕ್ ಪಂಥೀಯರು ಚರ್ಚ್ ನೆಲೆಗೊಂಡ ಪ್ರದೇಶಗಳ ಸುತ್ತಲಿನ ಜನಸಮೂಹಗಳನ್ನು ಮತಪರಿವರ್ತನೆಗೊಳಿಸುವಲ್ಲಿ ಯಶಸ್ಸನ್ನು ಪಡೆದು ತಮ್ಮ ಹಿಂಬಾಲಕರ ಸಂಖ್ಯೆಯನ್ನು ವೃದ್ದಿಸಿಕೊಂಡರು. ಉದಾಹರಣೆಗೆ ವಸಾಹತುಶಾಹಿಗಳು ವ್ಯವಸ್ಥಿತವಾಗಿ ಈ ಭಾಗದಲ್ಲಿ ಅಧಿಕಾರಕ್ಕೆ ಬರುವ ಮೊದಲೇ ಮತಪರಿವರ್ತನೆಯ ಕಾರ್ಯಗಳು ನಡೆದಿದ್ದವು. ಇಲ್ಲಿನ ಬಿಲ್ಲವೇತರ ಜನರನ್ನು ಮತಪರಿವರ್ತನೆಯಲ್ಲಿ ಪ್ರಾನ್ಸಿಸ್ಕನ್ನಗಳು, ಜೆಸೂಯಿಟ್ ಪಾದ್ರಿಗಳು ಪ್ರಧಾನ ಭೂಮಿಕೆಯನ್ನು ವಹಿಸಿದ್ದರು. ಜೋಸೆಫ್‌ವಾಜ್ ಪವಾಡಗಳೊಂದಿಗೆ ಸ್ಥಳೀಯರನ್ನು ಮತಪರಿವರ್ತನೆ ಮಾಡಿ ಸಂತ ಪದವಿಗೇರಿದ ವಿಚಾರ, ಪಾವೂರು ಮಂಜೇಶ್ವರದ ಕೊರಗರ ಸಾಮಾಜಿಕ ಅಂತಸ್ತಿನ ವೃದ್ಧಿ, ಸೇವೆ ಮತ್ತು ಮತಪರಿವರ್ತನೆಯಲ್ಲಿ ಶ್ರಮ ವಹಿಸಿದ್ದ ಫಾದರ್ ಪೆರಿನಿ ಕೊರಗರನ್ನು ಮತಪರಿವರ್ತಿಸಿ ಕೊರಗೆರೆ ಗುರು ಎಂಬ ಬಿರುದನ್ನು ಪಡೆದಿದ್ದರು. ಇವರ ಈ ಸಾಮಾಜಿಕ ಸೇವೆಯನ್ನು ಗುರುತಿಸಿದ ವಸಾಹತುಶಾಹಿ ಸರಕಾರ ಕೈಸರ್–ಇ–ಹಿಂದ್ ಬಿರುದನ್ನು ದಯಪಾಲಿಸಿರುವುದು ಸ್ಮರಿಸತಕ್ಕ ವಿಚಾರ. ಇದೇ ತೆರನಾಗಿ ವೇಣೂರು, ನಾರಾವಿ

ಮುಂತಾದೆಡೆ ಕೆಳವರ್ಗವನ್ನು ಸಾಮಾಜಿಕ ಸೇವೆಯ ಆಶಯವನ್ನಿಟ್ಟು ಮತಪರಿವರ್ತಿಸಿ ಫಾದರ್ ಕೊರ್ಟಿ ಮನ್ಸೆರೆ ಗುರು ಎಂಬ ಬಿರುದನ್ನು ಪಡೆದಿದ್ದು, ಕೆಳವರ್ಗಗಳ ಸಾಮಾಜಿಕ ಅಂತಸ್ತಿನ ವೃದ್ಧಿಯಲ್ಲಿ ಮಿಷನರಿ ಕೊಡುಗೆಗಳ ಮಾದರಿಗಳು. [31] ಜೊತೆಗೆ ವಸಾಹತುಶಾಹಿ ಆಡಳಿತದ ಸಂದರ್ಭ ಸರ್ಕಾರಿ ನೌಕರಿ ಪಡೆಯುವಲ್ಲಿ ಸಾಂದರ್ಭಿಕವಾಗಿ ಮೇಲ್ವರ್ಗದ ಸಮುದಾಯಗಳು ಮತಪರಿವರ್ತನೆ ಹೊಂದಿರುವ ಹಲವಾರು ಉದಾಹರಣೆಗಳಿವೆ. ತುಳುನಾಡಿನ ಮೂಲಕ್ರೈಸ್ತರು ತುಳುಭಾಷಿಕರು, ಹಿಂದುಧರ್ಮದ ಕೆಳವರ್ಗಗಳಿಂದ ಮತಪರಿವರ್ತನೆಗೊಂಡವರು. ಅವರಲ್ಲಿ ಬಾಸೆಲ್ಗಳ ಸಾಮಾಜಿಕ ಸೇವೆಯ ಆಶಯದಲ್ಲಿ ಮತಪರಿವರ್ತನೆಯಾದವರು ಬಹುಸಂಖ್ಯಾಕ ಬಿಲ್ಲವರು ಮತ್ತು ಮೊಗವೀರರು. ಸಾಮಾನ್ಯಶಕೆ 1869–1875 ಸಾಮಾಜಿಕ ಸೇವೆ, ಮತ ಪರಿವರ್ತನೆಯ ಸುವರ್ಣ ಕಾಲ. ಬಾಸೆಲ್ ಮಿಷನ್‌ನ ತುಳು ಅಂದೋಲನದ ಕಾರ್ಯಕ್ರಮದಡಿಯಲ್ಲಿ ಮುಲ್ಕಿ, ಉಡುಪಿಯ ಸುಮಾರು ಇಪ್ಪತ್ತೆಂಟು ಗ್ರಾಮಗಳಲ್ಲಿ ದಾಖಲೆ ಸಂಖ್ಯೆಯ ಮೂಲನಿವಾಸಿಗಳನ್ನು ಮತ ಪರಿವರ್ತನೆ ಮಾಡಿದರು. ಸಾಂತೂರು, ಉಚ್ಚಿಲ, ಕಾಪು, ಬೋಳ್ಮಾರ್, ಕಟಪಾಡಿ, ಉದ್ಯಾವರ, ಉಪ್ಪೂರು, ಬೆಳ್ಮ, ಅಮ್ಮೆಂಬಳ ಮುಂತಾದ ತುಳುನಾಡಿನ ಆಯಕಟ್ಟಿನ ಸ್ಥಳಗಳಲ್ಲಿ ಈ ಚಟುವಟಿಕೆ ವಸಾಹತುಶಾಹಿ ಅಧಿಕಾರಿಗಳ ಅಭಯದೊಂದಿಗೆ ನಡೆಸಲ್ಪಟ್ಟಿತು.[32] ಪ್ರಸ್ತುತ ಈ ಪ್ರದೇಶದ ಮತಪರಿವರ್ತಿತರನ್ನು ಸಂದರ್ಶಿಸಿದಾಗ ತಮ್ಮ ಹಿರಿಯರು ಯಾವ ಕಾರಣಕ್ಕಾಗಿ ಮತಪರಿವರ್ತಿತರಾಗಿದ್ದಾರೆ ಎನ್ನುವ ವಿಚಾರಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಂಡಿಲ್ಲವಾದರೂ ತಮ್ಮ ಮೂಲ ಕುಟುಂಬದೊಂದಿಗೆ ಬೆರೆಯುವ ಪ್ರಯತ್ನವನ್ನು ಮಾಡಿದ್ದಾರೆ.[33] ಮತ್ತೊಂದೆಡೆ ವಸಾಹತುಶಾಹಿ ಸೃಷ್ಟಿಸಿದ ರಾಜಕೀಯ ಹಾಗೂ ಆರ್ಥಿಕ ಸನ್ನಿವೇಶಗಳು ವಸಾಹತುಶಾಹಿ ಅಧಿಕಾರವನ್ನು ಸಮರ್ಥಿಸುವ ಮೂಲಗಳಾಗಿ, ಅದರಿಂದ ಪ್ರಯೋಜನ ಪಡೆದುಕೊಳ್ಳುವ ಆರಂಭಿಕ ಪ್ರಯತ್ನಗಳು ಸುಲಭವಾಗಿ ಈಡೇರಲ್ಪಟ್ಟವು. ಪ್ರಾಯಶಃ ಆ ಕಾಲದಲ್ಲಿ ಭೂತಗಳ ಹೆದರಿಕೆ,[34] ಸಾಮಾಜಿಕ ಅಂತಸ್ತಿನ ವೃದ್ಧಿ, ಪಶ್ಚಿಮದ ನಾಗರೀಕತೆ, ಉದ್ಯೋಗದ ಅಮಿಷ, ಊಳಿಗ ವ್ಯವಸ್ಥೆಯಿಂದ ಬಿಡುಗಡೆ ಮುಂತಾದವುಗಳು ಮತಪರಿರ್ವತನೆಯ ಮನವೊಲಿಕೆಗೆ ಕಾರಣವಾಗಿ ವಸಾಹತುಶಾಹಿ ಆಳ್ವಿಕೆಯನ್ನು ಬೆಂಬಲಿಸುವ ವರ್ಗವೊಂದನ್ನು ಸೃಷ್ಟಿಸಿತು. ಒಟ್ಟಿನಲ್ಲಿ ವಸಾಹತುಶಾಹಿ ತುಳುನಾಡನ್ನು ಒಂದು ಚೌಕಟ್ಟಿನಲ್ಲಿ ವ್ಯವಸ್ಥೆಗೊಳಿಸುವುದರ ಮೂಲಕ ವಸಾಹತುಶಾಹಿ ಮಾದರಿಯನ್ನು ಹೇರುವಲ್ಲಿ ಸಫಲಗೊಂಡಿತು.

## ---ಕೊನೆಟಿಪ್ಪಣಿ---

1 ಗಿರೀಶ್ ಭಟ್, ಅಧುನಿಕತೆಯ ವ್ಯಾಖ್ಯಾನ, ಡಿ.ಆರ್ ಮಾದರಿ, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂ.ವಿ.ವಿ 2005, ಪುಟ 24.

2 ಇಂಗ್ಲೆಂಡಿನ ಕೈಗಾರಿಕಾ ಕ್ರಾಂತಿಯಾಗುವಲ್ಲಿ ಭಾರತದ ಸಂಪನ್ಮೂಲಗಳು ಮತ್ತು ಭೌದ್ಧಿಕತೆಯೇ ಕಾರಣವೆಂದು ಖ್ಯಾತ ಚಿಂತಕ ಲಕ್ಷ್ಮೀಶ ತೋಳ್ಪಾಡಿಯವರು ಅಭಿಪ್ರಾಯ ಪಟ್ಟಿದ್ದಾರೆ. ದಿಕ್ಸೂಚಿ ಭಾಷಣ ಅಂತರ್‌ರಾಜ್ಯ ತುಳು-ಜಾನಪದ ವಿಚಾರ ಸಂಕಿರಣ ಮಾಣಿಲ, ತಾರೀಖು 5-2-2004.

3 ಬಿ.ಎಸ್.ಕೊಹನ್, ರೆಪ್ರಸೆಂಟಿಂಗ ಅಥಾರಿಟಿ ಇನ್ ವಿಕ್ಟೋರಿಯನ್ ಇಂಡಿಯಾ, ರಣಜಿತ್ ಗುಹಾ, ಡೋಮಿನೆನ್ಸ್ ವಿತ್‌ಔಟ್ ಹೆಜಿಮನಿ, ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998

4 ಪ್ರಾನ್ಸಿಸ್ ಬುಖಾನನ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807,

5 ಪೋರ್ಚುಗೀಸರ ಸಾಂದರ್ಭಿಕ ದಾಖಲೆಗಳು, ಮೆಕೆಂಜಿಯ ಕೈಪಿಯತ್ತುಗಳು, ಜೆಸೂಯಿಟ್, ಪ್ರಾನ್ಸಿಸ್ಕನ್ ಪಾದ್ರಿಗಳ ದಿನಚರಿ ಮುಂತಾದವುಗಳಲ್ಲಿ ತುಳುನಾಡಿನ ಚರಿತ್ರೆಯು ದಾಖಲುಗೊಂಡಿತು.

6 ಎಸ್.ಎನ್ ಬಾಲಗಂಗಾಧರ ಸೃತಿ-ವಿಸ್ಮೃತಿ, ಭಾರತದ ಸಂಸ್ಕೃತಿ, ಕನ್ನಡ ಅನುವಾದ ರಾಜರಾಮ ಹೆಗಡೆ, ಹೆಗ್ಗೋಡು, 2010.

7 ದ.ಕ ಜಿಲ್ಲಾಧಿಕಾರಿಯ ಕಛೇರಿಯ ಪತ್ರಗಾರ, ತಮಿಳುನಾಡಿನ ಪತ್ರಗಾರ, ಕೆ.ಟಿ.ಸಿ ಪತ್ರಾಗಾರದಲ್ಲಿ ಬಾಸೆಲ್‌ಮಿಷನ್ ಪ್ರಕಟಪಡಿಸಿದ ಸಾಹಿತ್ಯ ಗ್ರಂಥಗಳು, ವರದಿ, ಚರ್ಚ್ ಹಿಸ್ಟರಿ ರಿವಿವ್ಯೂ, ಸಂತ ಅಲೋಷಿಯಸ್ ಕಾಲೇಜಿನಲ್ಲಿ ಪ್ರಕಟವಾದ ಮಂಗಳೂರು ಮ್ಯಾಗಜೀನ್‌ನ ಅವತರಣಿಕೆ ಮುಂತಾದವುಗಳು.

8 ವೈಟ್‌ಮೆನ್ಸ್ ಬರ್ಡನ್-ಭಾರತವನ್ನು ನಾಗರೀಕಗೊಳಿಸುವ ಬಿಳಿಯರ ಜವಬ್ದಾರಿ

9 ತುಳುವರಿಗೆ ಭೂಮಿ ತಾಯಿಯಂತಿದ್ದರೆ, ವಸಾಹತುಶಾಹಿಗಳಿಗೆ ಮೌಲ್ಯ ಇರುವ ಸರಕಾಗಿ ಕಂಡಿತು.

10 ಜಮಾಬಂದಿ ದಾಖಲೆಗಳು-ಸಟ್ಲಮೆಂಟ್ ರಿಪೋರ್ಟು ಆಫ್ ಸೌತ್‌ಕೆನರಾ

11 ಪ್ರಾನ್ಸಿಸ್ ಬುಖಾನನ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, ಪುಟಗಳು 72, 147.

12 ಸುರೇಂದ್ರರಾವ್, ಕೆ.ಎಂ ಲೊಕೇಶ, ಕೂರ್ಗ್ ಇನ್‌ವೆಂಟೆಡ್, ಮಡಿಕೇರಿ 1998, ಪುಟ 62. ಸ್ಟರಕ್ ಜೆ,. ಸೌತ್‌ಕೆನರಾ, ಸಂಪುಟ-1 ಮದ್ರಾಸ್ ಪ್ರೆಸಿಡೆನ್ಸಿ, ಮದ್ರಾಸ್, 1864, ಪುಟಗಳು 16 19.

13 ಎ.ಎಸ್ ಪ್ರಭಾಕರ, ಆದಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ, ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ 2006, ಪುಟ 69.

14 ಸ್ವಾತಂತ್ರ ಪಡೆದ ನಂತರವು ವಸಾಹತುಶಾಹೀ ರೂಪಿಸಿದ ಕಾನೂನುಗಳು ತಿದ್ದುಪಡಿಯಾಗದೇ ಪ್ರಸ್ತುತ ಪ್ರಜಾಪ್ರಭುತ್ವ ಸರಕಾರದ ವಿರುದ್ಧ ತಮ್ಮ ಮೂಲಹಕ್ಕುಗಳನ್ನು ಪಡೆಯುವಲ್ಲಿ ತೊಂದರೆಯಾಗುತ್ತಿರುವುದು.

15 ಸಟ್ಲಮೆಂಟ್ ರಿಪೋರ್ಟು ಆಫ್ ಸೌತ್‌ಕೆನರಾ. 1901ರಿಂದ 1936ರ ನಡುವಿನ ಅವಧಿಯಲ್ಲಿ ಕೃಷಿ ಉತ್ಪಾಧನೆಯು ಶೇಕಡಾ 4ರಷ್ಟು ಕುಸಿಯಿತು.

16 ಕಾರ್ಯಕ್ಷೇತ್ರದ ಅಧ್ಯಯನ; ಉದಾಹರಣೆಗೆ ಇನವಳ್ಳಿ ಸಾವಿರಾಳ ಅಧಿಕಾರವನ್ನು ಹೊಂದಿದ್ದು, ವಸಾಹತುಶಾಹಿ ಪ್ರಭಾವದಿಂದಾಗಿ 18 ಗುತ್ತುಗಳ ಅಧಿಕಾರ ಗೌಣಗೊಂಡವು ಮಾತ್ರವಲ್ಲ ಗ್ರಾಮಗಣ್ಯರು, ಆ ಗುತ್ತುಗಳನ್ನು ಅವಲಂಬಿಸಿದ ವಿವಿಧ ವೃತ್ತಿ ಆಧಾರಿತ ಸಮುದಾಯಗಳು ಉದ್ಯೋಗ ಅರಸಿ ತಮ್ಮ ಗ್ರಾಮಗಳಿಂದ ವಲಸೆ ಹೋದ ಉದಾಹರಣೆಗಳಿವೆ. ಈ ಪ್ರದೇಶಕ್ಕೊಳಪಟ್ಟ ಧಾರ್ಮಿಕ ಕೇಂದ್ರಗಳು ಪಾಳು ಬಿದ್ದಿದ್ದು ಅನಾಥವಾಗಿವೆ. ಇನವಳ್ಳಿ ಸಾವಿರಾಳ ಅಧಿಕಾರಕೊಳಪಟ್ಟ ಪಾವೂರು ಗುತ್ತಿನವರು ಈ ರೀತಿ ಅಳಿದು ಹೋದ ಕುಟುಂಬ ವ್ಯವಸ್ಥೆಯ ಪುನರುತ್ಥಾನಕ್ಕಾಗಿ ಶ್ರಮಿಸುತ್ತಿರುವುದು, ಮಾತ್ರವಲ್ಲ ಧಾರ್ಮಿಕ ಕ್ಷೇತ್ರಗಳು ಉತ್ಥಾನಕ್ಕೊಳಪಡುತ್ತಿರುವುದು ವರ್ತಮಾನದ ಬೆಳವಣಿಗೆಗಳಾಗಿವೆ.

17 ವಸಾಹತುಪೂರ್ವದಲ್ಲಿ ಅಧಿಕಾರ ನಡೆಸಿದ್ದ ಬ್ರಾಹ್ಮಣ, ಜೈನ, ಒಕ್ಕಲುಗಳು ವಸಾಹತುಶಾಹಿ ಕಾಲದಲ್ಲೂ ಅಧಿಕಾರವನ್ನು ಅನುಚಾನವಾಗಿ ಮುಂದುವರೆಸಿದ್ದಲ್ಲದೇ, ಹೆಚ್ಚಿನ ಬ್ರಾಹ್ಮಣರು ಮಠ ಮುಂತಾದ ಧಾರ್ಮಿಕ ಸಂಸ್ಥೆಗಳು ಗೈರುಹಾಜರಿಯ ಭೂಮಾಲಕರಾಗಿದ್ದರು.

18 ಟಿ.ಎಲ್ ಗಟ್ಟಿ, ಮಂಜಾಯಣ- ಕಥಾನಕ, ಕೋಟೆಕಾರ್ ಪ್ರಕಾಶನ 2013. ವರ್ಕಾಡಿ ಗ್ರಾಮದ ತಾಮಾರು ಗುತ್ತು ಇದರ ಐದು ತಲೆಮಾರುಗಳನ್ನು ಆಧರಿಸಿದ ಅಳಿಯಸಂತಾನ ಕಟ್ಟುಕಟ್ಟಳೆಯ ಕಥನ

19 ಸಟ್ಲಮೆಂಟ್ ರಿಪೋರ್ಟು ಆಫ್ ಸೌತ್‌ಕೆನರಾ ಪಾರ್ ಪಾಸ್ಲಿ ಇಯರ್ 1300 (1890-91) ಕಂದಾಯ ಹೊರೆ ಭರಿಸಲಾಗದೇ (ಡಿಪಾಲ್ಟರ್‌ಗಳ) ಭೂಮಿಯನ್ನು ವಿಕ್ರಯಿಸಿರುವುದು. ಪುಟ 5.

[20] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು; ಮೋಹನಕೃಷ್ಣ ರೈ, ಕೆನರಾದ ವಿಭಜನೆ, ಪ್ರಸಾರಾಂಗ ಕ.ವಿ.ವಿ ಹಂಪಿ, 2010 ಪುಟ 66:

[21] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ 205. ಮೋಹನಕೃಷ್ಣ ರೈ, ಅರ್ಬನೈಜೇಷನ್ ಇನ್ ಮಂಗಳೂರು, ಪ್ರಕಟಿತ ಪಿ.ಎಚ್.ಡಿ ಪ್ರಬಂಧ, ಮಂಗಳೂರು ವಿ.ವಿ.

[22] ಮೋಹನಕೃಷ್ಣ ರೈ ಕೆ, ತುಳುನಾಡು ಕನ್ನಡ ನುಡಿ, ಪ್ರಸರಾಂಗ, ಕ.ವಿ.ವಿ ಹಂಪಿ, 2012, ಪುಟಗಳು 260–268.

[23] ಬಿಪನ್‌ಚಂದ್ರ, ನೇಷನಾಲಿಸಂ ಅಂಡ್ ಕೊಲೊನಿಯಾಲಿಸಮ್ ಇನ್ ಮಾಡರ್ನ್ ಇಂಡಿಯಾ, ಪುಟ 7.

[24] ಎನ್.ಎ. ಶಂಕರನಾರಾಯಣರಾವ್, ಸ್ವಾತಂತ್ರ್ಯ ದಂಗೆಯ ಸಾವಿರ ತೊರೆಗಳು, 1991, ಪುಟ 53.

[25] ಬಿಪನ್ ಚಂದ್ರ, ದ ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಕನ್ನಡಾನುವಾದ ಎಚ್.ಎಸ್ ಗೋಪಾಲರಾವ್ ಪುಟ 132–133.

[26] ಬಿಪನ್ ಚಂದ್ರ, ನೇಷನಾಲಿಸಂ ಅಂಡ್ ಕೊಲೊನಿಯಾಲಿಸಮ್ ಇನ್ ಮಾಡರ್ನ್ ಇಂಡಿಯಾ, ಪುಟಗಳು 183, 188–189; ಮೋಹನಕೃಷ್ಣ ರೈ, ಕೆನರಾದ ವಿಭಜನೆ, ಪುಟಗಳು 70–73.

[27] ಜಯಪ್ರಕಾಶ ರಾಘವಯ್ಯ, ಬಾಸೆಲ್ ಮಿಷನ್ ಇಂಡಸ್ಟ್ರೀಸ್ ಇನ್ ಮಲಬಾರ್ ಅಂಡ್ ಸೌತ್ ಕೆನರಾ 1834–1914. ಗ್ಯಾನ್ ಪಬ್ಲಿಷರ್ಸ್ ನ್ಯೂದಿಲ್ಲಿ 1990. ಪುಟಗಳು 20–50.

[28] ಪ್ರಸನ್ನ, ಯಂತ್ರಗಳನ್ನು ಕಳಚೋಣ ಬನ್ನಿ, ಸಮಕಾಲೀನ ಸಂಸ್ಕೃತಿ ವಿಮರ್ಶೆ, ಹೆಗ್ಗೋಡು 2009. ಪುಟ 143.

[29] ತೀರ್ಥರಾಮ ವಳಲಂಬೆ, ಧ್ಯಾನ ಒಂದು ಶಾಂತಿಯಾತ್ರೆ, 4ನೇ ಮುದ್ರಣ–2010 ಮಂಗಳೂರು. ಪುಟ 172.

[30] ಡಿ.ಆರ್ ನಾಗರಾಜ್: ಸಂಸ್ಕೃತಿ ಕಥನ, ಮೆಕಾಲೆಯ ಮಕ್ಕಳು. ಪುಟ 77 ಚರ್ಚ ಹಿಸ್ಟರಿ ರಿವಿವ್ಯು, ಎ ಸ್ಟಡಿ ಒನ್ ಥರ್ಡ್ ವಲ್ಡ್ ವಿದ್ ಸ್ಪೆಷಲ್ ರೆಫರನ್ಸ್ ಟು ಇಂಡಿಯಾ ಪುಟಗಳು 35–44: ಗಿರೀಶಭಟ್, ಅಧುನಿಕತೆಯ ವ್ಯಾಖ್ಯಾನ–ಡಿ.ಆರ್ ಮಾದರಿ ಅಪ್ರಕಟಿತ ಸಂಶೋಧನಾ ಪ್ರಬಂಧ ಮಂ.ವಿ.ವಿ ಪುಟ 76.

[31] ವಿಶಾನ್ಸ್, ಅಪ್ರಕಟಿತ ಸಂಶೋಧನ ಪ್ರಬಂಧ, ಪುಟ 56, ಮಂಗಳೂರು ಮ್ಯಾಗಜೀನ್ ಸಂಚಿಕೆ 1 1897–1900 ಪುಟ 22.

[32] ಪೀಟರ್ ವಿಲ್ಸನ್ ಪ್ರಭಾಕರ್, ಬಾಸೆಲ್ ಮಿಷನ್ ಒಂದು ಅಧ್ಯಯನ, ಅಪ್ರಕಟಿತ ಸಂಶೋಧನ ಪ್ರಬಂಧ ಮಂ.ವಿ.ವಿ ಪುಟ 59–60. ಕ್ರಾಂತಿ ಪರಾಯಸ್. ದ ಕ್ರಿಶ್ಚನ್ ಇಂಪಾಕ್ಟ್ ಇನ್ ಸೌತ್ ಕೆನರಾ, 1999, ಪುಟಗಳು 11–15.

[33] ಜಯವಿಜಯ ಅಶೋಕ್ ಅಮ್ಮನ್ನ– ಗುಡ್ಡೆ ಪಾಂಗಾಳ ಅಮೀನ್ ಕುಟುಂಬದಿಂದ ಅವರ ಐದು ತಲೆಮಾರುಗಳ ಹಿಂದೆ ಬಾಸೆಲ್ ಮಿಷನ್‌ಗೆ ಮತಪರಿವರ್ತನೆ ಹೊಂದಿದವರು. ಕಾರ್ಯಕ್ಷೇತ್ರದ ಮಾಹಿತಿ: ಮಂಜೇಶ್ವರದ ಮತಪರಿವರ್ತಿತ ಕೊರಗ ಕಾಲನಿಯಲ್ಲಿ ನಡೆಸಿದ ಸಂದರ್ಶನದ ವಿಚಾರಗಳ ಬಗ್ಗೆ ಚರ್ಚಿಸಲಾಗಿದೆ. ಡಾ. ಗೋವಿಂದ ರಾಜ್ ಸಹಾಯಕ ಪ್ರಾಧ್ಯಾಪಕರು ಸಮಾಜಶಾಸ್ತ್ರ ವಿಭಾಗ ಮಂಗಳೂರು ವಿಶ್ವವಿದ್ಯಾನಿಲಯ ಮಂಗಳೂರು.

[34] ಭೂತಾರಾಧನೆಯ ಮುಖಾಂತರ ಪಾರಂಪರಿಕ ಸ್ಥಳೀಯ ಆಡಳಿತಗಾರರು ಪ್ರಬಲ ಹಿಡಿತವನ್ನು ಹೊಂದಿ ತಮ್ಮ ಒಕ್ಕಲುಗಳ ಮೇಲೆ ಅಧಿಕಾರ ಚಲಾಯಿಸುತ್ತಿದ್ದರು. ಮಾತ್ರವಲ್ಲ ಭೂಮಾಲಿಕರಾಗಿ ಶೋಷಣೆಯನ್ನು ಮಾಡಿರುವ ಸಾಧ್ಯತೆಗಳು ಇಲ್ಲದಿಲ್ಲ.

## ಸ್ಥಳೀಯ ರಾಜಕೀಯ-ಆಡಳಿತ ಪಲ್ಲಟ

ಚರಿತ್ರೆಯುದ್ದಕ್ಕೂ ತುಳುನಾಡು ನಿರಂತರವಾಗಿ ಹಲವಾರು ಅನುಭವಗಳಿಗೆ ಒಳಗಾದ ಭೂಪ್ರದೇಶವಾಗಿದೆ. ವಸಾಹತುಶಾಹಿಗೆ ಬಲವಂತವಾಗಿ ತೆರೆದುಕೊಂಡಾಗ ಅದರ ವಿಭಿನ್ನ ಗುಂಪುಗಳು ಸಿದ್ದಪಡಿಸಿದ ಚಿಂತನೆಗಳಿಗೆ ಅನುಗುಣವಾಗಿ, ಬೇರೆ ಬೇರೆ ದೃಷ್ಟಿಕೋನಗಳಿಂದ ಏಕಪ್ರಕಾರದ ಗುರಿಗಳನ್ನಿಟ್ಟುಕೊಂಡ ಪ್ರದೇಶವಾಗಿ ಗುರುತಿಸಲ್ಪಟ್ಟಿತ್ತು.[1] ತುಳುನಾಡಿನ ಭೂಮಿಯ ಒಡೆತನದ ಪರಿಕಲ್ಪನೆಗಳು, ಅವುಗಳನ್ನು ಒಳಗೊಂಡ ಸಮುದಾಯಗಳು, ಸ್ಥಳೀಯ ಆಡಳಿತದ ವ್ಯವಸ್ಥೆಗಳು ವಸಾಹತುಗಾರರ ಮನೋಪ್ರವೃತ್ತಿಗೆ ಅನುಗುಣವಾಗಿ ಬಿಂಬಿಸಲ್ಪಟ್ಟವು. ತುಳುನಾಡು ವಸಾಹತಿಕರಣಕ್ಕೊಳಗಾದಾಗ ಪ್ರತಿಸ್ಪಂದನ ಹಾಗೂ ಪ್ರತಿಕ್ರಿಯೆಗಳು ವಿದೇಶಿ ಯಜಮಾನರಿಂದ ಎರವಲು ಪಡೆದ ಪರಿಕಲ್ಪನೆಗಳಿಂದಲೇ ಅಭಿವ್ಯಕ್ತಗೊಂಡಿದುದರಿಂದ ಇಲ್ಲಿನ ಬಹುಮುಖಿ ಆಯ್ಕೆಗಳು ಬದಲಾದ ಪರಿಸ್ಥಿತಿಯಲ್ಲಿ ಭೌತಿಕವಾಗಿ ಹಾಗೂ ದೈಹಿಕವಾಗಿ ಕಣ್ಮರೆಯಾದವು. ಹೀಗೆ ವಸಾಹತುಶಾಹಿ ಆಡಳಿತದ ಪರಿಕಲ್ಪನೆಗಳು ಅವಕಾಶವನ್ನು ಪಡೆದುಕೊಂಡು ಹಳೆಯ ಆಯ್ಕೆ ಅಪ್ರಸ್ತುತಗೊಂಡಿತು. ಈ ಬೆಳವಣಿಗೆ ವಸಾಹತಿನ ರಾಜಕೀಯ-ಆಡಳಿತದ ಬಹುಮುಖತೆಗಳಿಗೆ ಆಕರ್ಷಣೆ ಮತ್ತು ನ್ಯಾಯಬದ್ದತೆಗಳನ್ನು ನಿರಾಕರಿಸಿತು.

ಹದಿನೆಂಟನೇ ಶತಮಾನದ ಕೊನೆಯವರೆಗೂ ವಸಾಹತುಶಾಹಿ ವಸಾಹತನ್ನು ವ್ಯವಸ್ಥಿತವಾಗಿ ಆಳುವ ಯೋಜನೆಯನ್ನು ರೂಪಿಸಿರಲಿಲ್ಲ.[2] ಸಾಮಾನ್ಯಶಕೆ 1739ರಲ್ಲಿ ವಸಾಹತುಶಾಹಿ ಕೆಳದಿಯ ನಾಯಕರೊಂದಿಗೆ ವ್ಯಾಪಾರದ ಒಪ್ಪಂದ ಮಾಡಿ ಕೆನರಾ ಮತ್ತು ಸೊಂದಾ ಪ್ರದೇಶಗಳಲ್ಲಿ ವ್ಯಾವಹಾರಿಕ ಲಾಭ ಗಳಿಸಿತು ಮಾತ್ರವಲ್ಲ ರಾಜಕೀಯ ಗುರಿ ಸಾಧಿಸುವ ಪ್ರಯತ್ನವನ್ನು ಮಾಡಿತ್ತು. ಸಾಮಾನ್ಯಶಕೆ *1763ರಲ್ಲಿ ಮೈಸೂರಿನ ಅರಸರಿಂದ ಪಡೆದುಕೊಂಡ ಫರ್ಮಾನು* ವಸಾಹತುಶಾಹಿಯನ್ನು ತುಳುನಾಡಿನ ಅಂತರಿಕ ರಾಜಕೀಯದ ಮಜಲಿಗೆ ಮತ್ತಷ್ಟು ಪರಿಚಯಿಸಿ, ವ್ಯಾಪಾರದ ಸಬೂಬಿನೊಂದಿಗೆ ರಾಜಕಾರಣದ ನೆಲೆ ಭದ್ರಪಡಿಸಿತು. *ಹೀಗೆ* ವ್ಯಾಪಾರದ ಚಟುವಟಿಕೆಗಳು ವಸಾಹತುಶಾಹಿಯ ಪ್ರವೇಶಕ್ಕೆ ವ್ಯಾವಹಾರಿಕ ಅವಕಾಶ ಕಲ್ಪಿಸಿದರೆ, ತುಳುನಾಡಿನ ರಾಜಕೀಯ ಅರಾಜಕತೆ ರಾಜಕೀಯ ಪ್ರವೇಶಕ್ಕೆ ಅನುವು ಕಲ್ಪಿಸಿತು. ಈ ಸಂದರ್ಭದಲ್ಲಿ ರಾಜಕೀಯ ಆಡಳಿತದ ಒಳಮರ್ಮವನ್ನು ಅರ್ಥೈಸಿದ ವಸಾಹತುಶಾಹಿ ಅಧಿಕಾರ ಮತ್ತು ಸ್ವಹಿತಾಸಕ್ತಿಗಳ ಕಾರ್ಯಸೂಚಿಗಳೊಂದಿಗೆ ರಾಜಕೀಯ ಆಡಳಿತದಲ್ಲಿ ಹಸ್ತಕ್ಷೇಪಕ್ಕೆ ತೊಡಗಿ ಸಾಮಂತರ ಆಸ್ತಿತ್ವವನ್ನು ನಿಧಾನವಾಗಿ ಪ್ರಶ್ನಿಸಿತು. ಇದೇ ವೇಳೆ ವಸಾಹತಿನ ರಾಜಕೀಯ-ಆಡಳಿತದ ವಾರಸುದಾರರು ಅಧಿಕಾರವನ್ನು ಯಥಾಸ್ಥಿತಿಯಲ್ಲಿಡುವಲ್ಲಿ ವಸಾಹತುಶಾಹಿಯೊಂದಿಗೆ ಸಂಧಾನಗಳನ್ನು ಮಾಡಿದರಾದರೂ

ಸಾಂದರ್ಭಿಕವಾಗಿ ದಾಸ್ಯಕ್ಕೊಳಪಟ್ಟು ರಾಜಕೀಯವಾಗಿ ದುರ್ಬಲರಾದರು. ಸಾಮಾನ್ಯಶಕೆ 1799ರಲ್ಲಿ ಟಿಪ್ಪುಸುಲ್ತಾನನ ಅಂತ್ಯ, ಮೈಸೂರಿನ ಪ್ರಭುತ್ವದ ಛಾಯೆಯ ಅಸ್ತಂಗತ, ಸಾಮಂತರಸರ ರಾಜಕೀಯ ದೌರ್ಬಲ್ಯ ವಸಾಹತುಶಾಹಿಯ ಬಲವರ್ಧನೆಗೆ ಕಾರಣವಾಯಿತು.[3]

ತುಳುನಾಡಿನ ರಾಜಕೀಯ ವ್ಯವಸ್ಥೆಯಲ್ಲಿ ನಿರ್ಣಾಯಕ ಶಕ್ತಿಯಾಗಿ ಬಲವರ್ಧಿಸಿಕೊಂಡ ವಸಾಹತುಶಾಹಿಯ ವ್ಯಾಪಾರಿ ಉದ್ದೇಶದ ಪ್ರಾರಂಭದ ನಡೆಗಳ ಜತೆ ಸ್ಥಳೀಯ ರಾಜಕೀಯ-ಆಡಳಿತ ವ್ಯವಸ್ಥೆಗಳಿಗೆ ಅನುಗುಣವಾಗಿ "ದ ರೈಟ್ ಆಫ್ ಕಾಂಕ್ವೆಸ್ಟ್"ನ ಪರಿಕಲ್ಪನೆಯನ್ನು ಇಟ್ಟುಕೊಂಡಿರಲಿಲ್ಲ.[4] ವ್ಯಾಪಾರಿಸಂಸ್ಥೆಯ ರೂಪದಲ್ಲಿ ಕಾರ್ಯಪ್ರವೃತ್ತವಾಗಿ ಬಂಡವಾಳಶಾಹಿ ನೀತಿಯನ್ನು ಮುಂದಿಟ್ಟು ಆದಾಯ ವೃದ್ಧಿಗಾಗಿ ಕಾರ್ಯ ಮುಂದುವರೆಸಿತ್ತು. ಜೊತೆಗೆ ವಸಾಹತುಶಾಹಿ ವಸಾಹತಿನ ಆರ್ಥಿಕತೆಯ ಜೀವಾಳವಾಗಿದ್ದ ಗ್ರಾಮಗಳ ಕಡೆ ಗಮನ ಕೇಂದ್ರಿಕರಿಸಿ ಗರಿಷ್ಠ ಲಾಭದ ಮನೋಧರ್ಮಕ್ಕೆ ಅನುಗುಣವಾಗಿ ವಸಾಹತನ್ನು ಪರಿವರ್ತಿಸಿತು.[5] ಈ ಪರಿವರ್ತನೆಯ ಹಂತದಲ್ಲಿ ವಸಾಹತಿನ ಗ್ರಾಮೀಣ ಮಟ್ಟದ ಸಣ್ಣ ರಾಜಕೀಯ ಘಟಕಗಳು 'ತಮಗೆ ಬೇಕಿರುವುದೆಲ್ಲ ತಮ್ಮಲ್ಲೆ ಇದ್ದು ಯಾವುದೇ ಅನ್ಯ ಸಂಬಂಧಗಳಿರದೇ ಸ್ವತಂತ್ರರು' ಎಂಬ ಕಲ್ಪನೆಯ ಸನ್ನಿವೇಶವನ್ನು ಹೊಂದಿದ್ದವು. ಮಾತ್ರವಲ್ಲ ತುಳುನಾಡಿನ ಸ್ಥಳೀಯ ಆಡಳಿತವು ಪಾರಂಪರಿಕ ವಿಧಾನದ ನೆಲೆಗಟ್ಟಿನಲ್ಲಿ ರೂಪಿತಗೊಂಡಿದ್ದ ಚದರಿದ ಹಾಗೂ ಬಹುತೇಕ ಕಾಲ್ಪನಿಕ ನಂಬಿಕೆ ಹಾಗೂ ಸಿದ್ಧಾಂತಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಅಧಿಕಾರ ಗಂಡು-ಹೆಣ್ಣು, ಕುಟುಂಬ-ಗುತ್ತು, ಗ್ರಾಮ-ಮಾಗಣೆ-ಸೀಮೆ, ಹೀಗೆ ಏಣಿ-ಶ್ರೇಣಿಯ ಉಪಾದಿಯಲ್ಲಿ ನಡೆಯುತ್ತಿತ್ತು. ವಸಾಹತುಪೂರ್ವದಲ್ಲಿ ಇದು ಹೆಚ್ಚು ಪ್ರಾಯೋಗಿಕ ರೂಪವನ್ನು ಪಡೆದುಕೊಂಡಿದ್ದರಿಂದ ಅಧಿಕಾರದ ನೆಲೆಗಳು ಸಡಿಲ ವಿನ್ಯಾಸವನ್ನು ಪಡೆದುಕೊಂಡಿದ್ದವು. ವಸಾಹತುಪೂರ್ವದ ತುಳುನಾಡಿನ ಕೆಳಹಂತದಲ್ಲಿ ಅಧಿಕಾರ ವ್ಯವಸ್ಥಿತವಾಗಿದ್ದರೇ ಮೇಲ್‌ಹಂತದಲ್ಲಿ ಯುದ್ಧದಲ್ಲಿನ ಗೆಲುವುಗಳ ಮೇಲೆ ಅಧಿಕಾರ ಆಧಾರಿತವಾಗಿ ನಿಶ್ಚಿತವಾಗಿರಲಿಲ್ಲ. ಗ್ರಾಮದಂತಹ ಕೆಳಹಂತಗಳ ಅಧಿಕಾರ ಯಾವುದೇ ಏರುಪೇರಿಲ್ಲದೇ ನಡೆಯುತ್ತಿತ್ತು. ಗ್ರಾಮದ ಕಪ್ಪಕಾಣಿಕೆಗಳು ಗೆದ್ದವರಿಗೆ ಸಂದಾಯವಾಗುತ್ತಿತ್ತು.[6] ಆದ್ದರಿಂದ ತುಳುನಾಡಿನ ಆಡಳಿತ ವ್ಯವಸ್ಥೆ ನಿಶ್ಚಿತ ತತ್ವಗಳನ್ನು ಆಧರಿಸಿ ರೂಪಿತಗೊಂಡಿದ್ದ ವ್ಯವಸ್ಥೆಯಾಗಿರದಿದ್ದರಿಂದ ಅದು ಕೃಷಿ ಅಧಿಕಾರದ ಔಪಚಾರಿಕ ಅನುಕೂಲಗಳ ಮೇಲೆ ಅವಲಂಬಿಸಿತ್ತು.

ಅಳೂಪರ ಪತನನಂತರ ತುಳುನಾಡಿನ ರಾಜಕೀಯಾಧಿಕಾರದಲ್ಲಿ ಪ್ರಭಾವಿಗಳಾಗಿದ್ದ ಜೈನ ಸಾಮಂತರು ಕೆಳದಿಯ ಸೋಮಶೇಖರನ ದಾಳಿಯಿಂದಾಗಿ ಸಂಪೂರ್ಣ ಸೋತಿದ್ದರು. ಮಾತ್ರವಲ್ಲ ಮೈಸೂರಿನ ಸುಲ್ತಾನರ ಆಳ್ವಿಕೆಯಡಿ ಕೇವಲ ಕಂದಾಯ ಸಲ್ಲಿಸುವುದರ ಜೊತೆಗೆ

ನಾಮಮಾತ್ರ ರಾಜಕೀಯಾಧಿಕಾರಿಗಳಾಗಿದ್ದರು. ಹೀಗೆ ಒಂದೊಮ್ಮೆ ಪ್ರಭಾವಿಗಳಾಗಿದ್ದ ಚೌಟ, ಬಂಗ, ಅಜಿಲ, ಡೊಂಬ ಹೆಗ್ಗಡೆ, ಕುಂಬಳೆ ಅರಸ ಮುಂತಾದವರ ರಾಜಕೀಯಾಧಿಕಾರವೂ ಕುಗ್ಗಿತ್ತು. ಈ ಸಂದರ್ಭ ವಸಾಹತುಶಾಹಿಯ ಆಕ್ರಮಣದ ಫಲವಾಗಿ ತುಳುನಾಡಿನ ಸಾಮಂತರಸರು ಮತ್ತು ಪ್ರಭಾವಿ ಗುತ್ತುಗಳು ತಮ್ಮ ರಾಜಕೀಯ-ಆಡಳಿತಾತ್ಮಕ ಅಧಿಕಾರ ಕಳೆದುಕೊಂಡರು. ಇದು ವಸಾಹತುಶಾಹಿಯ ಅಧಿಕಾರದಾಹೀ ಯೋಜನೆಗಳ ವಿಸ್ತರಣೆಗೆ ವರದಾನವಾಗಿ ಪರಿಣಮಿಸಿತು. ಹೀಗೆ ವಸಾಹತಿನ ದುರ್ಬಲ ರಾಜಕೀಯ ಪರಿಸ್ಥಿತಿ ವಸಾಹತುಶಾಹಿಯ "ದ ರೈಟ್ ಆಫ್ ಕಾಂಕ್ವೆಸ್ಟ್" ಪರಿಕಲ್ಪನೆ ಬಲಗೊಂಡು ವಸಾಹತಿನ ಆಡಳಿತಾತ್ಮಕ ನೆಲೆಗಳು ಹಂತ ಹಂತವಾಗಿ ದುರ್ಬಲಗೊಂಡವು. ವಸಾಹತುಶಾಹಿಯ ರೂಲ್ ಆಫ್ ಲಾದ ಆಡಳಿತ ಸರಕಾರಿ ಆಜ್ಞೆಯೊಂದಿಗೆ ಕಾರ್ಯಗತಗೊಂಡು ವಸಾಹತಿನ ಮೇಲಿನ ಹಿಡಿತ ಬಿಗಿಗೊಂಡಿತು. ಸರಕಾರಿ ಆಜ್ಞೆಗಳು ವಸಾಹತುಶಾಹಿ ಅಧಿಕಾರದ ಪ್ರವರ್ತನೆಯಾಗಿ, ಅಧಿಕಾರಸ್ಥರ ಹಿಂಸೆಯ ಉಪಕರಣವಾಗಿ, ಪ್ರಭುತ್ವದ ಅನನ್ಯತೆಯಾಗಿ ವಸಾಹತಿನಲ್ಲಿ ಕಾರ್ಯಗತಗೊಂಡಿತು. ವಸಾಹತುಶಾಹಿ ಸರಕಾರಿ ಆಜ್ಞೆಯನ್ನು ವ್ಯವಸ್ಥಿತವಾಗಿ ಪರಿಪಾಲಿಸಲು ಅನುಕೂಲವಾಗುವಂತೆ ಸೈನ್ಯ, ಪೋಲಿಸ್, ನ್ಯಾಯಾಂಗಗಳಂತಹ ಸಾಂಸ್ಥಿಕ ವ್ಯವಸ್ಥೆಗಳನ್ನು ಬಲಗೊಳಿಸಿ ನಿರಂಕುಶಾಧಿಕಾರಕ್ಕೆ ದೃಢತೆಯನ್ನು ಒದಗಿಸಿದ ಫಲವಾಗಿ ವಸಾಹತು ರಾಜಕೀಯವಾಗಿ ಪ್ರಬಲ, ಆರ್ಥಿಕವಾಗಿ ಲಾಭದಾಯಕ ಕೇಂದ್ರವಾಯಿತು.[7] ಈ ಬೆಳವಣಿಗೆಯ ತಾರ್ಕಿಕತೆಯನ್ನು ಸಮರ್ಥಿಸುವಲ್ಲಿ ವಸಾಹತುಪೂರ್ವದ ತುಳುನಾಡಿನ ಗ್ರಾಮೀಣ ಪರಂಪರಾಗತ ವ್ಯವಸ್ಥೆಗಳನ್ನು ವಿಸ್ತರಣೆಯ ಸಾಧನಗಳನ್ನಾಗಿಸಿತ್ತಲ್ಲದೇ ಅವುಗಳನ್ನು ತನ್ನ ಹಿತಸಾಧನೆಗೆ ಪರಿವರ್ತಿಸಿ ದುಡಿಸಿಕೊಂಡಿತು. ವಸಾಹತುಶಾಹಿಯ ರೂಲ್ ಆಫ್ ಲಾ ವಸಾಹತಿನ ಆಡಳಿತ ಘಟಕಗಳಾದ ಸೀಮೆ, ಮಾಗಣೆ, ಗ್ರಾಮದ ಅಧಿಕಾರಗಳನ್ನು ಮೊಟಕುಗೊಳಿಸಿತ್ತಲ್ಲದೇ ನ್ಯಾಯ ತೀರ್ಮಾನದಂತಹ ನ್ಯಾಯಿಕ ಅಧಿಕಾರಗಳು ಕೂಡಾ ಅದರ ನೀತಿ ನಿರೂಪಣೆಯಿಂದ ಆಸ್ತಿತ್ವ ಕಳೆದುಕೊಂಡಿತು. ದೈವ, ದೇವಸ್ಥಾನ, ಮಠ ಮುಂತಾದ ಧಾರ್ಮಿಕ ಸಂಸ್ಥೆಗಳು ವಸಾಹತುಶಾಹಿಯ ಹತೋಟಿಗೆ ಒಳಪಟ್ಟು ಅದರ ಉಸ್ತುವಾರಿ ಹೊಂದಿದ್ದ ಬೀಡು, ಗುತ್ತು, ಜೈನ, ಬ್ರಾಹ್ಮಣ, ಪ್ರಮುಖ ಒಕ್ಕಲು, ಜಾತಿಸಮುದಾಯಗಳು ರಾಜಕೀಯ ಅಧಿಕಾರದಿಂದ ವಂಚಿತಗೊಂಡವು.

ವಸಾಹತುಶಾಹಿಯ ರೂಲ್ ಆಫ್ ಲಾ ನೀತಿಯಿಂದಾಗಿ ಪಾರಂಪರಿಕ ರಾಜಕೀಯಾಡಳಿತದ ಪಳಿಯುಳಿಕೆಗಳು ಪ್ರತಿರೋಧ ವ್ಯಕ್ತಪಡಿಸಿದ್ದಲ್ಲಿ ಅದರ ಉಪಶಮನಕ್ಕಾಗಿ ಅಧಿಕಾರ ವಂಚಿತ ಪಾರಂಪರಿಕ ಅಧಿಕಾರೀ ವ್ಯವಸ್ಥೆಗಳನ್ನು, ಪ್ರಮುಖವಾಗಿ ಬ್ರಾಹ್ಮಣ, ಜೈನ, ಒಕ್ಕಲು, ಬಿಲ್ಲವ ಮುಂತಾದ ಸಾಮುದಾಯಿಕ ಗುಂಪುಗಳನ್ನು ವಸಾಹತುಶಾಹಿ ಆಡಳಿತದಲ್ಲಿ

ಸಹಯೋಗಿಗಳಾಗಿಸಿತು. ಹೀಗೆ ವಸಾಹತುಪೂರ್ವದಲ್ಲಿ ಆಸ್ತಿತ್ವದಲ್ಲಿದ್ದ ಸಾಮಾಜಿಕ ಅಧಿಕಾರ ಮತ್ತು ನಿಯಂತ್ರಣ, ಕೃಷಿ ಅಧಿಕಾರದ ಕಕ್ಷೆಯೊಳಗಿದ್ದ ಬೀಡು, ಗುತ್ತುಗಳಲ್ಲಿದ್ದ ಗ್ರಾಮಗಣ್ಯರ ನೆರವಿನೊಂದಿಗೆ ನೆಲೆಯನ್ನು ಭದ್ರಪಡಿಸಿತು. ಹೀಗೆ ಕಟ್ಟಿಕೊಂಡ ಆಡಳಿತ ಯಂತ್ರವನ್ನು ಕಂದಾಯ ನಿರ್ಣಯ ಹಾಗೂ ಸಂಗ್ರಹ ಕಾರ್ಯಕ್ರಮಕ್ಕಾಗಿ ಸಜ್ಜುಗೊಳಿಸಿ ಅದರ ಆರ್ಥಿಕ ಶಕ್ತಿ ಪ್ರಬಲಗೊಳ್ಳುವಲ್ಲಿ ಬಳಸಿಕೊಂಡಿತು.[8] ಇದನ್ನು ಸಮರ್ಥಿಸಲೆಂಬಂತೆ ವಸಾಹತುಶಾಹೀ ಅಧಿಕಾರಿ ಹಾಗೂ ಬರಹಗಾರ ಜಾನ್‌ಸ್ಟೋಕ್ಸ್ ತುಳುನಾಡಿನ ಸ್ಥಳೀಯ ಅಧಿಕಾರದಲ್ಲಿ ಶಾನುಭೋಗ, ಕರಣಿಕ ಮತ್ತು ಪಟೇಲ ಹುದ್ದೆಗಳನ್ನು ಅನುವಂಶಿಕಗೊಳಿಸಿ, ಅವರ ಸೇವೆಯ ಅಗತ್ಯತೆಯನ್ನು ವಸಾಹತುಶಾಹಿಗೆ ಮನಗಾಣಿಸುತ್ತಾನೆ. ಅವರನ್ನು ಸರಕಾರಿ ಉದ್ಯೋಗಿಗಳಾಗಿ ಭರ್ತಿಗೊಳಿಸುವಂತೆ ಮದ್ರಾಸಿನ ಕಂದಾಯ ಸಮಿತಿಗೆ ಶಿಫಾರಿಸಿ ವಸಾಹತುಶಾಹಿಯ ಅಧಿಕಾರವನ್ನು ವಿಸ್ತರಿಸುವಲ್ಲಿ ಕಾರ್ಯೋನ್ಮುಖನಾದನು. ಶ್ಯಾನುಭೋಗ, ಕರಣಿಕ, ಪಟೇಲ ಮುಂತಾದವರು ವಸಾಹತುಪೂರ್ವದಲ್ಲಿ ಪಾರಂಪರಿಕ ವ್ಯವಸ್ಥೆಗೆ ಒತ್ತಾಸೆಯಾಗಿದ್ದು, ಶ್ರೇಣಿಕೃತ ಸಮಾಜ ನಿರ್ಮಾಣ ಮಾಡುವಲ್ಲಿ ತಮ್ಮದೇ ಕೊಡುಗೆಯನ್ನು ನೀಡಿದ್ದರು. ವಸಾಹತುಶಾಹಿಯ ಕಾಲದಲ್ಲೂ ಸರಕಾರದ ಅಗತ್ಯ ಉಪಕರಣಗಳಾಗಿ ಕರ್ತವ್ಯ ನಿರ್ವಹಿಸಿ ಶ್ರೇಣಿಕೃತ ಸಮಾಜದ ಯಥಾಸ್ಥಿತಿ ನಿರ್ಮಾಣವಾಗುವಲ್ಲಿ ಹಾಗೂ ಸಮಾಜದ ಕೆಳವರ್ಗಗಳನ್ನು ಶೋಷಿಸುವಲ್ಲಿ ಸಹಕರಿಸಿದರು. ಹೀಗೆ ವಸಾಹತುಶಾಹಿಯ ಸಮಯಾನುವರ್ತನೆ, ಅದನ್ನು ಸಂರಕ್ಷಿಸಲು ನೆರವಾದ ಆರ್ಥಿಕ, ಸೈನಿಕ ಶಕ್ತಿ ಹಾಗೂ ವಿಚಾರ-ವಿನಿಮಯಗಳು ಮತ್ತು ಮೈತ್ರಿಗಳು ಅದರ ಆಡಳಿತದ ಸಾಧನಗಳಾಗಿ ಪರಿವರ್ತಿತವಾದವು. ವಸಾಹತುಪೂರ್ವದ ಭೂಮಿಯ ಒಡೆತನ ಆಧಾರಿತ ರಾಜಕೀಯ-ಆಡಳಿತಾತ್ಮಕ ವಾರಸುದಾರಿಕೆ, ಅದರ ಅವಶ್ಯಕತೆಗಳು, ಅದನ್ನು ಒಳಗೊಳ್ಳುವ ಸಮುದಾಯಗಳು, ಅವುಗಳಿಂದ ನಿರ್ವಹಿಸಲ್ಪಟ್ಟ ಸ್ಥಳೀಯ ಆಡಳಿತ ಮತ್ತು ಅದರೊಂದಿಗಿನ ಸಂವಾದ ವಿಧಾನಗಳು ಹೊಸ ಆಡಳಿತಗಾರರ ದೃಷ್ಟಿಕೋನಕ್ಕನುಗುಣವಾಗಿ ನಿರ್ಣಯಿಸಲ್ಪಟ್ಟವು. ವಸಾಹತುಶಾಹಿ ಸಂಧಾನ ಮತ್ತು ಕಾರ್ಯಶೀಲ ವ್ಯವಸ್ಥೆಯನ್ನು ಅನಿವಾರ್ಯವಾಗಿಸಿ, ಸೋತವರು ಗೆದ್ದವರಿಗೋಸ್ಕರ ದುಡಿಯುವಂತೆ ಪ್ರೇರೆಪಿಸಿತು. ಜೊತೆಗೆ ಮೈತ್ರಿಯ ಒಡಂಬಡಿಕೆಗಳು ಮತ್ತು ಷರತ್ತುಗಳು ಏಕಪ್ರಕಾರವಾಗಿ ಆಳುವವರಿಂದ ನಿರ್ದೇಶಿಸಲ್ಪಟ್ಟವು.[9] ಹೀಗೆ ಹಳೆಯ ರಾಜಕೀಯ-ಆಡಳಿತ ವ್ಯವಸ್ಥೆ ನಿಧಾನವಾಗಿ ನಾಶಗೊಂಡು ಅದರ ಅವಶೇಷಗಳ ಮೇಲೆ ಹೊಸ ರಾಜಕೀಯ-ಆಡಳಿತ ವ್ಯವಸ್ಥೆ ಕಟ್ಟುವ ಪ್ರಯತ್ನಗಳಾದವು.

ಎಡ್ವರ್ಡ್ ಸಯೀದ್ ಪ್ರಕಾರ ಅಸಮಾನ ಅಧಿಕಾರ ಸಂಬಂಧವುಳ್ಳ ಎರಡು ಸಂಸ್ಕೃತಿಗಳು ಚಾರಿತ್ರಿಕ ಕಾರಣಗಳಿಂದ ಮುಖಾಮುಖಿಯಾದಾಗ ಒಂದನ್ನೊಂದು ಹೇಗೆ ಗ್ರಹಿಸುತ್ತವೆ, ಗ್ರಹಿಕೆ ಹಿಂದಿರುವ ರಾಜಕೀಯ ಉದ್ದೇಶಗಳು? ತನಗೆ ಯಾವತ್ತಾದರೂ ಒಂದು

ದಿನ ಸವಾಲಾಗಬಲ್ಲ ವಿಶ್ವದ ಇನ್ನೊಂದು ವ್ಯವಸ್ಥೆಯನ್ನು ಅರಿಯಲು, ನಿಯಂತ್ರಿಸಲು, ನಿರ್ವಹಿಸಲು, ಕೊನೆಗೆ ಅದನ್ನು ತನ್ನೊಳಗೆ ಸೇರಿಸಿಕೊಳ್ಳಲು ಇರುವ ಇಚ್ಛೆ-ವಾಗ್ವಾದಗಳು ಅಧಿಕಾರದ ವಿವಿಧ ರೂಪಗಳೊಡನೆ ಆಳು, ಆಳಿಸಿಕೊಳ್ಳುವ ಭೌದ್ದಿಕ ಅಧಿಕಾರದ ಅಸಮಾನ ಸಂಬಂಧಗಳಿಂದ ಜನಿಸುತ್ತವೆ ಎಂದಿದ್ದಾನೆ.[10] ಒರಿಯಂಟನ್ನು ಗ್ರಹಿಸಿ ಸೂಚಿತ ಅಧಿಕಾರ ವೃದ್ಧಿಸಿ ವಸಾಹತನ್ನು ಹಿಡಿತದಲ್ಲಿ ಇಟ್ಟುಕೊಂಡು ಸವಾಲುಗಳನ್ನು ಎದುರಿಸಿ ಹೇಗೆ ಸೋಲದಿರುವುದು ಅಥವಾ ಅದರ ವಿಚಿತ್ರವಾದ ಆಯಾಮಗಳ ಪ್ರಭಾವಳಿಗೆ ಸಿಲುಕದಿರುವುದು ಹೇಗೆ ಎಂದು ನಿರೂಪಿಸುವುದಾಗಿದೆ ಎಂದಿದ್ದಾರೆ.[11] ಎಡ್ವರ್ಡ್ ಸಯೀದರವರ ಈ ಬಗೆಯ ವಿಶ್ಲೇಷಣೆಗಳು ಭಾರತೀಯ ವಸಾಹತು ಸಂದರ್ಭಗಳಲ್ಲಿ ಕಾಣಿಸಿಕೊಂಡ ಘಟನೆಗಳಿಗೆ ಹೆಚ್ಚು ಸೂಕ್ತವಾಗಿ ಅನ್ವಯಿಸುತ್ತವೆ. ತುಳುನಾಡಿನಲ್ಲಿಯೂ ವಸಾಹತುಶಾಹಿ-ವಸಾಹತು ಸಂಬಂಧಗಳು ಈ ತೆರನಾದ ರಾಜಕೀಯ ಸಂದರ್ಭಗಳಿಗೆ ತೆರೆದುಕೊಂಡಿದ್ದವು ಎಂಬುವುದು ಈ ವಿಚಾರದಲ್ಲಿ ವೇದ್ಯವಾಗುತ್ತದೆ. ಅಳೂಪರ ಆಡಳಿತದಿಂದ ವಸಾಹತುಪೂರ್ವದ ವರೆಗಿನ ಕೃಷಿ ಆಧಾರಿತ ಸಮುದಾಯಗಳು ರಾಜಕೀಯ ಮತ್ತು ಸಾಂಸ್ಕೃತಿಕ ಅಧಿಕಾರ ಚಲಾಯಿಸಿರುವ ರೀತಿಯ ಹಿನ್ನೆಲೆಯಲ್ಲಿ ಈ ಬಗೆಯ ವಾದವನ್ನು ಮಂಡಿಸಲಾಗಿತ್ತು.

ವಸಾಹತಿನಲ್ಲಿ ಪ್ರಭುತ್ವ ವ್ಯವಸ್ಥೆಯ ಅನುಪಸ್ಥಿತಿಯ ಬಗ್ಗೆ ವಸಾಹತುಶಾಹಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿತ್ತಾದರೂ, ವಾರನ್ ಹೇಸ್ಟಿಂಗ್ಸ್ ಮುಂತಾದ ಆಡಳಿತಾಧಿಕಾರಿಗಳ ಚಿಂತನೆಗಳನ್ನು ಅವಲೋಕಿಸಿದಾಗ ವಸಾಹತುಶಾಹಿಯ ವಂಚನೆಯ ಭೂಮಿಕೆ ಪ್ರಭುತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವಹಿಸಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಅವರ ಬಲಪ್ರಯೋಗ, ಆಕ್ರಮಣದ ಪ್ರವರ್ತನೆಗಳು ಸಾರ್ವಭೌಮ ಅಧಿಕಾರ ಮತ್ತು ಪ್ರಭುತ್ವ ಸ್ಥಾಪನೆಗೆ ಅವಕಾಶ ಕಲ್ಪಿಸಿ, ವಸಾಹತಿನ ಮೇಲೆ ಹತೋಟಿ ಸಾಧಿಸಿದೆ.[12]

ಬಲಪ್ರಯೋಗ, ಆಕ್ರಮಣ, ಒತ್ತಡ, ದೃಢನಂಬಿಕೆಗಳು ವಸಾಹತುಶಾಹಿ ಪ್ರಭುತ್ವದ ಪ್ರಖರತೆಯನ್ನು ಹೆಚ್ಚಿಸಿದ್ದರೆ, ಪ್ರತಿರೋಧದ ನಡುವೆಯೂ ವಸಾಹತಿನ ಪಾರಂಪರಿಕ ಅಧಿಕಾರದ ವರ್ಗಗಳನ್ನು ಸಹಯೋಗಗೊಳಿಸಿ ವಸಾಹತಿನ ವಿಧೇಯತೆಗಳನ್ನು ಸ್ಪುಟಗೊಳಿಸಿರುವುದು ವಸಾಹತುಶಾಹಿಯ ಹೆಚ್ಚುಗಾರಿಕೆ. ವಸಾಹತುಶಾಹಿಯ ನೂತನ ರಾಜಕೀಯ-ಆಡಳಿತ, ಅವು ರೂಪಿಸಿದ ಕಾನೂನು ಆಳಲ್ಪಡುವವರ ಮೇಲೆ ಹೇರಲ್ಪಟ್ಟು ಪ್ರಭುತ್ವ ಹಾಗೂ ರಾಜ್ಯವನ್ನು ಹತೋಟಿಯಲ್ಲಿಡುವ ಶಕ್ತಿಗಳಾಗಿ ರೂಪುಗೊಂಡವು. ಜೊತೆಗೆ ವಸಾಹತುಶಾಹಿ ಪ್ರಣೀತ ವಿಸ್ತಾರವಾದ ನ್ಯಾಯಾಂಗ ವ್ಯವಸ್ಥೆ, ಸುಧಾರಿತ ಪೋಲಿಸ್ ಬಲ, ಸುಸಜ್ಜಿತ ಸೈನಿಕ ಮತ್ತು ವ್ಯವಸ್ಥಿತ ನೌಕರಶಾಹಿ ವ್ಯವಸ್ಥೆ ಮುಂತಾದವುಗಳು ವಸಾಹತುಶಾಹಿ ಪ್ರಭುತ್ವದ

ವಾರಸುದಾರಿಕೆಯನ್ನು ವಿನ್ಯಾಸಗೊಳಿಸಿ, ವಸಾಹತಿನ ರಾಜಕೀಯ–ಆಡಳಿತ ವಾರಸುದಾರಿಕೆಯನ್ನು ದುರ್ಬಲಗೊಳಿಸಿತು.[13]

ಕೇರಳದ ಕಾಸರಗೋಡನ್ನು ಹೊಂದಿಕೊಂಡಂತೆ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯನ್ನು ತುಳುನಾಡು ಎಂಬುವುದಾಗಿ ಕರೆಯಲಾಗಿದೆ.[14] ವಸಾಹತುಶಾಹಿ ಆಳ್ವಿಕೆಗೆ ಒಳಗಾದ ಈ ಪ್ರದೇಶ ಮದ್ರಾಸ್ ಪ್ರೆಸಿಡೆನ್ಸಿಯ ಪ್ರಾಂತ್ಯವಾಗಿ ಗುರುತಿಸಿಕೊಂಡಿದ್ದು, ವಿಶಾಲವಾದ ಭೂಪ್ರದೇಶವನ್ನು ಹೊಂದಿದ್ದರಿಂದ ಆಡಳಿತದಲ್ಲಿ ಹಲವಾರು ಮಾರ್ಪಾಡುಗಳನ್ನು ಹೊಂದಬೇಕಾಯಿತು. ಜೊತೆಗೆ ವಸಾಹತುಶಾಹಿಯ ಕಂದಾಯ ಆಡಳಿತದ ಅನುಕೂಲಕ್ಕಾಗಿ ವ್ಯಾಪಾರ ಮತ್ತು ಸೈನಿಕ ಉದ್ದೇಶಗಳಿಗೆ ಮೀಸಲಾಗಿಟ್ಟು ಆಡಳಿತ ಕ್ರಮವನ್ನು ವಿನ್ಯಾಸಗೊಳಿಸಲಾಗಿತ್ತು. ವಸಾಹತುಶಾಹಿಯ ಆಳ್ವಿಕೆಯ ಆರಂಭದ ಅವಧಿಯಲ್ಲಿ ತುಳುನಾಡು ಐದು ತಾಲೂಕಾಗಿ ವಿಭಜನೆಗೊಂಡಿತು. ಅವುಗಳೆಂದರೆ ಕುಂದಾಪುರ, ಉಡುಪಿ, ಮಂಗಳೂರು, ಕಾಸರಗೋಡು ಮತ್ತು ಉಪ್ಪಿನಂಗಡಿ. ಸಾಮಾನ್ಯಶಕೆ 1800ರ ಡಿಸೆಂಬರ್‌ನಲ್ಲಿ ಕೆನರಾವನ್ನು ಉತ್ತರ–ದಕ್ಷಿಣಗಳನ್ನಾಗಿಸಿ ಎರಡು ವಿಭಾಗಗಳನ್ನು ಮಾಡಲಾಯಿತು. ದಕ್ಷಿಣ ವಿಭಾಗಕ್ಕೆ ಬಾರ್ಕೂರು, ಬೇಕಲ, ಬಂಟ್ವಾಳ ಮಂಗಳೂರು ತಾಲೂಕುಗಳು ಸೇರಿದ್ದವು. ಪ್ರತೀ ತಾಲೂಕುಗಳು ಉಪವಿಭಾಗಗಳನ್ನು ಹೊಂದಿದ್ದವು. ಬಾರ್ಕೂರು ತಾಲೂಕು ಬಾರ್ಕೂರು, ಬ್ರಹ್ಮಾವರ, ಕಾರ್ಕಳ ಉಪವಿಭಾಗಗಳನ್ನು, ಬಂಟ್ವಾಳ ತಾಲೂಕು ಕಡಬ, ಪುತ್ತೂರು, ವಿಟ್ಲ ಉಪವಿಭಾಗಗಳನ್ನು ಬೇಕಲ ತಾಲೂಕು ಬೇಕಲವನ್ನು, ಮಂಗಳೂರು ತಾಲೂಕು ಮಂಗಳೂರು, ಮುಲ್ಕಿ, ಅಮೀನದೀವಿ ದ್ವೀಪ ಸಮೂಹವನ್ನು ಒಳಗೊಂಡಿತ್ತು. ಪುತ್ತೂರು ಮತ್ತು ಅಮರಸುಳ್ಯ ಮಾಗಣೆಗಳು ಅಂದಿನ ಪುತ್ತೂರು ಜಿಲ್ಲೆಗೆ ಸೇರಲ್ಪಟ್ಟಿದ್ದವು. ಸಾಮಾನ್ಯಶಕೆ 1859ರಲ್ಲಿ ಇವೆಲ್ಲವೂ ಆರು ತಾಲೂಕುಗಳಾಗಿ ತುಳುನಾಡಿಗೆ ಸೇರಲ್ಪಟ್ಟವು. ಸಾಮಾನ್ಯಶಕೆ 1862ರಲ್ಲಿ ಕೆನರಾ ವಿಭಜನೆಗೊಂಡು ಕುಂದಾಪುರವನ್ನು ಒಳಗೊಂಡಂತೆ ಏಳು ತಾಲೂಕುಗಳಾಗಿ ವಿಭಜನೆಗೊಂಡಿತು. ಹೀಗೆ ವಸಾಹತುಶಾಹಿ ಆಡಳಿತದ ಅನುಕೂಲಕ್ಕೆ ಅನುಗುಣವಾಗಿ ಈ ವಿಭಜನೆ ಅನಿವಾರ್ಯವಾಗಿತ್ತು.[15] ಹೀಗೆ ವಸಾಹತುಶಾಹಿ ಪರಿಚಯಿಸಿದ ಆಡಳಿತ ಮತ್ತು ನಿಯಂತ್ರಣ ವಿಧಾನಗಳು ತುಳುನಾಡಿನ ಪರಂಪರಾಗತ ಕೃಷಿ ಅಧಿಕಾರ ಸಮೀಕರಣದ ಮೇಲೆ ಪ್ರಭಾವ ಬೀರಿತು. ಪರಿಣಾಮವಾಗಿ ತುಳುನಾಡಿನ ಆಡಳಿತದ ಗ್ರಾಮ್ಯಸ್ವರೂಪದ ಮೇಲೆ ವಸಾಹತುಶಾಹಿಯ ಅಧುನಿಕ ರಾಜಕೀಯಾಡಳಿತ ಪ್ರಭಾವಿಸಿತು.[16] ಅದರ ಪ್ರವೇಶ ಭಿನ್ನ ರಾಜಕೀಯ ಸ್ವರೂಪವನ್ನು ಪಡೆದು ಸ್ಥಾನಪಲ್ಲಟಗೊಳ್ಳುವ ಪ್ರಕ್ರಿಯೆಗೆ ಒಳಗಾಯಿತು.

ತುಳುನಾಡಿನ ಸಾಮಾಜಿಕ ರಚನೆಯ ಸೆಲೆಗಳಿಗೆ ಒತ್ತಾಸೆಯಾಗಿರುವ ಜನವರ್ಗಗಳು ಕೃಷಿ ಆಧಾರಿತವಾಗಿ ಭೂಮಿಯ ಒಡೆತನದ ಮೇಲಿನ ಅಧಿಕಾರವನ್ನು ಪಡೆದಿರುವುದನ್ನು

ಈಗಾಗಲೇ ಅಧ್ಯಯನಿಸಿರುವುದರಿಂದ ಸಾಮಾಜಿಕ ರಚನೆಯ ಮೂಲಸೆಲೆ ಆಡಳಿತಾತ್ಮಕ ವಾರಸುದಾರಿಕೆಯ ಕಲ್ಪನೆ ಮೂಡಲು ಕಾರಣವಾಗಿತ್ತು. ವಸಾಹತುಪೂರ್ವದಲ್ಲಿನ ಕೃಷಿ ಉತ್ಪಾದನೆ, ಭೂಮಿಯ ಮೇಲಿನ ಹಕ್ಕು, ಸಾಮಾಜಿಕ ಅಂತಸ್ತುಗಳು ವ್ಯಕ್ತಿ ಮತ್ತು ಸಮುದಾಯದ ರಾಜಕೀಯ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ಬಹಳ ಮುಖ್ಯವಾಗಿತ್ತು. ಅದುದರಿಂದ ಈ ಪ್ರದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಸಾಂಸ್ಕೃತಿಕ ವಾಸ್ತವತೆಯಿಂದ ಅನಾವರಣಗೊಂಡ ಅಧಿಕಾರದ ಸ್ತರಗಳನ್ನು ಅರ್ಥೈಸಿಕೊಂಡಾಗ ತುಳುನಾಡಿನಲ್ಲಿ ವಿಸ್ತಾರವಾದ ಭೂಮಿಯ ಹಿಡುವಳಿ ಹೊಂದಿದವ ರಾಜಕೀಯವಾಗಿ ಬಲಶಾಲಿಯಾಗಿ, ಆಡಳಿತಾತ್ಮಕವಾಗಿ ಪ್ರಭಾವಿಯಾಗಿದ್ದನು. ಮಾತ್ರವಲ್ಲ ಭೂಆಧಾರಿತ ಆರ್ಥಿಕತೆಯಲ್ಲಿನ ಸಾಮಾಜಿಕ ರಚನೆಯಲ್ಲಿ ಅಧಿಕಾರ ರೂಪುಗೊಂಡ ಸ್ತರಗಳು, ಕೃಷಿ ಭೂಮಿಯ ಒಡೆತನ, ಹತೋಟಿ, ಕೃಷಿ ಅವಲಂಬಿತ ಜನರ ಅಗತ್ಯತೆಗಳು, ಅಧಿಕಾರವನ್ನು ಯಥಾವತ್ತಾಗಿ ಕಾಯ್ದಿಡುವ ಶಿಷ್ಟ ಮತ್ತು ಪರಿಶಿಷ್ಟ ಚಿಂತನೆಗಳು ವಾರಸುದಾರಿಕೆಯ ಆಯಾಮಗಳಾಗಿ ವ್ಯವಸ್ಥಿಗೊಂಡಿದ್ದವು. ವಸಾಹತುಶಾಹಿಗಳು ತಮ್ಮ ಅಧುನಿಕ ಆಡಳಿತದ ನೆಲೆಗಳನ್ನು ವಿಸ್ತರಿಸುತ್ತಾ ಹೋದಂತೆ ಪಾರಂಪರಿಕ ಆಡಳಿತದ ಘಟಕಗಳು ದುರ್ಬಲಗೊಂಡವು. ಮುಂದುವರೆದ ಹೆಜ್ಜೆಯಾಗಿ ವಸಾಹತುಶಾಹಿ ರಾಜಕೀಯ ಅಧಿಕಾರ ಪಡೆಯಲು ಅನುಸರಿಸಿದ ಮಾರ್ಗಗಳೆಂದರೆ ಅವಕಾಶವಾದದ ಪ್ರವರ್ತನೆ ಹಾಗೂ ಸಾಂದರ್ಭಿಕ ಹಿಂಸಾಚಾರ. ಈ ಮಾರ್ಗಗಳು ಅವರ ಸಾಮ್ರಾಜ್ಯವನ್ನು ವಿಸ್ತರಿಸಲು ಅನುಕೂಲ ಮಾಡಿಕೊಟ್ಟರೇ ಪ್ರತಿರ್ಥೋಧಿಸಿದವರು ಮೂಲೆಗುಂಪಾದರು.[17] ಒಟ್ಟಾರೆಯಾಗಿ ವಸಾಹತುಶಾಹಿಯ ಪ್ರವೇಶ ತುಳುನಾಡಿನ ಕೃಷಿ ಅಧಿಕಾರ ವಸಾಹತುಶಾಹಿಯ ನೌಕರಶಾಹಿ ಅಥವಾ ಬಂಡವಾಳಶಾಹಿ ವ್ಯವಸ್ಥೆಗೆ ಹೊರಳಿಕೊಂಡಿತು. ಅಂದರೆ ಪರೋಕ್ಷವಾಗಿ ವಸಾಹತುಶಾಹಿಯ ಸ್ಥಳೀಯ ಆಡಳಿತ ವ್ಯವಸ್ಥೆಯ ಸ್ವಾಧೀನತೆಯ" ಪ್ರಕ್ರಿಯೆಯಾಗಿದ್ದು ವಸಾಹತಿನ ಚರಿತ್ರೆಯಲ್ಲಿ ಒಂದು ಜಲವಿಭಾಜಕ ಘಟನೆಯಾಯಿತು.[18]

ವಸಾಹತುಶಾಹಿಯ ಪ್ರವೇಶದ ನಂತರದ ಅಧಿಕಾರ ಸಂರಚನೆಯ ಸಂದರ್ಭದಲ್ಲಿ ಸಮಾಜದ ಯಜಮಾನಿಕೆಯ ಶಕ್ತಿಗಳ ಆಧಾರದಲ್ಲಿ ಸಮಾಜದ ಸಂಸ್ಕೃತಿ ರೂಪುಗೊಂಡಿದ್ದರಿಂದ ತುಳುನಾಡಿನ ಪರಂಪರಾಗತ ಆಡಳಿತ ಘಟಕಗಳು ವಸಾಹತುಶಾಹಿಯ ಕಾಲದಲ್ಲೂ ಅಧಿಕಾರದ ಗರಿಷ್ಠ ಅನುಭವಿಸುವಿಕೆಯನ್ನು ಬಯಸಿದ್ದವು. ವಸಾಹತುಶಾಹೀ ಒಪ್ಪಿಕೊಳ್ಳಬಹುದಾದ ಯಾವುದೇ ಕನಿಷ್ಠ ಗೌರವ, ಪ್ರತಿಷ್ಠೆ ಅಥವಾ ಅಧಿಕಾರದಿಂದಲೂ ತುಳುವರನ್ನು ಹೊರಗಿಡಲಾಗಿತ್ತು.[19] ಈ ಸಂದರ್ಭಗಳು ವಸಾಹತುಶಾಹೀ–ವಸಾಹತುಗಳ ನಡುವಿನ ಬಿಗು ಸನ್ನಿವೇಶಗಳ ರೂಪಿಸುವಿಕೆಗೆ ಅವಕಾಶ ನೀಡಿ ಘರ್ಷಣೆಗೆ ಕಾರಣವಾಗಿತ್ತು. ಇದಲ್ಲದೇ

ವಸಾಹತುಶಾಹಿಯ ಭರವಸೆ ಮತ್ತು ಅನುಷ್ಠಾನದ ನಡುವಿನ ನಿರಂತರತೆ ಹೊಸದಾಗಿ ವ್ಯಾಖ್ಯಾನಕ್ಕೆ ಒಳಪಟ್ಟ ಪಾರಂಪರಿಕ ಅಧಿಕಾರದಲ್ಲಿ ಮುಖ್ಯವಾಗಿ ವಸಾಹತುಶಾಹಿಯ ಆಕ್ರಮಣಕಾರಿ ನಿಲುವಿನಿಂದ ನಿಧಾನವಾಗಿ ವಸಾಹತು ಆಡಳಿತದ ನೈತಿಕತೆಯನ್ನು ಹಾಳುಗೆಡವಿತ್ತು.[20] ಇದು ಕೆಲವು ಸಂದರ್ಭಗಳಲ್ಲಿ ವಸಾಹತುಶಾಹಿಯ ಯೋಜನೆಯ ಈಡೇರಿಕೆಗೆ ಅಡ್ಡಿಯಾಗಿ ಪರಿಣಮಿಸಿದೆಯಾದರೂ ವಸಾಹತುಶಾಹಿಯ ಮೂಲಭೂತ ತತ್ವವು ಸಾಧ್ಯವಾದಷ್ಟು ರೀತಿಯಲ್ಲಿ ಅವರ ಆಸಕ್ತಿ ಮತ್ತು ಅನುಕೂಲಕ್ಕೆ ತಕ್ಕಂತೆ ಇಡೀ ತುಳುನಾಡನ್ನು ಸಾಧಕವಾಗಿ ಬಳಸಿಕೊಳ್ಳುವುದೇ ಆಗಿತ್ತು. ಪ್ರಾಯೋಗಿಕ ದೃಷ್ಟಿಯಿಂದ ವಸಾಹತುಶಾಹಿಗೆ ಕೆಳಹಂತದ ಅಧಿಕಾರವನ್ನು ನಿರ್ವಹಿಸಲು ಜನರ ಅಗತ್ಯವಿತ್ತು. ಆ ಕಾರಣಕ್ಕಾಗಿ ಈಗಾಗಲೇ ಅಧಿಕಾರ ಕಳೆದುಕೊಂಡ ವಸಾಹತುಪೂರ್ವದ ಅಧಿಕಾರದ ಮೂಲವ್ಯವಸ್ಥೆಗಳನ್ನು ಹೊಂದಿಕೆ ಮಾಡಿಕೊಂಡು ಅವುಗಳನ್ನು ಔಪಚಾರಿಕ ಸಹಯೋಗಗಳಿಗೆ ಒಳಪಡಿಸುವುದು ವಸಾಹತುಶಾಹಿಗೆ ಲಾಭದಾಯಕವಾಗಿತ್ತು. ಮಾತ್ರವಲ್ಲ ಆರ್ಥಿಕ ಮತ್ತು ಸಂಚಲನಾ ದೃಷ್ಟಿಯಿಂದ ಕೆಳಹಂತದ ಅಧಿಕಾರಿ ವರ್ಗವನ್ನು ಇಂಗ್ಲೆಂಡಿನಿಂದ ಆಮದು ಮಾಡಿಕೊಳ್ಳುವುದು ಕಷ್ಟಸಾಧ್ಯವಾಗಿತ್ತು. ಆದ್ದರಿಂದ ಸಹಯೋಗದ ಆಧಾರದಲ್ಲಿ ವಸಾಹತುಶಾಹಿಯ ಆಡಳಿತದ ಸ್ಥಳೀಯ ಪ್ರತಿನಿಧಿಗಳಾಗಿ ಪರಂಪರಾಗತ ಅಧಿಕಾರೀ ವರ್ಗ ವಸಾಹತುಶಾಹಿಯ ಅಧಿಕಾರದ ಕೊಂಡಿಗಳಾಗಿ ಕಾರ್ಯನಿರ್ವಹಿಸಿದರು. ಈ ಕಾರಣದಿಂದ ವಸಾಹತುಪೂರ್ವದ ಪರಂಪರಾನುಗತ ಅಧಿಕಾರ ಶ್ರೇಣಿಯಲ್ಲಿ ಇದ್ದ (ಬ್ರಾಹ್ಮಣ, ಜೈನ, ಒಕ್ಕಲ್ಮ, ಕೃಷಿ ಅಧಿಕಾರದ ಕಕ್ಷೆಯೊಳಗಿದ್ದ) ಅಧಿಕಾರೀ ವರ್ಗದವರನ್ನು ವಸಾಹತುಶಾಹಿಯ ಸೇವೆಗೆ ಸೇರಿಸಿಕೊಳ್ಳಬೇಕಾದ ಅಗತ್ಯತೆ ಕಂಪನಿಗೆ ಏರ್ಪಟ್ಟಿತ್ತು.[21] ಈ ರೀತಿಯ ನೇಮಕಾತಿಗಳು ವಸಾಹತುಶಾಹಿಗಳಿಗೆ ಸ್ಥಳೀಯ ವ್ಯವಸ್ಥೆಗಳ ಜ್ಞಾನ ಪಡೆದುಕೊಳ್ಳಲು ಅವಕಾಶ ನೀಡಿತ್ತಲ್ಲದೇ 'ನೂತನ ವ್ಯವಸ್ಥೆಯಲ್ಲಿ ತಾವು ಸ್ವಾಗತಾರ್ಹರು' ಎಂಬುವುದನ್ನು ಗ್ರಾಮದ ಪಾರಂಪರಿಕ ಮುಂದಾಳುಗಳಿಗೆ ಮನವರಿಕೆ ಮಾಡಿಕೊಟ್ಟು ಪರಸ್ಪರ ಲಾಭ ಪಡೆದುಕೊಂಡರು. ಅದಾಗ್ಯೂ ವಸಾಹತುಶಾಹಿ ಎಲ್ಲವನ್ನು ಒಮ್ಮೆಲೆ ಒಪ್ಪಿಕೊಂಡರೆ, ಆಡಳಿತ ಸಂಕೀರ್ಣಗೊಂಡು ಅವಿಧೇಯತೆಯಂತಹ ಸಮಸ್ಯೆಗಳು ತಲೆದೋರಬಹುದೆಂದು ಕಾರಣಕ್ಕಾಗಿ ಸಾಕಷ್ಟು ಜಾಗ್ರತೆ ವಹಿಸಿದರು.[22] ಇದರ ಪರಿಣಾಮವಾಗಿ ವಸಾಹತುಶಾಹಿ ಆಡಳಿತ ಪಟೇಲರ ಸಂಖ್ಯೆ ಕಡಿತಗೊಳಿಸಿ ಗ್ರಾಮದ ಬದಲಿಗೆ ಮಾಗಣೆಯ ಗೌರವಾನ್ವಿತ ಮನೆತನದಿಂದ ಪಟೇಲರನ್ನು ಆಯ್ಕೆ ಮಾಡುವಲ್ಲಿ ಜಾನ್‌ಸ್ಪೋಕ್ಸ ಸರಕಾರಕ್ಕೆ ಸಲಹೆ ಸೂಚನೆಗಳನ್ನಿತ್ತನು. ಹೀಗೆ ವಸಾಹತುಶಾಹಿಯ ಸಹಯೋಗದ ಪ್ರವರ್ತನೆಯ ಮೂಲಕ ಪಾರಂಪರಿಕ ಅಧಿಕಾರಶಾಹಿಗಳು ಅಧಿಕಾರವನ್ನು ಪಡೆದುಕೊಂಡರೂ ಅವರು ವಸಾಹತುಶಾಹಿ

ಬಿಗಿಮುಷ್ಠಿಯಲ್ಲಿ ನಲುಗಬೇಕಾಯಿತು. ವಸಾಹತುಶಾಹಿಯ ಶ್ರೇಷ್ಠತೆ ಉಳಿಗಮಾನ್ಯಕ್ಕಿಂತ ಪ್ರಬಲಗೊಂಡು ಬಂಡವಾಳಶಾಹಿಯಾಗಿ ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಿತು.

ವಸಾಹತುಶಾಹಿಗಳು ವಸಾಹತಿನ ಆಳರಸರಾಗಿ ಸ್ಥಾಪಿತಗೊಂಡಾಗ ದೇಶೀಯ ಜನಗಳು ಸುಲಭವಾಗಿ ಐಕ್ಯತೆಯಲ್ಲಿರದಂತೆ ಹನ್ನೊಂದು ಬಗೆಯ ಭೂಗೇಣಿಯ ಮಾನದಂಡದಲ್ಲಿ ಹಿಡುವಳಿದಾರರನ್ನು ಗುರುತಿಸಿತ್ತಲ್ಲದೇ ಸಮಾಜವನ್ನು ವಿಭಜಿಸಿ ಸಮಷ್ಟಿಯ ಹಿತಸಾಧನೆಗೆ ದಕ್ಕೆಯಾದರು. ಇದು ವಸಾಹತುಶಾಹಿ ಗರಿಷ್ಠ ಕಂದಾಯ ವಸೂಲಿ ಮಾಡುವ ಕ್ರಮವೂ ಆಗಿತ್ತು.[23] ತುಳುನಾಡಿನಲ್ಲಿಯೂ ಈ ರೀತಿಯ ಬೆಳವಣಿಗೆಗಳಿಂದಾಗಿ ಸಹಯೋಗಿ ಪ್ರವರ್ತನೆಯ ಮೂಲಕ ಅಧಿಕಾರ ಪಡೆದುಕೊಂಡ ಪಾರಂಪರಿಕ ಅಧಿಕಾರಿಗಳು ವಸಾಹತುಶಾಹಿ ಗುಲಾಮರಾಗಬೇಕಾದುದು ದುರದೃಷ್ಟ. ಮುಂದುವರೆದು ಕಂಪನಿಯ ನಿರ್ದೇಶಕರು ಮದ್ರಾಸ್ ಗವರ್ನರ್‌ಗೆ ನೀಡಿದ ನಿರ್ದೇಶನವನ್ನು ಸಾಂದರ್ಭಿಕವಾಗಿ ಅವಲೋಕಿಸಿದಾಗ ಕಂದಾಯ ಹೆಚ್ಚಳವು ನಮ್ಮ ರಕ್ಷಣೆ, ಇಪ್ಪತ್ತು ಅಪಘಾತಗಳು ಸಂಭವಿಸಿದರೂ, ನಮ್ಮ ವ್ಯಾಪಾರಕ್ಕೆ ಅಡ್ಡಿಯಾಗದಂತೆ ನಮ್ಮ ಬಲವನ್ನು ನಿರ್ವಹಿಸಬೇಕು. ಇದು ವಸಾಹತಿನಲ್ಲಿ ನಮ್ಮ ರಾಷ್ಟ್ರದ ಪ್ರತಿರೂಪವನ್ನು ನಿರ್ಮಿಸಲು ಸಾಧ್ಯ ಮಾಡಬೇಕು. ತುಳುನಾಡು ವಸಾಹತುಶಾಹಿಯ ಪ್ರಭಾವದಿಂದ ಈ ರೀತಿಯ ಒತ್ತಡಕ್ಕೆ ಒಳಗಾಯಿತು.

ವಸಾಹತುಪೂರ್ವದ ತುಳುನಾಡಿನಲ್ಲಿ ರಾಜಕೀಯ ಅಧಿಕಾರ ಧಾರ್ಮಿಕ ನೆಲೆಗಟ್ಟಿನಲ್ಲಿ ನಡೆಯುತ್ತಿತ್ತು. ಶಾಸ್ತ್ರವಿಧಿ, ಧರ್ಮಾಚರಣೆ, ರೂಢಸಂಪ್ರದಾಯಗಳು ಏಣಿ-ಶ್ರೇಣಿಯ ರಾಜಕೀಯ ವಾರಸುದಾರಿಕೆಯನ್ನು ಬಿಂಬಿಸುತ್ತಿದ್ದವು. ಆದರೆ ವಸಾಹತುಶಾಹಿ ತನ್ನ ಅಧಿಕಾರವನ್ನು ಮುದ್ರಿತ ಕಾನೂನು-ಕಟ್ಟಳೆ, ಆಜ್ಞೆಗಳ ನೆರವು, ನೌಕರಶಾಹಿಗಳ ಬೆಂಬಲದೊಂದಿಗೆ ವ್ಯವಸ್ಥಿತಗೊಳಿಸಿದ ಪರಿಣಾಮವಾಗಿ ವಸಾಹತುಪೂರ್ವದ ಶಕ್ತಿಗಳಿಗೆ ಅಂತಸ್ತು, ಪೂರ್ವದಮರ್ಯಾದೆಗಳನ್ನು[24] (ಅಂತಸ್ತು-ಪಿಕ್ಸ್ಡ್ ಹೈಯರಾರ್ಕಿ, ಬೀಯಿಂಗ್ ಒನ್ ಎಬೌ ದ ಅದರ್; ಮರ್ಯಾದೆ-ಡಿಗ್‌ನಿಟಿ, ಪ್ರೆಸ್ಟೀಜ್ ಇದು ವಿಜಯನಗರ ಕಾಲದಿಂದ ಹೆಚ್ಚು ಪ್ರಚಲಿತಕ್ಕೆ ಬಂದಿತ್ತು.) ರಾಜಕೀಯಾಧಿಕಾರದಲ್ಲಿ ಗೌಣಗೊಳಿಸಿ ತನ್ನ ಅಧಿಕಾರದ ರಕ್ಷಾಕವಚವಾಗಿ ಸಾಮಾಜಿಕ ನೆಲೆಯಲ್ಲಿ ಅಧಿಕಾರವನ್ನು ಅನುಭವಿಸಲು ಅವಕಾಶವನ್ನು ನೀಡಿತು.[25] ಹೀಗೆ ವಾಸ್ತವ ರಾಜಕೀಯ ಅಧಿಕಾರವನ್ನು ಕಳೆದುಕೊಂಡ ವಸಾಹತುಪೂರ್ವದ ಶಕ್ತಿಗಳು ಇಪ್ಪತ್ತನೇ ಶತಮಾನದ ಆರಂಭಿಕ ದಶಕಗಳಲ್ಲಿ ಅಧಿಕಾರದ ಲಾಂಛನವಾಗಿ ಪ್ರಭಾವಿಸಿದ್ದ ಪೂಜಾಕೇಂದ್ರಗಳಲ್ಲಿನ ಅಧಿಕಾರವನ್ನು ಮುಂದುವರೆಸಿರುವುದು. ಈ ರೀತಿಯ ಅಧಿಕಾರದಲ್ಲಿ ಮುಂದುವರೆಯುವ ವ್ಯೂಹಾತ್ಮಕ ಚಿಂತನೆ ಮಾಡಿದರಾದರೂ ಅವರ ಅಧಿಕಾರದ ಮೇರೆಗಳು ಸಾಮಾಜಿಕ ನೆಲೆಗಟ್ಟಿಗೆ ಮಾತ್ರ ಸೀಮಿತಗೊಂಡಿತು. ತುಳುನಾಡಿನ ಸಂದರ್ಭದಲ್ಲಿ

ಸೀಮೆ, ಮಾಗಣೆ, ಗ್ರಾಮದ ದೈವ-ದೇವಸ್ಥಾನಗಳ ಆಡಳಿತ ವ್ಯವಸ್ಥಾಪಕರಾಗಿ ಸಾಮಾಜಿಕ ಅಧಿಕಾರವನ್ನು ಇಲ್ಲಿನ ಪ್ರಮುಖ ಗುತ್ತುಮನೆತನಗಳು ಪಡೆದಿದ್ದಲ್ಲದೇ ತಮ್ಮ ಅಧಿಕಾರವನ್ನು ಸಾಂಕೇತಿಕ ಸಂಪ್ರದಾಯಗಳ ಆಚರಣೆಯ ಮೂಲಕ ಉಳಿಸಿಕೊಂಡಿದೆ. ಈ ವಿಷಯಗಳು ಕಟೀಲು, ಕೊಲ್ಲೂರು, ಬಪ್ಪನಾಡು, ಉದ್ಯಾವರ, ಪಡುಶೆಡ್ಯೆ, ಅತ್ತಾವರ, ನಂದಳಿಕೆ, ಕವತ್ತಾರು, ಕಲ್ಲಡ್ಕ ಮುಂತಾದ ದೇವಸ್ಥಾನ, ದೈವಸ್ಥಾನಗಳಿಗೆ ಸಂಬಂಧಿಸಿದ ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು ಪುಷ್ಠೀಕರಿಸುತ್ತವೆ. ಕವತ್ತಾರಿನ ಅಜಿಲ ಮನೆತನ ಸಂಕಷ್ಟಕ್ಕೊಳಗಾಗಿ ತಮ್ಮ ಪಾರಂಪರಿಕ ಅಧಿಕಾರವನ್ನು ವಸಾಹತುಶಾಹಿ ಸಹಯೋಗಿ ಮುಲ್ಕಿ ದೊಡ್ಡಮನೆ ಕಾಳಪ್ಪ ಶೆಟ್ಟಿ ವಹಿಸಿಕೊಂಡಾಗ ತನಗಾದ ಅನ್ಯಾಯವನ್ನು ಸರಕಾರ ಸರಿಪಡಿಸುವಂತೆ ನಿವೇದಿಸಿರುವುದು. ಬೆಳ್ಮ ಮುಲಾರ ಮುಂಡತ್ತಾಯ ದೈವಸ್ಥಾನದ ಸಾಮಾಜಿಕ ಅಂತಸ್ತು, ಅಧಿಕಾರ ಪಡೆದುಕೊಳ್ಳುವಲ್ಲಿ ಅಲ್ಲಿನ ಒಂದನೇ ಮೂಲ್ಯ ಪತ್ರದ ಮೂಲಕ ಜಿಲ್ಲಾಡಳಿತಕ್ಕೆ ಮನವರಿಕೆ ಮಾಡಿರುವುದು. ಹೀಗೆ ಪಾರಂಪರಿಕ ಸಾಮಾಜಿಕ ಅಧಿಕಾರಕ್ಕೆ ಕುತ್ತು ಬಂದಾಗ ಅದನ್ನು ವಸಾಹತುಶಾಹಿ ನ್ಯಾಯಾಧಿಕರಣದ ಮುಖೇನ ಇತ್ಯರ್ಥ ಪಡಿಸುವ ಪ್ರಯತ್ನಗಳು ನಡೆದಿರುವುದನ್ನು ಧಾರ್ಮಿಕ ದತ್ತಿ ಇಲಾಖೆಯಲ್ಲಿನ ಕಡತಗಳು ದೃಢಪಡಿಸಿವೆ. ಮಂಗಳೂರು ತಾಲೂಕು ಕವತ್ತಾರಿನ ಅಜಿಲ ಹಾಗೂ ಮುಲ್ಕಿಯ ಸಾವಂತರ ನಿವೇದನಾ ಪತ್ರಗಳನ್ನು ಉಲ್ಲೇಖಿಸಬಹುದಾಗಿದೆ. ಇದಲ್ಲದೇ ವಸಾಹತುಶಾಹಿಯ ಆರಂಭಿಕ ಕಾಲದಲ್ಲಿ ವಸಾಹತುಶಾಹಿಯೊಂದಿಗೆ ಸಹಯೋಗಗೊಂಡ ಧರ್ಮಸ್ಥಳದ ಕುಮಾರ ಹೆಗ್ಗಡೆಯ ಅಧಿಕಾರಕ್ಕೆ ತೊಂದರೆಯಾಗದಿರುವುದು ಮಾತ್ರವಲ್ಲ ಸುತ್ತಲಿನ ಕಂದಾಯ ವಸೂಲಿ ಮಾಡುವ ಅಧಿಕಾರವನ್ನು ಮುಂದುವರೆಸಲು ಅವಕಾಶ ನೀಡಿರುವುದು ಸ್ಥಳೀಯ ಆಡಳಿತದ ಮೇಲೆ ವಸಾಹತುಶಾಹಿ ತನ್ನ ಅಧಿಕಾರವನ್ನು ಹೇರಿದ ಮುನ್ಸೂಚನೆ.

ಪ್ರಸ್ತುತ ಸಾಮಾಜಿಕ ಅಧಿಕಾರದ ಛಾಯೆ-ಪಟ್ಟಾಭಿಷೇಕದ ಕಟ್ಟಳೆಯ ಮೂಲಕ ಉಳಿಸಿಕೊಂಡವರಲ್ಲಿ ಸಿಮುಂತೂರು, ವೇಣೂರು, ಕಣಂತೂರು, ಉದ್ಯಾವರ ಮಾಡ, ಗುತ್ತು ಮನೆತನ ಮುಂತಾದೆಡೆ ನಡೆಯುವ ಕಟ್ಟಳೆಗಳು ಸಾಕ್ಷಿಯಾಗಿವೆ. ಗಡಿ ಹೊಂದುವ ಪ್ರಕ್ರಿಯೆಗಳು ಸಾಮಾಜಿಕ ಅಧಿಕಾರದ ಹಿನ್ನೆಲೆಯಿಂದ ನಡೆಯುವಂತಹುಗಳಾಗಿದ್ದರಿಂದ ಗ್ರಾಮ, ಮಾಗಣೆ, ಸೀಮೆಮಟ್ಟದಲ್ಲಿ ನಡೆಯುವ ದೈವಸ್ಥಾನ, ದೇವಸ್ಥಾನಗಳ ಕಟ್ಟುಕಟ್ಟಳೆಗಳಲ್ಲಿ ಗುತ್ತು, ಬೀಡು, ಅರಮನೆ, ಮಠ ಮುಂತಾದ ಘಟಕಗಳ ಮುಖ್ಯಸ್ಥರು ಪಡೆಯುವ ಸಾಂಕೇತಿಕ ಅಧಿಕಾರದ ಮಾನಮರ್ಯಾದೆಗಳು ಈ ನೆಲೆಯವು ಎಂದು ಈ ಸಂದರ್ಭದಲ್ಲಿ ಅರ್ಥೈಸಿಕೊಳ್ಳಬೇಕು. ಮುಂದುವರೆದು ಪಾರಂಪರಿಕ ಏಣಿ-ಶ್ರೇಣಿಯ ರಾಜಕೀಯ ಶಕ್ತಿಗಳು ತಮ್ಮ ಸಾಮಾಜಿಕ ಎಲ್ಲೆಗಳಿಗೆ ಮಿತಿಗೊಂಡ ಆರಾಧನ ಸ್ಥಳಗಳ ಪ್ರಬಂಧಕರಾಗಿ ವಸಾಹತುಶಾಹಿಯ

ನೌಕರಶಾಹಿಗಳೊಂದಿಗೆ ಕಂದಾಯ ಇತ್ಯರ್ಥಪಡಿಸುವಲ್ಲಿ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸಿರುವುದು ಸ್ಥಳೀಯ ಆಡಳಿತದ ಪಲ್ಲಟಗಳಲ್ಲಿ ಮುಖ್ಯವಾದುದು. ಈ ರೀತಿಯ ಸಹಯೋಗ ವಸಾಹತುಶಾಹಿಯ ಅಧಿಕಾರವನ್ನು ಬಲಗೊಳಿಸಿತ್ತಲ್ಲದೇ ಸ್ಥಳಿಯ ವಿರೋಧಗಳಿಗೆ ಅಂಕುಶವನ್ನು ಹೇರಲು ಸಹಾಯ ಮಾಡಿವೆ.[26] ಹೀಗೆ ವಸಾಹತುಪೂರ್ವದಲ್ಲಿ ಪರಂಪರಾಗತ ಎಲ್ಲೆಕಟ್ಟುಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕೃಷಿ ಅಧಿಕಾರದ ಪ್ರತಿನಿಧಿಗಳು ವಸಾಹತುಶಾಹಿ ವಿನ್ಯಾಸಗೊಳಿಸಿದ ಆಡಳಿತಾತ್ಮಕ ಘಟಕ ಮತ್ತು ಅವುಗಳ ಆಶಯಕ್ಕನುಗುಣವಾಗಿ ಬದಲಾವಣೆಗೊಳಪಟ್ಟು ಮುಂದುವರಿದ ಪರಿಣಾಮವಾಗಿ ವಸಾಹತುಪೂರ್ವದ ಭೌಗೋಳಿಕ ಎಲ್ಲೆಕಟ್ಟುಗಳು ಒಡೆಯಲ್ಪಟ್ಟು ವಿಭಜನೆ ಪ್ರತಿವಿಭಜನೆಗಳಾದವು.[27] ಈ ಹಂತದಲ್ಲಿ ತುಳುನಾಡಿನ ಪರಂಪರಾಗತ ಆಡಳಿತ ಸ್ತರಗಳಲ್ಲಿ ಮುಖ್ಯವಾಗಿ ರಾಜ್ಯ–ಸೀಮೆ–ಮಾಗಣೆ–ಗ್ರಾಮ–ತರವಾಡು–ಗುತ್ತು–ಬೀಡು–ಅಧಿವಾಸ–ಅರಮನೆ–ದೈವ–ದೇವಸ್ಥಾನಗಳು ನಿಧಾನವಾಗಿ ಅಧಿಕಾರ ವಂಚಿತವಾದವು. ಸ್ಥಳೀಯ ಸಮಾಜ ವ್ಯವಸ್ಥೆಯ ಕೃಷಿಕೇಂದ್ರಿತ ರಾಜಕೀಯ ಅಧಿಕಾರದ ಮೂಲವಾಗಿದ್ದ ದೇವಸ್ಥಾನ, ದೈವಸ್ಥಾನ, ಅರಮನೆ, ಬೀಡು, ಗುತ್ತು, ಕುಟುಂಬ ಮುಂತಾದವುಗಳು ವಸಾಹತುಶಾಹಿ ಸಂಸ್ಥೆಗಳ ಅಧಿಕಾರ ಪ್ರಾತಿನಿಧ್ಯದ ನೆಲೆಯ ಆಧಾರದಲ್ಲಿ ಪ್ರಾಂತ್ಯ, ಜಿಲ್ಲೆ, ತಾಲೂಕು, ಹೋಬಳಿ, ಮಂಡಲ, ಗ್ರಾಮ ಪಂಚಾಯತ್ ಮುಂತಾದವುಗಳಿಗೆ ವರ್ಗಾವಣೆಗೊಂಡವು.[28] ಬ್ರಿಟಿಷ್ ಆಡಳಿತ ವ್ಯವಸ್ಥೆಯ ಮಧ್ಯಮ ಹಂತದಲ್ಲಿ ಕಲೆಕ್ಟರ್, ಡೆಪ್ಯುಟಿ ಕಲೆಕ್ಟರ್, ತಹಶೀಲ್ದಾರ್, ಸುಪರಿನ್‌ಟೆಂಡೆಂಟ್, ದಾರೋಗ, ಗುಮಾಸ್ತ ಮುಂತಾದ ಹುದ್ದೆಗಳು ಸೃಷ್ಟಿಸಲ್ಪಟ್ಟು ಅವರಿಗೆ ಸರಕಾರದ ವಾಸ್ತವಿಕ ಅಧಿಕಾರಗಳು ನೀಡಲ್ಪಟ್ಟವು. ಆಡಳಿತಾತ್ಮಕವಾಗಿ ಸೀಮೆ, ಮಾಗಣೆಗಳು, ನ್ಯಾಯಿಕವಾಗಿ ದೇವಸ್ಥಾನಗಳು, ದೈವಸ್ಥಾನಗಳು, ಗ್ರಾಮದ ಅಜಲು ವ್ಯವಸ್ಥೆಗಳು ತಮ್ಮ ವ್ಯಾಪ್ತಿಯ ಪಾರಂಪರಿಕ ಅಧಿಕಾರವನ್ನು ಕಳೆದುಕೊಂಡವು. ಹೀಗೆ ಈ ವರೆಗೆ ಜೀವಂತವಾಗಿದ್ದ ಪರಂಪರಾಗತ ಅಧಿಕಾರೀ ವ್ಯವಸ್ಥೆಗಳು ನಿಧಾನವಾಗಿ ಪ್ರಾಮುಖ್ಯತೆಯನ್ನು ಕಳೆದುಕೊಂಡು ಅಂಚಿಗೆ ಸರಿಸಲ್ಪಟ್ಟವು.[29]

## ದಂಡ–ಬಲಪ್ರಯೋಗ–ಸಹಯೋಗ–ಸ್ವಾಮಿಭಕ್ತಿ

ಚರಿತ್ರೆಯಲ್ಲಿ ಅಧಿಕಾರದ ಸಂಕೇತವಾಗಿದ್ದ ದಂಡ ರಾಜ್ಯಾಡಳಿತವನ್ನು ನಿಭಾಯಿಸಲು ನಿರ್ಣಾಯಕವೆನಿಸಿದ್ದರಿಂದ ಅದು 'ಸಾರ್ವತ್ರಿಕವಾದ ಅಧಿಕಾರ' ಎಂದು ಮಾನ್ಯತೆಗೊಳಪಟ್ಟಿತ್ತು. ವಸಾಹತುಪೂರ್ವದಲ್ಲಿ ಅರೆ–ಊಳಿಗದ ರೂಢಿ-ಆಚರಣೆಗಳು, ಖಾಸಗಿಸೈನ್ಯ, (ನೂರಾಳ, ಇನ್ನೂರಾಳ, ಸಾವಿರಾಳ ಮುಂತಾದವುಗಳು) ಗ್ರಾಮ, ಹಳ್ಳಿಯ ಗಣ್ಯರಿಂದ ನಡೆಸಲ್ಪಡುವ ಜಾತೀಯ ಹಾಗೂ ಪ್ರಾಂತೀಯ ಪಂಚಾಯತುಗಳು, (ಉತ್ತರ ಭಾರತದಲ್ಲಿ ಖಾಫ್ ಹೆಸರಿನಿಂದ ಪ್ರಾಮುಖ್ಯತೆ ಒಡೆದಿದೆ. ತುಳುನಾಡಿನಲ್ಲಿ ಪಂಚಾಯಿತಿ ಕಟ್ಟೆ ಇಲ್ಲವೇ ತರವಾಡು ಮನೆಗಳಲ್ಲಿ

ಈ ರೀತಿಯ ನ್ಯಾಯಿಕ ವ್ಯವಸ್ಥೆ ಜಾರಿಯಲ್ಲಿತ್ತು.) ಜಾತಿಯ ಅಧಿಕಾರದ ಮುದ್ರೆಗಳು ಮುಂತಾದವುಗಳು ದಂಡದ ಉಪಸ್ಥಿತಿಯೊಂದಿಗೆ ರೂಪುಗೊಂಡಿದ್ದವು. ಜೊತೆಗೆ ಇವುಗಳನ್ನು ಮಾನ್ಯ ಮಾಡಿಸಿಕೊಳ್ಳುವ ಧಾರ್ಮಿಕ ರೂಢಾಚರಣೆಗಳು ಪುರೋಹಿತರಿಂದ ಅಸ್ತಿತ್ವ ಪಡೆದುಕೊಂಡಿದ್ದವು. ಜೀತಪದ್ಧತಿ, ಶ್ರಮಿಕವರ್ಗ, ಬಿಟ್ಟಿ ಶ್ರಮಿಕರು, ಊಳಿಗ ವ್ಯವಸ್ಥೆಯ ನ್ಯಾಯಾಧಿಕರಣ, ಪುರುಷಕೇಂದ್ರಿತ ಅಧಿಕಾರೀ ವ್ಯವಸ್ಥೆ, ಜನಾಂಗ-ಜಾತಿ ಆಧಾರಿತ ದೌರ್ಜನ್ಯಗಳು, ಮಹಿಳೆಯರಿಗೆ ವಿಧಿಸುವ ಶಿಕ್ಷೆ ಮುಂತಾದವುಗಳು ದಂಡಾಧಾರಿತವಾಗಿದ್ದರಿಂದ ಅದಕ್ಕನುಗುಣವಾದ ಅಧಿಕಾರ ವ್ಯವಸ್ಥೆಯೊಂದರ ರೂಪಿಸುವಿಕೆಗೆ ಅವಕಾಶ ನೀಡಿತ್ತು. ಈ ವ್ಯವಸ್ಥೆಯಲ್ಲಿ ದಂಡ ಒತ್ತಡ ಮತ್ತು ಬಲಪ್ರಯೋಗ ಸಹಯೋಗಗೊಂಡಿದ್ದವು. ಹೀಗೆ ದಂಡ ವಸಾಹತುಪೂರ್ವದ ರಾಜಕೀಯ ಚಟುವಟಿಕೆಗಳ ಪ್ರಧಾನ ಸಾಧನವಾಗಿ ಗುರುತಿಸಲ್ಪಟ್ಟಿತ್ತು.[30] ಧರ್ಮವನ್ನು ಸಂರಕ್ಷಿಸುವ ಜವಬ್ದಾರಿ ಹೊತ್ತಿದ್ದ ಪ್ರಭು ಇದಕ್ಕಾಗಿ ತನ್ನ ಅಧೀನದ ಮೇಲ್‌ಸ್ತರದ ಅಧಿಕಾರ ವ್ಯವಸ್ಥೆಯೊಂದಿಗೆ ಕೈಜೋಡಿಸಿ ವರ್ಗ, ಜಾತಿ, ಪ್ರಾಯ, ಕಾಲಘಟ್ಟ, ಲಿಂಗ ಇತ್ಯಾದಿಗಳಿಗೆ ಸಂಬಂಧಿಸಿದ ವಿಧೇಯತೆಯನ್ನು ದಂಡದ ಕಲ್ಪನೆಯೊಂದಿಗೆ ಜೋಡಿಸಿ ಒಂದನ್ನೊಂದು ಅವಲಂಬಿತ ಹಾಗೂ ಪೂರಕ ವ್ಯವಸ್ಥೆಯನ್ನಾಗಿಸಿದ್ದನು.[31] ಒಟ್ಟಿನಲ್ಲಿ ಪ್ರಭುತ್ವದ ಅಡಿಪಾಯವಾಗಿದ್ದ ದಂಡ ರಾಜ, ಪುರುಷ ಎಂದೆಲ್ಲ ಪ್ರತಿನಿಧಿಕರಣಗೊಳ್ಳುತ್ತಿತ್ತು.

ತುಳುನಾಡಿನ ಸಂದರ್ಭದಲ್ಲಿ ಗ್ರಾಮಗುತ್ತುಗಳು, ಮಾಗಣೆಗುತ್ತುಗಳು, ಸೀಮೆಗುತ್ತುಗಳು ಜನರನ್ನು ಸಂಘಟಿಸಿದ ರೀತಿಯನ್ನು ನೋಡಿದಾಗ ದಂಡ ಪ್ರಮುಖ ಪಾತ್ರವನ್ನು ವಹಿಸಿದೆ. ಪ್ರತಿಯೊಬ್ಬ ಭೂಮಾಲಕ ತನ್ನ ಒಕ್ಕಲುಗಳಿಗೆ ಮಹಾರಾಜರಾಗಿ ಕಂಡರು, ಇಲ್ಲವೇ ಈ ತತ್ವದ ಮೂಲಕ ಸಮಾಜದ ಕೆಳವರ್ಗಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಂಡರು. ಇದು ವಸಾಹತುಪೂರ್ವ ರಾಜಕೀಯ ವ್ಯವಸ್ಥೆಯ ಸರ್ವಸಾಮಾನ್ಯ ತತ್ವವಾಗಿ ಅನ್ವಯಿಸಲ್ಪಟ್ಟಿದ್ದರಿಂದ ಕಾಲಾನುಕ್ರಮದಲ್ಲಿ ರಾಜ್ಯಾಡಳಿತದ ದೈವಿಕ ಇಚ್ಛೆಯ ಘೋಷಣೆಯಾಗಿ ಮಾನ್ಯ ಮಾಡಲ್ಪಟ್ಟಿತ್ತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[32] ಮನು ದಂಡವನ್ನು ಪುರುಷನೆಂದು ಬಿಂಬಿಸುವ ಮೂಲಕ ಮಹಿಳೆಯರನ್ನು ಶೋಷಣೆ ಮಾಡುವಲ್ಲಿ ಯಾವುದೇ ನೀತಿಗಳು ಅಡ್ಡ ಬರುವುದಿಲ್ಲವಾದುದರಿಂದ ಧರ್ಮರಕ್ಷಣೆಗೆ ದಂಡವನ್ನು ಪ್ರಯೋಗಿಸಬಹುದು ಎಂದಿದ್ದಾನೆ. ವಸಾಹತುಪೂರ್ವದ ದಂಡ ವಸಾಹತುಶಾಹಿಯ ಆಡಳಿತದಲ್ಲಿ ಒತ್ತಡವಾಗಿ ಪರಿವರ್ತನೆಗೊಂಡು, ದೃಢನಂಬಿಕೆ, ವಿಧೇಯತೆ, ಸಹಯೋಗ, ಅಭಿವೃದ್ಧಿ ಮುಂತಾದ ಮುಖವಾಡಗಳೊಂದಿಗೆ ಕಾರ್ಯಪ್ರವೃತ್ತಗೊಂಡಿತು. ಹೀಗೆ ದಂಡ, ಒತ್ತಡ, ದೃಡನಂಬಿಕೆ ಸಹಯೋಗ ಮತ್ತು ವಿಧೇಯತೆ ರೂಲ್-ಆಫ್-ಲಾದ ಮೂಲಧಾತುಗಳಾಗಿ ರೂಪುಗೊಂಡು ವಸಾಹತುಶಾಹಿಯ ಆಜ್ಞೆಯ ರೂಪದಲ್ಲಿ ಪ್ರಕಟಗೊಂಡಿತು.[33] ಜೊತೆಗೆ ವಸಾಹತುಪೂರ್ವದ

ನ್ಯಾಯ, ನೀತಿ ಮತ್ತು ಧರ್ಮದ ನಿಯಮಗಳು ರೂಲ್-ಆಫ್-ಲಾ ಆಗಿ ನ್ಯಾಯಬದ್ಧಗೊಂಡಿತು.ವಸಾಹತುಶಾಹಿಯ ಆರಂಭಿಕ ದಿನಗಳಲ್ಲಿ ತುಳುವ ಸಮಾಜದ ಮೇಲೆ ರೂಲ್ ಆಫ್ ಲಾ ವನ್ನು ಪರಿಚಯಿಸುವಾಗ ಎರಡು ವಿಚಾರಗಳ ಪರಿಗಣನೆಗೆ ಒತ್ತು ನೀಡಿತು. ವಸಾಹತಿನ ಭೂಮಿಯ ಒಡೆತನ ಮತ್ತು ಅಧಿಕಾರಕ್ಕೆ ಸಂಬಂಧಿಸಿ ರೂಲ್ ಆಫ್ ಪ್ರಾಪರ್ಟಿಯನ್ನು ಸೃಷ್ಟಿಸಿ ತೀರ್ಮಾನಿಸುವ ಹಕ್ಕನ್ನು ಕಾದಿರಿಸಿತು.

ವಸಾಹತುಶಾಹಿ ಆಡಳಿತದ ಆರಂಭಿಕ ಹಂತಗಳಲ್ಲಿ ಪ್ರಭುತ್ವಕ್ಕೆ ಸಂಬಂಧಿಸಿದ ಪ್ರತಿರೋಧಗಳು ಶಾಂತಿಯುತವಾಗಿರದೇ ಹಿಂಸಾತ್ಮಕ ರೂಪ ತಳೆದಿರುವುದು ಚರಿತ್ರೆಯಲ್ಲಿ ದಾಖಲಾಗಿವೆ. ಸಾಮಾನ್ಯಶಕೆ 1799ರದ ನಂತರದ ರಾಜಕೀಯ ಸಂಘರ್ಷಗಳು, ರೈತಬಂಡಾಯಗಳು, ಕೂಟದಂಗೆಗಳು 1830–32 ಕಲ್ಯಾಣಪ್ಪನ ಕಾಟಕಾಯಿ, ಅಮರಸುಳ್ಯದಂಗೆಗಳು ಮುಂತಾದವುಗಳು. ವಸಾಹತುಶಾಹಿ ಹುಟ್ಟುಹಾಕಿದ ಆಡಳಿತ ಸಂರಚನೆಯ ಸಾಂಸ್ಥಿಕ ರಾಜಕೀಯದಲ್ಲಿ ಕೆಳವರ್ಗಗಳು ಸೇರ್ಪಡೆಗೊಂಡಿದ್ದರಿಂದ ಪ್ರತಿರೋಧಗಳು ಹೆಚ್ಚು ತೀವ್ರತೆಯನ್ನು ಪಡೆದುಕೊಂಡಿತ್ತಾದರೂ ಉದ್ಯೋಗ, ಸಂಬಳದ ಬೇಡಿಕೆ, ಹೊಸ ಜೀವನ ಶೈಲಿ, ಸುಧಾರಣೆ, ನಾಗರೀಕ ಸ್ವಾತಂತ್ರ್ಯದ ಬೇಡಿಕೆ ಇತ್ಯಾದಿ ಪ್ರತಿರೋಧಗಳು ವಸಾಹತುಶಾಹಿಯಲ್ಲಿ ಬೇಡಿಕೆಯನ್ನು ಮುಂದಿಟ್ಟವು. ಈ ಪ್ರತಿರೋಧಗಳು ವಸಾಹತುಪೂರ್ವದಲ್ಲಿ ಅಷ್ಟೊಂದು ವ್ಯಾಪಕತೆಯನ್ನು ಪಡೆದುಕೊಂಡಿರಲಿಲ್ಲ ಎಂಬುವುದು ಇತಿಹಾಸಕಾರರ ಅಭಿಪ್ರಾಯವಾಗಿದೆ.[34] ಇದಕ್ಕೆ ಪೂರಕವಾಗಿ ಅವರು ನೀಡುವ ಸಮರ್ಥನೆಯೇನೆಂದರೆ ವಸಾಹತುಪೂರ್ವದ ತುಳುನಾಡಿನ ಸಾಮಾಜಿಕ ರಚನೆಯಲ್ಲಿ ಕೆಳವರ್ಗಗಳು ರಾಜಕೀಯವಾಗಿ ಗೌಣವಾಗಿದ್ದವು ಎಂಬುವುದು.[35] ತುಳುನಾಡಿನ ಗುತ್ತು ಮತ್ತು ಅದರ ಮೇಲ್ಪಟ್ಟ ರಾಜಕೀಯ ಸ್ತರಗಳಲ್ಲಿ ಕೆಲವೇ ಕೆಲವು ಮೇಲ್ವರ್ಗದವರು ಅಧಿಕಾರವನ್ನು ಹಂಚಿಕೊಂಡಿದ್ದರು. ಜೊತೆಗೆ ವಸಾಹತುಶಾಹಿ ಕಾಲದ ಕೆಳವರ್ಗದ ಪ್ರತಿರೋಧಗಳು ಮುಖ್ಯವಾಗಿ ವಸಾಹತುಶಾಹಿ ಮತ್ತು ವಸಾಹತಿನ ಸ್ಥಳೀಯ ವ್ಯವಸ್ಥೆಗಳ ಶೋಷಣೆಯ ವಿರುದ್ಧವಾಗಿದ್ದು ಕೆಲವೊಂದು ಬಾರಿ ಮಾತ್ರ ಪ್ರಭುತ್ವದ ವಿರುದ್ಧವಾಗಿದ್ದವು. ಪ್ರಭುತ್ವ ಮತ್ತು ವಿಧೇಯತೆಗಳಲ್ಲಿ ಪ್ರತಿರೋಧ ಕೊನೆಗೆ ಬರುವ ಆಯಾಮವಾಗಿರುವುದರಿಂದ ವಸಾಹತುಶಾಹಿ ಕಾಲದಲ್ಲಿ ಪ್ರತಿರೋಧಗಳು ಆಜ್ಞೆಗಳ ಮೂಲಕ ದಮನಗೊಳ್ಳಲ್ಪಟ್ಟ ಕಾರಣ ವಸಾಹತುಶಾಹಿ ವ್ಯವಸ್ಥಿತವಾಗಿ ಆಳ್ವಿಕೆ ಪ್ರಾರಂಭಿಸಿದ ದಶಕಗಳಲ್ಲಿ ಕೆಲವೊಂದು ಘಟನೆಗಳನ್ನು ಹೊರತುಪಡಿಸಿದರೆ ಬಹುತೇಕ ಕಾರ್ಯಯೋಜನೆಗಳು ಪ್ರತಿರೋಧಗಳಿಲ್ಲದೇ ಕಾರ್ಯಗತಗೊಂಡಿದೆ.[36]

ಪ್ರಭುತ್ವ ಮತ್ತು ವಿಧೇಯತೆಯ ಆಯಾಮಗಳಾದ ಬಲಪ್ರಯೋಗ, ದೃಢನಂಬಿಕೆ, ಸಹಯೋಗ, ಪ್ರತಿರೋಧ ಮುಂತಾದವುಗಳು ಪರಸ್ಪರ ಸಂಬಂಧಗಳನ್ನು ಹೊಂದಿದ್ದರಿಂದ, ವಸಾಹತುಪೂರ್ವದ ರಾಜಕೀಯ ಚಿಂತನೆಗಳು ವಸಾಹತುಶಾಹಿಯ ಜೊತೆಗೆ ಸಮ್ಮಿಲನಗೊಂಡು ಸಮಕಾಲೀನ ರಾಜಕೀಯದ ನೈಜಚಿಂತನೆಗಳಾಗಿ ಪಕ್ವಗೊಂಡವು. ಈ ವ್ಯವಸ್ಥೆಯು ವಸಾಹತುಪೂರ್ವದಲ್ಲಿ ದಂಡದ ರೂಪವನ್ನು ಪಡೆದುಕೊಂಡಿತ್ತು. ಇವುಗಳು ತಥಾಕಥಿತ ಕ್ರಿಯಾತ್ಮಕ ಅಧುನಿಕತೆ ಮತ್ತು ಜಡಾತ್ಮಕ ಪರಂಪರೆಯೆಂದು ವಸಾಹತುಶಾಹಿಗಳಿಂದ ವ್ಯಾಖ್ಯಾನಿಸಲ್ಪಟ್ಟು ಸ್ಥಳೀಯ ಚಿಂತನೆ ಮತ್ತು ಜೀವನಶೈಲಿಗಳ ನಡುವೆ ಕೊಂಡಿಯಾಗಿ ಬೆಸೆದುಕೊಂಡು ನೂತನ ವ್ಯವಸ್ಥೆಯೊಂದರ ಹುಟ್ಟಿಗೆ ಕಾರಣವಾಯಿತು. ಪರಿಣಾಮವಾಗಿ ಸ್ಥಳೀಯವಾಗಿದ್ದವುಗಳೆಲ್ಲ ನೂತನ ರೂಪು ಪಡೆದುಕೊಂಡು ತುಳುನಾಡು ಸ್ಥಿತ್ಯಂತರದ ಸಂದರ್ಭಕ್ಕೆ ನೂಕಲ್ಪಟ್ಟಿತ್ತು.[37]

ಹಳ್ಳಿ ಅಥವಾ ಗ್ರಾಮದ ಆಡಳಿತವನ್ನು ನೋಡಿಕೊಳ್ಳುವಲ್ಲಿ ಕೆಲವೊಂದು ನಿರ್ಬಂಧಗಳಿದ್ದವು. ಮಹಿಳೆಗೆ ಅಧಿಕಾರದಲ್ಲಿ ಅವಕಾಶವಿರಲಿಲ್ಲ, ಆಸ್ತಿ ಹೊಂದಿರುವವರಿಗೆ ಮಾತ್ರ ಆಡಳಿತದಲ್ಲಿ ಆಧ್ಯತೆ ನೀಡಲಾಗುತ್ತಿತ್ತು. ಮುಂದುವರೆದು ಗ್ರಾಮದ ಮುಖ್ಯಸ್ಥ ಮತ್ತು ಕರಣಮ್ ಇವರುಗಳಿಗೆ ಪರಸ್ಪರ ಸಂಬಂಧಗಳಿರಬಾರದು ಎಂಬ ಕಾನೂನು ರೂಪಿತಗೊಂಡು ಅಧಿಕಾರದ ಕಕ್ಷೆಗಳಲ್ಲಿ ಬದಲಾವಣೆಗಳಾದವು. ಈ ನೆಲೆಯಲ್ಲಿ ವಸಾಹತುಶಾಹಿಯ ಅಚಲ ನಂಬಿಕೆಯ ಭಾಗವಾಗಿದ್ದ ಬಲಪ್ರಯೋಗ ವಸಾಹತಿನಲ್ಲಿ ಒತ್ತಡ ಸೃಷ್ಟಿಸಿತು. ಮಾತ್ರವಲ್ಲ ವಸಾಹತುಶಾಹಿಯ ಸಹಯೋಗ, ಪ್ರತಿನಿಧಿಕರಣಗಳು ವಿಧೇಯತೆಯನ್ನು ಸೃಷ್ಟಿಸಿ ವಸಾಹತಿನ ಅಧಿಕಾರದಲ್ಲಿ ನೇರವಾಗಿ ಬಿಂಬಿಸಲ್ಪಟ್ಟು ಹೊಸ ರೂಪ ಪಡೆದವಲ್ಲದೇ ವಸಾಹತುಶಾಹಿ ಪ್ರಣೀತ ಸ್ವಾಮಿಭಕ್ತಿಗೆ ಅನುಕೂಲ ಮಾಡಿಕೊಟ್ಟಿತ್ತು. ಧರ್ಮಶಾಸ್ತ್ರದಲ್ಲಿ ಉಕ್ತವಾಗಿದ್ದು, ವಸಾಹತುಪೂರ್ವ ಆಚರಣೆಯಲ್ಲಿದ್ದ ಸ್ವಾಮಿಭಕ್ತಿ ಹೊಸತಾಗಿ ಅರ್ಥೈಸಲ್ಪಟ್ಟು ವಸಾಹತುಶಾಹಿಯ ಪ್ರಭುತ್ವ ರಚನೆಯ ಭೂಮಿಕೆಯಾಗಿ ಮಹತ್ತರ ಪಾತ್ರವಹಿಸಿತು.[38] ಈ ತೆರನಾದ ಸ್ವಾಮಿಭಕ್ತಿ ಪರಿಕಲ್ಪನೆ ತುಳುನಾಡಿನಲ್ಲಿ ಊಳಿಗ ಸಂಸ್ಕೃತಿಯ ಅಂತಃಸತ್ವವಾಗಿ ವಸಾಹತುಶಾಹಿಯ ಬೇರುಗಳನ್ನು ಗಟ್ಟಿಗೊಳಿಸಲು ಕಾರಣವಾಯಿತು. ಜೊತೆಗೆ ವಸಾಹತುಶಾಹಿಯ ಸ್ವಾಮಿಭಕ್ತಿ ಪರಿಕಲ್ಪನೆ ಕೆಲವೊಂದು ಬಾರಿ ಹಳೆಯ ಸಂಪ್ರದಾಯಗಳನ್ನು ಎರವಲು ಪಡೆದು ತನ್ನ ಪರಿಕಲ್ಪನೆಯಲ್ಲಿದ್ದ ನ್ಯೂನತೆಗಳನ್ನು ಹೋಗಲಾಡಿಸಿತು. ಉದಾಹರಣೆ ವಸಾಹತುಶಾಹಿ, ತುಳುನಾಡಿನ ಆಚರಣೆಯಲ್ಲಿದ್ದ ಪುರುಷ ಪ್ರಧಾನತೆಗೆ ಬೆಂಬಲಿಸಿರುವುದು.

ವಸಾಹತುಶಾಹಿಯ ಆಡಳಿತದ ಸಂದರ್ಭಗಳಲ್ಲಿನ ಸ್ವಾಮಿಭಕ್ತಿಯ ಸಹಯೋಗಗಳನ್ನು ಎರಡು ರೀತಿಯಲ್ಲಿ ಅರ್ಥೈಸಿಕೊಳ್ಳಬಹುದು. ಅವುಗಳೆಂದರೆ ಹೊರಿಜಾಂಟಲ್ ಅಲೆಯಾನ್ಸ್

ಮತ್ತು ವರ್ಟಿಕಲ್ ಅಲೆಯಾನ್ಸ್.[39] ಅವುಗಳಲ್ಲಿ 1. ವಸಾಹತುಪೂರ್ವದ ಸಹಯೋಗಗಳ ರಾಜಕೀಯ ನಿಲುವುಗಳ ಕಲ್ಪನೆಗಳನ್ನು ಹೊರಿಜಾಂಟಲ್ ಅಲೈಯಾನ್ಸ. 2. ರಾಜಕೀಯೇತರ ನಿಲುವಿನವುಗಳಾಗಿದ್ದಲ್ಲಿ ಅವುಗಳನ್ನು ವರ್ಟಿಕಲ್ ಅಲೆಯಾನ್ಸಗಳೆಂದು ಕರೆಯಲಾಗಿದೆ. ಉದಾಹರಣೆಗೆ ವೈದಿಕಕಾಲದ ಉಳಿಗ ವ್ಯವಸ್ಥೆಯ ಚಿಂತನೆಗಳು ಸ್ಥಳೀಯದೊಂದಿಗೆ ಸಂಗಮಿಸಿ ಬದುಕುವ ರೀತಿಯಲ್ಲಿ ವ್ಯವಸ್ಥಿತ ಆಹಾರ ಪಡೆದಿದ್ದನ್ನು ಪರಿಶೀಲನೆಗೆ ಒಳಪಡಿಸಿದಾಗ ಇದೇ ತೆರದ ಅಧ್ಯಯನ ವಸಾಹತುಪೂರ್ವ ಉಳಿಗ ವ್ಯವಸ್ಥೆ ಬಲಿಷ್ಠದೊಂದಿಗೆ ಸಂಧಾನ ಮಾಡಿ ಯಶಸ್ಸನ್ನು ಪಡೆಯುವ ಮೂಲಕ ಅಧಿಕಾರದಲ್ಲಿ ಸಹಭಾಗಿಗಳಾಗಿದ್ದವು. ತುಳುನಾಡಿನ ಸಂದರ್ಭದಲ್ಲಿ ಒಕ್ಕಲುಗಳು ಬ್ರಾಹ್ಮಣ ಮತ್ತು ಜೈನರ ಅಧಿಕಾರಕ್ಕೆ ಸಹಯೋಗಿಗಳಾಗಿ ಕರ್ತವ್ಯ ನಿರ್ವಹಿಸಿರುವುದು. ಜೊತೆಗೆ ವಸಾಹತುಪೂರ್ವದಲ್ಲಿ ಸಾಮಂತರು ಸ್ಥಳೀಯವಾಗಿ ಅಧಿಕಾರ ಚಲಾಯಿಸುತ್ತಿದ್ದ ಗುತ್ತುಗಳ ಸಂಪನ್ಮೂಲಗಳನ್ನು ಆಶ್ರಯಿಸಿ ಅಧಿಕಾರ ನಡೆಸಿರುವ ಆನೇಕ ಉದಾಹರಣೆಗಳು ಉಪಲಬ್ಧವಿದೆ. ಸಹಯೋಗ ಪ್ರಾಂತ್ಯ, ಸ್ಥಳೀಯ ಸರಕಾರದಲ್ಲಿನ ಪ್ರತಿನಿಧಿಕರಣದಿಂದ ವಸಾಹತಿನ ಸ್ಥಾನಿಕ ಪ್ರದೇಶಗಳ ಮೇಲೆ ಹಿಡಿತವನ್ನು ಭದ್ರಪಡಿಸಿತ್ತಲ್ಲದೇ ವಸಾಹತುಶಾಹಿಯ ಸಂದರ್ಭದಲ್ಲಿನ ಒತ್ತಡ ಮತ್ತು ಆಜ್ಞೆ ಆಕ್ರಮಣಕ್ಕೆ ಹೆಚ್ಚು ಆಧ್ಯತೆ ನೀಡಿತು. ವಸಾಹತುಪೂರ್ವದ ಬಲಿಷ್ಠ ವ್ಯವಸ್ಥೆಗಳು ವಸಾಹತುಪೂರ್ವದಲ್ಲಿದ್ದಂತೆ ಬೆಳೆಯಲು ಅವಕಾಶವಿರದಿರುವುದನ್ನು ಕಂಪನಿ ಸೇವೆಯಲ್ಲಿದ್ದ ಅಲೆಕ್ಸಾಂಡರ್ ಡೋವ್‌ನ ಮಾತುಗಳು ಪುಷ್ಟೀಕರಿಸುತ್ತವೆ.[40] ಅವನ ಗ್ರಂಥ 'ದ ಹಿಸ್ಟರಿ ಆಫ್ ಹಿಂದುಸ್ತಾನದಲ್ಲಿ ಬರೆಯುತ್ತಾ "ದ ಸಕ್ಸಸ್ ಆಫ್ ಯುವರ್ ಮೆಜೆಸ್ಟಿಸ್ ಅರ್ಮ್ಸ್ ಹ್ಯಾಸ್ ಲೇಡ್ ಒಪನ್ ದಿ ಈಸ್ಟ್ ಟು ದಿ ರಿಸರ್ಚರ್ಸ್ ಆಫ್ ದಿ ಕ್ಯೂರಿಯಸ್. ಈ ನಿಲುವು ವಸಾಹತುಶಾಹಿ ಬರವಣಿಗೆಗಳಲ್ಲಿ ಪ್ರತಿಫಲನಗೊಂಡಿತ್ತಲ್ಲದೇ ಬಂದೂಕು ಮತ್ತು ಸಂಶೋಧನೆಗಳು ವಸಾಹತುಶಾಹಿಯ ಬೆಳವಣಿಗೆಯಲ್ಲಿ ಸಹಯೋಗಗೊಂಡಿತು. ಇಲ್ಲಿ ವಿವರಿಸಲ್ಪಟ್ಟ ಬಂದೂಕು ಬಲಪ್ರಯೋಗವನ್ನು ಸೂಚಿಸಿದ್ದರೇ, ಸಂಶೋಧನೆ ವಸಾಹತಿನ ಭೂಮಿಯ ಒಡೆತನದೊಂದಿಗಿನ ಸಂಬಂಧಗಳನ್ನು ಅಧ್ಯಯನಿಸಿ ಅದು ಆಕ್ರಮಿಸಿದ ಪ್ರದೇಶಗಳಿಂದ ವ್ಯಾಪಾರಕ್ಕೆ ಅವಶ್ಯವಿರುವ ಕಂದಾಯವನ್ನು ಪಡೆದು ಸಹಯೋಗದ ನೆಲೆಗಳನ್ನು ಕಂಡುಕೊಳ್ಳುವಲ್ಲಿನ ಯಶಸ್ಸನ್ನು ವಿವರಿಸುತ್ತದೆ. ಹೀಗೆ ವಸಾಹತುಶಾಹಿಯ ನೆಲೆ ಆಳವಾಗಿ ಬೇರೂರಿ, ಸಾಂಸ್ಥಿಕ ರಚನೆಗಳು ಅದರ ಅಧಿಕಾರದ ಅಂಕುಶದ ಸರಪಳಿಯಾಗಿ, ಸಹಯೋಗ ಪ್ರಾಮಾಣಿಕವಾಗಿ ಕೆಲಸ ನಿರ್ವಹಿಸಿತು. ಹೀಗೆ ಹೊಸ ಅಧಿಕಾರದ ಕ್ರಿಯಾ ಯೋಜನೆಗಳಲ್ಲಿ ಪ್ರತಿನಿಧಿಕರಣ, ಸಹಯೋಗ ವಿಸ್ತರಣೆಗೊಂಡು ವಸಾಹತುಶಾಹಿಯ ಕಾರ್ಯನಿರ್ವಹಣೆಯ ಪ್ರಧಾನ ಭೂಮಿಕೆಗಳಾದವು. ತುಳುನಾಡಿನ ಹೆಚ್ಚಿನ ಗುತ್ತು ಮನೆತನಗಳು ವಸಾಹತುಶಾಹಿ ಅಧಿಕಾರದ ಬೆಂಬಲಿಗರಾಗಿ ತಮ್ಮ ಅಧಿಕಾರವನ್ನು

ಸ್ಥಳೀಯ ಶ್ರದ್ಧಾ ಕೇಂದ್ರಗಳ ನಿರ್ವಾಹಕರಾಗಿ ಸಾಮಾಜಿಕ ಅಧಿಕಾರದ ಮೂಲಕ ತಮ್ಮ ಅಧಿಕಾರವನ್ನು ಮರಳಿ ಗಳಿಸುವ ಪ್ರಯತ್ನವನ್ನು ಮಾಡಿದ್ದಾರೆ.

ತಮಿಳುನಾಡಿನ ಸಂಧರ್ಭದ ಈ ರೀತಿಯ ಅಧಿಕಾರ ಮರಳಿ ಗಳಿಸುವ ಚಿಂತನೆಯನ್ನು ಪಮೇಲಾ ಜಿ ಪ್ರೈಜ್ ಕಿಂಗ್‌ಶಿಪ್ ಅಂಡ್ ಪೊಲಿಟಿಕಲ್ ಪ್ರಾಕ್ಟೀಸ್ ಇನ್ ಕಲೋನಿಯಲ್ ಇಂಡಿಯಾದಲ್ಲಿ ಚರ್ಚಿಸಿದ್ದಾರೆ. ವಸಾಹತುಶಾಹಿಯ ಬಲಪ್ರಯೋಗ ಒತ್ತಡವನ್ನು ಸೃಷ್ಟಿಸಿ ಸಹಯೋಗಿಗಳನ್ನು ತನ್ನ ಆಶಯಗಳಿಗೆ ಹೊಂದಿಕೊಳ್ಳುವಂತೆ ಮಾಡಿ ಸಾಂಪ್ರದಾಯಿಕ ಅಧಿಕಾರಗಳನ್ನು ಪುನರ್‌ವ್ಯಾಖಾನಿಸಿತು. ಹಳೆಯ ವ್ಯವಸ್ಥೆಗಳನ್ನು ನಾಶ ಮಾಡುವ ಇಲ್ಲವೇ ಬದಲಾಯಿಸಿ ಅವುಗಳು ಭವಿಷ್ಯದಲ್ಲಿ ಅಧಿಕಾರದ ವಿಕೇಂದ್ರಿಕರಣವನ್ನು ವಿಸ್ತರಿಸುವ ಕ್ರಿಯಾಯೋಜನೆಗಳಾಗಿ ಪರಿವರ್ತಿತಗೊಂಡವು. ಹೀಗೆ ವಸಾಹತುಶಾಹಿಯ ಅಧಿಕಾರದ ಕ್ರಮಾಗತ ವ್ಯವಸ್ಥೆಗಳ ಮೇಲೆ ನೇರ ಅಧಿಕಾರ ಚಲಾಯಿಸುವ ವ್ಯವಸ್ಥೆಯೊಂದು ಲಂಡನ್‌ನಿಂದಲೇ ರೂಪುಗೊಂಡಿತು.[41] ತುಳುನಾಡಿನಲ್ಲಿ ಸಾಂಪ್ರದಾಯಿಕ ಅಧಿಕಾರಿ ನೆಲೆಗಳು ಪ್ರಾಮುಖ್ಯತೆ ಕಳೆದುಕೊಂಡಿದಲ್ಲದೇ ಸಾಂಪ್ರದಾಯಿಕ ಎಲ್ಲೆಕಟ್ಟುಗಳು ಆಸ್ತಿತ್ವವನ್ನು ಕಳೆದುಕೊಂಡವು. ಇತಿಹಾಸಕಾರರ ಪ್ರಕಾರ ವಂಚನೆ, ಒತ್ತಡ, ಬಲಪ್ರಯೋಗ, ಕೊನೆಗೆ ಬಲದಿಂದ ಆಕ್ರಮಿಸಿದ ಪ್ರದೇಶಗಳ ಧರ್ಮ, ರೂಢಿ, ಸಂಪ್ರದಾಯಗಳು ನಾಶಗೊಳಿಸಲ್ಪಟ್ಟರೇ, ಅವುಗಳ ನಾಶವೇ ವಸಾಹತುಶಾಹಿ ಆಡಳಿತ ವ್ಯವಸ್ಥಿತಗೊಳ್ಳುವಲ್ಲಿ ಮುಖ್ಯವಾಯಿತು. ಹೀಗೆ ವಸಾಹತುಶಾಹಿ ಅಭಿವೃದ್ಧಿಯ ಪರಿಕಲ್ಪನೆಯನ್ನು ಮುಂದಿಟ್ಟು ವಸಾಹತಿನ ಬಗ್ಗೆ ಯಾವುದೇ ಮಮತೆ ತೋರದೇ ಅಂತರ ಕಾಯ್ದುಕೊಂಡು ಪಕ್ಷಪಾತಿ ಧೋರಣೆಯನ್ನು ಅನುಸರಿಸಿತು. ವಸಾಹತಿನ ರಾಷ್ಟ್ರೀಯ ಚಿಂತನೆಗಳು ಅನಿವಾರ್ಯವಾಗಿ ವಸಾಹತುಶಾಹಿ ಆಡಳಿತದ ಮಾರ್ಧ್ವನಿಯಾಗಿ ಅದರ ರಾಜಕೀಯ ಮೂಲಕೃತಿಯ ಪ್ರತಿಕೃತಿಯಾಗಿ ಇಲ್ಲವೇ ಅನುಕರಣೆಯಾಗಿ ಸಹಯೋಗಗೊಂಡವು. ಹೀಗೆ ಬಲಪ್ರಯೋಗ ಆಧಾರಿತ ವಸಾಹತುಶಾಹಿ ಆಡಳಿತದ ವ್ಯವಸ್ಥೆಯಲ್ಲಿ ಸಹಯೋಗ ಅದರ ಸಮರ್ಥತೆ, ವಿಸ್ತಾರತೆ ಮತ್ತು ವ್ಯವಸ್ಥಿತ ರಣನೀತಿಯಾಗಿ ಮಾರ್ಪಡಾಯಿತು.

ವಸಾಹತುಶಾಹಿ ಅಧಿಕಾರ ವಸಾಹತಿನ ಸಹಯೋಗದ ಅಧಿಕಾರವೆಂಬಂತೆ ಬಿಂಬಿಸಲ್ಪಟ್ಟಿದ್ದರಿಂದ ಸ್ಥಳೀಯ ಆಡಳಿತಗಳಲ್ಲಿ ಸುಲಭ ಪ್ರವೇಶಿಸಲು ಅನುಕೂಲವಾಯಿತ್ತಲ್ಲದೇ ವಸಾಹತು ಹೊಸತಾಗಿ ಅಂದಾಜಿಸಲ್ಪಟ್ಟು ವಸಾಹತುಶಾಹಿಯ ನೆಲೆ ವಿಸ್ತಾರಗೊಳ್ಳಲು ಮಾರ್ಗದರ್ಶನ ನೀಡಿತು.[42] ವಸಾಹತುಶಾಹಿಯಲ್ಲಿ ಪ್ರತಿರೋಧದ ವಿರುದ್ಧ ಸಹಯೋಗ ಮೇಲ್‌ಕೈಯನ್ನು ಸಾಧಿಸಿದರೆ, ಅದರ ಯಜಮಾನಿಕಾ ವಿಧಾನ ಗುರಿ ಸಾಧಿಸಲು ಪೂರಕ ಮಾರ್ಗವಾಯಿತು. ಅಂತೆಯೇ ವಸಾಹತುಶಾಹಿಯ ಪ್ರತಿನಿಧಿತ್ವ ಮತ್ತು ಸ್ಪರ್ಧಾತ್ಮಕ ನಿಲುವು

ವಸಾಹತಿನ ಉದಾರವಾದಿ ಬೂರ್ಜ್ವಾಗಳನ್ನು ಸಹಯೋಗಕ್ಕೆ ಒಳಪಡಿಸಿತು. ತುಳುನಾಡಿನ ವಸಾಹತುಪೂರ್ವದಲ್ಲಿ ಆಡಳಿತ ನಡೆಸಿದ ಸಮುದಾಯಗಳು ಪಾಶ್ಚಾತ್ಯ ಶಿಕ್ಷಣಕ್ಕೆ ಒಲವು ತೋರಿಸಿದರ ಫಲವಾಗಿ ವಸಾಹತುಶಾಹಿ ಆಡಳಿತದ ಕೆಳಹಂತದ ಅಧಿಕಾರದಲ್ಲಿ ಪಾಲು ಪಡೆಯುವಲ್ಲಿ ಯಶಸ್ಸನ್ನು ಹೊಂದಿತು. ಮೇಲಾಟ ವಸಾಹತಿನ ಚರಿತ್ರೆಯ ಕೀಲಿಕೈಯಾಯಿತು. ಆಳುವವರು, ಆಳಲ್ಪಡುವವರ ಮಧ್ಯೆ ಪೋಷಕ ಮತ್ತು ಅವಲಂಬಿ ಸಂಬಂಧವನ್ನು ಏರ್ಪಡಿಸಿ ಅವಲಂಬಿಗಳಲ್ಲಿ ಆಸೆಯ ಮನೋಭಾವವನ್ನು ಸೃಷ್ಟಿಸಿ ಪರಸ್ಪರ ಮೇಲಾಟಗಳು ಏರ್ಪಡುವಂತೆ ಮಾಡಿತು. ಸರಕಾರಿ ಸಂಸ್ಥೆಗಳನ್ನು ರಾಜಕೀಯಗೊಳಿಸಿ ಸಾಮಾನ್ಯೀಕರಣಗೊಳಿಸುತ್ತಾರೆ. ಪ್ರಾಂತ್ಯ ಮತ್ತು ಸ್ಥಳೀಯ ಮಟ್ಟದಲ್ಲಿ ಅಧಿಕಾರವನ್ನು ವಿಕೇಂದ್ರಿಕರಣಗೊಳಿಸಿ ಅವಲಂಬಿತರಿಗೆ ಹಂಚುತ್ತಾರೆ. ರಾಜಕೀಯದಲ್ಲಿ ಅಧಿಕಾರದ ಚೌಕಾಸಿಯಿಂದ ಕೊಡುಕೊಳ್ಳುವ ವಹಿವಾಟುಗಳು ಪ್ರಾರಂಭಗೊಂಡು ಗುತ್ತಿಗೆಗಳು, ಸಹಗುತ್ತಿಗೆಗಳು ಮಾನ್ಯಗೊಳ್ಳಲ್ಪಡುತ್ತದೆ. ಇದು ಸರಕಾರಿ ಸಂಸ್ಥೆಗಳನ್ನು ವ್ಯವಸ್ಥಿತವಾಗಿ ಬಳಕೆ ಮಾಡಿಕೊಂಡು ಕೇವಲ ಅಲ್ಪಸಂಖ್ಯಾಕರನ್ನು ಆಡಳಿತದಲ್ಲಿ ಬಳಸಿ ಅವುಗಳ ಸಹಯೋಗದೊಂದಿಗೆ ಅಧಿಕಾರವನ್ನು ಭದ್ರಗೊಳಿಸುವ ಗುರಿ ಹೊಂದಿತು.[43]

ಸಹಯೋಗ ಅರ್ಥಪೂರ್ಣಗೊಳ್ಳುವಂತೆ ಮಾಡಲು ವಸಾಹತುಪೂರ್ವದಲ್ಲಿದ್ದ ಮಾತೃಪ್ರಧಾನತೆಯ ಅಧಿಕಾರ ವ್ಯವಸ್ಥೆಯ ಬದಲು ಪುರುಷಪ್ರಧಾನ ಅಧಿಕಾರ ವ್ಯವಸ್ಥೆಯನ್ನು ಜಾರಿಗೊಳಿಸಿದ ವಸಾಹತುಶಾಹಿ ಪುರುಷರೊಂದಿಗೆ ಎಲ್ಲಾ ವ್ಯವಹಾರಗಳಲ್ಲೂ, ಅದರಲ್ಲೂ ಮುಖ್ಯವಾಗಿ ಭೂಮಿಯ ಅಧಿಕಾರದ ಬಗ್ಗೆ ನೇರ ಸಂವಾದ ಮಾಡಿರುವುದನ್ನು ಅಧ್ಯಯನಗಳು ಸಾದರಪಡಿಸಿವೆ.[44] ಈ ಪ್ರಕ್ರಿಯೆ ತುಳುನಾಡಿನಲ್ಲಿರುವ ಶ್ರೀಮಂತರನ್ನು ಭೂಮಾಲಕರನ್ನಾಗಿಸಿ, ವಸಾಹತುಶಾಹಿಯ ಎಲ್ಲಾ ಯೋಜನೆಗಳಲ್ಲಿ ಅವರನ್ನು ಸಹಭಾಗಿಗಳಾನ್ನಾಗಿಸಿ ಆಧುನಿಕ ವಿದ್ಯಾಭ್ಯಾಸ ಮತ್ತು ಸರಕಾರಿ ಕೆಲಸಗಳಲ್ಲಿ ತೊಡಗಿಸಿ ಲಾಭ ಮಾಡಿಕೊಂಡವು. ಜೊತೆಗೆ ರಾಜಕೀಯವಾಗಿ ಆಯಕಟ್ಟಿನ ನೆಲೆಗಳಲ್ಲಿ ಭದ್ರಗೊಂಡು ಅವಕಾಶ ಮತ್ತು ಸಂಪನ್ಮೂಲಗಳನ್ನು ಕ್ರೋಢಿಕರಿಸಿ ಸರಕಾರದ ವಿಶೇಷ ಸವಲತ್ತುಗಳನ್ನು ಪಡೆದು ಕಟ್ಟಾಸಮರ್ಥಕರಾಗಿ ಪರಿವರ್ತಿತಗೊಂಡರು.[45]

ವಸಾಹತುಶಾಹಿ ತನ್ನ ಆಡಳಿತದ ಮೊದಲ ಐವತ್ತು ವರ್ಷಗಳಲ್ಲಿ ವಂಚನೆ, ಅವಕಾಶ, ಒತ್ತಡ, ಬಲಪ್ರಯೋಗ, ಆಕ್ರಮಣ, ಶಸ್ತ್ರಬಳಕೆ ಮುಂತಾದವುಗಳ ಮೂಲಕ ವಸಾಹತುಶಾಹಿ ನಿರಂಕುಶ ಆಡಳಿತವನ್ನು ಸೃಷ್ಟಿಸಿ ಅನುಕೂಲ ವಸಾಹತಿನಲ್ಲಿ ತನಗೆ ಅನುಕೂಲ ವಾತಾವರಣವನ್ನು ನಿರ್ಮಾಣ ಮಾಡಿಕೊಂಡಿತು. ಈ ಸಂದರ್ಭಗಳಲ್ಲಿ ವಸಾಹತುಶಾಹಿ ಕೇವಲ ದಾಖಲಾತಿ, ಅಳತೆ, ಅಂದಾಜು ಇತ್ಯಾದಿಗಳ ಮೂಲಕ ಅಧಿಕಾರ-ಆಡಳಿತವನ್ನು ಸ್ಪಷ್ಟಗೊಳಿಸಿ ವಸಾಹತು ಜನರ ರಾಜಕೀಯ ಚಿಂತನೆಗಳ ವಿರುದ್ಧವಾಗಿ ಪಾಶ್ಚಾತ್ಯ ಚಿಂತನೆಗಳನ್ನು ಹೇರಿತು.

ಜೊತೆಗೆ ತನಗೆ ಪರಕೀಯವಾದುದೆಲ್ಲವನ್ನು ತನ್ನ ದೃಷ್ಟಿಕೋನದಡಿಯಲ್ಲಿ ಪುನರ್‌ವಿಶ್ಲೇಷಣೆಗೆ ಒಳಪಡಿಸಿತು. ಹೊಸ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಚೌಕಟ್ಟನ್ನು ರೂಪಿಸಿಕೊಂಡ ವಸಾಹತುಶಾಹಿ ವಸಾಹತು ಸೃಷ್ಟಿಸಿದ ಸಾಮಾಜಿಕ ವ್ಯವಸ್ಥೆಗೆ ಚಾರಿತ್ರಿಕ ಸಂಬಂಧವನ್ನು ನಿರಾಕರಿಸಿತು.[46] ಇದರ ಪರಿಣಾಮವಾಗಿ ವಸಾಹತಿನ ತಲೆತಲಾಂತರಗಳಿಂದ ಒಪ್ಪಿಕೊಂಡು ಬಂದಿದ್ದ ಪ್ರಯೋಗಗಳೆಲ್ಲವೂ ಮಾನ್ಯತೆಯನ್ನು ಕಳೆದುಕೊಂಡವು. ವಸಾಹತಿನ ಎಲ್ಲವೂ ಬಲವಂತದಿಂದ ವಸಾಹತುಶಾಹಿಯ ಆಜ್ಞೆಗಳಿಗೆ ಬದ್ಧಗೊಳಿಸಲ್ಪಟ್ಟವು.[47] "ದ ಬ್ರಿಟಿಷ್ ಬಿಲ್ಟ್ ದ ಫ್ರೇಮ್‌ವರ್ಕ್, ದ ಇಂಡಿಯನ್ಸ್ ಫಿಟ್ಟೆಡ್ ಇನ್ ಟು ಇಟ್" ಈ ಚಿಂತನಾ ಕರಾರಿನಂತೆ ಸಾಮ್ರಾಜ್ಯಶಾಹಿಯ ಉಪಕ್ರಮಿಕೆಗೆ ಸಂಪೂರ್ಣ ಅನುಕರಣೆಯೇ ಭಾರತೀಯ ಪ್ರತಿಕ್ರಿಯೆಯಾಯಿತು. ಚರಿತ್ರೆ ಎಂಪಿರಿಕಲ್ ಆಗಿ ಕಾಲ, ಸ್ಥಳಗಳೆಂಬ ಪರಿಕಲ್ಪನೆಯ ಮೂಲಕ ಸರಳ ರೇಖಾತ್ಮಕವಾಗಿ ರೂಪಿಸಲ್ಪಟ್ಟಿತ್ತು. ಆ ಉದ್ದೇಶಕ್ಕಾಗಿ ತನಗೆ ಲಭ್ಯವಿದ್ದ ಸಂಸ್ಕೃತ ಬರವಣಿಗೆ ಹಾಗೂ ಸ್ಥಳಿಯವಾಗಿ ದೊರೆತ ಅರೆಬರೆ ಜ್ಞಾನವನ್ನು ಬಳಸಿಕೊಂಡು ವಸಾಹತಿನ ಇತಿಹಾಸಕ್ಕೆ ತನ್ನದೇ ವಿನ್ಯಾಸವನ್ನು ನೀಡಿತು. ಹಾಗೂ ಇದೇ ಇತಿಹಾಸದ ಆಧಾರದ ಮೇಲೆ ವಸಾಹತಿನ ವರ್ತಮಾನ ಕಟ್ಟಿಕೊಡಲು ನಿರ್ಧರಿಸಿತು. ಇದೇ ಅರೆಬರೆ ಜ್ಞಾನದಲ್ಲಿ ವಸಾಹತಿನ ಭೂತ ಕಾಲವನ್ನು ಅರ್ಥ ಮಾಡಿಕೊಂಡ ವಸಾಹತುಶಾಹಿ ಸಾಂದರ್ಭಿಕವಾಗಿ ಇಲ್ಲಿ ಇಲ್ಲದನ್ನು ಇದೆಯೆಂದು ಬಿಂಬಿಸಿ ಇತಿಹಾಸದಲ್ಲಿ ಯಶಸ್ವಿಯಾಗಿ ಸೇರಿಸಿತು.[48] ಉದಾಹರಣೆಗೆ ದ್ರೌಪದಿಯ ಪಂಚಪತಿ ಸಂದರ್ಭ ಪುರಾತನ ಭಾರತದಲ್ಲಿ ಕೇವಲ ಬಹುಪತಿತ್ವ ಇತ್ತೆಂಬುವುದನ್ನು ಪ್ರತಿಪಾದಿಸಲು ಸಾಕಾಯಿತು. ಅಂತೆಯೇ ಪರ್ಗ್ಯುಸನ್ ಎಂಬ ಇತಿಹಾಸಕಾರ ಕೆಲವೊಂದು ದೇವಸ್ಥಾನದ ಗೋಡೆಗಳಲ್ಲಿ ಅಚ್ಚಾಗಿದ್ದ ಬೆತ್ತಲೆ ಶಿಲ್ಪಗಳನ್ನು ವಿಶ್ಲೇಷಿಸಿ ಪುರಾತನ ಭಾರತೀಯರು ವಸ್ತ್ರವನ್ನೆ ಧರಿಸುತ್ತಿರಲಿಲ್ಲವೆಂಬ ಅಕ್ಷಮ್ಯ ತೀರ್ಮಾನಕ್ಕೆ ಬಂದನು. ಸಹಯೋಗದ ಪ್ರಕ್ರಿಯೆಯಲ್ಲಿ ಉಂಟಾಗುವ ಪ್ರತಿರೋಧಗಳಿಗೆ ಅಂದರೆ ರೈತದಂಗೆ, ಧಾರ್ಮಿಕ ಅತೃಪ್ತಿ ಮುಂತಾದವುಗಳಿಗೆ ರಾಜಕೀಯ ಪ್ರಾತಿನಿಧ್ಯ ನೀಡದೇ ಸರಳ ಸಾಮಾಜಿಕ ವ್ಯವಸ್ಥೆಯಿಂದ ಪ್ರಾರಂಭಗೊಂಡವುಗಳೆಂದು ಅಥವಾ ಅಧಿಕಾರಕ್ಕಾಗಿ ಹಂಬಲಿಸುವ ಸ್ಥಳೀಯ ನಾಯಕರ ಅಂದೋಲನಗಳೆಂದು ತುಚ್ಛವಾಗಿ ವ್ಯಾಖ್ಯಾನಿಸುವ ಮೂಲಕ ವಾರಸುದಾರಿಕಾ ಪರಿಕಲ್ಪನೆಗೆ ಪಶ್ಚಿಮದ ಅರ್ಥ ನೀಡುವ ಪ್ರಯತ್ನ ಮಾಡಲ್ಪಟ್ಟಿತ್ತು.

ವಸಾಹತುಶಾಹಿ ಆಡಳಿತದ ಆರಂಭಿಕ ಹಂತದಲ್ಲಿ ದಕ್ಷಿಣ ಕನ್ನಡದ ಕೂಟದಲ್ಲಿ ಭಾಗವಹಿಸಿದ ನಾಯಕರುಗಳು ಕಂಪನಿ ಸರಕಾರದಲ್ಲಿ ಶಿರಸ್ತೆದಾರರು, ಮುನಶಿಗಳು, ಕಂದಾಯ ಲೆಕ್ಕಿಗರು, ದಾಖಲೆ ನೋಡಿಕೊಳ್ಳುವವರಾಗಿದ್ದರು. ಉದಾ: ಕೃಷ್ಣರಾವ್, ರಂಗರಾವ್, ಮಾಧವರಾವ್, ಸರ್ವೋತ್ತಮ ರಾವ್, ಸೂರಪ್ಪ, ಅತ್ತಾವರ ರಾಮಪ್ಪ, ನಾರ್ಣಪ್ಪ,

ಸಂಕುಪೂಂಜ, ಆರ್ಕುಳ ಕೃಷ್ಣಪ್ಪ ಹೆಗ್ಡೆ ಮತ್ತು ದೇರೆಬೈಲು ರಾಮಯ್ಯ ಮುಂತಾದವರು. ಬಹುಶಃ ವಸಾಹತುಪೂರ್ವದಲ್ಲಿ ತಾವು ನಿರ್ವಹಿಸುತ್ತಿದ್ದ ಅಧಿಕಾರವನ್ನು ವ್ಯವಸ್ಥಿತವಾಗಿ ಪುನರ್‌ಪಡೆಯುವ ಯತ್ನ ಈ ಮೂಲಕವೂ ಆಗಿರುವ ಸಾಧ್ಯತೆಯಿದೆ. ಈ ಚಿಂತನೆಯನ್ನು ಸಾಮ್ರಾಜ್ಯಶಾಹಿ ಚರಿತ್ರಕಾರರು "ಸ್ಟಿಲ್ ಸಭ್-ಪೊಲಿಟಿಕಲ್ ಅಂಡ್ ಒಲ್ಡ್ ಫಾಷನ್ಡ್ ಸೊರ್ಟ್ ಎಂದಿದ್ದಾರೆ."[49] 1897–1900ರ ಸಂದರ್ಭದ ಬಾಸೆಲ್ ಮಿಷನ್ ಹೊರಡಿಸಿದ ಪಂಚಾಗದಲ್ಲಿ ದಾಖಲಿಸಿದಂತೆ ಸರಕಾರಿ ಕೆಲಸದಲ್ಲಿ ಬ್ರಾಹ್ಮಣರು ಸಿಂಹಪಾಲು ಪಡೆದುಕೊಂಡರೆ, ಕ್ರೈಸ್ತರು, ಒಕ್ಕಲುಗಳು, ಮುಸ್ಲಿಂ ಸಮುದಾಯದವರು ಅಧಿಕಾರದಲ್ಲಿ ನೌಕರಶಾಹಿಗಳಾಗಿ ಭಾಗಿಗಳಾಗಿರುವುದನ್ನು ಪರಿಶೀಲಿಸಬಹುದಾಗಿದೆ. ವಸಾಹತುಶಾಹಿ ಕಾಲದ ವಿಧೇಯತೆ, ಕರ್ತವ್ಯ ಹಾಗೂ ಭಯದ ಲೇಪ ಪಡೆದುಕೊಂಡು ವಸಾಹತಿನಲ್ಲಿನ ಜನರ ಹಕ್ಕುಗಳ ಬಗ್ಗೆ ಮೌನವಹಿಸಿತು. ಇದರಿಂದಾಗಿ ವಸಾಹತಿನ ಪ್ರಜೆ ಆಧುನಿಕ ಪರಿಕಲ್ಪನೆಯ ನಾಗರೀಕನಾಗಿ ರೂಪುಗೊಳ್ಳುವ ಬದಲಿಗೆ ವಸಾಹತುಶಾಹಿಯ ಸಾಧನವಾಗಿ ಕೆಲಸ ನಿರ್ವಹಿಸಬೇಕಾಯಿತು.[50] ವಸಾಹತುಶಾಹಿ ಪ್ರಭುತ್ವದ ರಚನಾವಿನ್ಯಾಸ ಒತ್ತಡವಿಲ್ಲದೇ ಅಧಿಕಾರ ಚಲಾಯಿಸಲು ಅವಕಾಶ ನೀಡದಿರುವುದರಿಂದ ದೃಢನಂಬಿಕೆ ಹಾಗೂ ವಿಶ್ವಾಸಕ್ಕಿಂತ ಹೆಚ್ಚು ಬಲಪ್ರಯೋಗ ಪ್ರಧಾನ ಪಾತ್ರವಹಿಸಿತು. ಹೀಗೆ ವಸಾಹತು ವಸಾಹತುಗೊಳಗಾಗುವ ಪ್ರಕ್ರಿಯೆಯಲ್ಲಿ ಬಲಪ್ರಯೋಗ ಅನಿವಾರ್ಯವಾಗಿ ಬಳಕೆಯಾಯಿತು.[51] ಬಲಪ್ರಯೋಗದಿಂದ ವಿಧೇಯತೆಯ ಪ್ರವರ್ತನೆ ಬಲಗೊಂಡು ಇಲ್ಲವೇ ಪ್ರತಿರೋಧ ಹಾಗೂ ಸಹಯೋಗದಿಂದ ವಿಧೇಯತೆ ರೂಪುಗೊಂಡು ವ್ಯವಸ್ಥಿತ ಸಹಯೋಗಕ್ಕೆ ಅವಕಾಶ ಮಾಡಿಕೊಟ್ಟದ್ದರಿಂದ ಪ್ರಭುತ್ವದ ಅಧಿಕಾರದಲ್ಲಿ ಯಾವುದೇ ಉದ್ವೇಗಗಳು ಸೃಷ್ಟಿಯಾದ ಲಕ್ಷಣಗಳು ಗೋಚರಿಸಿಲ್ಲವೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.

ವಸಾಹತುಶಾಹಿ ಸಂದರ್ಭದಲ್ಲಿ ವಿಧೇಯತೆ ಅಧುನಿಕೀಕರಣಗೊಂಡಿತ್ತಾದರೂ ಅದು ವಸಾಹತಿನ ಕೆಳವರ್ಗದ ಜನರ ಜೀವನದ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ.[52] ತುಳುನಾಡಿನ ಮುಂದುವರೆದ ಸಮುದಾಯಗಳು ವಸಾಹತುಶಾಹಿಯ ಅವಕಾಶಗಳನ್ನು ತನ್ನದಾಗಿಸಿದೆ. ಉದಾಹರಣೆಗೆ ಶೈಕ್ಷಣಿಕ ಆಯ್ಕೆಗಳಲ್ಲಿ ಬ್ರಾಹ್ಮಣರು ಮೊದಲಿಗರಾಗಿದ್ದರೆ, ಕ್ರೈಸ್ತರು ಅದನ್ನೊಂದು ಆಶ್ರಯ ಸ್ಥಾನವನ್ನಾಗಿಸಿದರು. ಉಳಿದವರು ಜಾಗ್ರತೆಯಿಂದ ಅನುಸರಿಸಿದರೂ, ಕೆಳವರ್ಗದವರು ಅದನ್ನೊಂದು ಸಂಶಯದಿಂದ ಕಾಣುವುದರ ಜೊತೆಗೆ ಅದರ ಪ್ರಯೋಜನ ಪಡೆಯುವುದಕ್ಕೆ ಹಿಂಜರಿದರು. ಆದರೆ ಪಾಶ್ಚಾತ್ಯ ವಿದ್ಯಾಭ್ಯಾಸ ಮತ್ತು ಉದಾರವಾದಿ ಚಿಂತನೆಗಳು ಅಭಿವೃದ್ಧಿಯ ಮಾಧ್ಯಮಗಳಾಗಿ ರೂಪುಗೊಂಡ ಕಾರಣ

ವಸಾಹತಿನಗಣ್ಯರು ವಸಾಹತುಶಾಹಿಯ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಮಾಡುವಲ್ಲಿ ಸಫಲವಾಯಿತು.[53]

ವಸಾಹತುಶಾಹಿ ತುಳುನಾಡಿಗೆ ಪರಕೀಯವಾಗಿದ್ದರಿಂದ ಅದು ವಸಾಹತಿನ ಅಂತರಿಕ ಚಲನಾತ್ಮಕ ಶಕ್ತಿಗಳೊಂದಿಗೆ ಹಂಚಿ ಅವುಗಳ ಸಹಯೋಗದೊಂದಿಗೆ ಅಧಿಕಾರವನ್ನು ಚಲಾಯಿಸುವ ಅನಿವಾರ್ಯವೇರ್ಪಟ್ಟಿತ್ತು. ಜೊತೆಗೆ ವಸಾಹತುಶಾಹಿಯ ಸಾಮ್ರಾಜ್ಯಶಾಹಿ ರಚನಾ ಚಿಂತನೆಯ ಸಂಕೀರ್ಣತೆಗಳಿಗೆ ಅನುಗುಣವಾಗಿ ನೌಕರಶಾಹಿ, ನೌಕರಶಾಹಿ ಪ್ರವರ್ತಿತ ಕಟ್ಟಳೆಗಳು, ಕಾನೂನುಗಳು, ರೀತಿರಿವಾಜುಗಳು, ಸಾಂಸ್ಥಿಕ ರಚನೆಗಳು, ಸಾಂಸ್ಥಿಕ ವ್ಯವಸ್ಥೆ ಮುಂತಾದವುಗಳ ಅಧಿಕಾರ ಹಾಗೂ ರಚನಾ ರೂಪಿಕೆಗಳು ವ್ಯವಸ್ಥೆಗೊಂಡವು. ಹೀಗೆ ವಸಾಹತುಶಾಹಿ ಸಹಯೋಗವನ್ನು ಆಜ್ಞೆಯ ಉಪಕರಣದೊಂದಿಗೆ ಜೋಡಿಸಿ ಒತ್ತಾಯ ಮತ್ತು ಬಲಪ್ರಯೋಗದೊಂದಿಗೆ ಪರಿಕ್ರಮಿಸಿ ಸ್ವಾಮಿಭಕ್ತಿಯನ್ನು ಆಧುನಿಕ ಚಿಂತನೆಯೊಂದಿಗೆ ಊರ್ಜಿತಗೊಳಿಸಿತು. ವಸಾಹತುಶಾಹಿ ಅಧಿಕಾರವನ್ನು ವಿಸ್ತರಿಸಿ ಗಟ್ಟಿಗೊಳಿಸುವ ಉದ್ದೇಶದಿಂದ ತನ್ನ ಆಡಳಿತದ ಒಳಿತುಗಳನ್ನು ಪಟ್ಟಿಮಾಡುತ್ತಾ ವಸಾಹತಿನಲ್ಲಿ ಆದ ಸಕಾರಾತ್ಮಕ ಸ್ಥಿತ್ಯಂತರಗಳನ್ನು ಮುಂದಿಟ್ಟಿತು.[54]

ವಸಾಹತುಶಾಹಿಯ ಆಗಮನದಿಂದ ಭಾರತದಲ್ಲಿ ಮುಸಲ್ಮಾನರ ಅಂಧಕಾರದ ಯುಗ ಅಂತ್ಯಗೊಂಡು ಅಧುನಿಕತೆ ಪ್ರವೇಶಿಸಿತು. ಈ ಹೇಳಿಕೆ ವಸಾಹತುಪೂರ್ವದ ಚರಿತ್ರೆಯನ್ನೆ ಕತ್ತರಿಸಿ ಇಲ್ಲವೇ ತೆಗೆದುಹಾಕುವ ಕಾರ್ಯ ಯೋಜನೆಯನ್ನು ವ್ಯವಸ್ಥಿತವಾಗಿ ಮಾಡಿದೆ. ಹಿಂದೂಗಳ ಚಾರಿತ್ರಿಕ ಸಂಸ್ಕೃತಿಯ ನಿರ್ಮೂಲನೆಯ ನಂತರ ಮುಸಲ್ಮಾನರನ್ನು ನಿಗ್ರಹಿಸುವ ಅಂದೋಲನಗಳು ಪ್ರಾರಂಭಗೊಂಡವು. ಈ ಎರಡು ವ್ಯವಸ್ಥಿತ ಕಾರ್ಯಯೋಜನೆಗೆ ಅನುಗುಣವಾಗಿ ವಸಾಹತಿಗೆ ಹೊಸ ಚರಿತ್ರೆಯ ಕೊಡುಗೆಯನ್ನು ಉದಾರವಾಗಿ ಕೊಡಮಾಡಿರುವುದರಿಂದ ಅನಾಗರೀಕ ವಸಾಹತನ್ನು ನಾಗರೀಕ ರಾಷ್ಟ್ರವನ್ನಾಗಿ ರೂಪಿಸುವ ಶಕ್ತಿಯಾಗಿ ಮಹತ್ತರ ಜವಾಬ್ದಾರಿಯನ್ನು ಹೊಂದಿದೆ ಎಂಬ ಭ್ರಮೆಯನ್ನು ಸೃಷ್ಟಿಸಿತು. ವಸಾಹತುಶಾಹಿ ಆಗಮನದಿಂದ ತುಳುನಾಡಿನಲ್ಲಿ ಹೈದರಾಲಿ–ಟಿಪ್ಪುಸುಲ್ತಾನರ ಅಂಧಕಾರದ ಯುಗ ಅಂತ್ಯಗೊಂಡು ವಸಾಹತುಶಾಹಿಯ ಅಧುನಿಕತೆ ಪ್ರವೇಶಿಸಿದೆಯೆಂದು ಬಿಂಬಿಸಲಾಯಿತು. ಇದು ಹಿಂದೂಗಳ ಚಾರಿತ್ರಿಕ ಸಂಸ್ಕೃತಿಯ ನಿರ್ಮೂಲನೆಯ ನಂತರ ಮುಸಲ್ಮಾನರನ್ನು ನಿಗ್ರಹಿಸುವ ಅಂದೋಲನದ ಒಂದು ಭಾಗವಾಗಿತ್ತು. ಈ ಎರಡು ವ್ಯವಸ್ಥಿತ ಕಾರ್ಯಯೋಜನೆಗಳ ಮೂಲಕ ಅನಾಗರೀಕ ವಸಾಹತಿಗೆ ಹೊಸ ಚರಿತ್ರೆಯನ್ನು ಕಟ್ಟಿಕೊಟ್ಟು ಅದನ್ನು ನಾಗರೀಕ ರಾಷ್ಟ್ರವನ್ನಾಗಿ ರೂಪಿಸುವ ಗುರುತರ ಜವಬ್ದಾರಿಯನ್ನು ವಸಾಹತುಶಾಹಿ ಹೊಂದಿದೆಯೆಂದು ತೋರ್ಪಡಿಸಲಾಯಿತು. ಈ ಉದ್ದೇಶಕ್ಕನುಗುಣವಾಗಿ ವಸಾಹತುಪೂರ್ವದ

ಚರಿತ್ರೆಯಲ್ಲಿ ಮನಸೋ-ಇಚ್ಛೆ ಹಸ್ತಕ್ಷೇಪ ಮಾಡಿದ ವಸಾಹತುಷಾಹಿ ತನಗೆ ಅನುಕೂಲವಾಗುವವುಗಳನ್ನು ಇಟ್ಟುಕೊಂಡು ಅಪಾಯವಾಗಬಲ್ಲ ಭಾಗಗಳಿಗೆ ಕತ್ತರಿ ಪ್ರಯೋಗಿಸಿತು. ಇತಿಹಾಸದ ಪುನರ್‌ರಚನೆಯು ಹೊಸ ವಾರಸುದಾರಿಕಾ ಪರಿಕಲ್ಪನೆಯೊಂದರ ಹುಟ್ಟಿಗೆ ಕಾರಣವಾಯಿತು.

ಸಾಮಾನ್ಯಶಕೆ 1857ರ ನಂತರದ ದಶಕಗಳಲ್ಲಿ ವಸಾಹತುಶಾಹಿಯ ಅಧಿಕಾರದ ರೂಪುರೇಷೆಗಳಲ್ಲಿ ಬದಲಾವಣೆಗಳು ಗೋಚರಿಸಿದವು.[55] ಯುರೋಪಿನಲ್ಲಾದ ಕೈಗಾರಿಕ ಕ್ರಾಂತಿಯ ತೀಕ್ಷ್ಣತೆಯಿಂದ ಜಗತ್ತಿನಾದ್ಯಂತ ವ್ಯಾಪಾರಿ ಸ್ಪರ್ಧೆಗಳು ಆರಂಭಗೊಂಡವು. ಈ ಸ್ಪರ್ಧಾ ಚಟುವಟಿಕೆಗಳು ತಾನು ಈಗಾಗಲೇ ಹಿಡಿತದಲ್ಲಿಟ್ಟುಕೊಂಡಿರುವ ವಸಾಹತುಗಳನ್ನು ಸಂಪೂರ್ಣ ಹತೋಟಿಯಲ್ಲಿಡಲು ವಸಾಹತುಶಾಹಿಗಳಿಗೆ ಅನುಕೂಲ ಮಾಡಿಕೊಟ್ಟವು.[56] ಸಾಮಾನ್ಯಶಕೆ 1858ರ ಕಾಯ್ದೆ, ಇಂಡಿಯನ್ ಕೌನ್ಸಿಲ್ ಕಾಯಿದೆ ರೂಪಿಸುವಲ್ಲಿ ಇಂಪಿರಿಯಲ್ ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ವಸಾಹತನ್ನು ಪ್ರತಿನಿಧಿಕರಿಸಲು ಜನರಿಂದ ನೇರ ಆಯ್ಕೆಗೊಳ್ಳದ ವಸಾಹತುಶಾಹಿಯ ಹಿತಾಸಕ್ತಿಗಳನ್ನು ಕಾಪಾಡಿಕೊಂಡು ಹೋಗಬಲ್ಲ ಸಹಯೋಗಿಗಳನ್ನು ನೇಮಕ ಮಾಡುವಲ್ಲಿ ಉತ್ಸುಕತೆಯನ್ನು ತೋರಿತು. ಜಮೀನುದಾರರು, ವ್ಯಾಪಾರಿಗಳು, ದೇಶಿ ಸಂಸ್ಥಾನದ ರಾಜಕುಮಾರರು ಇಲ್ಲವೇ ಅವರ ಮಂತ್ರಿಮಂಡಲದಲ್ಲಿರುವವರನ್ನು ನೇಮಕ ಮಾಡಿಕೊಳ್ಳಲಾಯಿತು. ಚಾರ್ಲ್ಸ್‌ವುಡ್ 1861ರ ಕೌನ್ಸಿಲ್ ಬಿಲ್‌ನಲ್ಲಿ ಇದನ್ನು ವಸಾಹತುಶಾಹಿಯ ಪ್ರಜ್ಞಾಪೂರ್ವಕ ನೀತಿ ಎಂದಿದ್ದಾನೆ. "ಅಲ್ ಎಕ್ಸಪೀರಿಯನ್ಸ್ ಟೀಚ್ಸ್ ಅಸ್ ದೆಟ್, ವೇರ್ ಎ ಡೊಮಿನೆಂಟ್ ರೇಸ್ ರೂಲ್ಸ್ ಅನದರ್ ದ ಮೈಲ್ಡೆಸ್ಟ್ ಫಾರ್ಮ್ ಆಫ್ ಗವರ್ನ್‌ಮೆಂಟ್ ಇಸ್ ಎ ಡೆಸ್‌ಪಾಟಿಸಮ್". ಇದು ತುಳುನಾಡಿನಲ್ಲಿಯೂ ಪ್ರತಿಫಲನಗೊಂಡು ಸಹಯೋಗಿಗಳ ನೇಮಕಕ್ಕೆ ಅವಕಾಶವನ್ನು ಸೃಷ್ಟಿಸಿತು. ಸಹಯೋಗಿಗಳ ನೇಮಕದ ಹಿಂದಿನ ಮರ್ಮ ಹಣಕಾಸಿನ ಹೊಂದಾಣಿಕೆ. ವಸಾಹತನ್ನು ವ್ಯವಸ್ಥಿತವಾಗಿಡುವ ಕಾರ್ಯಯೋಜನೆಗಳಾದ ರೈಲ್ವೆ ಹಾಗೂ ಯುದ್ಧ ಸಂಬಂಧಿ ಕೆಲಸಗಳಿಗೆ ಹಣವನ್ನು ವಿನಿಯೋಗಿಸಿದ್ದರಿಂದ ಅದನ್ನು ಸರಿದೂಗಿಸಿ ತನ್ನ ಆರ್ಥಿಕ ಭದ್ರತೆಯನ್ನು ಸುಸ್ಥಿರವಾಗಿಡುವ ಪ್ರಯತ್ನ ಇದಾಗಿತ್ತು.[57] ಸಾಮಾನ್ಯಶಕೆ 1870ರಲ್ಲಿ ಮೇಯೋ, ಸಾಮಾನ್ಯಶಕೆ 1877ರಲ್ಲಿ ಲಾರ್ಡ್‌ಲಿಟ್ಟನ್ ಮುಂತಾದವರು ಈ ದೆಸೆಯಲ್ಲಿ ಕಾರ್ಯಪ್ರವೃತ್ತರಾಗಿದ್ದರು. ಸಾಮಾನ್ಯಶಕೆ 1882ರಲ್ಲಿ ಪ್ರಾಂತ್ಯಗಳು ತಮ್ಮಲ್ಲಿ ಸಂಗ್ರಹವಾಗುವ ಕಂದಾಯದಿಂದ ಅಭಿವೃದ್ಧಿ ಕಾರ್ಯ ಮಾಡಿಕೊಳ್ಳಲು ನಿರ್ಧಾರ ತೆಗೆದುಕೊಳ್ಳುವಂತೆ ನಿರ್ದೇಶನ ನೀಡಲಾದ ಆಜ್ಞೆಗಳು ವಸಾಹತಿನಲ್ಲಿನ ಆಡಳಿತಾತ್ಮಕ ಸುಧಾರಣೆ ಎಂದು ಮೇಲ್ನೋಟಕ್ಕೆ ಕಂಡುಬಂದರೂ, ಇದರ ನಿಜವಾದ ಉದ್ದೇಶ ಪ್ರಾಂತ್ಯಗಳಲ್ಲಿನ ಖರ್ಚಿನ ಬಾಬ್ತು ಕಡಿತಗೊಳಿಸಿ ವರಮಾನವನ್ನು

ಹೆಚ್ಚಿಸುವುದಾಗಿತ್ತು. ಈ ಉದ್ದೇಶವನ್ನು ಸಾಧಿಸುವ ಸ್ಥಳೀಯ ಸಂಸ್ಥೆಗಳಿಗೆ ವಸಾಹತಿನ ಜನರನ್ನು ನೇಮಕ ಮಾಡುವ ಪ್ರಕ್ರಿಯೆಗಳು ಜತೆಗೂಡುವುದರೊಂದಿಗೆ ವಸಾಹತುಶಾಹಿಯ ತೋರಿಕೆಯ ಸುಧಾರಣೆಯ ಪರ್ವ ಆರಂಭಗೊಂಡಿತು. ಪ್ರತಿನಿಧಿಕರಣದ ಕಾರ್ಯಚಟುವಟಿಕೆಗಳು ಗ್ರಾಮಗಣ್ಯತೆಯನ್ನು ಗುರುತಿಸಿದ್ದರಿಂದ ಹಲವಾರು ಮೇಲ್ವರ್ಗದ ಜನಸಮುದಾಯಗಳಲ್ಲಿನ ಪ್ರಭಾವಿಗಳು ಜಿಲ್ಲಾ ಬೋರ್ಡಿನ ಸದಸ್ಯರಾಗಿ ನಿಯುಕ್ತಿಗೊಂಡರು. ಇವರಲ್ಲಿ ಹೆಸರಿಸಬಹುದಾದ ಹಂದಾಡಿ ಮೋನಪ್ಪ ಶೆಟ್ಟಿ, ಮುಲ್ಕಿ ಕಾಳಪ್ಪಶೆಟ್ಟಿ, ಬೆಳ್ಳಿಪ್ಪಾಡಿ ನರಸಿಂಗ ರೈ ಮುಂತಾದವರು ಪ್ರಮುಖರಾಗಿದ್ದರು. ಸ್ಥಳೀಯವಾಗಿ ಆರ್ಥಿಕ ಮತ್ತು ಸಾಮಾಜಿಕ ಶ್ರೇಣಿಕರಣಗಳಿಗೆ ವಸಾಹತುಶಾಹಿಯಿಂದ ಸಿಕ್ಕಿದ ಮನ್ನಣೆ ಈ ಕೆಲಸ ಮಾಡಿತ್ತಲ್ಲದೇ ಆಸ್ತಿವಂತ ವರ್ಗದವರನ್ನು ಪ್ರಭಾವಿ ಗುಂಪುಗಳೆಂದು ಗುರುತಿಸಿದ್ದರಿಂದ ವಸಾಹತುಶಾಹಿ ನಾಯಕರು ಅವರ ಬೆಂಬಲ ಪಡೆದು ಲಾಭ ಗಳಿಸಲು ತೀವ್ರ ಆಸಕ್ತಿ ಹೊಂದಿದ್ದರು.[58]

ಸಾಮಾನ್ಯಶಃ 19ನೇ ಶತಮಾನದ ಕೊನೆಯ ದಶಕಗಳಲ್ಲಿ ಗ್ರಾಮಗಣ್ಯರು ಜಿಲ್ಲಾ ಹಾಗೂ ತಾಲೂಕು ಬೋರ್ಡುಗಳಿಗೆ ನಿಯುಕ್ತಗೊಂಡು ಪ್ರಾಮುಖ್ಯತೆ ಪಡೆದಿರುವುದು ವಸಾಹತುಶಾಹಿ ದಾಖಲೆಗಳಲ್ಲಿ ಉಲ್ಲೇಖಿತಗೊಂಡಿದೆ.[59] ದ ಕೆನರೀಸ್ ಅಲ್ಮಾನಕ-ಬಾಸೆಲ್ ಮಿಷನು ಪ್ರಾರಂಭಿಸಿದ ಪಂಚಾಂಗದಲ್ಲಿ ಹಲವಾರು ಗ್ರಾಮಪ್ರಮುಖರ ಹೆಸರುಗಳಿವೆ. ಇವರಲ್ಲಿ ಹೆಚ್ಚಿನವರು ಗುತ್ತು ಇಲ್ಲವೇ ವ್ಯಾಪಾರಿ, ಸರಕಾರಿ ಅಧಿಕಾರಿಗಳಾಗಿ ಹೆಸರುವಾಸಿಯಾದವರು. ವಾಸ್ತವದಲ್ಲಿ ಸ್ಥಳೀಯ ಆಡಳಿತದಲ್ಲಿ ಮ್ಯಾಜಿಸ್ಟ್ರೇಟರ ಅಧಿಕಾರವೇ ಅಂತಿಮವಾಗಿದ್ದು ಗ್ರಾಮಗಣ್ಯರಾಗಿ ನಿಯುಕ್ತಗೊಳ್ಳಲ್ಪಟ್ಟು, ವಸಾಹತುಶಾಹಿ ವ್ಯವಸ್ಥೆಯಿಂದ ಪ್ರತಿನಿಧಿಕರಣಗೊಂಡವರಾದರೂ ಅವರನ್ನು ವಸಾಹತುಶಾಹಿ ಹಾಗೇಯೇ ಪರಿಗಣಿಸಲು ತಯಾರಿರಲಿಲ್ಲ. ಸ್ಥಳೀಯ ಪ್ರತಿನಿಧಿಕರಣದ ನಿಜವಾದ ಉದ್ದೇಶ ಸ್ಥಳೀಯ ಜನರಿಂದ ಹೆಚ್ಚುವರಿ ತೆರಿಗೆಗಳನ್ನು ಸಂಗ್ರಹಿಸಿ ವಸಾಹತುಶಾಹಿಯ ಹಣಕಾಸಿನ ನಿರ್ವಹಣೆಯನ್ನು ಸರಿಪಡಿಸಿಕೊಳ್ಳುವುದಾಗಿತ್ತು.[60] ಸ್ಥಳೀಯ ಆಡಳಿತದ ವ್ಯವಸ್ಥೆಗಳು ವಸಾಹತುಶಾಹಿ ಸರಕಾರಿ ಯಂತ್ರದ ಭಾಗಗಳಾಗಿದ್ದರಿಂದ ವಸಾಹತು ಅವುಗಳಿಂದ ಏನನ್ನೂ ನಿರೀಕ್ಷಿಸಲು ಸಾಧ್ಯವಿರಲಿಲ್ಲ. ಆದರೂ ತುಳುನಾಡಿನಲ್ಲಿ ಸ್ಥಳೀಯರಿಗೆ ಸಿಗುವ ಅವಕಾಶಗಳನ್ನು ಸ್ವೀಕರಿಸಲಾಯಿತ್ತಲ್ಲದೇ ಮೇಲ್ವರ್ಗದ ಸಮುದಾಯಗಳು, ಅದರಲ್ಲೂ ಮುಖ್ಯವಾಗಿ ವಸಾಹತುಪೂರ್ವದ ವಾರಸುದಾರಿಕೆಯ ಹೊಣೆಹೊತ್ತ ಸಮುದಾಯಗಳು ವಸಾಹತುಶಾಹಿಯ ಸಂತುಲಿತ ಅಧಿಕಾರದಲ್ಲಿ ಪಾಲು ಪಡೆಯುವ ಅವಕಾಶಗಳು ಇದರಿಂದಾಗಿ ಪ್ರಾಪ್ತವಾಯಿತು. ಜೊತೆಗೆ ಪಾರಂಪರಿಕ ಅಧಿಕಾರದ ಕೊಂಡಿಗಳನ್ನು ಬಲಪಡಿಸುವ ಪ್ರಕ್ರಿಯೆಯು ವೇಗ ಪಡೆದುಕೊಂಡಿತು.

ಸ್ಥಳೀಯಾಡಳಿತದಲ್ಲಿ ಪಾಲುಪಡೆಯುವಿಕೆ ತುಳುವರ ರಾಜಕೀಯ ಹಕ್ಕೊತ್ತಾಯವಾದರೂ ಇದು ನಿಜವಾಗಿ ವಸಾಹತುಶಾಹಿ (ಲಾರ್ಡ್ ರಿಪ್ಪನನ) ಸುಧಾರಣಾ ನೀತಿಯ ವಿರುದ್ಧ ವಸಾಹತಿನ ಜನರು ವ್ಯಕ್ತಪಡಿಸಿದ ಆಕ್ರೋಶಗಳನ್ನು ಶಮನ ಮಾಡುವ ಪ್ರಕ್ರಿಯೆಯಾಗಿತ್ತು. ಇನ್ನೊಂದೆಡೆ ಸ್ಥಳೀಯರಿಗೆ ನೀಡಲಾದ ಪ್ರತಿನಿಧಿಕರಣವು ಇಚ್ಛೆ ಮತ್ತು ಅರ್ಹತೆ ಇರುವವರಿಗೆ ಒದಗಿಸಲಾದ ಹೊಸ ಅವಕಾಶಗಳಾಗಿದ್ದವೆಂದು ಚರಿತ್ರಾಕಾರರ ಅಭಿಮತ.[61] ಈ ಅವಕಾಶಗಳಿಂದ ಅಂದೋಲನಗಳು ಬಂಡವಾಳಶಾಹಿಪೂರ್ವದ ಆಸ್ತಿ ಸಂಬಂಧಗಳಿಂದ ಮುಕ್ತಗೊಂಡರೇ ಕಾನೂನು ಮತ್ತು ಆಡಳಿತಾತ್ಮಕವಾಗಿ ವಸಾಹತಿನ ಆಡಳಿತದಲ್ಲಿ ಅಸಂಗತತೆಗಳನ್ನು ಹುಟ್ಟುಹಾಕಿತು. ಮುಂದುವರೆದು ವಸಾಹತುಶಾಹಿಯ ನಿರಂಕುಶ ಅಧಿಕಾರ, ಉದಾರವಾದ, ಪಾಶ್ಚಾತ್ಯ ವಿದ್ಯಾಭ್ಯಾಸದ ಚಿಂತನೆ ಮುಂತಾದವುಗಳು ವಿಧೇಯತೆಯನ್ನು ಕಾಯ್ದಿಡುವಲ್ಲಿ ಪರಿಣಾಮಕಾರಿಯಾಯಿತು. ಸ್ಥಳೀಯ ಗಣ್ಯತೆ ವಸಾಹತುಶಾಹಿಯ ಬಂಡವಾಳದ ಮುಖವಾಡವಾಗಿ ವಸಾಹತಿನ ಕಾರ್ಮಿಕ ಶಕ್ತಿಯನ್ನು ಸಂಚಯಿಸಿ, ವಸಾಹತಿನ ಪಾರುಪತ್ಯತೆಯನ್ನು ಮಾಡುವ ಸೋಗನ್ನು ಹಾಕಿತು. ಹೀಗೆ ಬಂಡವಾಳಶಾಹಿಯ ಅಭಿವೃದ್ಧಿ ಇಲ್ಲಿನ ಉಳಿಗ ವ್ಯವಸ್ಥೆಯನ್ನು ಭೂಮಿಯ ಆಸ್ತಿಯ ಮೇಲೆ ಮರುರೂಪಿಸಿತು. ಇನ್ನೊಂದೆಡೆ ಕೆಳವರ್ಗಗಳು ಕಾರ್ಯಯೋಜನೆಗಳನ್ನು ಮೇಲ್ಪಂಕ್ತಿಯನ್ನಾಗಿಸಿ ಒಳ್ಳೆಯ ಮೊತ್ತದ ಕೂಲಿಯನ್ನು ಪಡೆಯುವಲ್ಲಿ ಬದುಕಿನ ಸತ್ಯಕೋಸ್ಕರ ಅಂದೋಲನವನ್ನು ಮಾಡಬೇಕಾಯಿತು.

ವಸಾಹತುಶಾಹಿಯ ನಿರಂಕುಶ ಅಧಿಕಾರ ರಚನೆಯಿಂದಾಗಿ ಆಳುವವರ ಇಚ್ಛಾಶಕ್ತಿ ಆಳಲ್ಪಡುವವರ ಮೇಲೆ ಯಾವುದೇ ರೀತಿಯ ಕೊಡುಕೊಳ್ಳುವಿಕೆಗೆ ಅವಕಾಶ ನೀಡಿಲ್ಲ. ವಸಾಹತುಶಾಹಿಯ ಆರಂಭಿಕ ಪ್ರವರ್ತನೆ ರೂಲ್-ಆಫ್-ಫೋರ್ಸ್ ಮುಂದುವರೆದು ರೂಲ್-ಆಫ್-ಲಾ ಆಗಿ ಪರಿವರ್ತನೆ ಹೊಂದಿತ್ತು. ಆಡಳಿತದ ಮೊದಲ ನೂರು ವರ್ಷಗಳಲ್ಲಿ ವಸಾಹತುಶಾಹಿಯ ಆಡಳಿತವನ್ನು ಕಂಪನಿಯ ಕಾರ್ಯನಿರ್ವಾಹಕ ಮಂಡಳಿಯ ಆಜ್ಞೆಗಳು, ಕಾನೂನುಕಟ್ಟಳೆಗಳು, ನಿರ್ಣಯಗಳು, ಕಾಯಿದೆಗಳಿಗೆ ಸೀಮಿತವಾಗಿ ಆಡಳಿತವನ್ನು ನಡೆಸಿದರೆ, ನಂತರದ ವರ್ಷಗಳಲ್ಲಿ ಅದರ ಸಾಂಸ್ಥಿಕ ಕಾರ್ಯಚಟುವಟಿಕೆಗಳು ಶಾಸಕಾಂಗವನ್ನು ಒಳಗೊಂಡು ಕಾರ್ಯಾಚರಿಸಿತು. ವಸಾಹತಿಗೆ ಅಧಿಕಾರ ಹಸ್ತಾಂತರದ ನೆಪವೊಡ್ಡಿ ಸಾಮಾನ್ಯಶಕೆ 1935ರ ಕಾಯ್ದೆ ಅದಕ್ಕೆ ಗರಿಷ್ಠ ಅಧಿಕಾರ ನೀಡಿದರೂ ಕಾನೂನು ರೂಪಿಸುವ ಅಧಿಕಾರವನ್ನು ವಸಾಹತುಶಾಹಿಯೇ ಇಟ್ಟುಕೊಂಡಿತು. ನ್ಯಾಯಾಂಗ ಮತ್ತಿನ್ನಿತರ ಸಾರ್ವಜನಿಕ ಸೇವೆಗಳಲ್ಲಿ ಜನಾಂಗ-ತಾರತಮ್ಯ ನೀತಿ ಹಾಗೂ ಅದರ ಕಾರ್ಯಚಟುವಟಿಕೆಗಳಿಂದ ಪಾಶ್ಚಾತ್ಯ ವಿದ್ಯಾಭ್ಯಾಸ ಪಡೆದ ಮೊದಲ ಉದಾರವಾದಿ ಚಿಂತಕರು ವಸಾಹತುಶಾಹಿಯ ಬಗ್ಗೆ ಭ್ರಮನಿರಸನಗೊಂಡರು. ಅಂದರೆ ವಸಾಹತುಶಾಹಿ ಆಡಳಿತದಲ್ಲಿ ಕಾನೂನು ಪರಿಪಾಲನೆಗೆ ಸಂಬಂಧಿಸಿದ ಬಿಳಿಯರ

ಕ್ರಮವನ್ನು ಪ್ರಶ್ನಿಸುವಲ್ಲಿನ ಸಂದರ್ಭಗಳಿದ್ದರೂ, ವಸಾಹತಿನ ಜನರಿಗೆ ಯಾವುದೇ ಪ್ರಯೋಜನವಾದದ್ದಿಲ್ಲ. ಮುಂದುವರೆದು ವಸಾಹತುಶಾಹಿಯ ಕಾನೂನುಗಳು ವಸಾಹತಿನ ಜನರ ನೈಜ ಸ್ವಾತಂತ್ರ್ಯವನ್ನು ದೋಚುವ ಉಪಕರಣಗಳಾಗಿ ಇಲ್ಲವೇ ಶೋಷಣೆಯ ದ್ಯೋತಕಗಳಾದವು. ಇದಲ್ಲದೇ ವಸಾಹತುಶಾಹಿಯ ಕಾನೂನು ಹಿಂಸಾಮಾರ್ಗವಾಗಿ, ಶೋಷಣೆಯ ಸಂಕೇತವಾಗಿ, ಪ್ರಜ್ಞಾಪೂರ್ವಕವಾಗಿ ಇಲ್ಲವೇ ಅಪ್ರಜ್ಞಾಪೂರ್ವಕವಾಗಿ ವಸಾಹತನ್ನು ಒಂದು ರೀತಿಯ ವ್ಯಭಿಚಾರದ ಕೇಂದ್ರವನ್ನಾಗಿ ಮಾರ್ಪಡಿಸಿತು. ಈ ಬೆಳವಣಿಗೆಯಿಂದಾಗಿ ವಸಾಹತಿನ ನಾಗರೀಕ ಸಮಾಜ ವಸಾಹತುಶಾಹಿಯ ವ್ಯವಸ್ಥೆಯೊಂದಿಗೆ ಜೊತೆಗೂಡುವಲ್ಲಿ ಹಿಂದುಳಿಯಿತು. ಮಾತ್ರವಲ್ಲ ಸಾಂಪ್ರದಾಯಿಕವಾಗಿ ಅಧಿಕಾರ ಚಲಾಯಿಸುತ್ತಿದ್ದ ಶಕ್ತಿಗಳು ಗೌಣಗೊಂಡವು. ಕೆಲವೊಂದು ಸಂದರ್ಭಗಳಲ್ಲಿ ವಸಾಹತುಪೂರ್ವದ ಗ್ರಹಿತ ಬಂಡವಾಳಶಾಹಿ ಶಕ್ತಿಗಳು ವಸಾಹತುಶಾಹಿ ವ್ಯವಸ್ಥೆಯೊಂದಿಗಿನ ಕೂಡುವಿಕೆಯಲ್ಲಿ ಅಧಿಕಾರವನ್ನು ರೂಪಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಂದರೆ ವಸಾಹತುಪೂರ್ವದ ಬಲಯುತವಾದವುಗಳು ಅಧಿಕಾರವನ್ನು ಚಲಾಯಿಸಿದ್ದರೂ, ಯಜಮಾನಿಕೆಯನ್ನು ಪಡೆದುಕೊಳ್ಳುವಲ್ಲಿ ಯಶಸ್ಸನ್ನು ಪಡೆದ ಯಾವುದೇ ಸಂದರ್ಭಗಳು ಚರಿತ್ರೆಯಲ್ಲಿ ದಾಖಲಾಗಿಲ್ಲ. ಹೀಗೆ ವಸಾಹತುಶಾಹಿ ಬಿಟ್ಟರೆ ಉಳಿದ ಯಾವುದೇ ಶಕ್ತಿಗಳು ವಸಾಹತಿನ ಮೇಲೆ ಯಜಮಾನಿಕೆಯನ್ನು ಹೊಂದುವಲ್ಲಿ ವಿಫಲಗೊಂಡವು. ಸುರೇಂದ್ರರಾಯರ ಪ್ರಕಾರ ಶೇ. 60ಕ್ಕಿಂತಲೂ ಹೆಚ್ಚು ತುಳುನಾಡಿನ ಪ್ರಭಾವಿ ಒಕ್ಕಲುಗಳು ಅಧಿಕಾರವನ್ನು ಪಡೆಯಲು ಶಕ್ತವಾಗಿತ್ತು.

ಹತ್ತೊಂಬತ್ತನೇ ಶತಮಾನದ ಆರಂಭದ ದಶಕಗಳಲ್ಲಿನ ತುಳುನಾಡಿನ ರಾಜಕೀಯ ಸ್ಥಿತ್ಯಂತರ ವಸಾಹತುಶಾಹಿ ಆಡಳಿತ ಮತ್ತು ಪ್ರಭುತ್ವ ಬಲಿಷ್ಠಗೊಳ್ಳುವ ದೃಷ್ಟಿಯಿಂದ ಬಹುಮುಖ್ಯ ಕಾಲಘಟ್ಟ. ವಸಾಹತಿನ ಸ್ವಾಧೀನ ಕೇವಲ ಆರ್ಥಿಕ ಪ್ರಾಬಲ್ಯ ಹಾಗೂ ಶಸ್ತ್ರಾಸ್ತ್ರಗಳ ಬಲದಿಂದ ಮಾತ್ರ ಸಾಧ್ಯವಿಲ್ಲವೆಂದು ಮನಗಂಡು ಅದು ಆಕ್ರಮಿಸುವ ಪ್ರದೇಶಗಳನ್ನು ರಾಜಕೀಯ ಆಡಳಿತದ ದೃಷ್ಟಿಯಿಂದ ತನ್ನ ಅಂಕೆಗೆ ತೆಗೆದುಕೊಂಡಿತು. ವಸಾಹತುಶಾಹಿಯ ಪರಿವರ್ತಿತ ಅಧುನಿಕತೆಯ ಅವಸ್ಥಾಂತರಗಳಲ್ಲೂ ವ್ಯಾಪಾರದ ಜೊತೆಗೆ ಸಾಮ್ರಾಜ್ಯ ವಿಸ್ತರಣೆ, ವಸಾಹತಿನ ಪ್ರಭುತ್ವದೊಂದಿಗೆ ಸಂಬಂಧ ಹೊಂದಿದ್ದ ಊಳಿಗ ವ್ಯವಸ್ಥೆಯನ್ನು ಪಾಶ್ಚಾತ್ಯ ಶಿಕ್ಷಣದ ನೆಲೆಯಲ್ಲಿ ರೂಪುಗೊಳಿಸಿತು.[62] ಹೀಗೆ ವಸಾಹತುಪೂರ್ವದ ಊಳಿಗಮಾನ್ಯ ಇಲ್ಲವೇ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯನ್ನು ವಸಾಹತುಶಾಹಿ ಆಡಳಿತದ ಸಹಯೋಗಿ ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಿತು. ಅತ್ತಾವರ ರಾಮಯ್ಯ, ಅತ್ತಾವರ ದೇವಪ್ಪ, ಅತ್ತಾವರ ಬಾಲಕೃಷ್ಣ, ಮಹಾಬಲ ಹೆಗ್ಡೆ, ಕೊಡಿಯಾಲ್ ಗುತ್ತು

ತಿಮ್ಮಯ ಮುಂತಾದವರು ಹೀಗೆ ಕುಟುಂಬ, ಗುತ್ತು, ಮಾಗಣೆ, ಸೀಮೆಯ ಮುಖ್ಯಸ್ಥರು ವಸಾಹತುಶಾಹಿಯ ಸಹಯೋಗಿಗಳಾಗಿ ಅಧಿಕಾರ ನಡೆಸಿರುವುದು. ಉದಾಹರಣೆಗೆ ಮಂಗಳೂರಿನ ಕೊಡಿಯಾಲ್, ಗುಡ್ಡೆಗುತ್ತು, ಬೆಳ್ಳಿಪಾಡಿ ಮನೆತನ ಮುಂತಾದ ಪ್ರಭಾವಿ ಗುತ್ತುಗಳು ವಸಾಹತುಪೂರ್ವದಲ್ಲಿ ನ್ಯಾಯಿಕ ಅಧಿಕಾರವನ್ನು ಹೊಂದಿದ್ದವರಾಗಿದ್ದರು. ವಸಾಹತುಶಾಹಿ ಆಡಳಿತದ ಕಾಲದಲ್ಲೂ ತಮ್ಮ ಸಾಮಾಜಿಕ ಅಧಿಕಾರವನ್ನು ಇಟ್ಟುಕೊಂಡು ಪ್ರಭಾವಿಗಳಾಗಿ ಸಹಯೋಗ ನೀಡಿದವರು. ಜಿಲ್ಲಾ ಕೋರ್ಟುಗಳಲ್ಲಿ ಮರಣದಂಡನೆಯನ್ನು ಖಾಯಂಗೊಳಿಸುವುದಿದ್ದಲ್ಲಿ ಕೊಡಿಯಲ್ ಮತ್ತು ಗುಡ್ಡೆಗುತ್ತಿನ ಮುಖ್ಯಸ್ಥರು ಉಪಸ್ಥಿತರಿರಬೇಕಿತ್ತು. ಹೀಗೆ ಯಾವುದೇ ಪ್ರತಿರೋಧವಿಲ್ಲದೇ ಆಡಳಿತಕ್ಕೆ ಒಪ್ಪಿಗೆ ನೀಡಬಲ್ಲ ಮಾನಸಿಕ ಸ್ಥಿತಿಯ ಪ್ರಜೆಗಳನ್ನು ರೂಪಿಸುವ ಇಚ್ಛೆಯನ್ನು ಹೊಂದಿತ್ತು. ಭಾರತದ ಸಂದರ್ಭದಲ್ಲಿ ವಸಾಹತುಶಾಹಿಗಳಿಗೆ ಸಾಮಾನ್ಯಶಕೆ 1770ರಿಂದ ಭಾಷಾ ಸಮಸ್ಯೆ ತಲೆದೋರಿದಾಗ ಅದರ ಆಡಳಿತಕ್ಕೆ ಬೇಕಾದ ಸಿದ್ಧತೆ ತಂತ್ರಗಾರಿಕೆಗಳನ್ನು ಭಾಷೆಗಳ ಅಧ್ಯಯನದಿಂದ ಪಡೆದುಕೊಳ್ಳಲು ಉಪಕ್ರಮಿಸಿದ್ದನ್ನು ಸ್ಪಷ್ಟಪಡಿಸಬಹುದು. ಮುಂದುವರೆದು ಈ ಆಡಳಿತಾತ್ಮಕ ಪ್ರಕ್ರಿಯೆಗಳನ್ನು ಧಮನ ಮಾರ್ಗದ ಮೂಲಕ ನಡೆಸದೇ ಆಡಳಿತಕ್ಕೊಳಪಡುವ ಪ್ರದೇಶದ ಚರಿತ್ರೆ, ತತ್ವಜ್ಞಾನ, ಸಮಾಜಶಾಸ್ತ್ರ, ಭಾಷಾಶಾಸ್ತ್ರ, ಸಾಹಿತ್ಯ, ಶಿಕ್ಷಣ ಪ್ರಸರಣ ಮೊದಲಾದ ಸೈದ್ಧಾಂತಿಕ ಚಿಂತನೆಗಳ ಅಧ್ಯಯನಗಳ ಮೂಲಕವೂ ನಡೆಸಿತು.[63] ಜೆಸೂಯಿಟ್ ಪಾದ್ರಿಗಳು, ಬಾಸೆಲ್ ಮಿಷನರಿಗಳು ಈ ಪ್ರದೇಶದ ಸಮಗ್ರ ಅಧ್ಯಯನ ಮಾಡಿದವರಲ್ಲಿ ಪ್ರಮುಖರು. ಈ ಚಟುವಟಿಕೆಗಳೆಲ್ಲವೂ ವಸಾಹತುಶಾಹಿ ಪ್ರಭುತ್ವವನ್ನು ಬಲಪಡಿಸಿ ಆಡಳಿತವನ್ನು ಸುಭದ್ರಗೊಳಿಸಿತು. ಹೀಗೆ ವಸಾಹತಿನ ವಾರಸುದಾರಿಕೆಯ ಆಯಾಮಗಳನ್ನು ಪಶ್ಚಿಮದ ಚಿಂತನೆಗಳ ನೆಲೆಯಲ್ಲಿ ಮರುವ್ಯಾಖ್ಯಾನಿಸುವಲ್ಲಿ ಪ್ರಯತ್ನಿಸಿತು.

ವಸಾಹತುಶಾಹಿ ಪ್ರಭುತ್ವ ರೂಪುಗೊಳ್ಳುವ ಸನ್ನಿವೇಶದಲ್ಲಿ ರವಾನೆಯಾದ ಅಧುನಿಕತೆ, ಅದನ್ನು ಪ್ರತಿಪಾದಿಸುವ ಭಾಷೆ ಮುದ್ರಣ ಬಂಡವಾಳಶಾಹಿಯ (ಪ್ರಿಂಟ್ ಕ್ಯಾಪಿಟಾಲಿಸಂ) ಮೂಲಕ ಸಾಂಸ್ಥಿಕ ರೂಪ ಪಡೆದುಕೊಂಡಿತು. ಈ ಮೂಲಕ ವಸಾಹತುಶಾಹಿ ಪ್ರಭುತ್ವದ ಶಕ್ತಿಗಳು ತನ್ನ ಗುರಿ ಸಾಧಿಸಿ, ವಸಾಹತನ್ನು ನಿಯಂತ್ರಿಸುವಲ್ಲಿ ಯಶಸ್ಸು ಪಡೆದುಕೊಂಡಿತು.[64] ಇದರಿಂದಾಗಿ ವಸಾಹತುಶಾಹಿಯ ರಾಜಕೀಯ ಪಟ್ಟುಗಳು ಬಲಗೊಂಡು ದೇಶಿ ವ್ಯವಸ್ಥೆಗಳ ಮೇಲೆ ಪ್ರಭುತ್ವ ಸ್ಥಾಪಿಸಲು ಸಾಧ್ಯವಾಯಿತು. ಜೊತೆಗೆ ಭಾಷಾ ವ್ಯಾಕರಣ, ಅರ್ಥಕೋಶ, ತರಗತಿ ಪಠ್ಯ ಮತ್ತು ಅದರ ಅನುವಾದಗಳು ವಸಾಹತುಶಾಹಿಯ ಪ್ರಭುತ್ವಕ್ಕೆ ಅಗತ್ಯವಾಗಿದ್ದ ಬೆಂಬಲವನ್ನು ಕ್ರೋಢಿಕರಿಸಿತು.[65] ಆಧುನಿಕ ಶಿಕ್ಷಣ ಮತ್ತು ಸ್ಥಳೀಯ ಭಾಷೆಗಳ ಮೇಲಿನ ಪ್ರಭುತ್ವ, ವಸಾಹತುಶಾಹಿ ಪ್ರಭುತ್ವದ ಅಧಿಕಾರ ಪಕ್ವಗೊಳ್ಳುವಲ್ಲಿ ಬಹುಮುಖ್ಯ

ಪಾತ್ರವಹಿಸುದುದರ ಜೊತೆಗೆ ಬಾಸೆಲ್‌ಮಿಷನ್‌ನ ಧರ್ಮಪ್ರಚಾರ ಮತ್ತು ಕ್ಯಾಥೋಲಿಕ್ ಮತಪ್ರಚಾರಕರ ಸಾಮಾಜಿಕ ಸೇವಾ ಚಟುವಟಿಕೆಗಳು ಸಹ ವಸಾಹತುಷಾಹಿಯ ಪ್ರಸ್ತಾವಿತ ಯೋಜನೆಗಳ ಯಶಸ್ಸಿಗೆ ಅಗತ್ಯ ನೆರವು ನೀಡಿದವು. ಹೀಗೆ ತುಳುನಾಡಿನಲ್ಲಿ ವಸಾಹತುಶಾಹಿ ರೂಪುಗೊಳಿಸಿದ ಪ್ರಭುತ್ವದ ಸಂಕೀರ್ಣವಾದ ಪರಂಪರೆಯೊಂದು ತಲೆ ಎತ್ತಿತು.[66] ಶಾಲಾ-ಕಾಲೇಜು, ಆಡಳಿತಾತ್ಮಕ ವ್ಯವಸ್ಥೆ, ಕಾನೂನುಗಳ ಮೂಲಕ ದೇಶದೊಳಗಿರುವ ಭಿನ್ನ ಭಿನ್ನ ಜೀವನ ಕ್ರಮಗಳನ್ನು ಜ್ಞಾನಗಳನ್ನು ಏಕಿಕೃತಗೊಳಿಸು ಚಿಂತನಾಕ್ರಮ ಯುರೋಪಿನ ಬದಲಾವಣೆಯ ಪರ್ವದಿಂದ ಬಂದಿದೆ. ಬನಾರಸ್ ವಿದ್ಯಾಲಯದ ಸ್ಥಾಪನೆ, 1780ರಲ್ಲಿ ಕಲ್ಕತ್ತದಲ್ಲಿ ಮದ್ರಸ ತೆರೆಯುವಂತೆ ಹೇಸ್ಟಿಂಗ್ಸನ ಆಗ್ರಹ ವಸಾಹತುಗಾರರನ್ನು ಸಾಂಕೇತಿಕ ಪ್ರಯೋಗದ ಮೂಲಕ ಇಲ್ಲವೇ ವಸಾಹತನ್ನು ತಿಳಿಯುವ ಪ್ರಯತ್ನ ಎಂದು ತಿಳಿಯಬೇಕಾಗುತ್ತದೆ. ತುಳುನಾಡಿನ ಸಂದರ್ಭದಲ್ಲಿ ಬಾಸೆಲ್‌ನಿಂದ ನಿಯೋಜಿಸಲ್ಪಟ್ಟ ಮಿಷನರಿಗಳ ಕಾರ್ಯಕ್ಷೇತ್ರ ಆಧಾರಿತ ಅಧ್ಯಯನಗಳು, ಜೆಸೂಯಿಟರ ಮಿಷನರಿ ಕೆಲಸ, ತುಳುನಾಡಿನಲ್ಲಿ ಕ್ರಿಸ್ತನ ಸಂದೇಶ ಹಾಗೂ ಅಧುನಿಕ ಶಿಕ್ಷಣವನ್ನು ಹರಡುವಲ್ಲಿ ನಿಯೋಜಿಸಲ್ಪಟ್ಟ ಮಿಷನರಿಗಳ ಕಾರ್ಯಚಟುವಟಿಕೆಗಳು ಮುಖ್ಯವಾದುದು. ಇದಕ್ಕೆ ಸಂವಾದಿಯಾಗಿ ವಸಾಹತಿನ ಆಯಕಟ್ಟಿನ ಪ್ರದೇಶಗಳಲ್ಲಿ ವಸಾಹತುಶಾಹಿಯ ಪ್ರಸ್ತಾವಿತ ಯೋಜನೆಗಳು ಕಾರ್ಯರೂಪಕ್ಕಿಳಿದಿರುವುದು ಶಿಕ್ಷಣ ಸಂಸ್ಥೆಗಳ ಸ್ಥಾಪನೆಯೊಂದಿಗೆ. ಈ ಅಜೆಂಡಾ ವಸಾಹತಿನ ಮೂಲಭೂತ ವ್ಯವಸ್ಥೆಯನ್ನು ಬದಲಾಯಿಸುವಲ್ಲಿ ನಿರ್ಣಾಯಕ ಕೊಡುಗೆ ನೀಡಿತು. ಇದು ವಸಾಹತುಶಾಹಿ ಪ್ರಭುತ್ವದ ಗುಪ್ತ ಉದ್ದೇಶ ಸಾಧಿಸುವ ಯೋಜನೆಯ ಭಾಗವಾಗಿದ್ದರೂ ಅದನ್ನು ಅಭಿವೃದ್ಧಿಯ ಆಯಾಮದೊಂದಿಗೆ ಸಂತುಲಿತಗೊಳಿಸಿ ಸಕರಾತ್ಮಕ ರೂಪ ನೀಡುವಲ್ಲಿ ಯಶಕಂಡಿತು. ವಸಾಹತುಶಾಹಿಯಿಂದ ಪ್ರಾಯೋಜಿಸಲ್ಪಟ್ಟ ಸಂಸ್ಥೆಗಳಲ್ಲಿ ಅಧ್ಯಯನ ಮಾಡಿದ ತುಳುವರು ವಸಾಹತು ಚಿಂತನೆಯ ಚಾರಿತ್ರಿಕ ಪ್ರಜ್ಞೆಯನ್ನು ಪಡೆದುಕೊಂಡು ವಸಾಹತುಶಾಹಿಯ ಉತ್ಪನ್ನಗಳಾಗುವ ಪ್ರಕ್ರಿಯೆ. ಈ ಮೂಲಕ ವಸಾಹತುಶಾಹಿ ತನ್ನನ್ನು ತಾನು ಸಮರ್ಥಿಸಿ, ಅನ್ಯರನ್ನು ನಿಯಂತ್ರಿಸಿ ವಸಾಹತಿನ ಸಮುದಾಯಗಳ ಮೇಲೆ ಯಾವುದೇ ಒತ್ತಡಗಳಿಲ್ಲದೇ ಅಧಿಕಾರ ಚಲಾಯಿಸಿತು. ಒಟ್ಟಿನಲ್ಲಿ ವಸಾಹತಿನ ಪ್ರಭುತ್ವದ ವಾರಸುದಾರಿಕೆಯ ಆಯಾಮಗಳ ಮೂಲಭೂತ ಸ್ಥಿತ್ಯಂತರದ ಜವಬ್ದಾರಿಯನ್ನು ಪಾಶ್ಚಿಮಾತ್ಯ ವಿದ್ವಾಂಸರು ಮಿಶನರಿಗಳ ಹೆಗಲಿಗೇರಿಸಿದ್ದು ಅವುಗಳು ವಿದ್ವಾಂಸರ ನಂಬಿಕೆಯನ್ನು ಹುಸಿಗೊಳಿಸಲಿಲ್ಲ. ಕಠಿಣ ಶ್ರಮ ಮತ್ತು ಸತತ ಪ್ರಯತ್ನದಿಂದ ವಸಾಹತುಶಾಹಿ ಪ್ರಭುತ್ವದ ಸಿದ್ಧಾಂತಗಳನ್ನು ಹರಡುವಲ್ಲಿ ಶ್ರಮಿಸಿ ಯಶಸ್ಸನ್ನು ಪಡೆದುಕೊಂಡವು. ಮಿಷನರಿಗಳು ತಾವು ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ವಾಸ್ತವ್ಯವಿದ್ದ ಪ್ರದೇಶಗಳನ್ನು ಸಮಗ್ರವಾಗಿ ಅಧ್ಯಯನಿಸಿ, ಅಲ್ಲಿನ ಸ್ಥಳೀಯ ಮಾಹಿತಿಗಳನ್ನು

ವಸಾಹತುಶಾಹಿ ಪ್ರಭುತ್ವದ ಆಡಳಿತದ ಸಾಫಲ್ಯಕ್ಕಾಗಿ ಪರಿವರ್ತಿಸಿ, ಅವುಗಳನ್ನು ಪ್ರಸರಣ ಮಾಡಲು ಮುದ್ರಣ ಸೌಲಭ್ಯ, ಪತ್ರಿಕೆ, ಬರವಣಿಗೆ ಮುಂತಾದವುಗಳ ಸಹಾಯ ಪಡೆದುಕೊಳ್ಳಲು ಅಗತ್ಯ ಕ್ರಮ ಕೈಗೊಳ್ಳಲ್ಪಟ್ಟಿತ್ತು.[67] ಸಂಕ್ಷಿಪ್ತವಾಗಿ ಹೇಳುವುದಾದರೆ ವಸಾಹತುಶಾಹಿ ಪ್ರಭುತ್ವದ ಅಧಿಕಾರದ ಬೇರು ಮುಖ್ಯವಾಗಿ ವೈಚಾರಿಕ ಮನೋಭಾವದ ಜಾಗೃತಿ, ವೈಜ್ಞಾನಿಕ ಪ್ರಗತಿ ಮತ್ತು ಜ್ಞಾನಪ್ರಸಾರಕ್ಕೆ ಮುದ್ರಣಯಂತ್ರದ ಅವಿಷ್ಕಾರ ಮೊದಲಾದವುಗಳನ್ನು ಅಧರಿಸಿತ್ತು. ಇದು ಹೊಸ ಭೌಗೋಳಿಕ ಅನ್ವೇಷಣೆಗೂ ಅವಕಾಶ ಮಾಡಿಕೊಟ್ಟಿತ್ತು. ಹೀಗೆ ಒಂದೆಡೆ ತುಳುನಾಡಿನಲ್ಲಿ ಮಾನವನ ಸೇವೆಯ ನೆಪದಲ್ಲಿ ಚರ್ಚ್ ಸೇವೆಯನ್ನು, ಸಮಾಜ ಪರಿವರ್ತನೆಯ ಕಾರ್ಯಯೋಜನೆಯನ್ನು ವಿಸ್ತಾರಗೊಳಿಸಿ, ಕ್ರೈಸ್ತನ ಭೋಧನೆಯನ್ನು ಜನಪ್ರಿಯಗೊಳಿಸುವಲ್ಲಿ ಯಶಕಂಡರೇ, ಚರ್ಚ್ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದ ಮತಪ್ರಚಾರಕರ ಶ್ರಮ, ವಸಾಹತುಶಾಹಿ ಪ್ರಭುತ್ವದ ಆಡಳಿತಾತ್ಮಕ ಪ್ರಯೋಗ, ಅವಿಷ್ಕಾರ, ಅಧುನೀಕರಣ, ಮುದ್ರಣ ಮಾಧ್ಯಮ, ಅಭಿವೃದ್ಧಿ ಮುಂತಾದವುಗಳಿಂದ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಅಮೂಲಾಗ್ರ ಬದಲಾವಣೆಗೆ ನಾಂದಿಯಾಗುವುದರೊಂದಿಗೆ ವಸಾಹತುಶಾಹಿ ಪ್ರಭುತ್ವದ ಸ್ಥೀರಿಕರಣಕ್ಕೂ ಅವಕಾಶ ಕಲ್ಪಿಸಿತು.

ಪಾಶ್ಚಾತ್ಯ ವಿದ್ಯಾವಂತ ವರ್ಗ ಒಂದು ಕಡೆಯಿಂದ ಸಾಂಪ್ರದಾಯಿಕವಾಗಿ ಮಾತೃಭೂಮಿಯಿಂದ ಬೇರ್ಪಟ್ಟರೇ, ಇನ್ನೊಂದು ಕಡೆ ಪಾಶ್ಚಾತ್ಯ ಸಂಸ್ಕೃತಿಯ ವರ್ಗದಿಂದಲೂ ಸ್ವೀಕರಿಸಲ್ಪಡದೇ ತ್ರಿಶಂಕುಗಳಾಗಿ ಪರಕೀಯವಾಗುವ ಹಲವಾರು ಸಂದರ್ಭಗಳು ಸೃಷ್ಟಿಯಾಗಿ ಕೀಳರಿಮೆ, ಸಾಮಾಜಿಕ ಸಮಬಿಂಬಕ್ಕಾಗಿ ತಡಕಾಡುವುದರ ಸ್ಥಿತಿಯನ್ನು ಅವಲೋಕಿಸಿದಾಗ ವಸಾಹತು ಸ್ಥಿತ್ಯಂತರಕ್ಕೆ ಒಳಪಡುವ ಪ್ರಕ್ರಿಯೆಗಳನ್ನು ಕಾಣಬಹುದು. ಅದಾಗ್ಯೂ ವಸಾಹತುಶಾಹಿ ಪ್ರಭುತ್ವದ ಮಾನಸಿಕ ಸ್ಥಿತಿಯ ಕೇಂದ್ರ ಲಕ್ಷಣವಾಗಿದ್ದ ಯಜಮಾನಿಕೆಯ ಹೇರಿಕೆ, ಬಲವಂತದ ಅಕ್ರಮಣಕಾರಿ ನಿಲುವು, ತನ್ನ ಶ್ರೇಷ್ಠತೆಯ ಪ್ರತಿಪಾದನೆ ಹಾಗೂ ದಬ್ಬಾಳಿಕೆಗಳು ಎಗ್ಗಿಲ್ಲದಂತೆ ಮುಂದುವರೆಸಿಕೊಳ್ಳುವಲ್ಲಿ ವಸಾಹತುಶಾಹಿ ಪ್ರವರ್ತಕರು ದಂಡ-ಬಲಪ್ರಯೋಗಗಳ ಸರ್ವಪ್ರಯತ್ನಗಳನ್ನು ಮಾಡಿದರು. ತುಳುನಾಡಿನ ವಸಾಹತುಪೂರ್ವದ ಆಳುವವರಲ್ಲಿ, ಆಳಲ್ಪಡುವವರಲ್ಲಿ ವರ್ಗ, ಸ್ತರ, ವೈಯುಕ್ತಿಕ ನಡೆಗಳಲ್ಲಿ, ಏಣಿ-ಶ್ರೇಣಿಯ ಅಧಿಕಾರದಲ್ಲಿ ವಿಧೇಯತೆ ಅಧಿಕಾರದ ಒಳಗಣ ಸಂಬಂಧಗಳಿಗೆ ಅನುಕೂಲ ಮಾಡಿಕೊಟ್ಟಿದ್ದರಿಂದ ಅಸಮಾನತೆಗಳು ಸೃಷ್ಟಿಸಲ್ಪಟ್ಟವು.

ವಸಾಹತುಶಾಹಿಯ ನೂತನ ರಾಜಕೀಯ ವ್ಯವಸ್ಥೆ ಕಾರ್ಯನಿರ್ವಹಿಸಿ ತುಳುನಾಡಿನ ರಾಜಕೀಯ ವಾರಸುದಾರಿಕೆಯ ಆಯಾಮಗಳನ್ನು ಪಲ್ಲಟಗೊಳಿಸಿತು. ವಸಾಹತುಶಾಹಿ ಅಧಿಕಾರದ ಅಸಮಾನತೆಯ ಪ್ರಯೋಗ, ವ್ಯಾವಹಾರಿಕ ಲಾಭ ಜೊತೆಗೆ ಬಲಪ್ರಯೋಗ, ಒತ್ತಡ,

ವಂಚನಾ ಕ್ರಿಯೆ ಮುಂತಾದವುಗಳಿಂದ ಅಭಿವ್ಯಕ್ತಗೊಂಡಿತ್ತು. ವಸಾಹತಿನ ದುರ್ಬಲ ರಾಜಕೀಯ ಸಂದರ್ಭಗಳು, ಅವುಗಳ ನೆಲೆಯಲ್ಲಿ ರೂಪಿತವಾಗಿದ್ದ ಪ್ರಭುತ್ವ ನೂತನ ವಸಾಹತುಶಾಹಿ ಪ್ರಭುತ್ವವೊಂದು ರಚನೆಗೊಳ್ಳಲು ಕಾರಣವಾಯಿತು.

ಪ್ರಾಚೀನ ಭಾರತದ ಸಂದರ್ಭದ ಮುಖಾಮುಖಿ ವ್ಯಾಪಾರ-ಸಂಸ್ಕೃತಿಯ ಕೊಡು-ಕೊಳ್ಳುವಿಕೆಯಿಂದ ಉಪಕ್ರಮಿಸಿದರೆ, ಮಧ್ಯಯುಗೀನ ಮುಖಾಮುಖಿ ಪ್ರಭುತ್ವದ ಅಥವಾ ಯಜಮಾನಿಕೆಯ ನಿಯಂತ್ರಣ ಸಾಧಿಸುವಲ್ಲಿ ಅವಕಾಶ ನೀಡಿತು. ಅಧುನಿಕ ಸಂದರ್ಭದ ವಸಾಹತುಶಾಹಿಯ ಮುಖಾಮುಖಿ ಪ್ರಭುತ್ವದ ನಿಯಂತ್ರಣವಲ್ಲದೇ ಆರ್ಥಿಕತೆಯನ್ನು ಒಳಗೊಂಡಂತೆ ವಸಾಹತಿನ ಚಿತ್ರಣವನ್ನು ಸಂಪೂರ್ಣ ಬದಲಾಯಿಸಿತು. ಇದು ಮುಂದುವರೆದು ವಸಾಹತುಶಾಹಿಯ ದಂಡ ಮತ್ತು ಬಲಪ್ರಯೋಗದ ಮೂಲಕ ಸಂಪನ್ನಗೊಂಡಿತು. ವಸಾಹತುಶಾಹಿ ಚಿಂತನೆಗಳಿಂದ ಪ್ರಭಾವಿಗೊಂಡು ಸಮಾಜ ಮತ್ತು ಸಂಸ್ಕೃತಿಯನ್ನು ಅಧುನೀಕರಣಗೊಳಿಸುವ ನೀತಿ ಅಂದರೆ ಯುರೋಪಿನ ಹೊಸ ಅಲೋಚನೆಗಳ ಪ್ರವಾಹ ವಸಾಹತಿನ ಮನೋಭಾವದಲ್ಲಿ ಸಂಘರ್ಷವನ್ನುಂಟು ಮಾಡಿತು. ತುಳುನಾಡಿನ ರಾಜಕೀಯ, ಸಾಮಾಜಿಕ ರಚನೆ, ಕೃಷಿ ಅಧಿಕಾರ, ಆರ್ಥಿಕತೆ, ಸಾಂಸ್ಕೃತಿಕ ಮತ್ತು ಧಾರ್ಮಿಕ ವ್ಯವಸ್ಥೆ ಅಮೂಲಾಗ್ರ ಬದಲಾವಣೆಗೊಳಪಟ್ಟು ವಾರಸಾ ಅಧಿಕಾರದ ನೆಲೆಗಳು ಪ್ರಾಮುಖ್ಯತೆಯನ್ನು ಕಳೆದುಕೊಂಡಿತು.

## ---ಕೊನೆಟಿಪ್ಪಣಿ---

[1] ಪರ್ಸ್‌ಪೆಕ್ಟಿವ್ ಒಪ್ ಸೌತ್ ಕೆನರಾ, ದಶಮಾನೋತ್ಸವ ಸಂಚಿಕೆ ಮಂ.ವಿ.ವಿ 1991. ಪುಟ 70.

[2] ಶ್ಯಾಮ್ ಭಟ್ಟ ಎನ್. ಸೌತ್ ಕೆನರಾ, 1799–1860 ಮಿತ್ತಲ್ ಪಬ್ಲಿಕೇಷನ್ಸ್ ನ್ಯೂದಿಲ್ಲಿ 1998, ಪುಟಗಳು 47, 56.

[3] ಶ್ಯಾಮ್ ಭಟ್ಟ ಎನ್. ಸೌತ್ ಕೆನರಾ, 1799–1860 ಮಿತ್ತಲ್ ಪಬ್ಲೀಕೇಷನ್ಸ್ ನ್ಯೂದಿಲ್ಲಿ 1998, ಪುಟಗಳು 47, 56,

[4] ರಣಜಿತ್‌ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998,

[5] ವಸಾಹತುಶಾಹಿಯ ಆಕ್ರಮಣದಿಂದ ತುಳುನಾಡಿನ ಸಾಮಂತ ಅರಸರು ಮತ್ತು ಪ್ರಭಾವಿ ಗುತ್ತುಗಳು ತಮ್ಮ ರಾಜಕೀಯ ಪ್ರಾಬಲ್ಯವನ್ನು ಕಳೆದುಕೊಂಡ ಆನೇಕ ಉದಾಹರಣೆಗಳಿವೆ. ಮುಖ್ಯವಾಗಿ ನ್ಯಾಯ ತೀರ್ಮಾನದಂತಹ ನ್ಯಾಯಿಕ ಅಧಿಕಾರಗಳು ವಸಾಹತುಶಾಹಿಯ ರೂಲ್ ಆಫ್ ಲಾದ ಎದುರುಗಡೆ ಆಸ್ತಿತ್ವ ಕಳೆದುಕೊಂಡಿರುವುದು.

[6] ವಸಾಹತುಪೂರ್ವದ ತುಳುನಾಡಿನಲ್ಲಿ ಕೆಳಹಂತದಲ್ಲಿ ಅಧಿಕಾರ ವ್ಯವಸ್ಥಿತವಾಗಿದ್ದರೇ ಮೇಲ್‌ಹಂತದಲ್ಲಿ ನಿಶ್ಚಿತವಾಗಿರಲಿಲ್ಲ. ಅಧಿಕಾರ ಯುದ್ಧದಲ್ಲಿನ ಗೆಲುವುಗಳ ಮೇಲೆ ಆಧಾರಿತವಾಗಿತ್ತು. ಆದರೆ ಗ್ರಾಮದಂತಹ ಕೆಳಹಂತಗಳ ಅಧಿಕಾರ ಯಾವುದೇ ಏರುಪೇರಿಲ್ಲದೇ ನಡೆಯುತ್ತಿತ್ತು. ಗ್ರಾಮದ ಕಪ್ಪಕಾಣಿಕೆಗಳು ಗೆದ್ದವರಿಗೆ ಸಂದಾಯವಾಗುತ್ತಿತ್ತು.

[7] ರಣಜಿತ್‌ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998,

[8] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ ಪುಟ 195. ಎಸ್ ಚಂದ್ರಶೇಖರ, ದಕ್ಷಿಣಭಾರತ–ವಸಾಹತುಶಾಹಿ ರಾಷ್ಟ್ರಿಯತೆ ಮತ್ತು ಸಂಘರ್ಷ ಹಂಪಿ. ವಿ.ವಿ 2000. ಬಿಪನ್‌ಚಂದ್ರ, ದ. ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಅನುವಾದಿತ ಗ್ರಂಥ ಎಚ್.ಎಸ್ ಗೋಪಾಲರಾವ್ ಪುಟ 72.

[9] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ. ಬಿ ಅರ್ತಿಕಜೆ, ಪುಟ197.

[10] ನಿತ್ಯಾನಂದ, ಅಪ್ರಕಟಿತ ಸಂಶೋಧನಾ ಗ್ರಂಥ ಮಂಗಳೂರು ವಿ. ವಿ ಪುಟ 33.

[11] ಎಡ್ವರ್ಡ ಡಬ್ಲ್ಯೂ ಸೈದ್, ಒರಿಯಂಟಲಿಸಂ, ವಿಂಟೇಜ್ ಬುಕ್ಸ್ ನ್ಯೂಯಾರ್ಕ್ 1979. ಪುಟ 20.

[12] ಶ್ಯಾಮಭಟ್ ಎನ್, ಸೌತ್‌ಕೆನರಾ, 1799-1832ರ ವರೆಗಿನ ತುಳುನಾಡಿನ ರಾಜಕೀಯ ಬೆಳವಣಿಗೆಗಳನ್ನು ಸಮರ್ಥಿಸಿದೆ.

[13] ಶ್ಯಾಮಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್ ಕೆನರಾ 1799.

[14] ಡಾ. ಕೆ ಮೋಹನಕೃಷ್ಣ ರೈ, ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ, ಕ.ವಿ.ವಿ ಹಂಪಿ ಪ್ರಸರಾಂಗ 2010 ಪುಟ 25

[15] ಡಾ. ಕೆ ಮೋಹನಕೃಷ್ಣ ರೈ, ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ, ಕ.ವಿ.ವಿ ಹಂಪಿ ಪ್ರಸರಾಂಗ 2010 ಪುಟ 54.

[16] ಡಾ. ಕೆ ಮೋಹನಕೃಷ್ಣ ರೈ, ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ, ಕ. ವಿ. ವಿ ಹಂಪಿ ಪ್ರಸರಾಂಗ 2010 ಪುಟ 25, 54.

[17] ಸ್ಟರಕ್ ಜೆ,. ಸೌತ್‌ಕೆನರಾ ಗಜೇಟಿಯರ್, ಸಂಪುಟ–1 ಮದ್ರಾಸ್ ಪ್ರೆಸಿಡೆನ್ಸಿ, ಮದ್ರಾಸ್, 1864, ಪುಟಗಳು 79–80; ಶ್ಯಾಮಭಟ್ ಎನ್, ಸೌತ್‌ಕೆನರಾ 1799–1860 ಮಿತ್ತಲ್ ಪಬ್ಲೀಕೇಷನ್ಸ್ ನ್ಯೂದಿಲ್ಲಿ 1998, ಪುಟ 53; 1799ರ ಜೂನ್ 22ರಂದು ತುಳುನಾಡು (ಕೆನರಾ) ವಿಧ್ಯುಕ್ತವಾಗಿ ಬ್ರಿಟಿಷರ ಆಳ್ವಿಕೆಗೆ ಸೇರ್ಪಡೆಗೊಂಡಿತು.

[18] ಶ್ಯಾಮಭಟ್ ಎನ್, ಸೌತ್ ಕೆನರಾ 1799–1860 ಮಿತ್ತಲ್ ಪಬ್ಲೀಕೇಷನ್ಸ್ ನ್ಯೂದಿಲ್ಲಿ 1998, ಪುಟ 59.

[19] ಬಿಪನ್‌ಚಂದ್ರ, ದ. ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಅನುವಾದಿತ ಗ್ರಂಥ ಎಚ್.ಎಸ್ ಗೋಪಾಲರಾವ್ ಪುಟ 126.

[20] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಬಂಟರು, ಪುಟ 197

[21] ಲೆಟರ್ಸ್ ರಿಲೇಂಟಿಂಗ್ ಟು ದ ಅರ್ಲಿ ಅಡಮಿನಿಸ್ಟ್ರೇಷನ್ ಒಫ್ ಕೆನರಾ–ಕಲೆಕ್ಟ್ರೋರೇಟ್ ಪ್ರೆಸ್ ಸೌತ್ ಕೆನರಾ 1879 ಪುಟ 45.

[22] ಲೆಟರ್ಸ್ ರಿಲೇಂಟಿಂಗ್ ಟು ದ ಅರ್ಲಿ ಅಡಮಿನಿಸ್ಟ್ರೇಷನ್ ಒಫ್ ಕೆನರಾ–ಕಲೆಕ್ಟ್ರೋರೇಟ್ ಪ್ರೆಸ್ ಸೌತ್ ಕೆನರಾ ಪುಟ 46, 47.

[23] ಬಿಪನ್ ಚಂದ್ರ, ದ. ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಅನುವಾದಿತ ಗ್ರಂಥ ಎಚ್.ಎಸ್ ಗೋಪಾಲರಾವ್ ಪುಟ 72.

[24] ಪಮೇಲಾ ಜಿ. ಪ್ರೈಜ್, ಕಿಂಗ್‌ಷಿಪ್ ಅಂಡ್ ಪೊಲಿಟಿಕಲ್ ಪ್ರಾಕ್ಟಿಸ್ ಇನ್ ಕೊಲೊನಿಯಲ್ ಇಂಡಿಯಾ, ಪುಟ 135.

[25] ಪಮೇಲಾ ಜಿ. ಪ್ರೈಜ್, ಕಿಂಗ್‌ಷಿಪ್ ಅಂಡ್ ಪೊಲಿಟಿಕಲ್ ಪ್ರಾಕ್ಟಿಸ್ ಇನ್ ಕೊಲೊನಿಯಲ್ ಇಂಡಿಯಾ, ಪುಟ 113. ತುಳುನಾಡಿನ ಸಂದರ್ಭದಲ್ಲಿ ಉದಾಹರಿಸುವುದಾದರೆ ಮಾಗಣೆ, ಸೀಮೆ ದೈವ-ದೇವಸ್ಥಾನಗಳ ಆಡಳಿತ ವ್ಯವಸ್ಥಾಪಕರಾಗಿ ಅಧಿಕಾರವನ್ನು ಇಲ್ಲಿನ ಪ್ರಮುಖ ಗುತ್ತುಮನೆತನಗಳು ಪಡೆದಿದ್ದಲ್ಲದೇ ತಮ್ಮ ಸಾಂಕೇತಿಕ ಅಧಿಕಾರವನ್ನು ಸಂಪ್ರದಾಯಗಳ ಆಚರಣೆಯ ಮೂಲಕ ಉಳಿಸಿಕೊಂಡಿರುವುದನ್ನು ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು ಪುಷ್ಟೀಕರಿಸುತ್ತವೆ. ಈ ಸಾಮಾಜಿಕ ಅಧಿಕಾರಕ್ಕೆ ಕುತ್ತು ಬಂದಾಗ ಅದನ್ನು ವಸಾಹತುಶಾಹಿ ನ್ಯಾಯಾಧಿಕರಣದ ಮುಖೇನ ಪಡೆದಿರುವುದನ್ನು ಧಾರ್ಮಿಕ ದತ್ತಿ ಇಲಾಖೆಯಲ್ಲಿನ ಕಡತಗಳು ದೃಢಪಡಿಸಿವೆ. ಉದಾಹರಣೆಗೆ ಮಂಗಳೂರು ತಾಲೂಕು ಕವತ್ತಾರಿನ ಅಜಿಲ, ಮುಲ್ಕಿಯ ಸಾವಂತರ ನಿವೇದನಾ ಪತ್ರಗಳು. ವಸಾಹತುಶಾಹಿಯ ಆರಂಭಿಕ ಕಾಲಘಟ್ಟದಲ್ಲಿ ಸಹಯೋಗ ನೀಡಿದ ಧರ್ಮಸ್ಥಳದ ಕುಮಾರ ಹೆಗ್ಗಡೆಯ ಅಧಿಕಾರಕ್ಕೆ ತೊಂದರೆಯಾಗದಿರುವುದು ಮಾತ್ರವಲ್ಲ ಸುತ್ತಲಿನ ಕಂದಾಯ ವಸೂಲಿ ಮಾಡುವ ಅಧಿಕಾರವನ್ನು ಮುಂದುವರೆಸಲು ಅವಕಾಶ ನೀಡಿರುವುದು. ಪ್ರಸ್ತುತ ಅಧಿಕಾರದ ಛಾಯೆಯನ್ನು ಪಟ್ಟಾಭಿಷೇಕದ ಕಟ್ಟಳೆ ಮಾಡುವುದರ ಮೂಲಕ ಉಳಿಸಿಕೊಂಡಿದ್ದಾರೆ. ಸಿಮಂತೂರು, ವೇಣೂರು ಮುಂತಾದೆಡೆ ಇಂದಿಗೂ ನಡೆಯುವ ಕಟ್ಟಳೆಗಳು, ಗಡಿ ಹೊಂದುವ ಪ್ರಕ್ರಿಯೆ ಮುಂತಾದವುಗಳು ಸಾಮಾಜಿಕ ಅಧಿಕಾರದ ಹಿನ್ನೆಲೆಯಿಂದ ನಡೆಯುವಂತಹುಗಳು.

[26] ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು-ಜಿಲ್ಲಾಧಿಕಾರಿ ಕಛೇರಿ ಮಂಗಳೂರು.

[27] ಕೆ.ಮೋಹನಕೃಷ್ಣ ರೈ, ಕೆನರಾದ ವಿಭಜನೆ, ಪ್ರಸಾರಾಂಗ ಕ.ವಿ.ವಿ ಹಂಪಿ, 2010 ಪುಟಗಳು 53-58.

[28] ಡೆನಿಸ್ ಫೆರ್ನಾಂಡಿಸ್, ಅಪ್ರಕಟಿತ ಸಂಶೋಧನಾ ಪ್ರಬಂಧ 2008, ಉದ್ಧೃತ, ಪೀಟರ್ ವಾನ್ ಡೀರ್ ವೀರ್, ಇಂಪೀರಿಯಲ್ ಎನ್ಕೌಂಟರ್ಸ್ ಅಂಡ್ ಮೋಡರ್ನಿಟಿ ಇನ್ ಇಂಡಿಯಾ ಅಂಡ್ ಬ್ರಿಟನ್, ದಿಲ್ಲಿ-2001 ಪುಟಗಳು 23-27.

[29] ಆಡಳಿತಾತ್ಮಕವಾಗಿ ಸೀಮೆ, ಮಾಗಣೆಗಳು, ನ್ಯಾಯಿಕವಾಗಿ ದೇವಸ್ಥಾನಗಳು, ದೈವಸ್ಥಾನಗಳು, ಗ್ರಾಮದ ಅಜಲು ವ್ಯವಸ್ಥೆಗಳು ತಮ್ಮ ವ್ಯಾಪ್ತಿಯ ಪಾರಂಪರಿಕ ಅಧಿಕಾರವನ್ನು ಕಳೆದುಕೊಂಡವು.

[30] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟಗಳು 25-30.

[31] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟ 30.

[32] ಆರ್.ಎಸ್ ಶರ್ಮ, ಪ್ರಾಚೀನ ಭಾರತದಲ್ಲಿ ಶೂದ್ರರು, ಅನುವಾದ ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು 2006. ಪುಟ 7, 17.

[33] ಅನಂತಕುಮಾರ ಗಿರಿ, ರೂಲ್ ಅಫ್ ಲಾ ಅಂಡ್ ಇಂಡಿಯನ್ ಸೊಸಾಯಿಟಿ, ಪುಟ 5. ವಸಾಹತುಶಾಹಿಯ ಆರಂಭಿಕ ದಿನಗಳಲ್ಲಿ ಭಾರತೀಯ ಸಮಾಜದ ಮೇಲೆ ರೂಲ್ ಆಫ್ ಲಾ ವನ್ನು ಪರಿಚಯಿಸುವಾಗ ಎರಡು ವಿಚಾರಗಳ ಪರಿಗಣನೆಗೆ ಒತ್ತು ನೀಡಿತು. ದೇಶಿಯ ಭೂಮಿಯ ಒಡೆತನಕ್ಕೆ ಸಂಬಂಧಿಸಿ ರೂಲ್ ಆಫ್ ಪ್ರಾಪರ್ಟಿಯನ್ನು ಸೃಷ್ಟಿಸಿ ಅದರ ಬಗ್ಗೆ ತೀರ್ಮಾನಿಸುವ ಹಕ್ಕನ್ನು ಕಾದಿರಿಸಿತು.

[34] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟ 55.

[35] ವಿಲೇಜ್ ಆಫೀಸರ್ಸ್ ಅಂಡ್ ರಯಟ್ಸ್ ಮ್ಯಾನುವೆಲ್, ತುಳುನಾಡಿನ ಗುತ್ತು ಮತ್ತು ಅದರ ಮೇಲ್ಪಟ್ಟ ರಾಜಕೀಯ ಸ್ತರಗಳಲ್ಲಿ ಕೆಲವೇ ಕೆಲವು ಮೇಲ್ವರ್ಗದವರು ಅಧಿಕಾರವನ್ನು ಹಂಚಿಕೊಂಡಿದ್ದರು.

[36] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ. ಯು. ಪ್ರೆಸ್ ದಿಲ್ಲಿ; 1998, ಪುಟ.34

[37] ವಿಲೇಜ್ ಆಫೀಸರ್ಸ್ ಅಂಡ್ ರಯಟ್ಸ್ ಮ್ಯಾನುವೆಲ್, ಮದ್ರಾಸ್ ಆಕ್ಟ್ 1 ಆಫ್ 1889, ಮದ್ರಾಸ್ ಆಕ್ಟ್ 11 ಆಫ್ 1894, 111 ಆಫ್ 1895, 11 ಆಫ್ 1920. ಹಳ್ಳಿ ಅಥವಾ ಗ್ರಾಮದ ಆಡಳಿತವನ್ನು ನೋಡಿಕೊಳ್ಳುವಲ್ಲಿ ಕೆಲವೊಂದು ನಿರ್ಬಂಧಗಳಿದ್ದವು. ಮಹಿಳೆಗೆ ಅಧಿಕಾರದಲ್ಲಿ ಅವಕಾಶವಿರಲಿಲ್ಲ, ಆಸ್ತಿ ಹೊಂದಿರುವವರಿಗೆ ಆದ್ಯತೆ ನೀಡಲಾಗುತ್ತಿತ್ತು. ಗ್ರಾಮದ ಮುಖ್ಯಸ್ಥ ಮತ್ತು ಕರಣಮ್ ಇವರುಗಳಿಗೆ ಪರಸ್ಪರ ಸಂಬಂಧಗಳಿರಬಾರದು ಎಂಬ ಕಾನೂನು ರೂಪಿತಗೊಂಡು ಅಧಿಕಾರದ ಕಕ್ಷೆಗಳಲ್ಲಿ ಬದಲಾವಣೆಗಳಾದವು.

[38] ಡಿ. ಡಿ. ಕೋಸಾಂಬಿ, ಕಲ್ಚರ್ ಅಂಡ್ ಸಿವಿಲೈಸೇಷನ್, ಪುಟ 208-209.

[39] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998.

[40] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998.

[41] ಸಾಂಪ್ರದಾಯಿಕ ಅಧಿಕಾರಿ ನೆಲೆಗಳು ಪ್ರಾಮುಖ್ಯತೆ ಕಳೆದುಕೊಂಡಿದಲ್ಲದೇ ಸಾಂಪ್ರದಾಯಿಕ ಎಲ್ಲೆಕಟ್ಟುಗಳು ಅಸ್ತಿತ್ವವನ್ನು ಕಳೆದುಕೊಂಡವು.

[42] ಅನಿಲ್‌ಸೀಲ್, ಇಂಪೀರಿಯಲಿಸಂ ಅಂಡ್ ನೇಷನಾಲಿಸಂ, ಪುಟಗಳು, 12–15.

[43] ಡೊಮಿನಿಕ್. ಅಪ್ರಕಟಿತ ಸಂಶೋಧನ ಪ್ರಬಂಧ, ಮಂಗಳೂರು ವಿ.ವಿ, ಪುಟ 87.

[44] ಅರುಣಿಮಾ. ಜಿ, ದೇರ್ ಕಮ್ಸ್ ಪಾಪಾ, ಒರಿಯಂಟ್ ಲಾಂಗ್ಮೆನ್ ಹೊಸದೆಹಲಿ; 2003.

[45] ಶ್ಯಾಮಭಟ್ ಎನ್. ಕೊಲೊನಿಯಲ್ ಅಡ್ಮಿನಿಸ್ಟ್ರೇಷನ್ ಅಂಡ್ ರೀಜನಲ್ ರೆಸ್ಪಾನ್ಸ್, ಪುಟ 211.

[46] ಡೊಮಿನಿಕ್, ಅಪ್ರಕಟಿತ ಸಂಶೋಧನ ಗ್ರಂಥ ಮಂಗಳೂರು ವಿ.ವಿ ಪುಟಗಳು 69, 70, 71.

[47] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998.

[48] ಬಂಕಿಮಚಂದ್ರ ಚಟರ್ಜಿ, ಧರ್ಮತತ್ವ, ಹೊಸದೆಹಲಿ: ಒ.ಯು.ಪಿ, 2003 ಪಿ.ಪಿ. 13–26.

[49] ಡೊಮಿನಿಕ್, ಅಪ್ರಕಟಿತ ಸಂಶೋಧನಾ ಪ್ರಬಂಧ ಮಂಗಳೂರು ವಿ.ವಿ, ಪುಟ 89. 1897–1900ರ ಸಂದರ್ಭದ ಬಾಸೆಲ್ ಮಿಷನ್ ಹೊರಡಿಸಿದ ಪಂಚಾಗದಲ್ಲಿ ದಾಖಲಿಸಿದಂತೆ ಸರಕಾರಿ ಕೆಲಸದಲ್ಲಿ ಬ್ರಾಹ್ಮಣರು ಸಿಂಹಪಾಲು ಪಡೆದುಕೊಂಡರೆ, ಕ್ರೈಸ್ತರು, ಒಕ್ಕಲುಗಳು, ಮುಸ್ಲಿಂ ಸಮುದಾಯದವರು ಅಧಿಕಾರದಲ್ಲಿ ನೌಕರಶಾಹಿಗಳಾಗಿ ಭಾಗಿಗಳಾಗಿರುವುದನ್ನು ಪರಿಶೀಲಿಸಬಹುದಾಗಿದೆ.

[50] ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು–ಮಂಗಳೂರು ಜಿಲ್ಲಾಧಿಕಾರಿಗಳ ಕಛೇರಿ.

[51] ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟಗಳು 20–21.

[52] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 204.

[53] ಬಾಸೆಲ್ ಮಿಷನು ವರದಿಗಳಲ್ಲಿ ಮೇಲ್ವರ್ಗದ ಜನರು ಆಧುನಿಕ ವಿದ್ಯಾಭ್ಯಾಸ ಪದ್ಧತಿಯನ್ನು ಒಪ್ಪಿಕೊಂಡ ಬಗ್ಗೆ ಅಂಕಿ ಅಂಶಗಳನ್ನು ನೀಡುತ್ತಾರೆ.

[54] ಚಿನ್ನಪ್ಪ ಗೌಡ (ಸಂ) ರಿಟ್ರಿವ್ಡ್ ಅಕರ್, ಕಾಂಟ್ರಡಿಕ್ಸನ್ ಇನ್ ಕೊಲೋನಿಯಲ್ ಡಿಸ್ಕೋರ್ಸ್ ಪುಟ 100–105.

[55] ವಸಾಹತನ್ನು ವಿಭಜಿಸಿ ಆಳುವ ಸಿದ್ಧಾಂತ ಮೇಳೈಸಿತು.

[56] ಬಿಪನ್‌ಚಂದ್ರ, ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಪುಟಗಳು 158, 160–162

[57] ಸಾಮಾನ್ಯಶಕೆ 1870ರಲ್ಲಿ ಮೇಯೋ, ಸಾಮಾನ್ಯಶಕೆ 1877ರಲ್ಲಿ ಲಾರ್ಡ್‌ಲಿಟ್ಟನ್ ಮುಂತಾದವರು ಈ ದೆಸೆಯಲ್ಲಿ ಕಾರ್ಯಪ್ರವೃತ್ತರಾಗಿದ್ದರು.

[58] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 201.

[59] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 201.

[60] ಬಿಪನ್‌ಚಂದ್ರ, ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಪುಟ 162.

[61] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 202.

[62] ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ, ಪುಟ 35.

[63] ಜೆಸೂಯಿಟ್ ಪಾದ್ರಿಗಳು, ಬಾಸೆಲ್ ಮಿಷನರಿಗಳು ಈ ಪ್ರದೇಶದ ಸಮಗ್ರ ಅಧ್ಯಯನ ಮಾಡಿದವರಲ್ಲಿ ಪ್ರಮುಖರು

[64] ದಿನೇಶ್ ನಾಯ್ಕ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂಗಳೂರು ವಿ. ವಿ, ಪುಟಗಳು 80–81.

[65] ತುಳುನಾಡಿನಲ್ಲಿ ಬಾಸೆಲ್ ಮಿಶನಿನ ಕಾರ್ಯಚಟುವಟಿಕೆಗಳು, ಜೆಸೂಯಿಟರ ಅಧ್ಯಯನಗಳು ಈ ನಿಟ್ಟಿನಲ್ಲಿ ಮುಖ್ಯವಾದುದು.

[66] ಕಾನೂನು, ಶಾಲಾ–ಕಾಲೇಜು, ಆಡಳಿತಾತ್ಮಕ ವ್ಯವಸ್ಥೆಗಳ ಮೂಲಕ ದೇಶದೊಳಗಿರುವ ಭಿನ್ನ ಭಿನ್ನ ಜೀವನ ಕ್ರಮಗಳನ್ನು ಜ್ಞಾನಗಳನ್ನು ಏಕಿಕೃತಗೊಳಿಸಿದೆ.

[67] ಬಾಸೆಲ್‌ಮಿಷನ್ ಪ್ರೆಸ್ ಮತ್ತು ಅದರ ಮೂಲಕ ಪ್ರಕಟಗೊಂಡ ಗ್ರಂಥಗಳು, ಕೊಡಿಯಾಲ್‌ಬೈಲು ಪ್ರೆಸ್, ಮಂಗಳೂರು ಸಮಾಚಾರ, ಮಂಗಳೂರು ಮ್ಯಾಗಜೀನ್ ಮುಂತಾದವುಗಳು.

## ಭೂವಾರಸುದಾರಿಕೆಯ ಸ್ಥಿತ್ಯಂತರ–ಸಾಂಪ್ರದಾಯಿಕ ಅರ್ಥವ್ಯವಸ್ಥೆ

ವಸಾಹತುಪೂರ್ವದ ತುಳುನಾಡಿನ ಗ್ರಾಮಸಮುದಾಯಗಳು ಭೂಮಿಯನ್ನು ಸಾರ್ವಜನಿಕ ಒಡೆತನದಲ್ಲಿ ಇರಿಸಿಕೊಂಡಿತ್ತಲ್ಲದೇ ದುಡಿಮೆಯ ವಿಭಜನೆಯು ಸಮಾಜದ ರಚನೆಗೆ ಅಡಿಪಾಯವಾಗಿತ್ತು. ಗ್ರಾಮಗಳಲ್ಲಿ ದುಡಿಮೆಯ ವಿಭಜನೆಯನ್ನು ನಿಯಂತ್ರಿಸುವ ಕಾನೂನು ಪ್ರಕೃತಿಯ ನಿಯತಿಯೋಪಾದಿಯಲ್ಲಿದ್ದರಿಂದ ಭೂಮಿಯ ಮೇಲಿನ ಅಂತಿಮ ಒಡೆತನ ಸಾರ್ವಜನಿಕರದ್ದಾಗಿರುತ್ತಿತ್ತು. ಅದು ವರ್ಗಪೂರ್ವ ಸಮುದಾಯದ ಲಕ್ಷಣವಾಗಿ ಗ್ರಾಮ ಸಮುದಾಯದ ವ್ಯವಸ್ಥೆಯಲ್ಲಿ ಮುಂದುವರೆದಿತ್ತು. ವರ್ಗಪೂರ್ವ ಸಮುದಾಯದ ಗ್ರಾಮಗಳ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರ ಸ್ವಾಯತ್ತ ಗಣಗಳ ರೀತಿಯಲ್ಲಿ ಅನೂಚಾನವಾಗಿ ನಡೆದುಕೊಂಡು ಬರುತ್ತಿತ್ತು.[1] ಮುಂದುವರೆದು ಜನಸಂಖ್ಯೆ ಹೆಚ್ಚಾದಂತೆ ಬೇರೊಂದು ಕಡೆ ಸಾಮುದಾಯಿಕ ಒಡೆತನವು ಹುಟ್ಟಿಕೊಳ್ಳಲು ಕಾರಣವಾಗುತ್ತಿತ್ತು. ಶಾಸನಗಳಲ್ಲಿ ವ್ಯಕ್ತಿಗತ ಭೂಮಿಯ ಒಡೆತನಗಳ ಉಲ್ಲೇಖವಿದ್ದರೂ ಸಮುದಾಯದ ಬಗ್ಗೆ ಹಿತಚಿಂತನೆಗಳಿದ್ದವು. “ಸಾಮುದಾಯಿಕ ಖಾಸಗಿ ಭೂಮಿಯ ಒಡೆತನದಿಂದಾಗಿ ರಾಜನು ತೆರಿಗೆ ಸಂಗ್ರಹಿಸುವ ಅಧಿಕಾರವನ್ನು ಹೊಂದಿದ್ದನೇ ಹೊರತು ಭೂಮಿಯ ಮೇಲೆ ನೇರ ಅಧಿಕಾರವಿರಲಿಲ್ಲ.”[2] ಇದೇ ತೆರನಾಗಿ ಭೂಮಿಯು ಅಜಲಿಗೊಳಪಡುವ ಸಮುದಾಯಗಳ ಒಡೆತನದಲ್ಲಿದ್ದುದರಿಂದ ಗ್ರಾಮಗಳ ಅತೀ ಸಾಮಾನ್ಯವಾದ ರಚನೆಯಲ್ಲಿಯೂ ಸಹ ಉತ್ಪನ್ನವು ಸಮುದಾಯದ ಸದಸ್ಯರಲ್ಲಿ ಹಂಚಿಕೆಯಾಗುತಿತ್ತು.[3] ಕಾರ್ಯಕ್ಷೇತದ್ರಲ್ಲಿ ಪಡೆದ ಮಾಹಿತಿಯಂತೆ ಗ್ರಾಮದ ಅಜಲು ಸೇವೆಗಳಿಗೆ ಒಳಪಡುವ ಸಮುದಾಯಗಳು ಒಟ್ಟು ಉತ್ಪನ್ನದಲ್ಲಿ ತಮ್ಮ ಜೀವನ ನಿರ್ವಹಣೆಗೆ ಪಡೆಯುವ ಹಿಸ್ಸೆಗಳ ಪರಿಪಾಠ, ಇಲ್ಲವೆ ಭೂಮಿಯನ್ನು ಉಂಬಳಿ ನೀಡುವ ಪದ್ಧತಿ ತುಳುನಾಡಿನಲ್ಲಿ ಚಾಲ್ತಿಯಲ್ಲಿತ್ತು. ಉತ್ತರಭಾರತದ ಸಂದರ್ಭದಲ್ಲಿ ಈ ವ್ಯವಸ್ಥೆಯನ್ನು ಬಾರಬಲೂತಿ ಎಂದು ಕಂದಾಯ ವ್ಯವಸ್ಥೆಯಲ್ಲಿ ಪರಿಗಣಿಸಿದ್ದಾರೆ.

ತುಳುನಾಡಿನಲ್ಲಿ ಭೂಮಿಯ ಒಡೆತನ ಸಮುದಾಯದ ಇಲ್ಲವೇ ದೈವದ ಒಡೆತನಕ್ಕೆ ಸಂಬಂಧಿಸಿದುದು ಎಂಬುವುದು ಉಂಬಳಿ ಪದ್ಧತಿ ಮತ್ತು ಪಡಿ ಅಕ್ಕಿ ಸಂಗ್ರಹ ಮಾಡುವ ನಿದರ್ಶನದ ಮೂಲಕ ಸ್ಪಷ್ಟಪಡಿಸಬಹುದು. ದೈವಿಕ ನೆಲೆಯನ್ನು ಚೌಕಟ್ಟಾಗಿ, ವ್ಯವಸ್ಥೆಯನ್ನು ಅನೂಚಾನವಾಗಿ ಪಾಲಿಸಿಕೊಂಡು ಬಂದಿರುವ ಉದಾಹರಣೆ ಕಣಂತೂರಿನ ಸಂಪ್ರದಾಯದಲ್ಲಿ ಮನಗಾಣಬಹುದು. ಕೃಷಿ ಭೂಮಿಯ ಒಟ್ಟು ಉತ್ಪಾದನೆಯನ್ನು ಅಜಲಿಗನುಗುಣವಾಗಿ ಪಾಲು ಮಾಡುವ ಪ್ರಕ್ರಿಯೆ, ಮಡ್ಯಾರ್‌ನ ಕೊಂಡಾಣ ಶ್ರೀ ಕ್ಷೇತ್ರದ ವ್ಯಾಪ್ತಿಗೆ ಒಳಪಡುವ ಸೋಮೇಶ್ವರ, ಕೋಟೆಕಾರ್, ಕಿನ್ಯಾ (ಮಂಗಳೂರು ತಾಲೂಕು) ಮುಂತಾದ ಗ್ರಾಮದ ಜನ ತಮ್ಮ ಕೃಷಿ ಭೂಮಿಯಲ್ಲಿ ಬೆಳೆದ ಧಾನ್ಯ, ಅಕ್ಕಿ, ಇಲ್ಲವೇ ಫಲವಸ್ತುಗಳನ್ನು ನಿಗದಿತ ಪ್ರಮಾಣದಲ್ಲಿ

ನೀಡುವ ಪರಿಪಾಠ ಮುಂತಾದವುಗಳನ್ನು ಕಾರ್ಯಕ್ಷೇತ್ರದಲ್ಲಿ ದಾಖಲಿಸಲಾಗಿದೆ. ಅಲೌಕಿಕ ಶಕ್ತಿಗಳ ಹೆಸರಿನಲ್ಲಿ ಲೌಕಿಕ ಅಧಿಕಾರವನ್ನು ಪಡೆಯುವ ತಂತ್ರಗಾರಿಕೆ, ಸಮಾಜದ ಎಲ್ಲಾ ಜಾತಿಯ ಜನರು ಉತ್ಪಾದಿಸಿದನ್ನು ನೀಡಬೇಕೆಂಬ ಅಲಿಖಿತ ನಿಯಮ, ಜೊತೆಗೆ ಜಾತಿಗೆ ತಕ್ಕಂತೆ ಸಾಮಾಜಿಕ ಅಂತರಗಳನ್ನು ಜೀವಂತವಾಗಿಡುವ ಪ್ರಯತ್ನ ಮುಂತಾದ ವ್ಯವಸ್ಥೆಗಳನ್ನು ಈ ಮೂಲಕ ಚಾಲ್ತಿಯಲ್ಲಿಡಲಾಗಿತ್ತು. ಮುಂದುವರೆದು ವಸಾಹತುಪೂರ್ವದಲ್ಲಿ ನೂತನವಾಗಿ ರೂಪುಗೊಂಡ ಭೂಒಡೆತನದ ಅಧಿಕಾರವುಳ್ಳ ಶಕ್ತಿಕೇಂದ್ರಗಳು ದುಡಿಯುವ ಜನವರ್ಗಗಳನ್ನು ತನ್ನ ಅಂಕುಶದಲ್ಲಿ ಇಟ್ಟುಕೊಳ್ಳುವುದರ ಜೊತೆಗೆ ಸಮಾಜದ ವಿಶೇಷ ತಾಂತ್ರಿಕ ಶ್ರಮಿಕರ ಮೇಲೂ ಹತೋಟಿಯನ್ನು ಬಿಗಿಗೊಳಿಸಿ, ನೆಲೆ ಮತ್ತು ಸ್ಥಾನಮಾನಗಳನ್ನು ರಾಜಕೀಯವಾಗಿ ಭದ್ರಗೊಳಿಸಿರುವ ಪ್ರಯತ್ನ ಮುಂತಾದವುಗಳು ಪ್ರಾಯಶಃ ತುಳುನಾಡು ವಿಜಯನಗರದ ಆಳ್ವಿಕೆಗೆ ಒಳಪಡುವುದರೊಂದಿಗೆ ಪ್ರಾರಂಭವಾಗಿರುವ ಸಾಧ್ಯತೆಗಳನ್ನು ಅಲ್ಲಗಳೆಯುವ ಹಾಗಿಲ್ಲ.

ವಿಜಯನಗರದ ಕಾಲದಲ್ಲಿ ತುಳುನಾಡು ವ್ಯಾಪಾರಿ ದೃಷ್ಟಿಯಿಂದ ಪ್ರಾಮುಖ್ಯತೆಯನ್ನು ಪಡೆದ ಆಡಳಿತ ಘಟಕವಾಗಿತ್ತು. ಜೈನ ಆಳರಸರು ಪ್ರಭಾವಿಗಳಾಗಿ ರಾಜಕೀಯ ಮುಂಚೂಣಿಯ ನಾಯಕತ್ವವನ್ನು ಪಡೆದಿದ್ದರು. ತುಳುನಾಡು ಉತ್ಪಾಧಕ ಘಟಕವಾಗಿ ಆರ್ಥಿಕ ದೃಷ್ಟಿಯಿಂದ ಸಬಲಗೊಂಡ ಪ್ರಾಂತ್ಯವಾಗಿದ್ದರಿಂದ ರಫ್ತು ಪ್ರಮಾಣದ ಹೆಚ್ಚಳವು ಇಲ್ಲಿನ ಸಾಮಂತರಿಗೆ ಆಪಾರ ಸಂಪತ್ತನ್ನು ತಂದುಕೊಟ್ಟವು. ಪರಿಣಾಮವಾಗಿ ಭೂಮಿಯ ಒಡೆತನದ ಬದಲು ತೆರಿಗೆ ಸಂಗ್ರಹಿಸಿ, ಭೂಮಿಯ ಮೇಲೆ ಆಧಿಕಾರ ಚಲಾಯಿಸುವ ಅವಕಾಶದಿಂದಾಗಿ ಗ್ರಾಮ ಇಲ್ಲವೇ ಕೃಷಿಭೂಮಿ ಸಾಮುದಾಯಿಕ ಒಡೆತನಕ್ಕೆ ಸಂಬಂಧಿಸಿದುದು ಎಂಬುವುದನ್ನು ಖಾತ್ರಿಗೊಳಿಸಬಹುದು. ಚೌಟ ಬಂಗರ ರಾಜ್ಯ ವಿಸ್ತರಣೆಗೆ ಸಂಬಂಧಿಸಿದ ಕಲಹಗಳು, ಕ್ರಿ..ಶಕ 1410ರ ಶಾಸನ ಚೌಟರ ಮತ್ತು ಬಂಗರ ಅರಸರ ಮದ್ಯೆ ನಡೆದ ಯುದ್ಧಕಾಲದ ಒಪ್ಪಂದದ ತಾಮ್ರ ಶಾಸನದ ಪ್ರಕಾರ ಬಂಗರು ಸೋತು ತನ್ನ ಅಧೀನ ಮಾಗಣೆಗಳಾದ ಪೇಜಾವರ, ಮಣೇಲ್, ಮತ್ತು ಮುಂಡ್ಕೂರು ನಗರಗಳನ್ನು ಚೌಟರಿಗೆ ಬಿಟ್ಟುಕೊಡುತ್ತಾರೆ. ಮುಂಡ್ಕೂರಿನ ಇನ್ನದ ಗುತ್ತು ಮತ್ತು ಪೇಜಾವರದ ತೋಕೂರು ಮಾಗಣೆ ಗುತ್ತುಗಳು ಪುತ್ತಿಗೆಯ ಚೌಟರ ಅಧಿಕಾರದಲ್ಲಿ ಪಾಲು ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ. ಚೌಟರು ನೇರ ಅಧಿಕಾರ ಮಾಡಿಲ್ಲ. ಸೋತ ಗ್ರಾಮಗಳು ಬಂಗರ ಬದಲಿಗೆ ಚೌಟರಿಗೆ ಕಪ್ಪ ಕೊಡುವ ಇಲ್ಲವೆ ಗ್ರಾಮದಿಂದ ಸೈನಿಕರನ್ನು ಸರಬರಾಜು ಮಾಡುವ ಕೆಲಸಗಳನ್ನು ಪಡೆದುಕೊಂಡಿರುವುದು. ಭೂಮಿಯ ಸಾಮುದಾಯಿಕ ಒಡೆತನದ ಕಾರಣ ವಿಜಯನಗರದ ಪತನಾನಂತರ ಕೆಳದಿಯ ಅರಸರಿಂದ ಮಾನ್ಯತೆಯನ್ನು ಗಳಿಸಿಕೊಳ್ಳುವಲ್ಲಿ ಇಲ್ಲಿನ ಸಾಮಂತರು ಸಂಘರ್ಷಗಳನ್ನು ಮಾಡಿ ಅಧಿಕಾರವಿದ್ದರೂ ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಸಾಧ್ಯವಿರಲಿಲ್ಲ. ಕೆಳದಿಯ ಅರಸರ

ಕಾಲದಲ್ಲಿ ವ್ಯಾಪಾರ, ಕಂದಾಯ ದೃಷ್ಟಿಯಿಂದ ಈ ಪ್ರದೇಶ ಪ್ರಾಮುಖ್ಯತೆಯನ್ನು ಪಡೆದರೂ ಜೈನ ಆಳರಸರು ರಾಜಕೀಯವಾಗಿ ಮತ್ತು ಭೂಮಿಯ ಒಡೆತನ ಪಡೆಯುವಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡರು.

ತುಳುನಾಡಿನ ಆರಾಧ್ಯ ದೈವಗಳ ಉಗಮ ಮತ್ತು ಪ್ರಸರಣಗಳ ಬಗ್ಗೆ ಹೇಳುವ ಪಾಡ್ದನಗಳಲ್ಲಿ ಒಂದಾಗಿರುವ ಕೋಟಿಚೆನ್ನಯ್ಯ ಪಾಡ್ದನದಲ್ಲಿ ಕಂಡುಬರುವಂತೆ, ಕೃಷಿ ಭೂಮಿಯ ಒಡೆತನಗಳು ಜೈನಮನೆತನಗಳ ಅಧಿಕಾರಕ್ಕೆ ಒಳಪಟ್ಟಿದ್ದವು. ಜೈನರ ಆಧೀನದಲ್ಲಿ ಗುತ್ತುಮನೆತನಗಳು ಕಂದಾಯ ಸಂಗ್ರಾಹಕರಾಗಿ ಪ್ರಭುತ್ವಕ್ಕೆ ಒತ್ತಾಸೆಯಾಗಿದ್ದರು. ಕೃಷಿ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದ ಹಲವಾರು ಸಮುದಾಯಗಳಿದ್ದು, ಕೃಷಿ ಕಾರ್ಯ ಮುಗಿದ ನಂತರ ಕಾಡಿನಲ್ಲಿ ಬೇಟೆ ಮತ್ತು ನಾಟೀ ವೈದ್ಯದಂತಹ ಉಪವೃತ್ತಿಯನ್ನು ಮಾಡುತ್ತಿದ್ದರು. ಸಾಮಾಜಿಕವಾಗಿ ತಾವು ಭೂಮಿಯ ಒಡೆತನ ಪಡೆದುಕೊಂಡು ಪ್ರಭಾವಿಗಳಾಗಬೇಕು ಎಂಬ ಆಶಯವನ್ನು ಒಂದೊಮ್ಮೆ ವ್ಯಕ್ತಪಡಿಸಿದ ಸಂದರ್ಭಗಳು ಪಾಡ್ದನಗಳಲ್ಲಿ ಉಲ್ಲೇಖಿತಗೊಂಡಿದೆ. ಈ ಉಲ್ಲೇಖಗಳಲ್ಲಿ ಬಿರುವೆರ್ ಬೈದ್ಯೆರ್, ಬಿಲ್ಲವರು ಎಂದು ಕರೆಯಲ್ಪಡುತ್ತಿದ್ದ ವರ್ಗಗಳು ಭೂಒಡೆತನಕ್ಕಾಗಿ ಬೇಡಿಕೆ ಮುಂದಿಟ್ಟಿರುವ ವಿಚಾರ ಮುಖ್ಯವಾದುದು. ಬಿಲ್ಲವ ಸಮುದಾಯಕ್ಕೆ ಸೇರಿದ್ದ ಕೋಟಿಚೆನ್ನಯ್ಯರು ಬೀಡಿನ ಬಲ್ಲಾಳರಲ್ಲಿ ಸಾಗುವಳಿಗಾಗಿ ಗದ್ದೆಯನ್ನು ಬಿಟ್ಟುಕೊಡುವಂತೆ ವಿನಂತಿಸುವ ಪ್ರಸಂಗ, ಜೈನೇತರ ಸಮುದಾಯಗಳು ಭೂಮಿಯ ಒಡೆತನಗಳಲ್ಲಿ ಪಾಲುದಾರರಾಗುವ ಪ್ರಯತ್ನಗಳನ್ನು ಕಾಣಬಹುದು. ಹೀಗೆ ವಸಾಹತುಪೂರ್ವದಲ್ಲಿ ಜೈನರಿಂದ ಭೂಮಿಯ ಒಡೆತನ ಬಿಲ್ಲವರಿಗೆ ವರ್ಗಾವಣೆಯಾಗುವ ಒಂದು ಬಗೆಯ ಸಾಂಸ್ಕೃತಿಕ ಪಲ್ಲಟ, ಕೆಳದಿ, ಇಕ್ಕೇರಿಯ ರಾಜಕೀಯ ಪ್ರಭಾವದಿಂದ ನೇಪಥ್ಯಕ್ಕೆ ಸರಿಸಲ್ಪಟ್ಟ ಜೈನರ ಭೂಮಿಯ ಒಡೆತನ ಬೀಡಿನಿಂದ ಗುತ್ತುಗಳಿಗೆ ಒತ್ತುವರಿಯಾಗುವ ಇನ್ನೊಂದು ಬಗೆಯ ಭೂವಾರಸುದಾರಿಕೆಯ ಪಲ್ಲಟಗಳಾಗಿರುವುದು ಸ್ಪಷ್ಟ. ಹೀಗೆ ಒಕ್ಕಲುತನ ಮಾಡುವ ಸಮುದಾಯಗಳು ಭೂಮಿಯ ಒಡೆತನ ಪಡೆದು ಭೂಮಿಯ ಮೇಲಿನ ವಾರಸುದಾರಿಕೆ ಹೊಂದುವ ಘಟನೆಗಳು ಚರಿತ್ರೆ ಮತ್ತು ಮೌಖಿಕ ಆಕರಗಳ ಆಡುಮಾತುಗಳಲ್ಲಿ ದಾಖಲಾಗಿವೆ. ಹೀಗೆ ವಸಾಹತುಪೂರ್ವದ ಬೆಳವಣಿಗೆಗಳಿಂದ ಜೈನ ಮನೆತನಗಳು ಭೂಮಿಯ ಮೇಲಿನ ಒಡೆತನ ಕಳೆದುಕೊಂಡಿರುವುದು ಒಂದೆಡೆಯಾದರೆ, ಒಕ್ಕಲುಗಳು ಪ್ರಭಾವಗೊಂಡು ತಮ್ಮ ಸಾಮಾಜಿಕ ಅಂತಸ್ತನ್ನು ವೃದ್ಧಿಸುವಲ್ಲಿ ಬ್ರಾಹ್ಮಣರೊಂದಿಗೆ ಮಾಡಿದ ಮೈತ್ರಿ, ಕೃಷಿ ಭೂಮಿಯ ಮೇಲಿನ ಒಡೆತನ ವಿಶೇಷವಾಗಿ ವಸಾಹತುಪೂರ್ವದಲ್ಲಿ ಬ್ರಾಹ್ಮಣರು ಅನುಪಸ್ಥಿತ ಜಮೀನುದಾರರಾಗಿ ಬೆಳೆಯಲು ಅವಕಾಶ ಮಾಡಿಕೊಟ್ಟಿತು. ಈ

ಮೂಲಕ ವಸಾಹತುಶಾಹಿಯ ಆಡಳಿತದ ಕಾಲದಲ್ಲೂ ಇದು ಮುಂದುವರಿದು, ಆಯಕಟ್ಟಿನ ನೆಲೆಗಳಲ್ಲಿ ಉಪಸ್ಥಿತಗೊಂಡರು.

ತುಳುನಾಡಿನಲ್ಲಿ ವಸಾಹತುಶಾಹಿ ಆಳ್ವಿಕೆಯ ನೆಲೆಗಳ ಸ್ಥಾಪನೆಯು ಭೂಮಿಯ ಒಪ್ಪಂದದಲ್ಲಿ ಹೊಸ ಸಮಸ್ಯೆಗಳನ್ನು ಹುಟ್ಟುಹಾಕಿತು. ವಸಾಹತುಶಾಹಿಯ ಕಂದಾಯ ನೀತಿಯಿಂದಾಗಿ ಭೂಮಿಯ ಒಡೆತನ ಹಳೆಯ ಭೂಮಿಯ ವಾರಸುದಾರರಿಂದ ಒಕ್ಕಲ್ಮರ ಗುತ್ತುಗಳಿಗೆ ಮತ್ತು ಮಧ್ಯವರ್ತಿಗಳಿಗೆ ಮುಖ್ಯವಾಗಿ ಬಂಡವಾಳಶಾಹಿ ಸಾರಸ್ವತರಿಗೆ ವರ್ಗಾವಣೆಯಾಗಿದ್ದನ್ನು ಗಮನಿಸಬೇಕಾಗುತ್ತದೆ. ರೈತವಾರೀ ಪದ್ಧತಿಯಲ್ಲಿ ಗ್ರಾಮಗಳ ಕೃಷಿಯೋಗ್ಯ ಭೂಮಿಯನ್ನು ಖಾಸಗಿ ಒಡೆತನದ ಅಸಮಾನತೆಯನ್ನು ಹೋಗಲಾಡಿಸಲು ಮರುಹಂಚಿಕೆ ಮಾಡಲಾಗುತ್ತಿತ್ತು ಎಂದಾದರೂ[4] ತುಳುನಾಡಿನಲ್ಲಿ ಹೆಚ್ಚು ಜಮೀನು ಹೊಂದಿದ ಜಮೀನುದಾರರು ಇಲ್ಲದಿರುವುದರಿಂದ, ಜಮೀನುದಾರಿ ಪದ್ಧತಿಯನ್ನು ಜಾರಿಗೆ ತಂದರೆ ಹಾಲಿ ಇರುವ ಪರಿಸ್ಥಿತಿಯು ಹದೆಗೆಡುತ್ತದೆ ಎಂಬ ಆತಂಕ ವಸಾಹತುಶಾಹಿಯನ್ನು ಕಾಡಿದ್ದರಿಂದ ಭೂಮಿಯ ಕಂದಾಯಕ್ಕೆ ಅನುಗುಣವಾಗಿ ನೇರ ಉಳುಮೆಗಾರನೊಂದಿಗೆ ಒಪ್ಪಂದ ಮಾಡಿಕೊಂಡಲ್ಲಿ ಭೂಕಂದಾಯವನ್ನು ಪಾವತಿಸುವುದರ ಆದಾರದ ಮೇಲೆ, ಉಳುಮೆದಾರನನ್ನು, ಅವನು ಹೊಂದಿದ್ದ ಭೂಮಿಯ ಮಾಲಿಕನನ್ನಾಗಿ ಗುರುತಿಸಲಾಗುತ್ತಿತ್ತು. ಈ ಪ್ರಕ್ರಿಯೆ ತುಳುನಾಡಿನಲ್ಲಿ ಹಲವಾರು ಗುತ್ತುವ್ಯವಸ್ಥೆ, ಮಧ್ಯವರ್ತಿ, ವಣಿಕ ಸಂಘಗಳು ಪ್ರವರ್ಧಮಾನಕ್ಕೆ ಬರಲು ಕಾರಣವಾಯಿತ್ತಲ್ಲದೇ, ಭೂಮಿಯ ಮೇಲೆ ವ್ಯಾಪಾರಿ ಬಂಡವಾಳವನ್ನು ತೊಡಗಿಸಲು ಅನುಕೂಲ ಮಾಡಿಕೊಟ್ಟಿತ್ತು.[5]

ವಸಾಹತುಶಾಹಿಯ ಕಂದಾಯ ನೀತಿಗಳಿಂದ ಹೊಸ ಜಮೀನುದಾರರ ಸೃಷ್ಟಿ, ಭೂಮಿಯ ಮೇಲಿನ ಹೂಡಿಕೆಯಿಂದಾದ ಗೈರು ಜಮೀನುದಾರರ ಉಪಸ್ಥಿತಿ ಭೂಮಿಗೂ ಮಾನವನಿಗೂ ಹೊಸ ಸಂಬಂಧವನ್ನು ಕಲ್ಪಿಸಿದವು. ಹೀಗೆ ವಸಾಹತುಶಾಹಿಯ ಆಳ್ವಿಕೆಯ ಪ್ರಾರಂಭದಲ್ಲಿ ತುಳುನಾಡಿನ ಭೂಮಿಯ ಅಧಿಕಾರ ಬದಲಾವಣೆಗೆ ಒಳಪಟ್ಟಿತ್ತಲ್ಲದೇ ಹೊಸ ಜಮೀನುದಾರ ವ್ಯವಸ್ಥೆ ವಿಕಾಸಗೊಂಡಿತು. ಈ ವ್ಯವಸ್ಥೆ ವಸಾಹತುಪೂರ್ವದಲ್ಲಿ ಅಸಮರ್ಪಕ ಮತ್ತು ಭಿನ್ನ ರೂಪದಲ್ಲಿತ್ತು.[6] ವಸಾಹತುಶಾಹಿ ಆಡಳಿತವನ್ನು ನೆಲೆಗೊಳಿಸುವ ಖರ್ಚು, ಉನ್ನತ ಆಡಳಿತದ ಮತ್ತು ಮಿಲಿಟರಿ ವ್ಯವಸ್ಥೆಯ ಸಾವಿರಾರು ಇಂಗ್ಲೀಷ್ ಅಧಿಕಾರಿಗಳ ವೇತನ ಭರಿಸಲು, ವಸಾಹತೀಕರಣದ ಆರ್ಥಿಕ ಮತ್ತು ಆಡಳಿತ ವೆಚ್ಚವನ್ನು ಭರಿಸಲು ಭಾರತದಿಂದ ಹೆಚ್ಚು ಆದಾಯ ಬೇಕಿತ್ತು. ಇದರಿಂದ ಒತ್ತಡಕ್ಕೊಳಗಾದ ಇಲ್ಲಿನ ಪಾರಂಪರಿಕ ಕೃಷಿ ಭೂಮಿಯ ಒಡೆತನವಿದ್ದ ವಾರಸುದಾರರು ತೆರಿಗೆಯ ಹೊರೆಯನ್ನು ತೀವ್ರವಾಗಿ ಎದುರಿಸಬೇಕಾಯಿತು.[7] ತಮ್ಮ ಆಸ್ತಿತ್ವಕ್ಕಾಗಿ ವಸಾಹತುಶಾಹಿ ಜಾರಿಗೆ ತಂದ ನೂತನ

ಭೂಹಿಡುವಳಿ ಹಾಗೂ ಒಡೆತನದ ವ್ಯವಸ್ಥೆಗೆ ಒಗ್ಗಿಕೊಳ್ಳಲು ಪ್ರಯತ್ನಪಬೇಕಾಯಿತು. ಈ ನೂತನ ವ್ಯವಸ್ಥೆಯಲ್ಲಿ ಅನಿವಾರ್ಯವಾಗಿ ಸಮುದಾಯಗಳು ಪುನರ್‌ಸಂಘಟನೆಗೊಂಡು ವಸಾಹತುಶಾಹೀ ಆಡಳಿತವನ್ನು ಒಪ್ಪಿಕೊಳ್ಳಬೇಕಾಯಿತು. ವಸಾಹತುಶಾಹಿಯ ಚೌಕಟ್ಟಿನಲ್ಲಿ ತಮ್ಮನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಿ ಅವರ ಬೆನ್ನೆಲುಬಾಗಿ ಸಹಕರಿಸಿದಲ್ಲದೇ ಕ್ರಿಯಾಶೀಲಗೊಂಡವು.[8]

ವಿಶೇಷವಾಗಿ ವಸಾಹತುಶಾಹಿಯ ಪೂರ್ವದಲ್ಲಿ ಮೇಲ್ಜಾತಿಯವರ ಪ್ರಾಬಲ್ಯ ಅಲಂಕಾರಿಕ ಮತ್ತು ಆಚರಣಾತ್ಮಕವಾಗಿದ್ದರೇ ವಸಾಹತುಶಾಹಿಯ ಕಾಲದಲ್ಲಿ ಅವರ ಪ್ರಾಬಲ್ಯ ಅದರ ಆಶಯಗಳಿಗುಣವಾಗಿ ಸದೃಢ ಮತ್ತು ಸಮಗ್ರಗೊಂಡಿತು. ತುಳುನಾಡಿನಲ್ಲಿ ಪಾರಂಪರಿಕ ಪಾಳೆಯಗಾರರಾಗಿ ಇಲ್ಲವೆ ಆಳರಸರಾಗಿ ಕಾರ್ಯನಿರ್ವಹಿಸುತ್ತಿದ್ದ ಸಮುದಾಯಗಳು, ಅದರಲ್ಲೂ ಪ್ರಮುಖವಾಗಿ ಅವುಗಳ ಸಹಗುಂಪುಗಳು ಹೊಸತಾಗಿ ಸ್ಥಿತ್ಯಂತರಕ್ಕೊಳಗಾದ ವ್ಯವಸ್ಥೆಯಲ್ಲಿ ಬದಲಾವಣೆಗೆ ಒಳಗಾದವು. ಕೆಲವು ಸಂದರ್ಭಗಳಲ್ಲಿ ಭೂಮಿಯ ಒಡೆತನವಿದ್ದ ಯಜಮಾನ ಕಾರ್ಮಿಕನಾಗಿ ಅಥವಾ ಕಾರ್ಮಿಕ ಯಜಮಾನನಾಗಿ–ಹೀಗೆ ರೂಪಾಂತರಗೊಂಡವು. ಮದ್ರಾಸಿನ ರೈತವಾರಿ ಪದ್ಧತಿಯಿಂದ ಅವಿರ್ಭವಿಸಿದ ಹೊಸವರ್ಗ ಇಲ್ಲಿನ ಗೇಣಿದಾರರ ಮೇಲೆ ಸಂಪೂರ್ಣ ನಿಯಂತ್ರಣವನ್ನು ಸಾಧಿಸುವುದರ ಮೂಲಕ ಈಗಾಗಲೇ ಬಡಕಲಾದವರನ್ನು ಹಿಂಡಿ ಹಿಪ್ಪೆ ಮಾಡುವಲ್ಲಿ ಶುರುವಿಟ್ಟುಕೊಂಡಿತು. ಇದಲ್ಲದೇ ಹೊಸ ವ್ಯವಸ್ಥೆಯಿಂದ ಕೆಳವರ್ಗ (ಜಾತಿ) ದವರಿಗೆ ಸಾಂಪ್ರದಾಯಿಕವಾಗಿ ದಕ್ಕುತ್ತಿದ್ದ ಉತ್ಪನ್ನದ ಹಿಸ್ಸೆ ತಪ್ಪಿಹೋಯಿತ್ತಲ್ಲದೇ ವಸಾಹತುಶಾಹಿಯ ಶೋಷಣೆಗೆ ಒಳಗಾಗಬೇಕಾಯಿತು.

ಮದ್ರಾಸಿನ ರೈತವಾರಿ ಪದ್ಧತಿಯಿಂದ ಅವಿರ್ಭವಿಸಿದ ಹೊಸವರ್ಗ ಇಲ್ಲಿನ ಗೇಣಿದಾರರ ಮೇಲೆ ಸಂಪೂರ್ಣ ನಿಯಂತ್ರಣವನ್ನು ಸಾಧಿಸುವುದರ ಮೂಲಕ ಈಗಾಗಲೇ ಬಡಕಲಾದವರನ್ನು ಹಿಂಡಿ ಹಿಪ್ಪೆ ಮಾಡುವಲ್ಲಿ ಶುರುವಿಟ್ಟುಕೊಂಡಿತು. ಇದಲ್ಲದೇ ಹೊಸ ವ್ಯವಸ್ಥೆಯಿಂದ ಕೆಳವರ್ಗ (ಜಾತಿ) ದವರಿಗೆ ಸಾಂಪ್ರದಾಯಿಕವಾಗಿ ದಕ್ಕುತ್ತಿದ್ದ ಉತ್ಪನ್ನದ ಹಿಸ್ಸೆ ತಪ್ಪಿಹೋಯಿತ್ತಲ್ಲದೇ ವಸಾಹತುಶಾಹಿಯ ಶೋಷಣೆಗೆ ಒಳಗಾಗಬೇಕಾಯಿತು. ಇದು ವಸಾಹತುಶಾಹಿಗಳೊಂದಿಗೆ ಇನ್ನಷ್ಟು ಸಂಬಂಧಗಳನ್ನು ವಿಸ್ತರಿಸುವಲ್ಲಿ ಅವಕಾಶ ಒದಗಿಸಿತ್ತಲ್ಲದೇ, ಅಂತರಿಕ ರಾಜಕಾರಣ ಇಲ್ಲಿನ ಸ್ಥಳೀಯ ಮಟ್ಟದ ಆಡಳಿತ ವರ್ಗದ ಒಳಸಂಘರ್ಷಕ್ಕೆ ಕಾರಣವಾಗಿ ವಸಾಹತುಶಾಹಿಯ ಪ್ರವೇಶಕ್ಕೆ ಹಾದಿಯನ್ನು ಸುಗಮಗೊಳಿಸಿತು. ಇನ್ನೊಂದೆಡೆ ಸಂಪತ್ತಿನ ಸಂಚಯನದ ಅವಕಾಶವನ್ನು ಪಡೆಯುವ ದಾವಂತದಲ್ಲಿ ಸ್ಥಳೀಯ ಸಾಮಂತ, ಅಧಿಕಾರಿ ವರ್ಗ ವಸಾಹತುಶಾಹಿಯೊಂದಿಗೆ ವ್ಯಾಪಾರದ ಒಪ್ಪಂದ ಮಾಡಿಕೊಂಡು, ತಮ್ಮ ಉತ್ಸುಕತೆಗಳನ್ನು ಪ್ರಕಟಪಡಿಸಿ ತಮಗರಿವಿಲ್ಲದಂತೆ ಮೋಸಹೋದರು.

ವಂಚನೆ, ಅವಕಾಶ, ಒತ್ತಡ, ಬಲಪ್ರಯೋಗ, ಪ್ರತಿರೋಧ, ದೃಢನಂಬಿಕೆ, ಸಹಯೋಗಗಳು ವಸಾಹತುಶಾಹಿಯ ಅಗತ್ಯತೆಗಳಿಗೆ ಅನುಗುಣವಾಗಿ ತುಳುನಾಡಿನ ವಾರಸುದಾರಿಕೆಯ ಆಯಾಮಗಳ ಮೂಲತತ್ವಗಳಲ್ಲಿ ಬದಲಾವಣೆಗಳನ್ನು ಮಾಡಿ ಸಹಯೋಗಗೊಂಡಿರುವುದನ್ನು ವಿಮರ್ಶಿಸಬೇಕಾಗುತ್ತದೆ. ಈ ಪ್ರವರ್ತನೆಗಳು ಭಾರತದ ಸಂದರ್ಭದಲ್ಲಿ ವೆಲ್ಲೆಸ್ಲಿಯ ಆಡಳಿತದ ಅವಧಿಯಲ್ಲಿ ಸಾಂಸ್ಥೀಕರಣಗೊಂಡಿತಲ್ಲದೇ ಆತನ ಚಿಂತನೆಗಳು ಈ ಪ್ರವರ್ತನೆಗಳೊಂದಿಗೆ ಸಮ್ಮಿಳಿತಗೊಂಡು ವಸಾಹತುಶಾಹಿಯ ಭೂಮಿಯ ಒಡೆತನದ ನೆಲೆ ವಿಸ್ತರಿಸಲು ಅನುಕೂಲ ಮಾಡಿಕೊಟ್ಟಿತ್ತು. ಇದರ ಪ್ರತಿಫಲವಾಗಿ ಸ್ಥಾನೀಯ ಮಟ್ಟದಲ್ಲೂ ಮುಖ್ಯವಾಗಿ ಭೂಮಿಯ ಒಡೆತನವನ್ನು ನೆಚ್ಚಿಕೊಂಡಿದ್ದ ತುಳುನಾಡಿನ ಸಂಸ್ಕೃತಿಯ ನೆಲೆಗಳು ಆಸ್ತಿತ್ವ ಕಳೆದುಕೊಂಡು ವಸಾಹತುಶಾಹೀ ಪ್ರಭುತ್ವಕ್ಕೆ ಒಳಪಟ್ಟಿತ್ತು.

ವಸಾಹತುವಿನ ಭೂವಾರಸುದಾರಿಕೆಯ ಬಗ್ಗೆ ಪೂರ್ಣ ತಿಳುವಳಿಕೆ, ಜ್ಞಾನ ಪಡೆದುಕೊಂಡ ವಸಾಹತುಶಾಹೀ ನಂತರ ಅದೇ ತಿಳುವಳಿಕೆ, ಜ್ಞಾನವನ್ನು ತನ್ನ ಅನಾಗರೀಕ ವರ್ತನೆಗಳಿಗೆ ಸಾಧನವನ್ನಾಗಿ ಬಳಸಿಕೊಂಡಿತು.[9] ವಸಾಹತುಪೂರ್ವದ ವ್ಯವಸ್ಥೆಯಲ್ಲಿ ತುಳುನಾಡಿನ ಸಮುದಾಯಗಳು ಅಥವಾ ಜಾತಿಗಳು ಭೂಮಿ ಮತ್ತು ಉತ್ಪಾದನೆಗೆ ಸಂಬಂಧಿಸಿದಂತೆ ನಿರ್ದಿಷ್ಟವಾದ *ಕಾರ್ಯನಿರ್ವಹಣೆಯ* ಹಕ್ಕು ಮತ್ತು ಕರ್ತವ್ಯಗಳನ್ನು ಪಡೆದಿದ್ದವು. ಅಜಲು–ಪತ್ತೇರಿಕೂಟಗಳ ಮೂಲಕ ಜೀವಂತವಾಗಿರಿಸಿದ್ದ ಭಾವನಾತ್ಮಕ ವಾರಸುದಾರಿಕೆಯ ಸಂಬಂಧಗಳು ಪೂರ್ವದ ಮರ್ಯಾದೆ ಅಥವಾ ಪರಂಪರೆಯಿಂದ ಬಂದ ಗೌರವ–ಈ ವ್ಯವಸ್ಥೆ ವಿಜಯನಗರ ಅರಸರ ಕಾಲದಿಂದ ಪ್ರಾಮುಖ್ಯತೆಯನ್ನು ಪಡೆದಿತ್ತು. ಅದರೆ ವಸಾಹತುಶಾಹಿ ಆಡಳಿತದಲ್ಲಿ ಅವುಗಳು ಪಲ್ಲಟಗೊಂಡು ಅದರ ಬಂಡವಾಳಶಾಹಿ ನೀತಿಗನುಗುಣವಾಗಿ ಶೋಷಣೆಯ ಸಾಧನಗಳಾಗಿ ಪರಿವರ್ತನೆಗೊಳಪಟ್ಟು ಹತೋಟಿಗೆ ಒಳಗಾದವು.

ಗ್ರಾಮಗಣ್ಯರನ್ನು ಇಲ್ಲವೇ ಭೂಮಾಲೀಕರನ್ನು ರಾಜ್ಯದ ಅಧಿಕಾರಿಗಳಾಗಿ ನೇಮಕ ಮಾಡುವುದು ಮಾಮೂಲಿ ಅಭ್ಯಾಸ. ಪ್ರಜಾಪ್ರಭುತ್ವಪೂರ್ವ ವ್ಯವಸ್ಥೆಯಲ್ಲಿ ಅರಸರು ಯಾವಾಗಲೂ ಎದ್ದು ಕಾಣುವ ಅರ್ಥಿಕ ಬಲ ಮತ್ತು ಉನ್ನತ ಸಾಮಾಜಿಕ ಅಂತಸ್ತಿನ ಜನರನ್ನು ಮತ್ತು ಗುಂಪುಗಳ ಸೇವೆಯನ್ನು ಆಡಳಿತಾತ್ಮಕ ಅಧಿಕಾರ ಮತ್ತು ಅದರ ಜತೆಗಿನ ರಾಜಕೀಯ ಬಲ ನೀಡಿ ಪಡೆಯಲು ಉತ್ಸುಕರಾಗಿದ್ದರು. ಇದು ಸ್ಥಳೀಯವಾಗಿ ಮುಖ್ಯ ವ್ಯಕ್ತಿಗಳನ್ನು ಮತ್ತು ಗುಂಪುಗಳನ್ನು ಗೆಲ್ಲುವ ಪರಿಣಾಮಕಾರಿ ವಿಧಾನವಾಗಿರುವುದರಿಂದ ರಾಜ್ಯವು ಇಂತಹ ನೇಮಕಗಳಿಂದ ಲಾಭ ಪಡೆಯಬಹುದಾಗಿತ್ತು. ನ್ಯಾಯಸಮ್ಮತವಾಗಿ ರಾಜಕೀಯಾಧಿಕಾರಕ್ಕೆ ನಿಕಟರಾಗಿ ಪಾಲು ಪಡೆಯುವುದು, ಪ್ರಭಾವ ಗಳಿಸುವುದು ಸ್ಥಳೀಯ ಗಣ್ಯರಿಗೆ ಸಂತೋಷದ

ಸಂಗತಿ. ಪ್ರಭಾವಲಯಕ್ಕೆ ಸೇರುವುದು ಬಿರುದು, ಮನ್ನಣೆ ಸ್ವಪ್ರತಿಷ್ಠೆಯನ್ನು ಬಲವರ್ಧಿಸಲು ಸಹಾಯಕವಾಗುತ್ತಿತ್ತು.[10] ಇದಕ್ಕೆ ಅನುಗುಣವಾಗಿ ವಸಾಹತುಪೂರ್ವದ ತುಳುನಾಡಿನ ಸಾಮಾಜಿಕ ವ್ಯವಸ್ಥೆಯಲ್ಲಿ ರೂಢಿ-ಸಂಪ್ರದಾಯಗಳು, ಆಚರಣೆ, ಸಂಸ್ಕಾರ, ಶಾಸ್ತ್ರವಿಧಿ, ದಾನ ಪರಿಕಲ್ಪನೆ, ವೀರರ ಆರಾಧನ ಪದ್ಧತಿಗಳನ್ನು ರೂಪಿಸಿ ಸಮಾಜ ವ್ಯವಸ್ಥೆಯಲ್ಲಿ ಭೂಮಿಯ ಒಡೆತನದ ಯಜಮಾನಿಕೆಗೆ ನಿರ್ಣಯಿಸುವಲ್ಲಿ ಅವುಗಳನ್ನು ಬಳಸಿಕೊಂಡು ಸಾಮಾಜಿಕ ಪರಿವರ್ತನೆಗೆ ಆರಂಭ ಹಾಕಲಾಯಿತು, ಮಾತ್ರವಲ್ಲದೇ ಅಧಿಕಾರದ ಆಧಾರದಲ್ಲಿ ಸಂಘಟಿತಗೊಂಡ ಸಾಮುದಾಯಿಕ ಗುಂಪುಗಳು ಸ್ವಯಂ ಬೇಡಿಕೆ ಪೂರೈಸುವ ಉತ್ಪಾದನಾ ಘಟಕಗಳೊಂದಿಗೆ ಸಂಬಂಧ ಬೆಳೆಸಿಕೊಂಡು ಆ ಪ್ರದೇಶದ ಸಾಂಸ್ಕೃತಿಕ ಆಚರಣೆಗಳಲ್ಲಿ ಪಾಲು ಪಡೆಯುತ್ತಿದ್ದ ವಿಚಾರಗಳು ಐತಿಹಾಸಿಕ ಶಾಸನ ಮತ್ತು ಬರವಣಿಗೆಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.[11]

ತುಳುನಾಡಿನಲ್ಲಿ ವಸಾಹತುಶಾಹಿಯ ಅಧಿಕಾರದ ಪುನರ್ ವ್ಯಾಖ್ಯಾನದೊಂದಿಗೆ ಬದಲಾದ ಚಾರಿತ್ರಿಕ ಸನ್ನಿವೇಶದಲ್ಲಿ ಪಶ್ಚಿಮದ ಅಧಿಕಾರಸ್ಥ ವರ್ಗಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ವಸಾಹತಿನ ಪಾರಂಪರಿಕ ಭೂಮಿಯ ಒಡೆತನವನ್ನು ಗಳಿಸಿಕೊಂಡರಾದರೂ ಸಣ್ಣ ಮಟ್ಟದ ದುರ್ಬಲ ಹಾಗೂ ಸ್ಥಳೀಯ ಭೂವಾರಸುದಾರರು ಅಧಿಕಾರ ರಹಿತಗೊಂಡರಲ್ಲದೇ ಆರ್ಥಿಕವಾಗಿಯೂ ತಮ್ಮ ಸಂಪತ್ತಿನ ಮೂಲದ ಹಿಡಿತ ಕಳೆದುಕೊಂಡು ವಸಾಹತುಶಾಹಿಯ ವಿಸ್ತರಣಾ ನೀತಿಯಿಂದ ತತ್ತರಗೊಂಡು ನಾಶಗೊಂಡರು.[12] ಮಾತ್ರವಲ್ಲ ಸಾಮಾನ್ಯಶಕೆ ಹದಿನೆಂಟನೇ ಶತಮಾನದ ಕೊನೆಯ ಮೂರು ದಶಕಗಳಲ್ಲಿ ನಿರ್ದಿಷ್ಟ ಆಡಳಿತಾತ್ಮಕ ಧೋರಣೆಯನ್ನು ರೂಪಿಸಿಕೊಂಡ ವಸಾಹತುಶಾಹಿಯ ಭೂಮಿಯ ಒಡೆತನ, ಹಾಗೂ ಸಾಮ್ರಾಜ್ಯ ಸ್ಥಾಪನೆಯ ಚಿಂತನೆಗಳನ್ನು ಪುನರ್ ಸ್ಪಷ್ಟಪಡಿಸಿಕೊಂಡಿದ್ದರಿಂದ ವಸಾಹತು ಜನರ ಚರಿತ್ರೆ ಪುನರ್ರಚನೆಗೊಂಡಿತ್ತು. ವಸಾಹತಿನ ನೆಲೆಗಳನ್ನು ವಿಭಜಿಸಿದ್ದರಿಂದ ಇಲ್ಲಿನ ಎಲ್ಲವೂ ಛಿದ್ರಗೊಂಡು ಭೌದ್ಧಿಕವಾಗಿ ಪ್ರತ್ಯೇಕ ಆಸ್ತಿತ್ವ ಪಡೆದುಕೊಂಡವು. ವಸಾಹತಿನ ಚರಿತ್ರೆಯ ಪುನರ್‌ರಚನೆ ಬರವಣಿಗೆ ಪ್ರಾರಂಭಾವಸ್ಥೆಯಲ್ಲಿಯೇ ಬಲಿತಗೊಂಡು ಸುಶಿಕ್ಷಿತ ವಾಗ್ವದವಾಗಿ ವಸಾಹತುಶಾಹಿಗೆ ಭದ್ರ ನೆಲೆಯನ್ನು ಒದಗಿಸಿತು. ತುಳುನಾಡಿನ ಇತಿಹಾಸದ ನೆಲೆಗಟ್ಟುಗಳು ಕಂಪನಿಯ ಆಳ್ವಿಕೆಗೆ ಸಮನ್ವಯಗೊಳ್ಳುವಂತೆ ಅದರ ಆರ್ಥಿಕ ನೀತಿಗೆ ಪುನರ್‌ರೂಪಿಸಲ್ಪಟ್ಟು ಅಗತ್ಯಕ್ಕನುಗುಣವಾಗಿ ಪುನರ್‌ವಿಶ್ಲೇಷಣೆಗೆ ಒಳಪಟ್ಟವು.

## ಸಾಂಪ್ರದಾಯಿಕ ಅರ್ಥವ್ಯವಸ್ಥೆ

ವಸಾಹತುಶಾಹಿಗಳು ಅನುಸರಿಸಿದ ಆರ್ಥಿಕ ನೀತಿಯು ವಸಾಹತಿನ ಆರ್ಥಿಕತೆಯನ್ನು ವಸಾಹತುಶಾಹಿ ಆರ್ಥಿಕತೆಯಾಗಿ ಮಾರ್ಪಾಡಲು ಅವಕಾಶ ಮಾಡಿತು. ಮತ್ತು ಅದರ ಸ್ವಭಾವ

ಮತ್ತು ಸ್ವರೂಪವನ್ನು ವಸಾಹತುಶಾಹಿ ಆರ್ಥಿಕತೆಯ ಅವಶ್ಯಕತೆಗಳು ನಿರ್ಧರಿಸುತ್ತಿದ್ದವು. ಈ ವಿಷಯದಲ್ಲಿ ವಸಾಹತುಶಾಹಿಗಳ ವಸಾಹತಿನ ಗೆಲುವು, ಹಿಂದಿನ ಎಲ್ಲಾ ವಿದೇಶಿ ಗೆಲುವುಗಳಿಗಿಂತ ಭಿನ್ನವಾಗಿತ್ತು. ಹಿಂದೆ ವಸಾಹತನ್ನು ಗೆದ್ದವರು, ವಸಾಹತಿನ ರಾಜಕೀಯ ಶಕ್ತಿಗಳನ್ನು ಹೊರಹಾಕಿದ್ದರಾದರೂ ವಸಾಹತಿನ ಆರ್ಥಿಕತೆಯ ಸ್ವರೂಪದಲ್ಲಿ ಯಾವುದೇ ಮೂಲಭೂತ ವ್ಯತ್ಯಾಸಗಳನ್ನು ಮಾಡಿರಲಿಲ್ಲ. ಮುಂದುವರೆದು ಆಡಳಿತಗಾರರ ಬದಲಾವಣೆಯು ಕೃಷಿಕರ ಹೆಚ್ಚುವರಿ ಉತ್ಪಾಧನೆಯ ಬಳಕೆದಾರರ ಮೇಲೆ ಯಾವುದೇ ಪರಿಣಾಮ ಬೀರಿರಲಿಲ್ಲ. ಕ್ರಮೇಣ ಅವರು ರಾಜಕೀಯ ಮತ್ತು ಆರ್ಥಿಕತೆಯೂ ಸೇರಿದಂತೆ, ವಸಾಹತಿನ ಬದುಕಿನಲ್ಲಿ ಬೆರೆತು ಹೋಗಿದ್ದರು. ಪರಿಣಾಮವಾಗಿ ಕೃಷಿಕರು, ಕುಶಲ ಕೆಲಸಗಾರರು ಮತ್ತು ವ್ಯಾಪಾರಿಗಳು ಮೊದಲಿನಂತೆಯೇ ಬದುಕನ್ನು ಮುಂದುವರೆಸಿದ್ದರು. ಸ್ವಾವಲಂಬಿ ಗ್ರಾಮೀಣ ಆರ್ಥಿಕತೆಯ ಮೂಲಸ್ವರೂಪವು ನಿರಂತರವಾಗಿ ಉಳಿದಿತ್ತು. ಆದರೆ, ವಸಾಹತುಶಾಹಿಗಳು ಸಂಪೂರ್ಣವಾಗಿ ಬೇರೆಯೇ ಆಗಿದ್ದರು. ಅವರು ವಸಾಹತಿನ ಸಾಂಪ್ರದಾಯಿಕ ಅರ್ಥಿಕತೆಯ ಚೌಕಟ್ಟನ್ನು ಸಂಪೂರ್ಣವಾಗಿ ನಾಶ ಮಾಡಿದರಲ್ಲದೇ ವಸಾಹತು ಬದುಕಿನ ಅವಿಭಾಜ್ಯ ಅಂಗವಾಗಲೇ ಇಲ್ಲ. ವಸಾಹತಿನ ಸಂಪನ್ಮೂಲಗಳನ್ನು ಬಳಸಿ, ಐಶ್ವರ್ಯವನ್ನು ಕಾಣಿಕೆ ಎಂದು ಸಾಗಿಸಿ, ವಸಾಹತಿನಲ್ಲಿ ಸದಾ ವಿದೇಶಿಯರಾಗಿ ಉಳಿದರು.

ತುಳುನಾಡಿನ ಸಂದರ್ಭದ ವಸಾಹತುಶಾಹಿ ಆರಂಭಿಕ ಹಂತಗಳಲ್ಲಿ ಆದಾಯ ಗಳಿಕೆಗೆ ಹೆಚ್ಚು ಪ್ರಾಶಸ್ತ್ಯ ನೀಡಿತ್ತು. ಮಾತ್ರವಲ್ಲ ಕೃಷಿ ಚಟುವಟಿಕೆಗಳಲ್ಲಿ ನಿರತವಾಗಿದ್ದ ಗ್ರಾಮೀಣ ಸಮುದಾಯಗಳ ಬಗ್ಗೆ ಅಧ್ಯಯನಿಸಿ ತನಗೆ ಅನುಕೂಲವಾಗುವಂತಹ ಅವಕಾಶಗಳನ್ನು ಕಂಡುಕೊಂಡಿತ್ತು. ಅದರ ಆಳ್ವಿಕೆಯು ನಿಶ್ಚಿತ ಕಂದಾಯ ಮತ್ತು ಪೋಲಿಸ್ ಕೇಂದ್ರಿಕೃತ ನಿಯಂತ್ರಣ ವ್ಯವಸ್ಥೆಯ ಮೇಲೆ ರೂಪಿಸಲಾಗಿತ್ತು. ಇದಕ್ಕಾಗಿ ಇಲ್ಲಿ ಆಸ್ತಿತ್ವದಲ್ಲಿದ್ದ ಸಾಮಾಜಿಕ ಅಧಿಕಾರ ಮತ್ತು ನಿಯಂತ್ರಣ ವ್ಯವಸ್ಥೆಗಳನ್ನು ಬಳಸಿಕೊಂಡಿತ್ತಾದರೂ ರಾಜಕೀಯ ಮತ್ತು ಆಡಳಿತ ಅಧಿಕಾರಗಳನ್ನು ಪರಿಣಾಮಕಾರಿಯಾಗಿ ತನ್ನ ಕೈಯಲ್ಲಿಯೇ ಇಟ್ಟುಕೊಂಡಿತು. ಆಡಳಿತ ಯಂತ್ರವು ವಸಾಹತುಶಾಹಿಯ ನಿಯಂತ್ರಣದಲ್ಲೆ ಮುಂದುವರೆದು ಲಾಭದಾಯಕವಾಗಿ ಮಾಡಿಕೊಂಡಿತ್ತಲ್ಲದೇ, ವಸಾಹತಿನ ಅರ್ಥವ್ಯವಸ್ಥೆಗಳಲ್ಲಿ ಹಸ್ತಕ್ಷೇಪ ಮಾಡಲು ಅವಕಾಶ ಪಡೆಯಿತು. ಬದಲಾಗಿ ರೈತರ ಸ್ಥಿತಿಗತಿ ಸುಧಾರಿಸಲು ಅಥವಾ ಕಂದಾಯ ಆಡಳಿತವನ್ನು ಸರಿಪಡಿಸಲು ಯಾವ ಪ್ರಯತ್ನವೂ ಮಾಡಲ್ಪಡಲಿಲ್ಲ. ಇದಕ್ಕೆ ಕಾರಣವೇನೆಂದರೆ ವಸಾಹತುಶಾಹಿಯ ತರ್ಕವು ಗರಿಷ್ಠ ಕಂದಾಯ ಸಂಗ್ರಹ ಮತ್ತು ಜನಕಲ್ಯಾಣದ ಬಗೆಗೆ ಕನಿಷ್ಠ ಜವಬ್ದಾರಿಗಳು ಎಂಬ ಧೋರಣೆಯನ್ನು ಆಧರಿಸಿತ್ತು. ಅದರ ಅಭಿರುಚಿಯನ್ನು ವೈಭವಿಕರಿಸುವ ನೆಪದಲ್ಲಿ ವಸಾಹತಿನ ಪ್ರಜೆಗಳನ್ನು ಶೋಷಣೆಗೆ ಒಳಪಡಿಸಿ, ಪಾರಂಪರಿಕ ಮೌಲ್ಯಗಳಿಗೆ ತಡೆ

ಹಾಕಲಾಗಿ ವಸಾಹತಿನ ಜನರನ್ನು ವಸಾಹತುಶಾಹಿ ಚೌಕಟ್ಟಿನೊಳಗೆ ಬರುವಂತೆ ರೂಪಿಸಿಕೊಳ್ಳಲಾಯಿತು.ಈ ಪ್ರಕ್ರಿಯೆಗೆ ವಸಾಹತು ಸಾಂದರ್ಭಿಕ ಪ್ರತಿರೋಧವನ್ನು ತೋರ್ಪಡಿಸಿದೆಯಾದರೂ ಯಾವುದೇ ಪ್ರಯೋಜನವಾಗಲಿಲ್ಲ. ಟಿಪ್ಪುಸುಲ್ತಾನನ ವಿರುದ್ಧ ವಸಾಹತುಶಾಹಿಗೆ ಬೆಂಬಲ ನೀಡಿದ್ದ ತುಳುನಾಡಿನ ಪಾಳೆಯಗಾರರು ಮತ್ತು ಸಾಮಂತರಸರು ಅಧಿಕಾರವನ್ನು ಪುನರ್‌ಸ್ಥಾಪನೆ ಮಾಡುವ ದಾವಂತದಲ್ಲಿ ಹಳೆಯ ವ್ಯವಸ್ಥೆಯ ನೈಜ ಅಧಿಕಾರಗಳನ್ನು ಕಳೆದುಕೊಳ್ಳಬೇಕಾಯಿತು.[13] ರಾಜಕೀಯ ಅಧಿಕಾರ ಕಳೆದುಕೊಂಡ ಬೇಗುದಿ ಹಾಗೂ ಕ್ರೋಧಗಳು ತುಳುನಾಡಿನ ಕುಂಬಳೆ, ವಿಟ್ಲ, ನೀಲೇಶ್ವರ ಮುಂತಾದೆಡೆಗಳಲ್ಲಿ ದಂಗೆಯ ರೂಪದಲ್ಲಿ ಪ್ರತಿಧ್ವನಿಸಿದವು. ಇವುಗಳನ್ನು ಸದೆಬಡಿಯಲಾಯಿತಾದರೂ ಆತೃಪ್ತಿಯ ಒಳಬೇಗುದಿ ಸಾಮಾನ್ಯಶಕೆ 1799ರಿಂದ 1830ರ ವರೆಗೂ ಮುಂದುವರೆಯಿತು.[14] ಹತ್ತೊಂಬತನೆಯ ಶತಮಾನದ ಮೊದಲ ಮೂರು ದಶಕಗಳು ರೈತರ ಆಸಮದಾನದ ಎರಡು ಸ್ಫೋಟಗಳನ್ನು ಎದುರಿಸಬೇಕಾಯಿತು. ತುಳುನಾಡಿನ ಒಳಉಳಿಗ ಪಾರಂಪರಿಕ ಅಧಿಕಾರ ಕಳೆದುಕೊಂಡ ಪರಿಣಾಮವಾಗಿ 1810–11ರಲ್ಲಿ ಮತ್ತು 1830–31ರಲ್ಲಿ ವ್ಯಾಪಕ ರೈತ ಅತೃಪ್ತಿ ಮತ್ತು ದಂಗೆಗಳು ಪ್ರಾರಂಭಗೊಂಡವು. ಹೀಗೆ ವಸಾಹತುಶಾಹಿಯ ಹೆಚ್ಚುವರಿ ಕಂದಾಯ ವಿಧಿಸುವ ಕ್ರಮ ವಸಾಹತುಶಾಹಿ ಆಡಳಿತದ ಆರಂಭದ ನಾಲ್ಕು ದಶಕಗಳಲ್ಲಿ ಹಲವು ಘಟನೆ ಅಥವಾ ಬೆಳವಣಿಗೆಗಳಿಗೆ ಕಾರಣವಾಯಿತು.

ವಸಾಹತುಶಾಹಿಯ ವಿರುದ್ಧದ ದಂಗೆ, ಒಳಸಂಚು ಅಥವಾ ಕೂಟಕೃತ್ಯ ಪ್ರಮುಖವಾಗಿ ಕಾಣಿಸಿಕೊಳ್ಳಲು ಗ್ರಾಮಪ್ರದೇಶಗಳಲ್ಲಿ ನಾಯಕರಾಗಿ ವಸಾಹತುಪೂರ್ವದ ಆಡಳಿತದಲ್ಲಿ ಪಡೆದ ಸ್ಥಾನಮಾನ, ಅಧಿಕಾರ, ಅರ್ಥವ್ಯವಸ್ಥೆಗೆ ಬಂದೊದಗಿದ ಅಪತ್ತು ಮತ್ತು ವಸಾಹತಿನ ರಾಜಕೀಯ ವಾರಸ ಅಧಿಕಾರ, ಹಕ್ಕುಗಳಿಗೆ ಚ್ಯುತಿ ಬಂದಿರುವುದೇ ಕಾರಣವೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.[15] ಸುರೇಂದ್ರರಾವ್‌ರವರ ಪ್ರಕಾರ ವಸಾಹತುಶಾಹಿ ಅಧಿಕಾರ ಪಾರಂಪರಿಕ ವ್ಯವಸ್ಥೆಯ ಅಧಿಕಾರ, ಅರ್ಥವ್ಯವಸ್ಥೆಗೆ ಒಡ್ಡಿದ ಸವಾಲಾದ ಕಾರಣ ತುಳುನಾಡಿನ ಅಧಿಕಾರ ಇರುವ ಪಾರಂಪರಿಕ ಶಕ್ತಿಗಳು ವಸಾಹತುಶಾಹಿಯ ವಿರುದ್ಧ ಸಹಜವಾಗಿ ದಂಗೆ ಎದ್ದವು. ಜೊತೆಗೆ ಅವುಗಳು ಪಾರಂಪರಿಕ ಅರ್ಥವ್ಯವಸ್ಥೆಗೆ ಬಂದೊದಗಿದ ಅಪತ್ತು ಎಂದು ಪರಿಗಣಿಸಿ ಅವುಗಳನ್ನು ಅಂದೋಲನಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗುತ್ತದೆ. ಮುಂದುವರೆದು ವಸಾಹತುಶಾಹಿಯ ವಿರುದ್ಧ ಅರ್ಥಿಕ ದುಸ್ಥಿತಿಗೊಳಗಾದ ತುಳುನಾಡಿನ ರೈತರ ಅವಿಧೇಯತೆಗೆ ಸರಕಾರದ ಶೋಷಣಾತ್ಮಕ ಕಂದಾಯ ಹೇರಿಕೆಯೆ ಕಾರಣವೆಂದು ವಸಾಹತುಶಾಹಿ ಅಧಿಕಾರಿಗಳಿಗೆ ಮನವರಿಕೆಯಾಗಿತ್ತಾದರೂ ಅದನ್ನು ಔಪಚಾರಿಕವಾಗಿ ಒಪ್ಪಲಿಲ್ಲ. ಜೊತೆಗೆ ಮಧ್ಯವರ್ತಿಗಳ ಶೋಷಣೆ, ಕೃಷಿ ಚಟುವಟಿಕೆಗಳ

ದುಸ್ತರತೆ, ಕಂಪನಿಯ ಕೃಷಿ-ವಾಣಿಜ್ಯ ನೀತಿಯಿಂದಾಗಿ ತೊಂದರೆಗೊಳಗಾದ ರೈತರು ತುಳುನಾಡಿನಲ್ಲಿ ವ್ಯವಸ್ಥಿತ ಬಂಡಾಯವನ್ನು ಪ್ರಾರಂಭಿಸಿದರು.[16] 1830-32ರ ಕೂಟ ಬಂಡಾಯ ಬೇಕಲ, ಕಾಸರಗೋಡು, ಮೊಗ್ರಾಲ್, ಕುಂಬಳೆ, ವಿಟ್ಲ, ಮಂಜೇಶ್ವರ, ಬಂಗ್ರ ಮಂಜೇಶ್ವರ, ವರ್ಕಾಡಿ, ತಲಪಾಡಿ, ಉಪ್ಪಿನಂಗಡಿ, ಬಂಟ್ವಾಳ, ವಾಮಂಜೂರು, ಕದ್ರಿ, ಮಳಲಿ, ಮುಲ್ಕಿ, ಉದ್ಯಾವರಗಳಲ್ಲಿನ ರೈತರು ಭಾಗವಹಿಸಿದರು. ಬೇಕಲದ ಎಂಟು ಮಾಗಣೆಗಳಲ್ಲಿ ಪ್ರಾರಂಭವಾದ ಕೂಟ ದಂಗೆ ಕುಂದಾಪುರದ ವರೆಗೂ ವಿಸ್ತರಿಸಿತ್ತು. ಇದರ ದೂರಗಾಮಿ ಪರಿಣಾಮವಾಗಿ ಸಾಮಾನ್ಯಶಕೆ 1810-11ರಲ್ಲಿ ವಸಾಹತಿನ ಕೆಲವು ಭಾಗಗಳಲ್ಲಿ, ಅದರಲ್ಲೂ ಮುಖ್ಯವಾಗಿ ತುಳುನಾಡಿನಲ್ಲಿ ಕೃಷಿ ಅಧಿಕಾರದ ಸಮುದಾಯಗಳು ತೆರಿಗೆ ನೀಡುವುದಿಲ್ಲವೆಂಬ ಅಂದೋಲನವನ್ನು ಪ್ರಾರಂಭಿಸಿದವು.[17] ರೈತ ದಂಗೆಗಳ ಬಗ್ಗೆ ಚರಿತ್ರಕಾರರು ಅವುಗಳ ಗುರಿ, ಉದ್ದೇಶ, ಚಿಂತನೆಗಳನ್ನು ಆಧರಿಸಿ ಆರು ವಿಧದ ದಂಗೆಗಳ ಸ್ವರೂಪಗಳನ್ನು ಅಧ್ಯಯನ ಮಾಡಿದ್ದಾರೆ. ತುಳುನಾಡಿನ ಆರಂಭಿಕ ದಂಗೆಗಳು ರಾಜಕೀಯ ಪ್ರೇರಿತವಾದವುಗಳು. ಪಾರಂಪರಿಕ ಅಧಿಕಾರಗಳನ್ನು ಪುನರ್ ಸ್ಥಾಪನೆ ಮಾಡುವ ಉದ್ದೇಶವನ್ನು ಒಳಗೊಂಡಿತ್ತು. ನಂತರದ ಅಂದೋಲನಗಳು ವಸಾಹತುಶಾಹಿ ಕಡತಗಳ ಪ್ರಕಾರ ದಂಗೆಯ ಸ್ವರೂಪ ಚರ್ಚಿತವಾಗಿಲ್ಲ. ಸರಕಾರಕ್ಕೆ ವಾರ್ಷಿಕ ಕಿಸ್ತು ಕಟ್ಟುವ ವಿಚಾರದಲ್ಲಿ ದಂಗೆ ಪ್ರಾರಂಭಗೊಂಡಿದೆ. ದಂಗೆಯ ಬಗ್ಗೆ ಅಲೆಕ್ಸಾಂಡರ್ ರೀಡ್ ಆರು ವಿಚಾರಗಳನ್ನು ಮುಂದಿಡುತ್ತಾನೆ. ಅವುಗಳಲ್ಲಿ ಕಂದಾಯ ವಸೂಲಿ ಮಾಡುವ ಹೊಸ ವ್ಯವಸ್ಥೆ, ಕಂದಾಯ ತಗಾದೆ, ಉಪ್ಪು, ಹೊಗೆಸೊಪ್ಪು ಏಕಸ್ವಾಮ್ಯದ ಬಗ್ಗೆ, ಹೊಸ ಕಾನೂನು ಕಛೇರಿಗಳ, ಸ್ಟಾಂಪು, ಅಬಕಾರಿ ಸುಂಕಗಳ ವಿರುದ್ಧವಾಗಿತ್ತು ಎನ್ನಲಾಗಿದೆ.

ಸಾಮಾನ್ಯಶಕೆ 1830-31ರಲ್ಲಿ ವಸಾಹತುಪೂರ್ವದ ಕೃಷಿ ಅಧಿಕಾರದ ಜವಾಬ್ದಾರಿ ನಿರ್ವಹಿಸಿದ್ದ ತುಳುನಾಡಿನ ರೈತರು ಕೂಟಗಳಾಗಿ ಸೇರಿಕೊಂಡ ಮೇಲೆ ಸೃಷ್ಟಿಯಾದ ಅತೃಪ್ತಿ, ಬಂಡಾಯ, ಕಲ್ಯಾಣಪ್ಪನ ಕಾಟಕಾಯಿ ಮುಂತಾದ ಘಟನೆಗಳು ವಸಾಹತಿನ ಪ್ರಾಥಮಿಕ ಪ್ರತಿರೋಧವಾದರೂ ಅದು ಕೊಡಗು, ಅಮರಮಾಗಣೆಯಾದ ಸುಳ್ಯ-ಪುತ್ತೂರಿನ ಭಾಗದ ವಸಾಹತುಶಾಹಿಯ ವಿರುದ್ಧದ ಸಾಮಾಜಿಕ-ಆರ್ಥಿಕ ಅಂದೋಲನಗಳಾಗಿ ರೂಪುಗೊಂಡಿತ್ತು. ಕೊಡಗನ್ನು ಒಳಗೊಂಡಂತೆ ತುಳುನಾಡು ವಸಾಹತುಶಾಹಿ ವ್ಯವಸ್ಥೆಯನ್ನು ವಿರೋಧಿಸಿದವೇ ಹೊರತು ಬಯಸಿದವುಗಳಲ್ಲವೆಂದು ಸಾಬೀತುಪಡಿಸಿತು.[18] 1830-31ರ ಅಂದೋಲನ ಕೂಟ ದಂಗೆಗಳೆಂದು ಪ್ರಾಮುಖ್ಯತೆಯನ್ನು ಪಡೆದಿದೆ. ಕೂಟ ದಂಗೆಯ ಕಾರಣಗಳನ್ನು ಹೀಗೆ ವಿವರಿಸಲಾಗಿದೆ. 1830ರ ವಸಾಹತುಶಾಹಿಯ ಗೊತ್ತು ಗುರಿಯಿಲ್ಲದ ಜಮಾಬಂದಿ, ರೈತರ ಬೆಳೆಗಳಿಗೆ ಬೆಂಬಲ ಬೆಲೆ ಇಲ್ಲದಿರುವುದು. ಬೆಳೆ ನಾಶ, ಹೆಚ್ಚುವರಿ ಕಂದಾಯ. 1827ರಿಂದ

1830ರ ವರೆಗಿನ ಆರ್ಥಿಕ ಮುಗ್ಗಟ್ಟು ಕೂಟದಂಗೆಗಳಿಗೆ ಕಾರಣವೆಂಬ ವಿಚಾರದ ಬಗ್ಗೆ ಪಿ.ಜೆ ಥಾಮಸ್ ವಿಸ್ತೃತವಾಗಿ ಅಧ್ಯಯನಿಸಿದ್ದಾರೆ. ಸೌತ್‌ಕೆನರಾದ ಕಲೆಕ್ಟರ್ ಅಲೆಕ್ಸಾಂಡರ್ ರೀಡ್ ಗುರುತಿಸಿದಂತೆ ಕೆನರಾದ ಈ ಕೃಷಿ ಸಮುದಾಯಗಳ ವಸಾಹತುಶಾಹಿಯ ವಿರುದ್ಧ ಒಂದುಗೂಡುವಿಕೆಯು ಅಂದಿನ ಆರ್ಥಿಕ ಕುಸಿತ, ಅಕ್ಕಿಯ ಬೆಲೆ ಇಳಿಕೆ, ಅವರ ಬಗೆಗಿನ ಅಧಿಕಾರಿಗಳ ಔದಾಸೀನ್ಯದಿಂದಾಗಿವೆ ಎಂಬ ಅಭಿಪ್ರಾಯವಾದರೂ ವಾಸ್ತವವಾಗಿ ತುಳುನಾಡಿನ ವಸಾಹತುಪೂರ್ವದ ಕಂದಾಯ ವಸೂಲಿಯ ಕೆಲಸ ಮಾಡುತ್ತಿದ್ದ ಏಜೆನ್ಸಿಗಳು ಹಾಗೂ ಪಾರಂಪರಿಕ ಅಧಿಕಾರೀ ವ್ಯವಸ್ಥೆಗಳು ವಸಾಹತುಶಾಹಿ ವ್ಯವಸ್ಥೆಯಲ್ಲಿ ಅಧಿಕಾರ, ಆರ್ಥಿಕ ದುಸ್ಥಿತಿ ಸ್ವಾತಂತ್ರ್ಯ ಹಾಗೂ ವಾರಸ ಹಕ್ಕುಗಳನ್ನು ಕಳೆದುಕೊಂಡಿರುವುದೇ ಆಗಿದೆ.[19] ವಸಾಹತುಶಾಹಿಗಳ ನಗದು ರೂಪದಲ್ಲಿ ಹೆಚ್ಚಿದ ಕಂದಾಯದ ತಗಾದೆ, ಅದರ ನಿಷ್ಕರುಣ ಹಾಗೂ ಶೋಷಣಾತ್ಮಕ ಮಾರ್ಗದ ಸಂಗ್ರಹಗಳು ಕೃಷಿಅಧಿಕಾರದ ಸಮುದಾಯಗಳಿಗೆ ಅಧಿಕ ಅರ್ಥಿಕ ಕಷ್ಟ-ನಷ್ಟಗಳನ್ನುಂಟು ಮಾಡಿದುದರಿಂದ ಅದರ ವಿರುದ್ಧ ದಂಗೆಗಳು ಪ್ರಾರಂಭಗೊಳ್ಳಲು ಕಾರಣವಾಯಿತು.[20] ಉದಾಃ ತುಳುನಾಡಿನ ಕೂಟ ದಂಗೆಯು ತುಳುನಾಡಿನ ದಕ್ಷಿಣಭಾಗದ ಬೇಕಲದಿಂದ ಪ್ರಾರಂಭವಾಗಿ ಕುಂದಾಪುರದ ವರೆಗೆ ಹಬ್ಬಿತ್ತು ಎಂದಾದರೆ ಸಾಂಪ್ರದಾಯಿಕ ರಾಜಕೀಯ ಶಕ್ತಿಗಳು ಅಧಿಕಾರವನ್ನು ಕಳೆದುಕೊಂಡಿರುವುದರಿಂದ ವಸಾಹತುಷಾಹಿಯ ವಿರುದ್ಧ ಸಮಯ ಸಾಧಿಸಿ ಕಾರ್ಯಾಚರಣೆಗಿಳಿದವೆಂದು ಅರ್ಥೈಸಿಕೊಳ್ಳಬೇಕಾಗುತ್ತದೆ.

ತುಳುನಾಡಿನ ಕೂಟದಂಗೆಯ ಅಧ್ಯಯನ ಮಾಡಿದ ಜಾನ್‌ಸ್ಟ್ರೋಕ್ಸ್ ಬ್ರಿಟಿಷ್ ಆಡಳಿತದ ಪರವಾಗಿ ಅಭಿಪ್ರಾಯ ವ್ಯಕ್ತಪಡಿಸುತ್ತಾ ಕೂಟ ರಚನೆಯ ವ್ಯವಸ್ಥೆಯು ವಸಾಹತುಶಾಹಿಯ ಪೂರ್ವದಲ್ಲಿಯೇ ಚಾಲ್ತಿಯಲ್ಲಿತ್ತು ಎಂದು ಹೇಳಿದ್ದಾರೆ. ಕೂಟಗಳನ್ನು ಸಂಘಟಿಸಲು ವಸಾಹತುಪೂರ್ವದ ಕೃಷಿಅಧಿಕಾರ ಹೊಂದಿದ್ದ ತುಳುನಾಡಿನ ರೈತರು ಪ್ರತಿಯೊಂದು ಗ್ರಾಮದಲ್ಲಿ ಒಬ್ಬ ಪಟೇಲ ಮತ್ತು ಎರಡು ರೈತ ಮುಖ್ಯಸ್ಥರನ್ನು ನೇಮಕಗೊಳಿಸುತ್ತಿದ್ದರು. ಮಾಗಣೆಗಳಿಗೆ ಪ್ರತ್ಯೇಕ ಮುಖ್ಯಸ್ಥರನ್ನು ನೇಮಕ ಮಾಡಲಾಗುತ್ತಿತ್ತು. ಇವರ ನಡುವೆ ಸರಿಯಾದ ಸಂಪರ್ಕ ಸಂಬಂಧಗಳಿದ್ದು, ಕದ್ರಿಯ ಮಹಾಕೂಟದಲ್ಲಿ ಇದು ಅಂತಿಮ ರೂಪ ಪಡೆದುಕೊಳ್ಳುತ್ತಿತ್ತು. ಅಂದೋಲನದ ಚಿಂತನ ವೇದಿಕೆಯಾಗಿ ಗುಪ್ತ ಸಮಿತಿಯಿದ್ದು ಅದು ರಣನೀತಿಯನ್ನು ನಿರ್ಧರಿಸುತ್ತಿದ್ದಲ್ಲದೇ ಭಾಗವಹಿಸಿದವರಿಗೆ ಸೂಕ್ತ ಮಾಹಿತಿ ನೀಡುತ್ತಿತ್ತು. ಗ್ರಾಮದ ಪರಂಪರಾಗತ ಮುಂದಾಳುಗಳಾದ ಪಟೇಲರು ರೈತರ ಸಂಕಟಗಳನ್ನು ಅಭಿವ್ಯಕ್ತಗೊಳಿಸುವಲ್ಲಿ ನಾಯಕತ್ವ ವಹಿಸಿದ್ದರು. ಇದು ಪಟೇಲರ ಆಸಕ್ತಿಗಳು ಅಂತಿಮವಾಗಿ ರೈತರ ಆಸಕ್ತಿಗಳನ್ನು ಹೊಂದಿಕೊಂಡಿದ್ದವು ಎಂಬುವುದನ್ನು ತೋರಿಸುತ್ತಿತ್ತು. ಪಟೇಲರು

ಪರಂಪರಾಗತ ಕೃಷಿಕರು ಹಾಗೂ ಸರಕಾರದ ನಡುವಿನ ಸ್ವೀಕೃತ ಮಧ್ಯಸ್ಥರಾಗಿರುವುದರಿಂದ ಕೃಷಿ ಸಮಾಜದಲ್ಲಿ ನಾಯಕತ್ವದ ಸ್ಥಾನವನ್ನು ಪಡೆದಿದ್ದರು. ಹಾಗಾಗಿ ಪಟೇಲರು ರೈತರ ವಕ್ತಾರರಾಗಿ ಕೆಲಸ ಮಾಡಲು ಅವಕಾಶವಾಗುತ್ತಿತ್ತು.[21] ಹೀಗೆ ವಸಾಹತುಶಾಹಿಯ ಪ್ರವೇಶ ಮತ್ತು ಅದರ ಕಾರ್ಯಾಚರಣೆಯಿಂದಾಗಿ ವಸಾಹತಿನ ಪಾರಂಪರಿಕ ಶಕ್ತಿಗಳು ತಮ್ಮ ವಾರಸಾ ಅಧಿಕಾರ ಕಳೆದುಕೊಂಡು ಸಂಘರ್ಷದ ವಾತಾವರಣವನ್ನು ನಿರ್ಮಿಸುವ ಮೂಲಕ ಬಲವಾದ ವಿರೋಧವನ್ನು ವ್ಯಕ್ತಪಡಿಸಿದ್ದವು. ಇದಲ್ಲದೇ ವಸಾಹತುಶಾಹಿ ಎಲ್ಲವನ್ನು ವಸಾಹತುವಾಗಿ ಪರಿಗಣಿಸಿದ್ದರಿಂದ ಪಾಳೆಯಗಾರರ ಮತ್ತು ರೈತರ ದಂಗೆಗಳಾದವು.[22] ಕಲ್ಯಾಣಪ್ಪನ ಕಾಟಕಾಯಿಯನ್ನು ಹಳೆಯ ರಾಜಕೀಯ ವಾರಸುದಾರಿಕೆಯ ಪುನರ್‌ಸ್ಥಾಪನೆಯ ಅಂದೋಲನ, ಇಲ್ಲವೇ ಮದ್ಯವರ್ತಿಗಳ ವಿರುದ್ಧದ ಅಂದೋಲನ ಎನ್ನಬಹುದು. ಉದಾಃ ಹಾಲೇರಿ ಕುಟುಂಬಸ್ತರನ್ನು ಪುನರ್‌ಸ್ಥಾಪಿಸುವಲ್ಲಿ ಕೊಡಗರು ಅಂದೋಲನ ನಡೆಸಿದರೆ, ಸುಳ್ಯ ಮತ್ತು ಪುತ್ತೂರುಗಳಲ್ಲಿ ಬಂಟ್ವಾಳದ ಕೊಂಕಣಿಗರ, ಹಾಗೂ ವಸಾಹತುಷಾಹೀ ಆಡಳಿತದ ಆರ್ಥಿಕ ಶೋಷಣೆಯ ವಿರುದ್ಧದ ಅಂದೋಲನ ಎಂದು ವಾದಿಸಬಹುದು. ತುಳುನಾಡಿನಲ್ಲಿ ಸಣ್ಣ ಮಟ್ಟದ ತೆರಿಗೆ ನೀಡುವ ಹಿಡುವಳಿದಾರರನ್ನು ಸಮಾಧಾನ ಪಡಿಸುವ ಕೆಲಸ ಆರಂಭಿಕ ಹಂತಗಳಲ್ಲಿ ಅನಿವಾರ್ಯವಾಗಿತ್ತು. ಇದು ಯಾವುದೇ ನಿಶ್ಚಿತ ತತ್ವಗಳನ್ನು ಆಧರಿಸಿರದೇ ಸಾಂದರ್ಭಿಕ ಅನುಕೂಲಗಳ ಮೇಲೆ ರೂಪಿತಗೊಂಡಿತ್ತು. ಪರಂಪರಾಗತ ಗ್ರಾಮಗಣ್ಯತೆ ತನ್ನದೇ ಆದ ಬಿಗುವು ಮತ್ತು ಪ್ರೇರಕ ಶಕ್ತಿಗಳನ್ನು ಹೊಂದಿದ್ದರಿಂದ ಗ್ರಾಮೀಣ ನಾಯಕತ್ವವೂ ಅಲ್ಲಿಯ ವಾಸ್ತವದಿಂದ ಸುಲಭವಾಗಿ ದೂರ ಸರಿಯುವಂತಿರಲಿಲ್ಲ. ಗ್ರಾಮ ಮತ್ತು ಹೋಬಳಿ ಮಟ್ಟಗಳಲ್ಲಿ ಆಡಳಿತ ನಡೆಸಲು ಇಲ್ಲಿನ ನೆಲ, ಜನ ಮತ್ತು ಜೀವನಕ್ರಮ ತಿಳಿದ ಸ್ಥಳೀಯ ವ್ಯಕ್ತಿಗಳ ಅಗತ್ಯವಿತ್ತು.[23] ಇದು ವಿದೇಶಿ ಆಡಳಿತಕ್ಕೆ ಒಂದು ನಿರಂತರತೆ ಮತ್ತು ಯಥಾರ್ಥತೆಯ ನೆಲೆಯನ್ನು ಕೊಡಬಲ್ಲುದಾಗಿತ್ತು. ಈ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡ ವಸಾಹತುಶಾಹಿಗಳು ಅದರಲ್ಲಿ ಯಶಕಂಡಿದ್ದರಿಂದ ವಸಾಹತುಪೂರ್ವದ ಪಾರಂಪರಿಕ ರಾಜಕೀಯ ವಾರಸುದಾರಿಕೆಯು ವಸಾಹತುಶಾಹಿ ವ್ಯವಸ್ಥೆಯಲ್ಲಿ ಕೇವಲ ಉತ್ಸವ ಅಥವಾ ನಾಮಮಾತ್ರಕ್ಕೆ ಸೀಮಿತಗೊಂಡು ನೈಜ ಅಧಿಕಾರವನ್ನು ಕಳೆದುಕೊಂಡಿತು.[24] ಧಾರ್ಮಿಕ ವಾರಸ ಅಧಿಕಾರವು ಕೆಲವೊಂದು ನೀತಿನಿಯಮಗಳಿಗೆ ಒಳಪಟ್ಟು ಯಥಾಸ್ಥಿತಿ ಮುಂದುವರೆಸಿದ್ದನ್ನು ಹೊರತುಪಡಿಸಿದರೆ ಉಳಿದೆಲ್ಲವೂ ವಸಾಹತುಶಾಹಿಯ ಆಜ್ಞೆಯೆದುರು ಗೌಣಗೊಂಡಿದೆ ಇಲ್ಲವೆ ಪುನರ್‌ವ್ಯಾಖ್ಯಾನಕ್ಕೆ ಒಳಗಾಗಿದೆ. ಕೃಷಿ ಅಧಿಕಾರದಲ್ಲಿ ಪಾಲುಪಡಕೊಂಡಿದ್ದ ಮೇಲ್ವರ್ಗಗಳು ಬದಲಾದ ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲು ಪ್ರಯತ್ನಿಸಿದರೆ, ಕೆಳವರ್ಗಗಳು ಆರ್ಥಿಕ ತೊಂದರೆಗಳಂತಹ ವಾತಾವರಣದಿಂದ ತಾತ್ಕಾಲಿಕ ಬಿಡುಗಡೆ ಪಡೆದರೂ

ವಸಾಹತುಶಾಹಿಯ ಬಂಡವಾಳ ನೀತಿಯಿಂದ ಇನ್ನಷ್ಟು ಶೋಷಣೆಗೆ ಒಳಪಟ್ಟವು.[25] ಬಹುತ್ವದ ನೆಲೆಯಲ್ಲಿ ರೂಪುಗೊಂಡಿದ್ದ ಸಂಸ್ಕೃತಿಯ ಅಡಿಪಾಯವನ್ನು ವಿಭಜಿಸಿದ ವಸಾಹತುಶಾಹಿ ಆಡಳಿತ ಭೌದ್ಧಿಕವಾಗಿ ಪ್ರತ್ಯೇಕ ಅಸ್ತಿತ್ವವನ್ನು ಕಲ್ಪಿಸಿತು.

ತುಳುನಾಡಿನ ಜಮೀನುದಾರಿ ಪದ್ಧತಿಯ ವಿಶ್ಲೇಷಣಾತ್ಮಕ ವಿಮರ್ಶೆ ಮತ್ತು ಅಸ್ತಿತ್ವದಲ್ಲಿದ್ದ ಯಜಮಾನತ್ವದ ಹಕ್ಕು ಮತ್ತು ಬಾಧ್ಯತೆಗಳ ಹಿನ್ನೆಲೆಯಲ್ಲಿ ಮುನ್ರೋನ ರೈತವಾರಿ ಪದ್ಧತಿಯ ಪ್ರಯೋಗಗಳು ಗ್ರಾಮೀಣ ಆರ್ಥಿಕತೆ ಮತ್ತು ಸಾಮಾಜಿಕ ನಿಯಂತ್ರಣದ ಸ್ವರೂಪವನ್ನು ಬದಲಾಯಿಸಿದವು. ಆದರೆ ಮುನ್ರೋ ತುಳುನಾಡಿನಲ್ಲಿ ಮಾಡಿದ ಐತಿಹಾಸಿಕ ಕಂದಾಯ ಪದ್ಧತಿಯ ಮರುನಿರ್ಮಿತಿಯು ಕೃತಿಮ ಎಂಬ ಅಭಿಪ್ರಾಯವೂ ಇದೆ.[26] ಮುನ್ರೋ ತನ್ನ ಆಧೀನವಿರುವ ಪ್ರಾಂತ್ಯಗಳಲ್ಲಿ ತನ್ನ ಕಂದಾಯ ನೀತಿಯನ್ನು ಸಮರ್ಥಿಸುವುದಕ್ಕಾಗಿ ಹಾಗೂ ಅದರಲ್ಲಿ ಪೂರ್ವಕಾಲದಿಂದ ಅಸ್ತಿತ್ವದಲ್ಲಿದ್ದ ಜಮೀನುದಾರರ ವಿರೋಧ ಬಾರದಂತೆ ನೋಡಿಕೊಳ್ಳುವುದು ಆತನ ಪ್ರಾಥಮಿಕ ಗುರಿಯಾಗಿತ್ತು. ಜೊತೆಗೆ ಈತನ ಮೂಲ ಉದ್ದೇಶ ಕಂಪನಿಯ ಆಳ್ವಿಕೆಯ ಪರ ಭೂಮಾಲಿಕರ ಬೆಂಬಲ ಗಳಿಸುವುದಾಗಿತ್ತು.[27] ಹೀಗೆ ವಸಾಹತುಶಾಹಿಯ ನಡೆಯನ್ನು ಅನುಷಂಗಿಕವಾಗಿ ಪರಿಶೀಲಿಸಿದಾಗ ವಸಾಹತಿನ ಮೇಲಿನ ಅಧಿಕಾರ ನ್ಯಾಯಿಕವಾಗಿ ಮತ್ತು ಆಡಳಿತಾತ್ಮಕವಾಗಿ ರೂಲ್ ಒಫ್ ಪ್ರಾಪರ್ಟಿಯಾಗಿ ಮಾರ್ಪಟ್ಟಿತ್ತು. ಹೀಗೆ ಅರ್ಥಿಕ ದೃಷ್ಟಿಯಿಂದ ವಸಾಹತುಶಾಹಿಯ ಅಧಿಕಾರದ ಪ್ರವರ್ತನೆ ವಸಾಹತನ್ನು ತಾತ್ವಿಕವಾಗಿ ಹತೋಟಿಯಲ್ಲಿಡಲು ಸಹಕರಿಸಿತ್ತಲ್ಲದೇ ಎಲ್ಲಾ ತಂತ್ರಗಾರಿಕೆಗಳು ಸಾಮ್ರಾಜ್ಯಶಾಹಿ ವಿಸ್ತರಣೆಗೆ ಅನುಕೂಲ ಮಾಡಿಕೊಡುವುದರ ಎಲ್ಲಾ ಯುಕ್ತಿಗಳು ಜೊತೆಗೆ ರಕ್ಷಾಕವಚವನ್ನು ಒದಗಿಸಿತ್ತೆಂಬುವುದು ಇತಿಹಾಸಕಾರರ ಅಭಿಪ್ರಾಯವಾಗಿದೆ.[28] 1812ರಿಂದ ಪ್ರಕಟಗೊಂಡ ಮಿಲ್ಲನ ಚರಿತ್ರೆಯಿಂದ ಪ್ರಾರಂಭಿಸಿ 1881ರ ಹಂಟರನ ಭಾರತದ ಸಾಮ್ರಾಜ್ಯದ ತನಕದ ಬೆಳವಣಿಗೆಯನ್ನು ವಿಶ್ಲೇಷಿಸಿದಾಗ ವಸಾಹತುಶಾಹಿಯ ಅಜೆಂಡಾದ ಬಗ್ಗೆ ತಿಳಿಯಬಹುದಾಗಿದೆ.

ಎಡ್ವರ್ಡ್ ಸೈದ್ ಪ್ರಕಾರ ವಸಾಹತು ವ್ಯವಸ್ಥೆಯ ಚರಿತ್ರೆಯಲ್ಲಿ ಪ್ರಜೆಗಳು ಅಥವಾ ಪ್ರತಿನಿಧಿಗಳು ಕೇವಲ ಅನುಕೂಲಸಿಂಧು ಅಸ್ತಿತ್ವವನ್ನು ಪಡೆದುಕೊಳ್ಳುತ್ತಾರೆ. ವಸಾಹತುಶಾಹಿಯ ಇತಿಹಾಸ ವಿಶ್ಲೇಷಣೆಯಲ್ಲಿ ವಸಾಹತಿನ ಪ್ರಾಚೀನ ರಾಜ ಮಹಾರಾಜರುಗಳ ಆಡಳಿತಾತ್ಮಕ ಚರಿತ್ರೆಗಳು ವಸಾಹತುಶಾಹಿಯ ಅನುಕೂಲಕ್ಕೆ ಅನುಗುಣವಾಗಿ ಸ್ಥಾನ ಪಡೆದುಕೊಳ್ಳುತ್ತಿವೆಯೇ ಹೊರತು ನೈಜ ಚಿತ್ರಣವನ್ನು ಯಥಾವತ್ತಾಗಿ ದಾಖಲಿಸುವ ಪ್ರಯತ್ನಗಳು ಮಾಡಲ್ಪಡುವುದಿಲ್ಲ. ಇದು ಅದರ ವಿಭಜನಾ ಸಿದ್ಧಾಂತದಡಿಯಲ್ಲಿ ನೆಲೆ ಭದ್ರಪಡಿಸಿಕೊಳ್ಳುವ ಸಿದ್ಧಾಂತಕ್ಕೆ ಪೂರಕವಾಗಿರುತ್ತದೆ. ವಸಾಹತಿನ ಅನುಭವಗಳು ಇಲ್ಲಿನ ನೆಲ ಮತ್ತು ಸಂಸ್ಕೃತಿಯೊಂದಿಗೆ

ಮಿಲನಗೊಂಡ ಸ್ಥಳೀಯ ಸತ್ವಕ್ಕನುಗುಣವಾಗಿ ರೂಪಿತಗೊಂಡು ಸಂಘಟಿತಗೊಂಡಿದ್ದರೇ, ಅಧುನಿಕ ಸಂದರ್ಭದ ವಸಾಹತುಶಾಹೀ ಅನುಭವ ಸ್ಥಳೀಯವಾಗಿರದ ಕಾರಣ ಈ ನೆಲವನ್ನು ಪ್ರತ್ಯೇಕತೆಯ ಸೂತ್ರದಡಿಯಲ್ಲಿ ಆಡಳಿತ ಘಟಕವನ್ನಾಗಿ ರೂಪಿಸಿತು. ವಸಾಹತುಶಾಹಿಯ ಹೊಸ ಸಾಮಾಜಿಕ, ಭೌದ್ಧಿಕ ಹಾಗೂ ಶೈಕ್ಷಣಿಕ ವ್ಯವಸ್ಥೆಗಳು ಸಾಂಸ್ಕೃತಿಕ ನೆಲೆಯ ಮೇಲೆ ಪ್ರಭಾವಿಸಿ ವಸಾಹತನ್ನು ತನ್ನದೇ ವ್ಯಾಖ್ಯಾನದ ಅಧುನಿಕತೆಯಲ್ಲಿ ಪುನರ್- ರೂಪಿಸಿಕೊಂಡಿದ್ದರಿಂದ ವಸಾಹತು ತನ್ನತನವನ್ನು ಕಳೆದುಕೊಂಡಿತು.

ವಸಾಹತುಶಾಹಿಯ ಪ್ರಭಾವದಿಂದಾಗಿ 'ಸ್ಥಳೀಯ' ಎನ್ನುವುದು ಆಸ್ತಿತ್ವ ಕಳೆದುಕೊಂಡು 'ನೂತನ ಸ್ಥಳೀಯ'ವೊಂದು ರೂಪಿತಗೊಂಡು ನಿಧಾನವಾಗಿ ಇಲ್ಲಿನ ವ್ಯವಸ್ಥೆಗಳನ್ನು ಆಕ್ರಮಿಸಿಕೊಂಡಿತು.[29] ಮಾತ್ರವಲ್ಲ ವಸಾಹತುಶಾಹಿ ಬಂಡವಾಳಶಾಹಿಯಂತೆ ಜಾಗತೀಕರಣಗೊಂಡಿತು. ಮುದ್ರಣ ಯಜಮಾನಿಕೆ ವಸಾಹತುಶಾಹೀ ಪ್ರಭುತ್ವ ತಾನು ಪ್ರಾರಂಭಿಸಿದ ಶೈಕ್ಷಣಿಕ ಸಂಸ್ಥೆಗಳಲ್ಲಿ ಪಶ್ಚಿಮದ ಜ್ಞಾನಪ್ರಸಾರವನ್ನು ಉಪಕರಣವಾಗಿಟ್ಟುಕೊಂಡು ವಸಾಹತನ್ನು ಪುನರ್‌ನಿರ್ಮಾಣ ಮಾಡುವ ಕಾರ್ಯಯೋಜನೆಗಳನ್ನು ರೂಪಿಸಿರುವುದು ಮುಖ್ಯ. ವಸಾಹತುಶಾಹಿಯ ಆಳ್ವಿಕೆ ಮತ್ತು ಅದಕ್ಕನುಗುಣವಾಗಿ ಕಾಯಿದೆಗಳು ನಿಶ್ಚಿತ ಕಂದಾಯ ಮತ್ತು ಪೋಲಿಸ್ ನಿಯಂತ್ರಣಕ್ಕೆ ಹೆಚ್ಚಿನ ಆಧ್ಯತೆ ನೀಡಿದವು. ಅದಾಗ್ಯೂ ಕಂಪನಿ ಸರಕಾರದ ಚಾರ್ಟರ್ ಕಾಯ್ದೆಗಳು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರದ ಏಕಸ್ವಾಮ್ಯವನ್ನು ಕೊನೆಗೊಳಿಸುವುದರೊಂದಿಗೆ ವಸಾಹತುಶಾಹಿಗಳಿಗೆ ಆರ್ಥಿಕವಾಗಿ ಲಾಭ ಗಳಿಸಲು ಅವಕಾಶವನ್ನು ಕಲ್ಪಿಸಿತು. ವಸಾಹತುಶಾಹಿ ಸರ್ಕಾರವೇ ಸ್ಥಳೀಯ ಆಡಳಿತದ ನಾಯಕತ್ವವನ್ನು ವಹಿಸಿಕೊಂಡಿದ್ದರಿಂದ ಸಾಮಾಜಿಕ ಮತ್ತು ಧಾರ್ಮಿಕ ನೆಲೆಯಲ್ಲಿ ಮಿಷನರಿಗಳಿಗೆ ಸಮಾಜ ಸೇವೆಗೆ, ವ್ಯಾಪಾರಕ್ಕೆ ಮುಕ್ತ ಅವಕಾಶಗಳು ದೊರೆಯಿತ್ತಲ್ಲದೇ ಈ ದೇಶ ವಸಾಹತುಶಾಹಿಗಳ ಆ ಉದ್ದೇಶಕ್ಕೆ ಕಾರ್ಯಕ್ಷೇತ್ರವಾಯಿತು.[30] ವಸಾಹತುಶಾಹಿಯ ಆರಂಭಿಕ ಕ್ರಿಯೆಗಳು ವಂಚನೆ, ಅವಕಾಶವಾದಿತನ ಹಾಗೂ ಒತ್ತಡದೊಂದಿಗೆ ಕೂಡಿದ್ದರೇ ರಾಜಕೀಯವಾಗಿ ಪ್ರಬಲಗೊಂಡ ನಂತರ ಬಲಪ್ರಯೋಗ, ಹಿಂಸೆ, ನ್ಯಾಯ ಹಾಗೂ ಆಜ್ಞೆಗಳೆಂಬ ಪ್ರವರ್ತನೆಗಳಿಂದ ಸಾರ್ವಭೌಮತೆ ಸ್ಥಾಪಿಸಿಕೊಂಡಿತು.[31] ಬೋರ್ಡ್ ಆಫ್ ಕಂಟ್ರೋಲ್ ಮೂಲಕ ಕಂಪನಿಯ ವ್ಯಾಪಾರ ವಹಿವಾಟುಗಳನ್ನು ನಿಯಂತ್ರಿಸಿ ಗರಿಷ್ಠ ಲಾಭದ ಸಿದ್ಧಾಂತಗಳು ರೂಪಿಸಲ್ಪಟ್ಟವು. ಇದರಿಂದಾಗಿ ವಸಾಹತು ವಸಾಹತುಶಾಹಿಯ ಉತ್ಪನ್ನದ ನೆಲೆಯಾಗಿ, ಶೋಷಣೆಗೆ ಒಳಪಟ್ಟು ಸರ್ವ ರೀತಿಯಲ್ಲಿ ಸೂರೆಗೊಂಡಿತು.[32] ಹೀಗೆ ವಸಾಹತುಶಾಹಿ, ವಸಾಹತನ್ನು ಸ್ಥಿತ್ಯಂತರಕ್ಕೆ ಒಳಪಡಿಸಿರುವುದು ಮಾತ್ರವಲ್ಲದೇ ವಸಾಹತಿನಲ್ಲಿ ಹೊಸ ಆಡಳಿತ ಮಾದರಿಯನ್ನು ಪರಿಚಯಿಸಿ, ತನ್ನ ಆರ್ಥಿಕ ಆಕಾಂಕ್ಷೆಗಳನ್ನು ಪೂರೈಸುವಲ್ಲಿ ಯಶಸ್ಸು ಪಡೆಯಿತು. ವಸಾಹತುಪೂರ್ವದಲ್ಲಿ

ಜಾಗತಿಕವಾಗಿ ಪ್ರಮುಖ ಉತ್ಪಾಧಕವಾಗಿದ್ದ ಭಾರತ, ವಸಾಹತುಶಾಹಿಗಳ ಶೋಷಣಾತ್ಮಕ ನಿಲುವಿನಿಂದ ಅವರ ಲಾಭದ ಕೇಂದ್ರವಾಗಿ ಪರಿವರ್ತನೆಗೊಂಡು ಕಚ್ಚಾ ವಸ್ತುಗಳ ಪೂರೈಕೆದಾರನಾಗುವಂತೆ ಮಾಡಿತು. ಹೀಗೆ ಕೃಷಿ ಪ್ರಧಾನವಾಗಿದ್ದ ಭಾರತ ನಂತರದಲ್ಲಿ ಕೈಗಾರಿಕ ಇಂಗ್ಲೆಂಡಿನ ಆರ್ಥಿಕ ವಸಾಹತಾಗಿ ಮಾರ್ಪಡಾಗುವ ಮೂಲಕ ತನ್ನ ಅರ್ಥವ್ಯವಸ್ಥೆಯನ್ನು ವಿಘಟನೆಗೊಳಿಸಿತು.

## ---ಕೊನೆಟಿಪ್ಪಣಿ---

[1] ತುಳುನಾಡಿನ ಸಂದರ್ಭದಲ್ಲಿ ಬೀಡುಗಳು ಮತ್ತು ಗುತ್ತುಗಳು ಅಧಿಕಾರವನ್ನು ನಿರ್ವಹಿಸಿರುವ ಬಗೆಗಳು.

[2] ಪೊಳಲಿ ಶೀನಪ್ಪ ಹೆಗ್ಡೆ, ದ.ಕ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು, ಉಡುಪಿ, 1919, ದ್ವಿತೀಯ ಮುದ್ರಣ 1981. ಪುಟಗಳು 139–1915. ಗಣಪತಿರಾವ್ ಐಗಳ್ ಎಂ, ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಬಂಟ್ವಾಳ, ಮೊದಲ ಮುದ್ರಣ 1923, ಪುಟ 439.

[3] ಕಾರ್ಯಕ್ಷೇತ್ರದಲ್ಲಿ ಪಡೆದ ಮಾಹಿತಿ ಕಣಂತೂರು ತೋಡಕುಕ್ಕಿನಾರ್ ದೈವಸ್ಥಾನದ ಉಂಬಳಿ ನೀಡುವ ಪದ್ಧತಿ–ಇಲ್ಲವೆ ಸಾಮುದಾಯಿಕ ನೆಲೆಯಲ್ಲಿ ದೈವದ ಪರಿಧಿಯೊಳಗೆ ಗ್ರಾಮದ ಅಜಲು ಸೇವೆಗಳಿಗೆ ಒಳಪಡುವ ಸಮುದಾಯಗಳು ಭೂಮಿಯ ಸಾಮುದಾಯಿಕ ಒಡೆತನ ಪಡೆಯುವ ವಿಧಾನಗಳು. ಒಟ್ಟು ಉತ್ಪನ್ನದಲ್ಲಿ ತಮ್ಮ ಜೀವನ ನಿರ್ವಹಣೆಗೆ ಪಡೆಯುವ ಹಿಸ್ಸೆಗಳ ಪರಿಪಾಠ ತುಳುನಾಡಿನಲ್ಲಿ ಚಾಲ್ತಿಯಲ್ಲಿತ್ತು. ತುಳುನಾಡಿನಲ್ಲಿ ಪಡಿ ಅಕ್ಕಿ ಸಂದಾಯ ಮಾಡುವ ಕ್ರಮ. ಕೊಂಡಾಣ ಶ್ರೀ ಕ್ಷೇತ್ರ ಮಡ್ಯಾರ್‌ಗೆ ಸೋಮೇಶ್ವರ, ಕೋಟೆಕಾರ್, ಕಿನ್ಯಾ (ಮಂಗಳೂರು ತಾಲೂಕು) ಮುಂತಾದ ಪ್ರದೇಶಗಳ ಜನ ವಾರ್ಷಿಕವಾಗಿ ಮುಷ್ಟಿ ಅಕ್ಕಿ ಇಲ್ಲವೇ ತಮ್ಮಲ್ಲಿರುವ ಫಲವಸ್ತುಗಳನ್ನು ಸಾಮುದಾಯಿಕ ಒಡೆತನದ ಬದಲಾಗಿ ನೀಡುವ ಪರಿಪಾಠ ಮುಂದುವರೆಸಿಕೊಂಡು ಬಂದಿರುವುದು.

[4] ದೇವಿಪ್ರಸಾದ ಚಟ್ಟೋಪಾದ್ಯಾಯ, ಸಂಗ್ರಹಾನುವಾದ ಜಿ ರಾಮಕೃಷ್ಣ, ಬೆಂಗಳೂರು 2011, ಲೋಕಾಯತ ಪುಟಗಳು 139–141.

[5] ಮೋಹನಕೃಷ್ಣ ರೈ,ಕೆ, ತುಳುನಾಡು ಕನ್ನಡನುಡಿ, ಪ್ರಸರಾಂಗ, ಕ.ವಿ.ವಿ ಹಂಪಿ ಪುಟ 261.

[6] ದೇವಿಪ್ರಸಾದ ಚಟ್ಟೋಪಾದ್ಯಾಯ, ಸಂಗ್ರಹಾನುವಾದ ಜಿ ರಾಮಕೃಷ್ಣ, ಬೆಂಗಳೂರು 2011, ಲೋಕಾಯತ ಪುಟ 143.

[7] ಬಿಪನ್ ಚಂದ್ರ, ಅಧುನಿಕ ಭಾರತದ ಇತಿಹಾಸ, ಅನುವಾದಿತ ಗ್ರಂಥ ಎಚ್.ಎಸ್ ಗೋಪಾಲರಾವ್, 2012, ಬೆಂಗಳೂರು ನವಕರ್ನಾಟಕ ಪಬ್ಲಿಕೇಷನ್ಸ್ ಪುಟಗಳು 119–120.

[8] ಅಮೃತ ಸೋಮೇಶ್ವರ, ಅಬ್ಬಕ್ಕ ಸಂಕಥನ, ಸಂಪಾದನ ಗ್ರಂಥ 2011, ಪುಟಗಳು 272–282: ಎಸ್ ಚಂದ್ರಶೇಖರ, ದಕ್ಷಿಣಭಾರತ–ವಸಾಹತುಶಾಹಿ ರಾಷ್ಟ್ರಿಯತೆ ಮತ್ತು ಸಂಘರ್ಷ, ಹಂಪಿ. ವಿ.ವಿ 2000: ಪುಟ 20.

[9] ಡಿ.ಆರ್ ನಾಗರಾಜ್ ಸಂಸ್ಕೃತಿ ಕಥನ, ಮೆಕಾಲೆಯ ಮಕ್ಕಳು ಪುಟ 77; ಗಿರೀಶ ಭಟ್, ಅಧುನಿಕತೆಯ ವ್ಯಾಖ್ಯಾನ–ಡಿ.ಆರ್ ಮಾದರಿ ಅಪ್ರಕಟಿತ ಸಂಶೋಧನಾ ಪ್ರಬಂಧ, 2005. ಮಂ. ವಿ.ವಿ, ಪುಟ 76.

[10] ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ ವಿ.ಬಿ ಅರ್ತಿಕಜೆ, ಪುಟಗಳು 51–52.

[11] ಅಲೌಕಿಕ ಶಕ್ತಿಗಳ ಹೆಸರಿನಲ್ಲಿ ಲೌಕಿಕ ಅಧಿಕಾರವನ್ನು ಪಡೆಯುವ ತಂತ್ರಗಾರಿಕೆ, ಸಮಾಜದ ಎಲ್ಲಾ ಜಾತಿಯ ಜನರು ಭಾಗವಹಿಸಬೇಕೆಂಬ ಅಲಿಖಿತ ನಿಯಮ, ಜಾತಿಗೆ ತಕ್ಕಂತೆ ಕೆಲಸ ಸಾಮಾಜಿಕ ಅಂತರಗಳನ್ನು ಜೀವಂತವಾಗಿಡುವ ಪ್ರಯತ್ನ

[12] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 198.

[13] ವಿಟ್ಲ, ನೀಲೇಶ್ವರ, ಕುಂಬಳೆ ಮುಂತಾದ ಸಾಮಂತರಸರು.

[14] ಹತ್ತೊಂಬತನೆಯ ಶತಮಾನದ ಮೊದಲ ಮೂರು ದಶಕಗಳು ರೈತರ ಅಸಮದಾನದ ಎರಡು ಸ್ಫೋಟಗಳನ್ನು ಎದುರಿಸಬೇಕಾಯಿತು. ತುಳುನಾಡಿನ ಒಳಉಳಿಗ ಪಾರಂಪರಿಕ ಅಧಿಕಾರ ಕಳೆದುಕೊಂಡ ಪರಿಣಾಮವಾಗಿ 1810–11ರಲ್ಲಿ ಮತ್ತು 1830–31ರಲ್ಲಿ ವ್ಯಾಪಕ ರೈತ ಅತೃಪ್ತಿ ಮತ್ತು ದಂಗೆಗಳು ಪ್ರಾರಂಭಗೊಂಡವು.

[15] ಶ್ಯಾಮ್‌ಭಟ್ ಎನ್, ಸೌತ್ ಕೆನರಾ, ಪುಟ–175. ವಿಟ್ಲ, ಕುಂಬಳೆ, ನೀಲೇಶ್ವರ, ಪತ್ತುಮುಡಿ ಸುಬ್ಬಾರಾವ್, ಕಲ್ಯಾಣಪ್ಪನ ಕಾಟಕಾಯಿ, ಕೂಟದಂಗೆಗಳು ಮುಖ್ಯವಾದವುಗಳು. ಸುರೇಂದ್ರರಾವ್‌ರವರ ಪ್ರಕಾರ ವಸಾಹತುಶಾಹಿ ಅಧಿಕಾರ, ಪಾರಂಪರಿಕ ಅಧಿಕಾರ ಮತ್ತು ಅರ್ಥವ್ಯವಸ್ಥೆಗೆ ಒಡ್ಡಿದ ಸವಾಲಾಗಿ ವಸಾಹತುಶಾಹಿಯ ವಿರುದ್ಧ ಸಹಜವಾಗಿ ದಂಗೆ ಎದ್ದವು.

[16] ಶ್ಯಾಮ್‌ಭಟ್ ಎನ್, ಸೌತ್‌ಕೆನರಾ, ಪುಟ 152. 1830–32ರ ಕೂಟ ಬಂಡಾಯ ಬೇಕಲ, ಕಾಸರಗೋಡು, ಮೊಗ್ರಾಲ್, ಕುಂಬಳೆ, ವಿಟ್ಲ, ಮಂಜೇಶ್ವರ, ಬಂಗ್ರ ಮಂಜೇಶ್ವರ, ವರ್ಕಾಡಿ, ತಲಪಾಡಿ, ಉಪ್ಪಿನಂಗಡಿ, ಬಂಟ್ವಾಳ, ವಾಮಂಜೂರು, ಕದ್ರಿ, ಮಳಲಿ, ಮುಲ್ಕಿ, ಉದ್ಯಾವರಗಳಲ್ಲಿನ ರೈತರು ಭಾಗವಹಿಸಿದರು. ಬೇಕಲದ ಎಂಟು ಮಾಗಣೆಗಳಲ್ಲಿ ಪ್ರಾರಂಭವಾದ ಕೂಟ ದಂಗೆ ಕುಂದಾಪುರದ ವರೆಗೂ ವಿಸ್ತರಿಸಿತ್ತು. ಪುಟ 152.

[17] ಶ್ಯಾಮ್‌ಭಟ್ ಎನ್, ಸೌತ್‌ಕೆನರಾ, ಪುಟ 138–142, ರೈತ ದಂಗೆಗಳ ಬಗ್ಗೆ ಚರಿತ್ರಕಾರರು ಅವುಗಳ ಗುರಿ, ಉದ್ದೇಶ, ಚಿಂತನೆಗಳನ್ನು ಆಧರಿಸಿ ಆರು ವಿಧದ ದಂಗೆಗಳ ಸ್ವರೂಪಗಳನ್ನು ಅಧ್ಯಯನ ಮಾಡಿದ್ದಾರೆ. ತುಳುನಾಡಿನ ಆರಂಭಿಕ ದಂಗೆಗಳು ರಾಜಕೀಯ ಪ್ರೇರಿತವಾದವುಗಳು. ಪಾರಂಪರಿಕ ಅಧಿಕಾರಗಳನ್ನು

ಪುನರ್ ಸ್ಥಾಪನೆ ಮಾಡುವ ಉದ್ದೇಶವನ್ನು ಒಳಗೊಂಡಿತ್ತು. ನಂತರದ ಅಂದೋಲನಗಳು ವಸಾಹತುಶಾಹಿ ಕಡತಗಳ ಪ್ರಕಾರ ದಂಗೆಯ ಸ್ವರೂಪ ಚರ್ಚಿತವಾಗಿಲ್ಲ. ಸರಕಾರಕ್ಕೆ ವಾರ್ಷಿಕ ಕಿಸ್ತು ಕಟ್ಟುವ ವಿಚಾರದಲ್ಲಿ ದಂಗೆ ಪ್ರಾರಂಭಗೊಂಡಿದೆ. ದಂಗೆಯ ಬಗ್ಗೆ ಅಲೆಕ್ಸಾಂಡರ್ ರೀಡ್ ಆರು ವಿಚಾರಗಳನ್ನು ಮುಂದಿಡುತ್ತಾನೆ. ಅವುಗಳಲ್ಲಿ ಕಂದಾಯ ವಸೂಲಿ ಮಾಡುವ ಹೊಸ ವ್ಯವಸ್ಥೆ, ಕಂದಾಯ ತಗಾದೆ, ಉಪ್ಪು, ಹೊಗೆಸೊಪ್ಪು ಏಕಸ್ವಾಮ್ಯದ ಬಗ್ಗೆ, ಹೊಸ ಕಾನೂನು ಕಛೇರಿಗಳ, ಸ್ಟಾಂಪು, ಅಬಕಾರಿ ಸುಂಕಗಳ ವಿರುದ್ಧವಾಗಿತ್ತು ಎನ್ನಲಾಗಿದೆ.

18 ಶ್ಯಾಮ್‌ಭಟ್ ಎನ್, ಸೌತ್‌ಕೆನರಾ, ಪುಟ 145–148. 1830–31ರ ಅಂದೋಲನ ಕೂಟ ದಂಗೆಗಳೆಂದು ಪ್ರಾಮುಖ್ಯತೆಯನ್ನು ಪಡೆದಿದೆ. ಕೂಟ ದಂಗೆಯ ಕಾರಣಗಳನ್ನು ಹೀಗೆ ವಿವರಿಸಲಾಗಿದೆ. 1830ರ ವಸಾಹತುಶಾಹಿಯ ಗೊತ್ತು ಗುರಿಯಿಲ್ಲದ ಜಮಾಬಂದಿ, ರೈತರ ಬೆಳೆಗಳಿಗೆ ಬೆಂಬಲ ಬೆಲೆ ಇಲ್ಲದಿರುವುದು. ಬೆಳೆ ನಾಶ, ಹೆಚ್ಚುವರಿ ಕಂದಾಯ. 1827ರಿಂದ 1830ರ ವರೆಗಿನ ಆರ್ಥಿಕ ಮುಗ್ಗಟ್ಟು ಕೂಟದಂಗೆಗಳಿಗೆ ಕಾರಣವೆಂಬ ವಿಚಾರದ ಬಗ್ಗೆ ಪಿ.ಜೆ ಥಾಮಸ್ ವಿಸ್ತೃತವಾಗಿ ಅಧ್ಯಯನಿಸಿದ್ದಾರೆ.

19 ಪ್ರೋಸಿಡಿಂಗ್ಸ್ ಒಫ್ ದ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ವಿ.ನಂ 533 ಪುಟ 261.

20 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಪುಟ–197.

21 ಶ್ಯಾಮ್‌ಭಟ್ ಎನ್, ಸೌತ್ ಕೆನರಾ, ಪುಟ 153–156.

22 ಶ್ಯಾಮ್‌ಭಟ್ ಎನ್, ಸೌತ್‌ಕೆನರಾ, ಪುಟ 165–184.

23 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡ ಅವೃತ್ತಿ, ವಿ.ಬಿ ಅರ್ತಿಕಜೆ ಪುಟ 198.

24 ತುಳುನಾಡಿನ ವಸಾಹತುಪೂರ್ವದ ಪಾರಂಪರಿಕ ಅಧಿಕಾರ ಇಲ್ಲವೇ ವಾರಸುದಾರಿಕೆ ರೂಪುಗೊಂಡ ವಿಧಾನಗಳನ್ನು ಈ ಪ್ರಬಂಧದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

25 ಮೋಹನಕೃಷ್ಣ ರೈ, ತುಳುನಾಡು, ಕನ್ನಡನಾಡು–ನುಡಿ.

26 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ, ವಿ.ಬಿ ಅರ್ತಿಕಜೆ ಪುಟ 196.

27 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ, ವಿ.ಬಿ ಅರ್ತಿಕಜೆ ಪುಟ 196.

28 1812ರಿಂದ ಪ್ರಕಟಗೊಂಡ ಮಿಲ್ಲನ ಚರಿತ್ರೆಯಿಂದ ಪ್ರಾರಂಭಿಸಿ 1881ರ ಹಂಟರನ ಭಾರತದ ಸಾಮ್ರಾಜ್ಯದ ತನಕದ ಬೆಳವಣಿಗೆಯನ್ನು ವಿಶ್ಲೇಷಿಸಿದಾಗ ವಸಾಹತುಶಾಹಿಯ ಅಜೆಂಡಾದ ಬಗ್ಗೆ ತಿಳಿಯಬಹುದಾಗಿದೆ.

29 ನಿತ್ಯಾನಂದ, ಅಪ್ರಕಟಿತ ಸಂಶೋಧನಾ ಪ್ರಬಂಧ ಮಂಗಳೂರು ವಿ.ವಿ, ಪುಟಗಳು 83–84.
ಉಲ್ಲೇಖ–ಪಾರ್ಥಚಟರ್ಜಿ ನೇಷನ್ ಅಂಡ್ ಇಟ್ಸ್ ಪ್ರಾಗ್ಮೆಂಟ್ಸ್. ಪುಕೋನ ಒರ್ಡರ್ ಒಫ್ ಥಿಂಗ್ಸ್ ರಚಿತವಾಗಿರುವಂತೆ ಸ್ವಾತಂತ್ರ್ಯಪೂರ್ವ, ಸ್ವಾತಂತ್ರೋತ್ತರ ಕಾಲದಲ್ಲಿ ಭಾರತೀಯರ ಬದುಕು ಯುರೋಪು ಮಾದರಿಗಳನ್ನು ಅನುಕರಿಸುತ್ತಿರುವುದು.

30 ಬಿಪನ್‌ಚಂದ್ರ, ಇಸ್ಟರಿ ಓಫ್ ಮಾಡರ್ನ್ ಇಂಡಿಯಾ, 2010, ಪುಟ 90.

31 ರಣಜಿತ್‌ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ, ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998.

32 ಶ್ಯಾಮ್ ಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್ ಕೆನರಾ 1799–1862.

## ಸಾಮಾಜಿಕ ವ್ಯವಸ್ಥೆ-ವಸಾಹತುಶಾಹಿ

ವಸಾಹತುಪೂರ್ವದ ತುಳುನಾಡಿನ ಸಾಮಾಜಿಕ ರಚನೆಯನ್ನು ಅವಲೋಕಿಸಿದಾಗ ಅದು ಅಲೆಮಾರಿ ವ್ಯವಸ್ಥೆಯಿಂದ ಆರಂಭಗೊಂಡು ಕೃಷಿ ಅಧಿಕಾರದ ವಿನ್ಯಾಸ ಉಳಿಗ, ಸಾಮಂತ ಪ್ರಭುತ್ವ, ರಾಜ ಪ್ರಭುತ್ವ ವ್ಯವಸ್ಥೆಯ ಪ್ರಭಾವ-ಹೀಗೆ ಹಲವಾರು ಹಂತಗಳನ್ನು ದಾಟಿ ಬದಲಾವಣೆಗೆ ಒಳಪಟ್ಟಿರುವ ವಿಚಾರಗಳು ಚಾರಿತ್ರಿಕ ಅಧ್ಯಯನಗಳಿಂದ ಸ್ಪಷ್ಟಗೊಂಡಿದೆ. ಇಲ್ಲಿನ ಕೃಷಿ ವ್ಯವಸ್ಥೆ ವಸಾಹತುಶಾಹಿಯ ಪ್ರಯೋಗಕ್ಕೆ ಒಳಗಾದಾಗ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ರಚನೆಗಳು ಹೇಗೆ ಮಹತ್ತರ ಬದಲಾವಣೆಗೆ ಅವಕಾಶ ಕಲ್ಪಿಸಿತ್ತೊ, ಸಾಮಾಜಿಕ ರಚನೆಗಳು ಕೂಡಾ ಅದೇ ತೆರದಲ್ಲಿ ಬದಲಾದವು. ಈ ಹಂತದಲ್ಲಿ ವಸಾಹತಿನ ಸಾಮಾಜಿಕ ಸ್ಥಳೀಯ ಗತಕಾಲದ ಚಿಂತನೆ, ಸಾಮಾಜಿಕ ಸಂಸ್ಥೆಗಳು ಹಾಗೂ ಸಾಮಾಜಿಕ ಜೀವನ ವಸಾಹತುಶಾಹಿಯ ದಾಳಿಗೊಳಪಟ್ಟು ತನ್ನ ಆಸ್ತಿತ್ವ ಕಳೆದುಕೊಂಡವು.[1] ಅವಿಭಕ್ತ ಕುಟುಂಬಗಳು ನಿಧಾನವಾಗಿ ವಿಭಕ್ತ ಕುಟುಂಬಗಳಾಗಿ ಮಾರ್ಪಾಡು ಹೊಂದುವ ಪ್ರಕ್ರಿಯೆ, ಕುಟುಂಬದ ಆಸ್ತಿಯ ವಿಂಗಡನೆ, ಭಾವನಾತ್ಮಕ ಸಮಾಜದ ಚೌಕಟ್ಟಿನಲ್ಲಾದ ಬದಲಾವಣೆ ಮುಂತಾದವುಗಳು. ಇದಕ್ಕೆ ಸಂಬಂಧಿಸಿದಂತೆ ವಸಾಹತುಶಾಹಿ ನಿರ್ದಿಷ್ಟವಾದ ಕಾರ್ಯಯೋಜನೆಗಳನ್ನು ರೂಪಿಸಿತು. ಈ ಸಂದರ್ಭದಲ್ಲಿ ವಸಾಹತಿನಿಂದ ವ್ಯಕ್ತಗೊಂಡ ವಿರೋಧ ವಸಾಹತುಶಾಹಿಗಳು ಹೊಂದಾಣಿಕೆ ನೀತಿಯೊಂದನ್ನು ರೂಪಿಸುವಂತೆ ಒತ್ತಡ ಹಾಕಿತು. ಈ ಹೊಂದಾಣಿಕೆ ಅಥವಾ ಮರುಸಂಸ್ಕರಣಾ ಪ್ರಕ್ರಿಯೆ ವಸಾಹತಿನಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನು ವಸಾಹತುಶಾಹಿಯ ಕಮರಿನೊಳಗೆ ಘನೀಕರಿಸಿ, ಅದರ ಸಾಮಾಜಿಕ ಅನನ್ಯತೆಗಳನ್ನು ವಸಾಹತಿನ ಸಮಾಜದ ಪ್ರತಿರೂಪಗಳಾಗಿಸಿ ಅದರದೇ ಆದ ಹೊಸ ಅನನ್ಯತೆಗಳನ್ನು ಸೃಷ್ಟಿಸುವಲ್ಲಿ ಯಶಸ್ಸನ್ನು ಪಡೆದುಕೊಂಡಿತು.[2]

ವಸಾಹತುಶಾಹಿಯ ಆಡಳಿತದ ಪ್ರಾರಂಭಿಕ ಘಟ್ಟದಲ್ಲಿ ಅದರ ಉದ್ದೇಶ ತುಳುನಾಡಿನ ಜನ, ಕುಲ, ಸಮುದಾಯಗಳ ಬಗ್ಗೆ ಅಭಿವೃದ್ಧಿಯ ದೃಷ್ಟಿಯಿಂದ ಆಸಕ್ತಿ ವಹಿಸುವುದಾಗಿರದೇ ಭೂಮಿಯ ಮೇಲಿನ ಕಂದಾಯ, ಇಳುವರಿಗಳ ಬಗ್ಗೆ ಮಾಹಿತಿ ಪಡೆದುಕೊಳ್ಳುವುದಾಗಿತ್ತು. ಜೊತೆಗೆ ವ್ಯಾಪಾರದಲ್ಲಿ ಲಾಭ ಗಳಿಸುವ ಇರಾದೆಯೂ ಅದಕ್ಕಿತ್ತು. ವಸಾಹತುಶಾಹಿಯ ಆರಂಭಿಕ ಉದ್ದೇಶಿತ ಕಾರ್ಯಸಾಧನೆಗಳಾದ ಸಾರ್ವಜನಿಕ ಕೆಲಸಗಳು, ರಸ್ತೆ ನಿರ್ಮಾಣ, ಮಿಲಿಟರಿ ಸಾಮಾಗ್ರಿಗಳ ರವಾನೆ, ಟೆಂಟ್ ನಿರ್ಮಾಣ, ಪ್ರವಾಸಿ ವಿದೇಶಿಯರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಮಾನವ ಸಂಪನ್ಮೂಲಗಳನ್ನು ಸಾಮಾಜಿಕ ನೆಲೆಯಲ್ಲಿ ಕ್ರೋಢಿಕರಿಸಿತು. ಹಳ್ಳಿಗಾಡಿನ ಬಡವರನ್ನು ಚಾಕರಿ ಮಾಡುವ, ಸೈನ್ಯದ ಸರಕು ಸಾಗಾಣಿಕೆ ಮುಂತಾದ ಬಹುಪಯೋಗಿ ಕೆಲಸಗಳಿಗೆ ನೇಮಿಸಿಕೊಂಡು ಯಾವುದೇ ಸಂಭಾವನೆ ಇಲ್ಲದೆ ದುಡಿಸಿಕೊಂಡಿತು. ನಿಧಾನವಾಗಿ ವಸಾಹತುಶಾಹಿಯ ಅಧಿಕಾರ ಗಟ್ಟಿಗೊಂಡಾಗ ಆಡಳಿತದ

ದೃಷ್ಟಿಯಲ್ಲಿ ಮಾನವನ ಸಂಬಂಧಗಳನ್ನು ನಿಯಂತ್ರಣದಲ್ಲಿಡುವ ಸಾಮಾಜಿಕತೆ ಹಾಗೂ ನಿಯಂತ್ರಣ ವ್ಯವಸ್ಥೆಗಳು ಸ್ಥಾಪಿತಗೊಂಡವು. ಒಟ್ಟಿನಲ್ಲಿ ಆಡಳಿತದಲ್ಲಿ ಬದಲಾವಣೆ, ಅದಕ್ಕೆ ಸರಿಹೊಂದುವ ಅಧ್ಯಯನ ವಸ್ತು, ಆಕರ ಸಂಗ್ರಹಣೆ, ಪರಂಪರೆಯ ಬಗೆಗಿನ ಸಂಶೋಧನೆ ಈ ಪ್ರದೇಶವನ್ನು ಸಾಮ್ರಾಜ್ಯಶಾಹಿಯ ಪ್ರಯೋಗಶಾಲೆಯಾಗಿ, ಸಾಮಾಜಿಕ ಮತ್ತು ಆರ್ಥಿಕ ಸುಲಿಗೆಯ ಕೇಂದ್ರವಾಗಿ ಮಾರ್ಪಾಡಿಸಿತು. ವಸಾಹತುಶಾಹಿ ಈ ಪ್ರದೇಶದ ಜನರನ್ನು ಕೋಮು, ಜಾತಿ ವರ್ಗಗಳಾಗಿ ವಿಂಗಡಿಸಿ, ಅವರಿಗಾಗಿ ಪ್ರತ್ಯೇಕ ನೀತಿಯೊಂದನ್ನು ವಿನ್ಯಾಸಗೊಳಿಸಿತು. ಅಂದರೆ ವಸಾಹತನ್ನು ವಿಭಜಿಸಿ ಆಳುವ, ಇಲ್ಲವೇ ಜನಸಮುದಾಯಗಳನ್ನು ಪರಸ್ಪರ ವಿರೋಧಿಗಳನ್ನಾಗಿಸಿ ಅಧಿಕಾರವನ್ನು ಶಾಶ್ವತವಾಗಿ ಮುಂದುವರೆಸಿಕೊಂಡು ಹೋಗುವ ಕ್ರಿಯಾಯೋಜನೆಗಳನ್ನು ರೂಪಿಸಿಕೊಂಡಿತು. ಇದಕ್ಕೆ ಅದು ನೀಡಿದ ಸಮರ್ಥನೆಯೆಂದರೆ ಇಲ್ಲಿನ ಸಾಮಾಜಿಕ ವ್ಯವಸ್ಥೆ ಜ್ಞಾನೋದಯ ಪೂರ್ವದ ಅನಾಗರೀಕ ರಚನೆಯಾಗಿತ್ತೆಂಬುದು.[3] ಉದಾಹರಣೆಗೆ ತುಳುನಾಡಿನ ದೈವಗಳ ಆರಾಧನಾ ಸಂಪ್ರದಾಯ ಅನಾಗರೀಕತೆಯ ಲಕ್ಷಣ, ಉದಾಹರಣೆಗೆ ಬೋಳಾರ ಮಾರಿಗುಡಿಯಲ್ಲಿ ಕೋಣ, ಕುರಿಗಳನ್ನು ಬಲಿ ಕೊಡುವ ದೃಶ್ಯ, ಕ್ರೈಸ್ತ ಮತಪ್ರಚಾರಕರ ಪ್ರಕಾರ ಇವು ಅನಾಗರೀಕತೆಯನ್ನು ಸ್ಫುಟಗೊಳಿಸುವ ಛಾಯಚಿತ್ರಗಳಾಗಿದ್ದರೇ, ಜಾನಪದರಿಗೆ ತಮ್ಮ ದೈವಗಳನ್ನು ಸಂಪ್ರೀತಿಗೊಳಿಸುವ ಆಚರಣೆಗಳಾಗಿತ್ತು. ಇದಕ್ಕೆ ಪೂರಕವೆಂಬಂತೆ ವಸಾಹತುಶಾಹಿ ಪ್ರಕಟಗೊಳಿಸಿದ ಗಜೆಟಿಯರ್‌ಗಳು, ಕಾಲಕಾಲಕ್ಕೆ ಹೊರಡಿಸಿದ ದಾಖಲೆಗಳಲ್ಲಿ ಈ ರೀತಿಯ ಆಚರಣೆಗಳಲ್ಲಿ ಭಾಗವಹಿಸುವ ಸ್ವಾಯತ್ತ ಮನೋಭೂಮಿಕೆಯ ಕೆಳವರ್ಗಗಳನ್ನು ನಾಗರೀಕರೆಂದು ಬಿಂಬಿಸಿ ತನ್ನ ಚಿಂತನೆಗಳನ್ನು ಒಪ್ಪದ ಹಾಗೂ ಪಾಶ್ಚಿಮಾತ್ಯ ಮೌಲ್ಯಗಳನ್ನು ಸ್ವೀಕರಿಸದ ಸಮುದಾಯಗಳೆಂದು ವ್ಯಾಖ್ಯಾನಿಸಿರುವುದು.[4]

ಪಶ್ಚಿಮದ ಉದಾರವಾದಿ ಕಲ್ಪನೆ, ಕಾನೂನು, ಆಡಳಿತದಲ್ಲಿ ಆದ ಬದಲಾವಣೆ, ಇಲ್ಲವೇ ವಸಾಹತುಶಾಹಿಯ ಅಧಿಕಾರದ ವಿನ್ಯಾಸಗಳು ತುಳುನಾಡಿನ ಸಾಮಾಜಿಕ ಜೀವನದ ಲಕ್ಷಣಗಳನ್ನು ಹಾಗೂ ಹಲವು ಸಾಂಪ್ರದಾಯಿಕ ಪದ್ಧತಿಗಳನ್ನು ಹೊಸ ಶೈಲಿಯಲ್ಲಿ ರೂಪಿಸಿದವು. ಆಳುವವರ ಪಶ್ಚಿಮದ ಚಿಂತನೆ, ಹೊಸ ಸಂದರ್ಭ ಹಾಗೂ ಹೊಸ ನುಡಿಕಟ್ಟುಗಳಲ್ಲಿ ತಮ್ಮನ್ನು ರೂಪಿಸಿಕೊಳ್ಳಲು ಶಿಕ್ಷಿತ ತುಳುನಾಡಿನ ಹೊಸ ವರ್ಗದವರು ತಮ್ಮದೇ ಸಾಂಪ್ರದಾಯಿಕ ವ್ಯವಸ್ಥೆಗಳನ್ನು ಕಟುವಾಗಿ ಟೀಕೆಗೊಳಪಡಿಸಿದರು. ಅಲ್ಲದೇ ತುಳುನಾಡಿನ ಬದಲಾಗುತ್ತಿರುವ ಸಾಮಾಜಿಕ-ಆರ್ಥಿಕ ದೃಶ್ಯಾವಳಿಗಳು ತನ್ನೊಂದಿಗೆ ಮಾತುಕತೆ ನಡೆಸಲು ಒಂದು ಧೋರಣೆಯನ್ನು, ಹಳೆಯ ವಿನ್ಯಾಸಗಳನ್ನು ಹೊಸ ಬೇಡಿಕೆಗಳಿಗೆ ಹೊಂದಿಸುವ ಅಥವಾ ಕಾಲಭಾಧಿತ ವಿನ್ಯಾಸಗಳನ್ನು ಅಂಶಿಕವಾಗಿ ಅಥವಾ ಪೂರ್ತಿಯಾಗಿ

ತಿರಸ್ಕರಿಸುವ ರಣನೀತಿಯನ್ನು ಆಗ್ರಹಿಸಿತು. ಅಧಿಕಾರವನ್ನು ಪಡೆದುಕೊಳ್ಳುವಲ್ಲಿನ ವಸಾಹತುಶಾಹಿಯ ಪ್ರಯತ್ನ, ಒತ್ತಡ, ಬಲಪ್ರಯೋಗ, ಆಕ್ರಮಣದಂತಹ ತಂತ್ರಗಳು ವಸಾಹತಿನ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಸಹಭಾಗಿಯಾಯಿತು.[5] ಹೀಗೆ ವಸಾಹತುಶಾಹಿ ಇಲ್ಲಿನ ಸಾಮಾಜಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿ ತನ್ನದೇ ವಿನ್ಯಾಸದ ಬದಲಾವಣೆಗಳನ್ನು ತುರುಕಿತು. ವಸಾಹತು ಆಡಳಿತದ ತನಿಖಾತ್ಮಕ ಕಾರ್ಯನಿರ್ವಹಣ ಪದ್ಧತಿ ವಸಾಹತು, ಮತ್ತದರ ಜನರ ವಿಷಯೀಕರಣಕ್ಕೆ ಎಡೆಮಾಡಿ ವಸಾಹತುಶಾಹಿಯ ವಿಶಾಲಾಭಿವ್ಯಕ್ತಿಯ ಒಂದು ಮುಖವಾಗಿ ಪರಿವರ್ತಿತವಾಯಿತು. ಇದು ತುಳುನಾಡಿನ ವಿಭಿನ್ನ ಸಾಮಾಜಿಕ ಮತ್ತು ಜಾತಿ ಗುಂಪುಗಳಲ್ಲಿ ಒಂದು ಬಗೆಯ ಪ್ರಜ್ಞೆ ಮೂಡಲು ಕಾರಣವಾಯಿತು. ಆಧುನಿಕ ಶಿಕ್ಷಣ, ಪಶ್ಚಿಮದ ಸ್ವೇಚ್ಛಾ ಸಾಮಾಜಿಕ ಚಿಂತನೆ, ಮತಪ್ರಚಾರಕರ ಸಮಾಜಸೇವೆ, ಉದಾರವಾದಿ ಚಿಂತನೆಗಳು ತುಳುನಾಡಿನ ಕುಟುಂಬ ಮತ್ತು ಉತ್ತರಾಧಿಕಾರಕ್ಕೆ ಸಂಬಂಧಿಸಿದ ವಿಚಾರಗಳು ಸ್ಥಿತ್ಯಂತರಕ್ಕೆ ಒಳಗಾಗಿ ಸಾಮಾಜಿಕ ವಾರಸುದಾರಿಕಾ ಪರಿಕಲ್ಪನೆಗೆ ನೂತನ ಚೌಕಟ್ಟನ್ನು ಒದಗಿಸಿಕೊಟ್ಟಿತ್ತು. ಆ ಚೌಕಟ್ಟುಗಳು ವಸಾಹತುಶಾಹೀ ಸೃಷ್ಟಿಸಿದ ಜಾತೀಯ ಮಾನದಂಡಗಳಲ್ಲಿ ಈ ರೀತಿಯಲ್ಲಿ ಪ್ರತಿಫಲನಗೊಂಡಿತು.

### ಜಾತೀಯ ಮಾನದಂಡಗಳು-ವಸಾಹತುಶಾಹಿ

ವಸಾಹತುಶಾಹಿಯ ಆರಂಭಿಕ ಸರ್ವೇಕ್ಷಣೆಯಲ್ಲಿ ಕೃಷಿ ಭೂಕಂದಾಯದ ವಿಸ್ತೃತ ಮಾಹಿತಿ, ನೈಸರ್ಗಿಕ ವಸ್ತುಗಳ ಲಭ್ಯತೆ, ಬುಡಕಟ್ಟು ಹಾಗೂ ಪಂಥ ಮುಂತಾದುವುಗಳ ಬಗ್ಗೆ ಮಾಹಿತಿಯಿತ್ತಾದರೂ ಜಾತಿಯ ವಾರಸುದಾರಿಕೆಯ ಬಗ್ಗೆ ವಿಸ್ತೃತವಾಗಿ ಎಲ್ಲೂ ಪ್ರಸ್ತಾಪ ಹೆಚ್ಚು ಮಹತ್ವವನ್ನು ಪಡೆದಿರಲಿಲ್ಲ.[6] ವಸಾಹತುಪೂರ್ವದಲ್ಲಿ ಸಾಮಾಜಿಕವಾಗಿ ಮಾನ್ಯತೆ ಪಡೆದುಕೊಂಡಿದ್ದ ಬ್ರಾಹ್ಮಣರು ಬ್ರಿಟಿಷರಿಗೆ ಮಾಹಿತಿದಾರರಾಗಿದ್ದರು. ವಸಾಹತುಶಾಹಿಯ ಆರಂಭಿಕ ದಾಖಲೆಗಳು ತುಳುನಾಡಿನ ಜಾತಿ ಪ್ರಸ್ತಾಪಗಳಿಗೆ ಹೆಚ್ಚು ಮಹತ್ವ ಕೊಟ್ಟಿರಲಿಲ್ಲ. ವಸಾಹತುಶಾಹೀ ಸಾಮಾಜಿಕವಾಗಿ ನಾಲ್ಕು ವರ್ಣದ ವೃತ್ತಿ ಆಧಾರಿತ ಜನಾಂಗಗಳನ್ನು ಹಾಗೂ ಧರ್ಮದ ಆಧಾರದಲ್ಲಿ ಅವರ ಧಾರ್ಮಿಕ ನಡವಳಿಕೆಗಳ ಮೂಲಕ ಅವುಗಳ ಜನಾಂಗೀಯ ವಾರಸುದಾರಿಕೆಯನ್ನು ಗುರುತಿಸಿಕೊಂಡಿತ್ತು.[7] ತುಳುನಾಡಿನ ಕೈಫಿಯತ್ತುಗಳಲ್ಲಿ ವಸಾಹತುಪೂರ್ವದ ರಾಜಕೀಯ ಭೂರಚನೆ, ಪ್ರಭಾವಿ ಜಮೀನುದಾರರ ಮಾಹಿತಿ ಹಾಗೂ ಮಾಹಿತಿದಾರರಾಗಿದ್ದವರ ಲೋಕಾನುಭವವನ್ನು ದಾಖಲಿಸಲ್ಲಷ್ಟೇ ಪ್ರಯತ್ನಿಸಿರುವುದು ಸ್ಪಷ್ಟಗೊಂಡಿದೆ. ವಸಾಹತುಶಾಹಿಯ ಆಡಳಿತ ಆರಂಭಕ್ಕೆ ಮುನ್ನ ತುಳುನಾಡಿನೊಂದಿಗೆ ಸಂಪರ್ಕವಿರಿಸಿ, ವ್ಯವಹಾರ ದೃಷ್ಟಿಯಿಂದ ಇಲ್ಲಿನ ಪಟೇಲರೊಂದಿಗೆ ಮಾತ್ರ ಸಂಪರ್ಕವಿಟ್ಟುಕೊಂಡಿದ್ದರಿಂದ ಇಲ್ಲಿನ ಸಮುದಾಯಗಳ ಬಗ್ಗೆ ಹೆಚ್ಚು ತಿಳಿಯಲು

ಉತ್ಸುಕರಾಗಿರಲಿಲ್ಲ. ವಸಾಹತುಶಾಹಿ ತುಳುನಾಡಿನ ಜನರ ಬಗ್ಗೆ ನಕಾರಾತ್ಮಕ ನಿಲುವು ವ್ಯಕ್ತಪಡಿಸಿದ್ದು ಇಲ್ಲಿನ ಜನರು ಮುಂಗೋಪಿ, ಕಾನೂನು ವಿರೋಧಿ ಹಾಗೂ ಸುಳ್ಳು ವಿವರಗಳನ್ನು ನೀಡುವುದರಲ್ಲಿ ನಿಸ್ಸೀಮರು ಎಂದಿದೆಯಲ್ಲದೇ ಇಲ್ಲಿನ ಕೂಡಿಬಾಳುವ ಸಮನ್ವಯತೆಯ ಸಾಮಾಜಿಕ ಅನನ್ಯತೆಯ ಬಗ್ಗೆ ವಿವರಣೆ ನೀಡಿಲ್ಲ.[8] ವಸಾಹತುಶಾಹಿಯ ಆಡಳಿತದ ಅಗತ್ಯತೆಗಳಿಗೆ ಹೊಸ ಜ್ಞಾನದ ಹುಡುಕಾಟ ವಸಾಹತುಶಾಹಿಯ ಆಡಳಿತಕ್ಕೆ ಅನುಗುಣವಾಗಿ ವಿಭಜಿಸಿ ಆಳು ಮತ್ತು ಜನಾಂಗೀಯ ಧೋರಣೆ ಮುಂತಾದವುಗಳು ವಸಾಹತುಶಾಹಿಯ ಮ್ಯಾನುವಲ್, ಗಜೆಟೀಯರ್‌ಗಳಲ್ಲಿ ಸೇರ್ಪಡೆಗೊಂಡಿರುವುದನ್ನು ಅವಲೋಕಿಸಿದಾಗ ವಸಾಹತುಶಾಹಿಯ ನೀತಿಗಳು ದುರ್ಬಲರ ಪರವಾಗಿರದೇ ಉನ್ನತ ಸಮುದಾಯಗಳ ಇಚ್ಛೆಗೆ ಅನುಗುಣವಾಗಿ ರೂಪಿತವಾಯಿತು. ಮುಂದುವರೆದು ಬ್ರಾಹ್ಮಣ ಚಿಂತನೆಗಳು ವಸಾಹತುಶಾಹಿ ಅಧ್ಯಯನದ ಮೂಲಚೌಕಟ್ಟಾಗಿದ್ದರಿಂದ ಅದರ ನೆಲೆಯಲ್ಲಿ ಸಮುದಾಯಗಳ ಜನಾಂಗೀಯ ವಾರಸುದಾರಿಕೆಯನ್ನು ಅರ್ಥೈಸಿ ವಸಾಹತಿನ ಸಮುದಾಯಗಳನ್ನು ಜಾತೀಯ ಮಾನದಂಡದಡಿಯಲ್ಲಿ ಹೊಸದಾಗಿ ವ್ಯಾಖ್ಯಾನಿಸಿತ್ತು. ಜೊತೆಗೆ ಜಾತಿಯ ಪರಿಕಲ್ಪನೆಯು ಆರ್ಯರ ವಸಾಹತಿಕರಣ ನಂತರದ ಬೆಳವಣಿಗೆ ಎಂಬುವುದು ವಸಾಹತುಗಾರರ ಅಭಿಮತ.[9] ತುಳುನಾಡಿನ ಜನಸಮುದಾಯಗಳ ಸಾಮಾಜಿಕ ವಿಕಾಸವಾದದ ಚಿಂತನೆಗಳನ್ನು ತಪ್ಪಾಗಿ ಅರ್ಥೈಸಿಕೊಂಡು ಪಶ್ಚಿಮದಲ್ಲಿ ಖಚಿತಪಡಿಸಿಕೊಂಡಿದ್ದ ವೈಜ್ಞಾನಿಕ ಮಾನದಂಡದ ಮೂಲಕ ಅವುಗಳನ್ನು ಜಾತಿಗಳಾಗಿ ಮರುರೂಪಿಸಿತು. ಈ ಪ್ರಮಾದದಿಂದಾಗಿ ವಸಾಹತುಶಾಹಿ ಇಲ್ಲಿನ ಸಮುದಾಯಗಳ ನಡುವಿನ ಸಂಬಂಧಗಳನ್ನು ಅರ್ಥೈಸಿಕೊಳ್ಳುವಲ್ಲಿ ವಿಫಲವಾಗಿತ್ತಲ್ಲದೇ ಭಾವನಾತ್ಮಕ ವಾರಸುದಾರಿಕೆಯ ಮೂಲಚಿಂತನೆಗಳು ಮಸುಕುಗೊಂಡವು. ಈ ವರೆಗೆ ಸಮುದಾಯಗಳಲ್ಲಿ ಆಸ್ತಿತ್ವದಲ್ಲಿದ ಸಂಬಂಧಗಳು ಬದಲಾವಣೆಗೊಂಡು ಪರಸ್ಪರ ವಿರುದ್ಧವೆನಿಸುವ ಜನಾಂಗೀಯ ಧೋರಣೆಗಳು ವಸಾಹತುಶಾಹಿಯ ನಡೆಗಳಲ್ಲಿ ಪ್ರಧಾನಗೊಂಡಿತು.

ತುಳುವರ ಸಾಮಾಜಿಕ ಅನನ್ಯತೆಗಳಾದ ವಂಶ, ಬಳಿ, ಜನಾಂಗ, ಗುಂಪು, ಸಮುದಾಯ ಮುಂತಾದ ವಾಸ್ತವಗಳನ್ನು ಸಾಮಾಜಿಕ ವಿಘಟನೆಗೆ ಬಳಸಿಕೊಂಡ ವಸಾಹತುಶಾಹಿ ಆಡಳಿತಾತ್ಮಕವಾಗಿ ತಾಂತ್ರಿಕ ಕಲ್ಪನೆಗಳನ್ನು ಮುಂದಿಟ್ಟು ಸಮರ್ಥಿಸಿಕೊಂಡಿತು. ವಸಾಹತುಶಾಹಿ ನೀತಿಗಳಿಂದ ಪಾರಂಪರಿಕ ವೃತ್ತಿನಿರತ ಸಮುದಾಯಗಳು ಜಾತಿಗಳಾಗಿ ಪ್ರಖರಗೊಂಡು ವಸಾಹತುಶಾಹಿ ಸೃಷ್ಟಿಸಿದ ಸಾಮಾಜಿಕ ಸಂದರ್ಭದ ನೆಲೆಗಟ್ಟಿನಲ್ಲಿ ಮರುವ್ಯಾಖ್ಯಾನಗೊಂಡಿತು. ಈ ಮರುವ್ಯಾಖ್ಯಾನ ಆಧುನಿಕ ಸಂದರ್ಭಗಳಲ್ಲಿ ಬಳಕೆಯಾದಾಗಲೆಲ್ಲ ವಸಾಹತು ಜನರ ನಡವಳಿಕೆಗಳ ಸ್ವರೂಪ ನಿರ್ಧರಿಸುವ ಸಾಧನಗಳಾದವು. ತುಳುನಾಡಿನ ವೃತ್ತಿನಿರತ

ಸಮುದಾಯಗಳನ್ನು ಜಾತಿಗಳಾಗಿ ಪ್ರಧಾನ-ಅಧೀನ ಸಂಬಂಧಗಳಲ್ಲಿ ಅರ್ಥೈಸಿಕೊಂಡ ವಸಾಹತುಶಾಹಿ ಅವುಗಳಿಗೆ ತಮ್ಮ ಸೈದ್ಧಾಂತಿಕ ವಿಶ್ಲೇಷಣೆಯಲ್ಲಿ ವಿಶಿಷ್ಟ ಸ್ಥಾನ ನೀಡಿತು. ವಸಾಹತುಶಾಹಿ ಆಡಳಿತಕ್ಕೆ ಉಪಯೋಗವಿರುವ ಸಮುದಾಯಗಳು ಇಲ್ಲವೇ ಜನಜಾತಿಗಳು ಮತ್ತು ಉಪಯೋಗವಾಗದ ಸಮುದಾಯಗಳು ಇಲ್ಲವೇ ಜನಜಾತಿಗಳು ಅದರ ನಿರೂಪಣಾ ಪುಟಗಳಲ್ಲಿ ದಾಖಲುಗೊಂಡು ವಸಾಹತುಶಾಹಿಯ ಹೊಸ ವಾರಸುದಾರಿಕೆಯ ಹಕ್ಕನ್ನು ಪಡೆದುಕೊಂಡವು. ವೃತ್ತಿಆಧಾರಿತ ಸಮುದಾಯ ಇಲ್ಲವೇ ಬುಡಕಟ್ಟುಗಳ ಸಂಪ್ರದಾಯ, ಶಿಷ್ಟಾಚಾರ, ರೂಢಿಬಳಕೆ, ಕುಲಾಚಾರ ಮುಂತಾದವುಗಳು ವಸಾಹತುಶಾಹಿಯ ಅಧಿಕಾರಕ್ಕೆ ಹೊಂದಿಕೊಳ್ಳುವಂತೆ ರೂಪುಗೊಳ್ಳಲ್ಪಟ್ಟಿತು. ಪರಂಪರಾಗತ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಅಂಗವಾಗಿದ್ದ ವೃತ್ತಿಆಧಾರಿತ ಸಮುದಾಯಗಳು ವಸಾಹತುಶಾಹಿಯ ಜಾತಿ ವ್ಯವಸ್ಥೆಯಾಗಿ, ಅದರ ಜ್ಞಾನದ ನೆಲೆಯಾಗಿ ಅವರ ಉದ್ದೇಶ ಸಾಧನೆಗೆ ಪರಿಕರವಾಯಿತು.[10] ಮುಂದುವರೆದು ಯುರೋಪಿನಲ್ಲಿ ಜನಗಣತಿಗೆ ಆಧಾರವಾಗಿದ್ದ ಒಡೆಯ, ಸೇವಕ, ವರ್ಗ, ಗುಂಪು ಇತ್ಯಾದಿಗಳ ಮಾದರಿಯಲ್ಲಿ ವಸಾಹತಿನ ಜನಗಣತಿ ಪ್ರಾರಂಭಗೊಂಡವು. ಗೌರವ ಅಂತಸ್ತುಗಳನ್ನು ಮಾನದಂಡವಾಗಿಟ್ಟುಕೊಂಡು ವರ್ಣ, ಗುಂಪುಗಳ ಆಧಾರದಲ್ಲಿ ಸಮುದಾಯಗಳನ್ನು ಜಾತಿಯ ಹೊಸ ವಾರಸುದಾರಿಕೆಯ ಕಲ್ಪನೆಯಲ್ಲಿ ರೂಪುಗೊಳಿಸಿತು. ತುಳುನಾಡಿನ ವೃತ್ತಿಆಧಾರಿತ ಸಮುದಾಯಗಳ ಜಾತಿ ಅಧ್ಯಯನಗಳು ಎಷ್ಟು ಬಾಲಿಶವಾಗಿದ್ದವೆಂದರೆ ಮದ್ರಾಸ್‌ನ ಮ್ಯೂಸಿಯಂ ಮೇಲ್ವಿಚಾರಕನೂ ಮಾನವಶಾಸ್ತ್ರಜ್ಞನಾಗಿ ಮಾರ್ಪಡುಗೊಂಡು ಜಾತಿವಾರಸುದಾರಿಕೆಯನ್ನು ವರದಿಯ ರೂಪದಲ್ಲಿ ಮುಂದಿನ ಅಧ್ಯಯನಕ್ಕೆ ಮುನ್ನುಡಿ ಬರೆದನು. ಜಾತಿಗಳ ಅಧ್ಯಯನದಲ್ಲಿ ನಾಸಿಕಸೂಚಿ, ತಲೆಬುರುಡೆ, ಶರೀರದ ರಚನೆ ಮೊದಲಾದವುಗಳು ಮಾನದಂಡವಾಗಿ ಕೆಲವು ಸಮುದಾಯಗಳನ್ನು ಕ್ರಿಮಿನಲ್ ಜಾತಿಗಳೆಂದು ನಿರ್ಣಯಿಸಲಾಯಿತು. ವಿಧೇಯರಿರುವ ಸಮುದಾಯಗಳನ್ನು ಉತ್ತಮ ಜಾತಿಯವರೆಂದು ವ್ಯಾಖ್ಯಾನಿಸಿ ಆಪ್ತಬಳಗಕ್ಕೆ ಸೇರಿಸಿಕೊಳ್ಳಲಾಯಿತು. ತುಳುನಾಡಿನ ವೃತ್ತಿಆಧಾರಿತ ಸಮುದಾಯಗಳು ವಸಾಹತುಶಾಹಿಯ ಜಾತಿಗಳಾಗಿ ತನ್ನದೇ ಕಲ್ಪನೆಯ ಹಾಗೂ ವಾಸ್ತವವಾಗಿರದ ಗುಣಲಕ್ಷಣಗಳನ್ನು ಅಂಟಿಸಿತು. ಜನಗಣತಿ ಗಜೇಟೀಯರ್ ಸಂಪಾದನೆ ಭೂಮಾಪನ, ಅರೆಶೈಕ್ಷಣಿಕ ಚಟುವಟಿಕೆಗಳಿಂದ ಸ್ಥಳೀಯರ ಸ್ವಭಾವ ಅರ್ಥಮಾಡಿಕೊಳ್ಳಲು ನಡೆಸಿದ ಕಸರತ್ತುಗಳಾಗಿವೆ. ಮ್ಯೂಸಿಯಂ ನೋಡಿಕೊಂಡಿದ್ದ ಥರ್ಸ್ಟನ್ ರಾತ್ರೋರಾತ್ರಿ ಮನಶಾಸ್ತ್ರಜ್ಞನಾಗುತ್ತಾನೆ. ಪೋಲಿಸ್ ಕೆಲಸ ಮಾಡಿಕೊಂಡಿದ್ದ ಫಾಸೆಟ್ ಸಮುದಾಯದ ಅಧ್ಯಯನ ಕೈಗೊಳ್ಳುವುದು ವಸಾಹತುಶಾಹಿಯ ವಿಶೇಷತೆ. ದೇಶ ಆಳಲು, ಎಲ್ಲೆ ವಿಸ್ತರಿಸಲು, ಬದುಕಿನ ವಿವರಗಳನ್ನು ತಿಳಿದುಕೊಳ್ಳಲು ಸಂಸ್ಕೃತಿಯ ವಿವರಗಳು ದಾಖಲುಗೊಂಡವು; ಬಂಡೆದ್ದ ದುಡಿಯುವ ವರ್ಗವನ್ನು ಅಪರಾಧಿ

ಸಮುದಾಯಗಳೆಂದು ಪುರಾವೆ ಕಲೆ ಹಾಕಿದರು. ಕಂಪನಿ ಆಡಳಿತದ ವಿರುದ್ಧ ತಿರುಗಿ ಬಿದ್ದ ಸಮುದಾಯದ ವಿವರಗಳನ್ನು ಸಂಗ್ರಹಿಸಿ ಅಚ್ಚುಹಾಕುವ ಉದ್ದೇಶಗಳನ್ನಿಟ್ಟುಕೊಂಡರು. ವಸಾಹತುಪೂರ್ವದಲ್ಲಿ ಪತ್ತೇರಿಕೂಟಗಳ ಮೂಲಕ ಪ್ರತಿಯೊಂದು ಜಾತಿ ತನ್ನ ಸಾಮಾಜಿಕ ಅಧಿಕಾರವನ್ನು ಚಲಾಯಿಸಲು ಅವಕಾಶ ಪಡೆದಿತ್ತು. ಆದರೆ ವಸಾಹತುಶಾಹೀ ಸಂದರ್ಭದಲ್ಲಿ ಈ ಸಾಮಾಜಿಕ ಅಧಿಕಾರಗಳು ತೋರಿಕೆಗೆ ಮಾತ್ರ ಚಲಾಯಿಸಲ್ಪಟ್ಟವಲ್ಲದೇ ಜಾತಿಗಳಿಗೆ ಸಂಬಂಧಿಸಿದಂತೆ ಕೆಲವು ಮಾನದಂಡಗಳನ್ನು ನಿರ್ಣಯಿಸಲಾಯಿತು.

ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಅಭಿವೃದ್ಧಿಯ ನೆಪದಲ್ಲಿ ಮಾನವ ಮತ್ತು ಸಮಾಜಶಾಸ್ತ್ರಗಳ ಅಧ್ಯಯನಗಳು ಪ್ರಾರಂಭವಾದವು. ಆದರೆ ಈ ಬಗೆಯ ಅಧ್ಯಯನಗಳ ಮೂಲ ಉದ್ದೇಶ ಸಾಮಾಜಿಕ ಅಧ್ಯಯನಗಳನ್ನು ವಿಸ್ತರಿಸಿ ವಸ್ತುವಿಚಾರಗಳನ್ನು ವಿಶ್ಲೇಷಣಾತ್ಮಕ ದೃಷ್ಟಿಕೋನದಿಂದ ಸ್ಪಷ್ಟಪಡಿಸುವುದಲ್ಲ. ಬದಲಿಗೆ ವಸಾಹತುಶಾಹಿಯ ಆಡಳಿತದ ದೃಷ್ಟಿಯಿಂದ ಕಂಪನಿ, ಸೈನ್ಯ ಹಾಗೂ ಆಡಳಿತದ ವಿರುದ್ಧ ತಿರುಗಿ ಬಿದ್ದ ಸಮುದಾಯಗಳನ್ನು ಕಾಯಿದೆಯ ನೆರವಿನೊಂದಿಗೆ ಹದ್ದುಬಸ್ತಿನಲ್ಲಿಡಲು, ಅವುಗಳನ್ನು ಪಟ್ಟಿಮಾಡಲು, ಅವುಗಳ ಚಟುವಟಿಕೆಗಳನ್ನು ದಾಖಲಿಸುವ ನೆಪದಲ್ಲಿ ಸಾಮಾಜಿಕ ಅಧ್ಯಯನ ಪ್ರಾರಂಭಗೊಂಡಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[11] ಉದಾಹರಣೆಗೆ ಅಪರಾಧಿ ಬುಡಕಟ್ಟು ನಿಯಮ 1871ರಲ್ಲಿ ರಚಿಸಲಾಯಿತು. 1897ರಲ್ಲಿ ಅಪರಾಧಿ ಬುಡಕಟ್ಟು ಅಧಿನಿಯಮ ರಚನೆಯಾಗಿ 1911, 1923, 1924, 1947ರಲ್ಲಿ ವಸಾಹತುಶಾಹಿಯ ಆಶಯಕ್ಕನುಗುಣವಾಗಿ ತಿದ್ದುಪಡಿ ಮಾಡಲ್ಪಟ್ಟಿತ್ತು. ಜಾತಿಯ ವಾರಸುದಾರಿಕೆಯನ್ನು ಅರ್ಥೈಸಿಕೊಂಡ ಪ್ರಕಾರ ಸಾಮಾಜಿಕ ರೂಢಿಸಂಪ್ರದಾಯಗಳಾದ ಕುಲಾಚಾರ, ಮದುವೆ, ಸಹಭೋಜನ, ವೃತ್ತಿ, ಧಾರ್ಮಿಕ ಆಚರಣೆಗಳು ಇತ್ಯಾದಿ ವಸಾಹತುಶಾಹಿ ವಿನ್ಯಾಸಗೊಳಿಸಿದ ಜಾತಿಯ ಪ್ರಧಾನ ಲಕ್ಷಣಗಳಾದವು. ವಸಾಹತುಶಾಹಿ ಉದ್ದೇಶಪೂರ್ವಕವಾಗಿಯೇ ಲೇಖಿಸಿದ ಈ ಜಾತಿವ್ಯವಸ್ಥೆಗಳ ಲಕ್ಷಣಗಳು ಮುಂದೊಂದು ಸಂದರ್ಭಗಳಲ್ಲಿ ಬಿಡಿಸಲಾಗದ ಕಗ್ಗಂಟಾಗಿ ಪರಿಣಮಿಸಿತ್ತಲ್ಲದೇ ಜಾತಿ ಸಾಮಾಜಿಕ ಪಿಡುಗಾಗಿ ಪರಿವರ್ತನೆಗೊಂಡಿತು. ಮುಂದುವರೆದು ಅವುಗಳನ್ನು ಸಾಮಾಜಿಕ ಪಿಡುಗುಗಳೆಂದು ಮತ್ತೆ ಅದುವೇ ವೈಭವೀಕರಿಸಿ ಅವುಗಳನ್ನು ಬಳಸಿಕೊಂಡು ಜಾತಿ ನಿರ್ಮೂಲನೆಯ ನೆಪದಲ್ಲಿ ಮತಪ್ರಚಾರಕರು ಸಾಮಾಜಿಕ ಬದಲಾವಣೆ ಬಯಸಿ, ಅವರ ಸಾಮಾಜಿಕ ಪರಿವರ್ತನೆಯ ಮುಂದಿನ ಕಾರ್ಯಯೋಜನೆಗಳಿಗೆ ವೇದಿಕೆ ಒದಗಿಸಿದವು.[12] ಸಾಮಾನ್ಯಶಕೆ 1881ರಲ್ಲಿ ಬಹಿಷ್ಕೃತರ ಮತ್ತು 1891ರ ಜನಗಣತಿಯಲ್ಲಿ ಜನಾಂಗೀಯ ಅಧ್ಯಯನಗಳು ಪಾರಂಪರಿಕ ಕಸುಬುಗಳು ಹಾಗೂ ವಸಾಹತುಶಾಹಿಯ ಮಾನವಶಾಸ್ತ್ರ ಅಧ್ಯಯನದ ನೆಲೆಗಟ್ಟುಗಳಲ್ಲಿ ನಡೆಯಲ್ಪಟ್ಟವು. ಸಾಮಾನ್ಯಶಕೆ 1901ರಲ್ಲಿ

ಹಿಂದೂ ವರ್ಣಚೌಕಟ್ಟುಗಳ ನೆಲೆಯಲ್ಲಿ ಹಾಗೂ 1911ರಲ್ಲಿ ಹತ್ತು ಮಾನದಂಡಗಳನ್ನಿಟ್ಟುಕೊಂಡು ಜಾತಿಯ ಅಧ್ಯಯನಗಳು ನಡೆದವು. ಸಾಮಾನ್ಯಶಕೆ 1931ರಲ್ಲಿ ಶುದ್ಧ, ಅಶುದ್ಧತೆಗಳ ನೆಲೆಯಲ್ಲಿ ಜಾತಿಗಳನ್ನು ವರ್ಗೀಕರಿಸಲಾಯಿತು. ಪ್ರತಿಯೊಂದು ಜಾತಿಗೆ ಶಾರೀರಿಕ ಮಾನದಂಡಗಳನ್ನು ಕಲ್ಪಿಸಿ ಆಶುದ್ಧತೆಯವರನ್ನು ಹೊರಗಿನ ಜಾತಿಗಳೆಂದು ಪರಿಗಣಿಸಲಾಯಿತು. ಅವರ ಅನರ್ಹತೆಗಳನ್ನು ಮೂರು ನೆಲೆಗಳಲ್ಲಿ ಗುರುತಿಸಲಾಯಿತು. ಸಾಮಾನ್ಯಶಕೆ 1891ರಲ್ಲಿ ಕೆಳವರ್ಗಗಳನ್ನು ಪಶುಪಾಲನೆ ಜಾತಿಯಾಗಿ ಹಾಗೂ 1901ರಲ್ಲಿ ಸರ್ವಚೇತನವಾದಿಗಳಾಗಿ ಮತ್ತು 1911ರಲ್ಲಿ ಬುಡಕಟ್ಟು ಇಲ್ಲವೇ ಸರ್ವಚೇತನವಾದಿ ಹಾಗೂ ಆಸ್ಪೃಶ್ಯತೆಯ ಆಧಾರಗಳಲ್ಲಿ ವಿಂಗಡಿಸಲಾಯಿತು. ಹೀಗೆ 1911ರಲ್ಲಿ ವಸಾಹತುಶಾಹಿ ಅಸ್ಪೃಶ್ಯತೆಯ ಕಲ್ಪನೆಗೆ ಹೊಸ ಆಯಾಮವನ್ನು ನೀಡುವ ಮೂಲಕ ಅದನ್ನು ಶಾಸನಬದ್ಧಗೊಳಿಸಿತು. ಸಾಮಾನ್ಯಶಕೆ 1921ರಲ್ಲಿ ಕೆಳವರ್ಗದವರನ್ನು ಗುಡ್ಡಗಾಡು ಜನಾಂಗವಾಗಿ ಇಲ್ಲವೇ ಅರಣ್ಯವಾಸಿಗಳಾಗಿ ಮರುವ್ಯಾಖ್ಯಾನಿಸಲಾಯಿತು. ಸಾಮಾನ್ಯಶಕೆ 1931ರಲ್ಲಿ ಅದೇ ಜಾತಿಗಳು ಪುರಾತನ ಬುಡಕಟ್ಟುಗಳಾಗಿ ವ್ಯಾಖ್ಯಾನಗೊಂಡವು. ವಸಾಹತುಶಾಹಿ ಆಡಳಿತದ ಆರಂಭದಲ್ಲಿ ಬ್ರಾಹ್ಮಣರು ಮಾಹಿತಿದಾರರಾಗಿರುವುದರಿಂದ ಬುಖಾನನ್ ಬ್ರಾಹ್ಮಣರ ಶ್ರೇಷ್ಠತೆಯನ್ನು ಒಪ್ಪಿಕೊಂಡಿದ್ದು ಅವರನ್ನು ಸರ್ವಶ್ರೇಷ್ಠರು ಹಾಗೂ ಭೂಮಿಯ ನಿಜವಾದ ಒಡೆಯರು ಎಂದು ಕರೆಯುವುದರ ಮೂಲಕ ಇತರ ಸಮುದಾಯಗಳಿಂದ ಭೂಮಿಯ ಮೇಲಿನ ಒಡೆತನದ ಹಕ್ಕನ್ನು ಕಸಿಯುವ ಪ್ರಯತ್ನ ಮಾಡಿದ್ದನಲ್ಲದೇ, ಜಾತಿಗಳಲ್ಲಿ ಬ್ರಾಹ್ಮಣರು ಸರ್ವಶ್ರೇಷ್ಠರು ಎಂಬ ವಾರಸುದಾರಿಕೆಯನ್ನು ಬಲಗೊಳಿಸಿದ್ದನು. ಆದರೆ ಬ್ರಾಹ್ಮಣರು ವಸಾಹತುಶಾಹಿಯ ಅಧಿಕಾರಕ್ಕೆ ಮುಳುವಾದಾಗ ಬ್ರಾಹ್ಮಣರು ಕುಲಗೆಟ್ಟ, ವಂಚಕ ಸಮುದಾಯವಾಗಿ ಮಾರ್ಪಾಡಾದರು.

ತುಳುನಾಡಿನ ಜನಸಮುದಾಯಗಳ ವಿವಾಹ ಸಂಪ್ರದಾಯ, ಬಂಧುತ್ವದ ರಚನೆಗಳು, ರೀತಿ–ರಿವಾಜುಗಳು, ವಸ್ತ್ರವಿನ್ಯಾಸ, ಪುರೋಹಿತಶಾಹಿ ನಡವಳಿಕೆಗಳು, ಸಮುದಾಯಗಳ ಭೌಗೋಳಿಕ ಹಂಚಿಕೆ ಇತ್ಯಾದಿಗಳೆಲ್ಲವೂ ನೂತನವಾಗಿ ವಿನ್ಯಾಸಗೊಳಿಸಲ್ಪಟ್ಟು ವಸಾಹತುಶಾಹೀ ಜ್ಞಾನಪರಂಪರೆಯಲ್ಲಿ ಸೇರಿಕೊಂಡಿತ್ತಲ್ಲದೇ ತುಳುನಾಡಿನ ಸಮುದಾಯಗಳು ಜಾತಿ ಆಧಾರಿತ ಹೊಸ ವಾರಸುದಾರಿಕೆಯ ವಾಹಕರಾಗಬೇಕಾಯಿತು. ಹೀಗೆ ತುಳುನಾಡಿನ ಸಮುದಾಯಗಳನ್ನು ಜಾತೀಯ ಮಾನದಂಡದಲ್ಲಿ ಪರಿಗಣಿಸಿದ ವಸಾಹತುಶಾಹೀ ಅವರಿಗಿಲ್ಲದ ಗುಣಲಕ್ಷಣಗಳನ್ನು ಅಂಟಿಸಿ, ಸಾಮುದಾಯಿಕ ನೆಲೆಗಟ್ಟಿನಲ್ಲಿ ಬೆಳೆದು ಬಂದಿರುವ ವಾಸ್ತವಗಳನ್ನು ಅಣಕಿಸಿ ಸಮುದಾಯಗಳಿಗೆ ಜಾತೀಯ ಹೊಸ ವಾರಸುದಾರಿಕೆಯ ನೆಲೆಗಳನ್ನು ಸೃಷ್ಟಿಸಿತು. ತುಳುವರನ್ನು ದ್ರಾವಿಡರೆಂದು ಪ್ರಮುಖವಾಗಿ ವಿವರಿಸಲ್ಪಟ್ಟು ಅವರ

ಕಾನೂನು-ಕಟ್ಟಳೆ ಆರ್ಯರಿಗಿಂತ ಭಿನ್ನವಾಗಿತ್ತು ಎಂದು ಹೇಳಿದಲ್ಲದೆ ತುಳುವರಲ್ಲೂ ಆರ್ಯ-ದ್ರಾವಿಡರೆಂದು ವಿಭಜಿಸಿ ಜನಾಂಗೀಯ ನೆಲೆಗಟ್ಟಿನ ಹೊಸ ವಾರಸುದಾರಿಕೆಯನ್ನು ಸೃಷ್ಟಿಸಲಾಯಿತು.[13] ತುಳುವರು ದ್ರಾವಿಡ ವರ್ಗಕ್ಕೆ ಸೇರಿಸಲ್ಪಟ್ಟು, ಅವರನ್ನು ಈ ಪ್ರದೇಶದ ಪುರಾತನ ಜನಾಂಗ, ಸರ್ವಚೇತನವಾದಿಗಳು, ಹಿರಿಯರನ್ನು ಪೂಜಿಸುವ, ಬದುಕಿನಲ್ಲಿ ಮೂಢನಂಬಿಕೆಗಳಿಗೆ ಪ್ರಾಶಸ್ತ್ಯ ನೀಡುವ ಹಾಗೂ ಬದುಕಿನ ಎಲ್ಲಾ ಆಗುಹೋಗುಗಳಲ್ಲಿ ವಿಕ್ಷಿಪ್ತತೆಯನ್ನು ಮೈಗೂಡಿಸಿದ ಜನಾಂಗವೆಂಬ ಪೂರ್ವಾರ್ಜಿತತೆಯನ್ನು ಕಲ್ಪಿಸಲಾಯಿತು. ಜೊತೆಗೆ ಕುಟುಂಬದ ಹಿರಿಯ ಅಧಿಕಾರವನ್ನು ಹೊಂದಿದ್ದರಿಂದ ಮಹಿಳೆ ಪ್ರಾಧಾನ್ಯಳಾಗಿ ಮಾತೃಪ್ರಧಾನ ವ್ಯವಸ್ಥೆಗೆ ತಳಹದಿ ಹಾಕಿರುವುದರಿಂದ ಕುಟುಂಬದಲ್ಲಿ ಮಕ್ಕಳಿಗೆ ಆಸ್ತಿಯ ಅಧಿಕಾರವಿರದೇ ಸಹೋದರಿಯ ಮಕ್ಕಳು ಕುಟುಂಬದ ಸಮಸ್ತ ಆಸ್ತಿಯ ಅಧಿಕಾರಿಗಳಾಗಿ ಪರಿಗಣಿತಗೊಂಡರು.[14] ಬ್ರಾಹ್ಮಣ, ಜೈನ ಮುಂತಾದವರು ಆರ್ಯಕುಲಕ್ಕೆ ತಳ್ಳಲ್ಪಟ್ಟರು. ಒಟ್ಟಿನಲ್ಲಿ ಹೇಳುವುದಾದರೆ, ವಿಭಜನೆ ಮತ್ತು ಆಡಳಿತದ ನೀತಿಗನುಗುಣವಾಗಿ ಈ ಪ್ರದೇಶದಲ್ಲಿ ಅಧಿಕಾರವನ್ನು ಗಳಿಸಿಕೊಂಡ ವಸಾಹತುಶಾಹಿ ಜಾತಿ-ಜಾತಿಗಳ ಹಾಗೂ ಸಮುದಾಯ-ಸಮುದಾಯಗಳ ನಡುವೆ ಭಿನ್ನತೆಯನ್ನು ರೂಪಿಸಿ ತಮ್ಮ ಚಿಂತನಾಲಹರಿಗೆ ಅನುಗುಣವಾಗಿ ಎತ್ತಿಕಟ್ಟಿ, ಕಲಹ ಏರ್ಪಡುವಂತೆ ಮಾಡಿ ತಮ್ಮ ನೆಲೆಯ ಭದ್ರತೆಗೆ ಅಡಿಪಾಯ ಹಾಕಿತು. ಆದರೆ ಇತ್ತೀಚಿನ ಸಂಶೋಧನೆಗಳು ಆರ್ಯ-ದ್ರಾವಿಡ ಎಂಬ ಜನಾಂಗಬೇಧ ವಸಾಹತುಶಾಹಿಯ ಕಲ್ಪನೆ ಎಂದು ಸಾಬೀತುಪಡಿಸಿದಲ್ಲದೇ ಭಾರತದಲ್ಲಿ ಈ ರೀತಿಯ ಜನಾಂಗೀಯ ಭೇದಗಳಿರಲಿಲ್ಲ ಎಂದು ಮಾನವಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಮಾತ್ರವಲ್ಲ ಆರ್ಯ-ದ್ರಾವಿಡ ಸಿದ್ಧಾಂತ ಪೊಳ್ಳು ಎಂಬ ವಾದವನ್ನು ಮುಂದಿಟ್ಟಿದ್ದಾರೆ. ವಸಾಹತುಶಾಹಿಯ ಜನಾಂಗೀಯ ಭೇದ ವಸಾಹತಿಗೆ ಬಹಳಷ್ಟು ನಷ್ಟ ಮಾಡಿತ್ತೆಂದರೆ, ಮೌಖಿಕ ಆಕರಗಳಲ್ಲಿ ಉಲ್ಲೇಖಿತ ಕೂಡು-ಬಾಳ್ವೆಯ ತುಳುನಾಡಿನ ಸಮುದಾಯಗಳು ವಸಾಹತುಶಾಹಿಯ ಕಾಲದಲ್ಲಿ ಜಾತಿ-ಪ್ರತಿಜಾತಿಗಳಾಗಿ ವಿಭಜನೆಗೊಂಡವು. ಈ ವ್ಯವಸ್ಥೆ ಜಾತಿ, ಧರ್ಮಾಧಾರಿತ ವ್ಯವಸ್ಥೆಗೆ ತಳಪಾಯವಾಯಿತ್ತಲ್ಲದೇ, ಆ ಮೂಲಕ ತುಳುನಾಡಿನಲ್ಲಿದ್ದ ಸಾಮಾಜಿಕ ಸಂಬಂಧಗಳನ್ನು ದುರ್ಬಲಗೊಳಿಸಿತು.[15] ಮುಂದುವರೆದು ವಿಭಿನ್ನ ಸಮುದಾಯಗಳಿಂದ ಮತಪರಿವರ್ತಿತರಿಗೆ ವಿಶೇಷ ಸ್ಥಾನವನ್ನು ಕಲ್ಪಿಸಲೋಸುಗ ಸಕ್ಸೆಷನ್ ಆಕ್ಟ್ 10 ಒಫ್ 1865ನ್ನು ಜಾರಿಗೆ ತಂದಿತು. ಕಾನೂನಿನ ಪ್ರಕಾರ ವಿಭಿನ್ನ ಸಮುದಾಯಗಳಿಂದ ಮತಾಂತರಿತರಾಗಿ ಕ್ರೈಸ್ತ ಧರ್ಮಕ್ಕೆ ಸೇರುವವರು ವಸಾಹತುಶಾಹಿ ಧರ್ಮವನ್ನು ಒಪ್ಪಿಕೊಳ್ಳುವುದರಿಂದ ವಸಾಹತುಶಾಹಿಗಳ ಉತ್ತಾರಾಧಿಕಾರ ವ್ಯವಸ್ಥೆಯನ್ನು ಒಪ್ಪಿಕೊಳ್ಳಬೇಕು ಎಂಬುವುದಾಗಿತ್ತು. 1872ರ 15 ಕ್ರೈಸ್ತವಿವಾಹ ಕಾನೂನಿನ ಅನ್ವಯದಂತೆ

ಅಂಗ್ಲೀಕನ್ ಮಾದರಿಯಲ್ಲಿ ವಿವಾಹ ಸಂಪ್ರದಾಯವನ್ನು ಪಾಲಿಸತಕ್ಕದ್ದು, ಈ ಮೂಲಕ ಕ್ರೈಸ್ತರನ್ನು ತಮ್ಮ ಮೂಲಮತಧರ್ಮದ ಚೌಕಟ್ಟಿನಿಂದ ಹೊರಗಿಡುವ ಪ್ರಯತ್ನವನ್ನು ಮಾಡಲಾಯಿತು. 1930ರಲ್ಲಿ ಕ್ಯಾಥೊಲಿಕ್ಕರಿಗೆ ಮುಖ್ಯವಾಗಿ ರೋಮನ್ ಕ್ಯಾಥೊಲಿಕ್ಕರಿಗೆ ಪ್ರತ್ಯೇಕ ಶಾಸನ ರೂಪಿಸಲು ಮಾಡಿರುವ ಹಕ್ಕೊತ್ತಾಯ ವಸಾಹತಿನ ಸಾಮಾಜಿಕ ಸಂಬಂಧಗಳು ಮತ್ತಷ್ಟು ದುರ್ಬಲಗೊಂಡು ವಾರಸುದಾರಿಕೆಯ ಚಿಂತನೆಗಳು ಮಸುಕುಗೊಂಡವು. ತುಳುನಾಡಿನ ನೆಲದೊಂದಿಗೆ ಭಾವನಾತ್ಮಕ ಸಂಬಂಧಗಳನ್ನು ಹೊಂದಿದ್ದ ಕ್ರೈಸ್ತರು ಒಂದು ಸಮುದಾಯವಾಗಿ ಮಾನ್ಯತೆ ಪಡಕೊಂಡರೂ ವಸಾಹತುಶಾಹೀ ಚಿಂತನೆಗಳ ಫಲದಿಂದಾಗಿ ಇತ್ತೀಚಿನ ದಿನಗಳಲ್ಲಿ ತಾವು ಪ್ರತ್ಯೇಕ ಕೋಮು ಆಗಿ ವ್ಯಾಟಿಕನ್ ಚರ್ಚುವ್ಯವಸ್ಥೆಗೆ ನೇರ ಬಾಧ್ಯರಾಗಿ, ಅವರ ಮೂಲಧರ್ಮದ ವಾರಸುದಾರಿಕೆಯಿಂದ ವಿಮುಖರಾಗುತ್ತಿರುವುದು ಚರ್ಚೆಗೆ ಒಳಪಡುವ ವಿಷಯ. ಈ ಚಿಂತನೆ ಸಮುದಾಯಗಳು ಜಾತಿ ಆಧಾರದಲ್ಲಿ ಅನನ್ಯತೆಗಳನ್ನು ಕಂಡುಕೊಳ್ಳುವ ದೃಷ್ಟಿಯಿಂದ ವಸಾಹತುಶಾಹಿ ನೀತಿಗಳನ್ನು ಗುರಾಣಿಯಾಗಿಟ್ಟುಕೊಂಡು ಸ್ಥಾನಮಾನಗಳನ್ನು ಕಂಡುಕೊಳ್ಳುವ ಹೋರಾಟಗಳ ವಾರಸುದಾರಿಕೆಗೆ ಅವಕಾಶವನ್ನು ಕಲ್ಪಿಸಿತು.[16]

1910ರ ನಂತರದ ವರ್ಷಗಳಲ್ಲಿ ಬಂಟರ ಯಾನೆ ನಾಡವರ ಸಂಘ, ಕುಲಾಲ, ಮಡಿವಾಳ, ಗಟ್ಟಿ, ಬಿಲ್ಲವರ ಯೂನಿಯನ್‌ಗಳಂತಹ ಹಲವಾರು ಜಾತಿ ಸಂಘಟನೆಗಳು ಕಾರ್ಯಪ್ರವೃತ್ತಗೊಂಡವು. ಈ ಮೂಲಕ ತುಳುವರಲ್ಲಿ ಜಾತಿ ನೆಲೆಯ ಮೇಲ್ವರ್ಗ-ಕೆಳವರ್ಗಗಳೆಂಬ ಅಸಮಾನತೆ ಬಿಂಬಿತವಾಯಿತು. ಈ ವಸಾಹತುಶಾಹಿಯ ನಿರೂಪಣೆ ತುಳುವ ಸಂಸ್ಕೃತಿ ಬಡವಾಗಿ ಜಾತಿ ನೆಲೆಯಲ್ಲಿ ಬಿಂಬಿತವಾಯಿತು. ಮಾತ್ರವಲ್ಲ ಮುಂದೊಂದು ಹಂತದಲ್ಲಿ ರಾಷ್ಟ್ರೀಯ ಸ್ವಾತಂತ್ರದ ಹೋರಾಟದ ಹಳಿ ತಪ್ಪುವಲ್ಲಿ ಯಶಸ್ವಿಯಾಯಿತು.[17] ಹೀಗೆ ವಸಾಹತುಶಾಹಿ ಸಂಶೋಧಕ ನೆಲೆಯಲ್ಲಿ ವಸಾಹತನ್ನು ಅರಿತುಕೊಳ್ಳುವ ಕೆಲಸ ಮಾಡಿದರೆ, ಇನ್ನೊಂದೆಡೆ ಈ ದೇಶದ ಮರ್ಮ ಅರಿತುಕೊಂಡು ಅದರ ಪಾರಂಪರಿಕ ಸಾಮಾಜಿಕ ಅನನ್ಯತೆಗಳನ್ನು ಧ್ವಂಸ ಮಾಡುವ ಕಾರ್ಯಯೋಜನೆಗಳು ಸಿದ್ಧಗೊಂಡವು.[18] ಈ ತೆರನಾದ ಚಿಂತನೆಗಳು ವಸಾಹತುಶಾಹಿಯ ಆರಂಭದ ಜ್ಞಾನ ಹುಡುಕಾಟದಲ್ಲಿ ಕಾಣಬಹುದು. ಉದಾಹರಣೆಗೆ 1866ರಲ್ಲಿ ಮ್ಯಾಕ್ಸ್‌ಮುಲ್ಲರ್ ತನ್ನ ಹೆಂಡತಿಗೆ ಬರೆದ ಪತ್ರದ ಸಾರಾಂಶ; ನೋಡಲು ನಾನು ಬದುಕಿರದಿದ್ದರೂ ನಾನು ಮಾಡುತ್ತಿರುವ ವೇದಗಳ ಅನುವಾದ ಇನ್ನು ಮುಂದೆ ಇಂಡಿಯಾದ ಹಣೆಬರಹದ ಮೇಲೆ ಬಹಳ ಪ್ರಭಾವ ಬೀರುತ್ತದೆ. ಅವರ ಮತಕ್ಕೆ ಇದೇ ತಾಯಿಬೇರು. ಮೂರು ಸಾವಿರ ವರ್ಷಗಳಿಂದ ಆ ತಾಯಿಬೇರಿನ ಮೂಲಕ ಜನಿಸಿರುವ ಎಲ್ಲವನ್ನು ಸಂಪೂರ್ಣ ಮೂಲೋತ್ಪಾಟನೆ ಮಾಡಲು... ಆ ತಾಯಿ ಬೇರನ್ನು ಕಿತ್ತು ಅವರಿಗೆ

ತೋರಿಸುವುದೊಂದೆ ಮಾರ್ಗವೆಂದು ಬಲವಾದ ನಂಬಿಕೆ. ಇದು ಸಮಗ್ರ ಭಾರತೀಯ ಚಿಂತನೆಯ ಮೇಲೆ ಪ್ರಹಾರವಾದರೇ, ಇದೇ ರೀತಿ ತುಳುನಾಡಿನಲ್ಲಿ ಪ್ರಯೋಗದಲ್ಲಿದ್ದ ಉಳಿಗಮಾನ್ಯ ವ್ಯವಸ್ಥೆ, ವೈವಿಧ್ಯಮಯ ತಿಳುವಳಿಕೆಗಳು, ಜೀವನಕ್ರಮ, ಆಸಮಾನ ಆರ್ಥಿಕತೆಯಿಂದ ವಿಷಮಗೊಂಡ ಸಮಾಜದ ಚಲನೆಗಳು ಮುಂತಾದವುಗಳು ವಸಾಹತುಶಾಹಿಗಳಿಗೆ ಅರ್ಥವಾಗದೇ ಚಾರಿತ್ರಿಕ ಬರವಣಿಗೆಗಳು ಗೊಂದಲಮಯವಾದವು.[19] ಬಾಸೆಲ್ ಮಿಷನು ತುಳುನಾಡಿನಲ್ಲಿ ಮತಪರಿವರ್ತಿತಗೊಂಡ ಬಂಧುಗಳಿಗೆ ಅಧುನಿಕ ಶಿಕ್ಷಣ ನೀಡುವ ಮತ್ತು ಕ್ರೈಸ್ತೀಕರಣದ ಬಾಹುಗಳನ್ನು ಬಲಿಷ್ಠಗೊಳಿಸುವಲ್ಲಿ ಕ್ರಿಯಾಶೀಲಗೊಂಡಿತು. ಕ್ರೈಸ್ತನ ಸಂದೇಶಗಳನ್ನು ಅರಗಿಸಿಕೊಳ್ಳಲು ಮತ್ತು ವಸಾಹತುಶಾಹಿಯ ಜಾತ್ಯಾತೀತ ಕರ್ತವ್ಯಗಳನ್ನು ಪಾಲಿಸಲು ವಿದ್ಯಾಭ್ಯಾಸ ಅಗತ್ಯವೆಂದುಕೊಂಡಿತು. ಈ ನೆಲೆಯಲ್ಲಿ ಅಧುನಿಕ ವಿದ್ಯೆಯ ಕೇಂದ್ರಗಳನ್ನು ಸ್ಥಾಪಿಸಿತು ಕೂಡಾ. 1872ರ ಬಾಸೆಲ್ ಮಿಷನು ವರದಿಯ ಇಂಗಿತದಂತೆ ಭಾರತದಲ್ಲಿ ಮಿಷನರಿಗಳು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಸಂಪೂರ್ಣ ಕ್ರೈಸ್ತೀಕರಣ ಮಾಡಲು ಸಾಧ್ಯವೆಂದಿತು. ತುಳುನಾಡಿನ ಸಮಾಜದ ಬಗೆಗಿನ ವಸಾಹತುಶಾಹಿಗಳ ಗ್ರಹಿಕೆ ಪಾಶ್ಚಾತ್ಯ ಸಂದರ್ಭದ ಚರ್ಚಿನ ಪ್ರತಿರೂಪಗಳಾಗಿ ಮಾರ್ಪಟ್ಟವು ಅಂದರೆ ಶ್ರೇಣಿಕೃತ, ಪುರೋಹಿತಶಾಹಿ, ಗಣ್ಯವರ್ಗ, ರೈತ, ಕುಶಲಕರ್ಮಿಗಳ ಸಮಾಜವಾಗಿ ಅರ್ಥೈಸಲ್ಪಟ್ಟಿತ್ತು. ವಸಾಹತುಶಾಹಿಯ ಜನಾಂಗ, ಜಾತಿ, ವರ್ಗ, ಲಿಂಗ ತಾರತಮ್ಯ ನೀತಿಗಳು ಸರಕಾರಿ ಪ್ರವರ್ತಿತ ಸಾಮಾಜಿಕ ಸುಧಾರಣೆಗಳು, ಮತಪ್ರಚಾರಕರ ಸಮಾಜಸೇವೆಯ ಅಮಿಷಗಳು, ಆಧುನಿಕತೆ ಮತ್ತು ವಿದ್ಯಾಭ್ಯಾಸವನ್ನು ಪರಿಚಯಿಸುವ ನೆಪದೊಂದಿಗೆ ಸಾಮಾಜಿಕವಾಗಿ ತುಳುನಾಡಿನ ವಸಾಹತುಪೂರ್ವದ ವ್ಯವಸ್ಥೆಗಳನ್ನು ಬುಡಮೇಲುಗೊಳಿಸಿದವು. ಇನ್ನೊಂದೆಡೆ ತುಳುವರ ಜಾಗೃತಿಯು ಆಧುನಿಕ ಭಾರತದ ಕೆಲವು ಪ್ರದೇಶಗಳಲ್ಲಿ ಬದಲಾಗುತ್ತಿರುವ ಸಾಮಾಜಿಕ ಸಮೀಕರಣಗಳ ಮೇಲೆ ದೊಡ್ಡ ಮಟ್ಟದ ಪರಿಣಾಮ ಬೀರಿತು.

ವಸಾಹತುಶಾಹಿಯ ಅವಕಾಶವಾದಿತನ, ವಂಚನೆ, ಒತ್ತಡ, ಬಲಪ್ರಯೋಗ ಹಾಗೂ ಆಜ್ಞೆಗಳು ತುಳುನಾಡಿನ ಸಾಮಾಜಿಕ ವಾರಸುದಾರಿಕೆಯ ಸ್ಥಿತ್ಯಂತರದಲ್ಲಿ ಪ್ರಧಾನ ಪಾತ್ರವಹಿಸಿತ್ತಾದರೂ ಆಧುನಿಕ ಶಿಕ್ಷಣ ವ್ಯವಸ್ಥೆ, ಪಾಶ್ಚಾತ್ಯೀಕರಣ ಮತ್ತು ಮತಪ್ರಚಾರಕರ ಸಾಮಾಜಿಕ ಸೇವೆ, ಬಾಸೆಲ್ಗಳ ಕೈಗಾರಿಕಾ ಅಭಿವೃದ್ಧಿಗಳು ಈ ಬಗೆಯ ಸ್ಥಿತ್ಯಂತರದಲ್ಲಿ ನಿರ್ಣಾಯಕವೆನಿಸಿಕೊಂಡವು. ಹೀಗೆ ಸಾಮಾಜಿಕ ಬದಲಾವಣೆಯ ವಸಾಹತುಶಾಹೀ ಪರಿಕಲ್ಪನೆಯ ಅಭಿವೃದ್ಧಿ ಮತ್ತು ದೃಢನಂಬಿಕೆ ವಸಾಹತುಪೂರ್ವದ ಪರಂಪರೆಯೊಂದಿಗೆ ಸಂಬಂಧವನ್ನು ಹೊಂದಿರುವುದರಿಂದ ಸಾಮಾಜಿಕ ನೆಲೆಗಟ್ಟಿನಲ್ಲಿ ಪ್ರಭುತ್ವ ಮತ್ತು

ವಿಧೇಯತೆಗೆ ಸಂಬಂಧಿಸಿದ ಸಾಂದ್ರೀಕರಣ ಮತ್ತು ಸ್ಥಳಾಂತರದ ತಾತ್ವಿಕ ಚಿಂತನೆಗಳಿಂದಾಗಿ ವಸಾಹತುಶಾಹಿಯ ಸಾಮಾಜಿಕ ಬದಲಾವಣೆ ವಸಾಹತುಪೂರ್ವದ ಮತ್ತು ಆಧುನಿಕ ಇಂಗ್ಲೆಂಡಿನ ನಿಲುವುಗಳು ವಸಾಹತಿನಲ್ಲಿ ಪರಸ್ಪರ ವಿರೋಧಾತ್ಮಕ ಸಂಬಂಧಗಳನ್ನು ಸೃಷ್ಟಿಸಿತು.

ಹೀಗೆ ವಸಾಹತುಶಾಹಿಯ ಒಳನುಗ್ಗುವಿಕೆ ಮತ್ತು ಅಡ್ಡಬರುವಿಕೆ ಅದರ ಪ್ರಮುಖ ಗುಣವುಳ್ಳಾದಾಗಿದ್ದು, ಯಾವುದನ್ನು ಮುಟ್ಟದೇ ಬಿಡುವುದಿಲ್ಲ. ಅದು ಪರವಾಗಿ ಮತ್ತು ವಿರೋಧವಾಗಿ ಬಲವಾದ ಪ್ರತಿಕ್ರಿಯೆಗಳನ್ನು ಕೆರಳಿಸಿ, ವಸಾಹತುಶಾಹಿ ಆಡಳಿತದ ಹಂತದಲ್ಲಿ ವಸಾಹತಿನಲ್ಲಿ ಸೃಷ್ಟಿಯಾದ ಉದ್ಯೋಗ, ಸಾರ್ವಜನಿಕ ಕ್ಷೇತ್ರಗಳಲ್ಲಿ ಲಭ್ಯವಾದ ಹೊಸ ಅವಕಾಶಗಳು ಹಾಗೂ ನಿರಾಸೆಗಳು, ಕಾನೂನು ಕ್ಷೇತ್ರದಲ್ಲಿ ಹಾಗೂ ಆಡಳಿತದಲ್ಲಿ ಮಧ್ಯಸ್ಥಿಕೆ ತಂದ ಹೊಸ ಉದಾರವಾದಿ ಕಲ್ಪನೆಗಳು, ಬದಲಾಗುತ್ತಿರುವ ಸಮಾಜದಲ್ಲಿ ಬೇರೆ ಬೇರೆ ಪಂಥ ತೊಟ್ಟವರ ಆಸೆ, ಬೇಡಿಕೆ ಮತ್ತು ಖಿನ್ನತೆಗಳನ್ನು ಮುಂಚಾಚಿದ ಪ್ರಖರ ಮುದ್ರಣ ಸಂಸ್ಕೃತಿ–ಮುಂತಾದವುಗಳು ತುಳುವರ ಜೀವನದ ಹೆಚ್ಚು ಕಡಿಮೆ ಎಲ್ಲಾ ಕ್ಷೇತ್ರಗಳಲ್ಲೂ ವಸಾಹತುಶಾಹಿಯ ಯಜಮಾನಿಕೆಯ ಕಲ್ಪನೆಯಿಂದ ಸ್ಪರ್ಶಿಸಲ್ಪಟ್ಟವು

**ಸಾಮಾಜಿಕ ಬದಲಾವಣೆ, ಮತಪ್ರಚಾರಕರು.**

ಸಾಮಾನ್ಯಶಕೆ 19ನೇ ಶತಮಾನದ ಮೊದಲಾರ್ಧದಲ್ಲಿ ವಸಾಹತುಶಾಹಿ ಆಡಳಿತ ಮತ್ತು ಯುರೋಪಿನ ಮತಪ್ರಚಾರಕರು ಎರಡು ವಿಷಯಗಳಿಗೆ ಸಂಬಂಧಿಸಿದಂತೆ ನಿರ್ಣಯಾತ್ಮಕ ನಿಲುವುಗಳನ್ನು ಹೊಂದಿದ್ದವು. ಅವುಗಳೆಂದರೆ 1833ರ ಚಾರ್ಟರ್ ಕಾಯಿದೆಯ ಆಶಯದಂತೆ ವಸಾಹತಿನಲ್ಲಿ ಸಾಮಾಜಿಕ ಸೇವೆಗಳನ್ನು ತ್ವರಿತಗೊಳಿಸುವುದು[20] ಮತ್ತು 1835ರಲ್ಲಿ ಸರಕಾರ ನಿಗದಿಪಡಿಸಿದಂತೆ ವಸಾಹತಿನಲ್ಲಿ ಆಂಗ್ಲ ಶಿಕ್ಷಣವನ್ನು ಶಾಸನಬದ್ಧಗೊಳಿಸುವುದು. ಇಂಗ್ಲೆಂಡಿನ ಮತಪ್ರಚಾರಕ ಸೇವಾಕರ್ತರು ಈ ಉದ್ದೇಶ ಸಾಧನೆಯ ಜವಬ್ದಾರಿ ಹೊತ್ತು ವಸಾಹತಿನಲ್ಲಿ ಕಾರ್ಯಪ್ರವೃತ್ತರಾಗಿ, ಅದು ನೇರವಾಗಿ ತುಳುನಾಡಿನಲ್ಲಿ ಪ್ರತಿಫಲನಗೊಂಡಿತು. ಹೀಗೆ ವಸಾಹತುಶಾಹಿಯ ಬೆಂಬಲದಿಂದ ಪ್ರಾರಂಭವಾದ ಸೇವೆ, ಶಿಕ್ಷಣ ನೀತಿ ವಸಾಹತಿನ ಸಾಮಾಜಿಕ ಚಿಂತನೆಗಳನ್ನು ನಿಧಾನವಾಗಿ ಬದಲಾವಣೆಗೆ ಒಳಗಾಗಿಸಿತು. ಈ ದಿಸೆಯಲ್ಲಿ ತುಳುನಾಡಿನ ಸಾಮಾಜಿಕ ರಚನೆಗಳು ಅಮೂಲಾಗ್ರ ಬದಲಾವಣೆಗೆ ತೆರೆದುಕೊಂಡು ಸಾಮಾಜಿಕ ವಾರಸುದಾರಿಕೆಯ ಕಲ್ಪನೆಗಳು ವಸಾಹತುಶಾಹಿಯ ಆಯಾಮಗಳಲ್ಲಿ ವ್ಯಾಖ್ಯೀಕರಣಗೊಂಡವು. ಅವರ ಅಭಿಪ್ರಾಯದಲ್ಲಿ ಪಾಶ್ಚೀಮಾತ್ಯ ಆಧುನಿಕತೆ ಮತ್ತು ಶಿಕ್ಷಣ ವ್ಯವಸ್ಥೆ ಕ್ರಾಂತಿಕಾರಕ ಬದಲಾವಣೆಯನ್ನು ತರುವುದರಿಂದ ಸಾಮಾಜಿಕ ಪರಿವರ್ತನೆಯನ್ನು ಮಾಡಬಹುದು. ಈ ಬಗೆಯ

ಅಭಿಪ್ರಾಯದಿಂದ ನಿಜವಾದ ಸಮಸ್ಯೆಯನ್ನು ಅರಿಯುವಲ್ಲಿ ವಿಫಲವಾದ ವಸಾಹತುಶಾಹಿ ನಾಗರಿಕೀಕರಣ ಮತ್ತು ಕ್ರೈಸ್ತೀಕರಣಗಳನ್ನು ನಾಣ್ಯದ ಎರಡು ಮುಖಗಳಂತೆ ಪರಿಗಣಿಸಿ ಕಾರ್ಯಗತಗೊಳಿಸುವಲ್ಲಿ ಕೆಲವೊಮ್ಮೆ ಕ್ರಾಂತಿಕಾರಿ ರೂಪವನ್ನು ಪಡೆದುಕೊಂಡಿದ್ದವು. ಉದಾಹರಣೆಗೆ ಅಲೆಕ್ಸಾಂಡರ ಡಫ್ ಮತ್ತು ಅವನ ಸಂಗಡಿಗರು ವಸಾಹತಿನ ಧರ್ಮವನ್ನು ನಾಶ ಮಾಡುವ ಏಕಮೇವ ಕಾರ್ಯಯೋಜನೆಯನ್ನು ಇಟ್ಟುಕೊಂಡು ಭಾರತಕ್ಕೆ ಬಂದರೆ ಮತ್ತೆ ಕೆಲವು ವಸಾಹತುಶಾಹಿ ಪ್ರತಿನಿಧಿಗಳು ಪಾಶ್ಚಿಮಾತ್ಯ ವಿದ್ಯಾಭ್ಯಾಸದ ನೆರವಿನೊಂದಿಗೆ ವಸಾಹತನ್ನು ಸಂಪೂರ್ಣ ಬದಲಾಯಿಸುವ ಇರಾದೆಯನ್ನು ಹೊಂದಿದ್ದರು.[21] ಇದರಿಂದಾಗಿ ಪ್ರಬಲಗೊಂಡ ವಸಾಹತುಶಾಹಿ ವಸಾಹತಿನ ಜನರ ಕನಿಷ್ಠ ಬೇಡಿಕೆಯನ್ನೂ ಪರಿಗಣಿಸದೆ ವಸಾಹತಿನ ಚಿಂತನೆಗಳನ್ನು ಬದಲಾಯಿಸಿ ಸಾಮಾಜಿಕ ಬದಲಾವಣೆ ತನ್ನ ಏಕಮೇವ ಅಭಿಲಾಷೆಯನ್ನಾಗಿಸಿದರು.[22] ವಸಾಹತುಶಾಹಿಗಳ ಅಭಿಪ್ರಾಯದಲ್ಲಿ ತುಳುನಾಡು ಚಲನಹೀನ ಸಮುದಾಯಗಳ ಮತ್ತು ಚರಿತ್ರೆಗೆ ಕಣ್ಣು ತೆರೆಯದ ಪ್ರದೇಶ. ಅದಕ್ಕಾಗಿ ಪಶ್ಚಿಮದ ವಿಜ್ಞಾನ, ತಂತ್ರಜ್ಞಾನ, ಕೈಗಾರಿಕೀಕರಣ, ಸಾಮಾಜಿಕ ಸಂಸ್ಥೆ, ಸಂಘಟನೆ ಇತ್ಯಾದಿಗಳನ್ನು ಬಳಸಿಕೊಳ್ಳಬೇಕು. ತುಳುನಾಡಿನ ಸ್ಥಾವರ ಸಂಸ್ಕೃತಿಯನ್ನು ಪಠ್ಯೀಕರಿಸುವ, ಅವಿಷ್ಕರಿಸುವ, ಸಂಶೋಧಿಸುವ, ಚರಿತ್ರೆ ಬರೆಯುವ, ಶಿಕ್ಷಣ ನೀಡಿ ನಾಗರೀಕಗೊಳಿಸುವ ಮತ್ತು ಎಲ್ಲಾ ಜವಬ್ದಾರಿಗಳನ್ನು ಪಶ್ಚಿಮವು ತಾನೇ ವಹಿಸಿಕೊಳ್ಳಬೇಕು ಎಂಬಿತ್ಯಾದಿ ವಾದಗಳು ಮುಂದಿಡಲ್ಪಟ್ಟವು. ಈ ಬಗೆಯ ಪೂರ್ವಾಗ್ರಹ ಚಿಂತನೆಗಳಿಗೆ ಒಳಗಾದ ತುಳುನಾಡು ತನ್ನ ವಸಾಹತುಪೂರ್ವ ಚಿಂತನೆಗಳನ್ನು ತ್ಯಜಿಸಬೇಕಾಗಿ ಬಂತಲ್ಲದೇ ವಸಾಹತುಶಾಹಿ ಜ್ಞಾತೃವಿನ ಆಜ್ಞೆಯನ್ನು ಶಿರಸಾ ವಹಿಸಿ ತನ್ನನ್ನು ತಾನು ಒಪ್ಪಿಸಿಕೊಳ್ಳುವ, ಆಧುನಿಕ ವ್ಯಕ್ತಿಯನ್ನು ವಸಾಹತು ಪ್ರಜ್ಞೆಯು ನಿರ್ಮಿಸುವಲ್ಲಿ ತೊಡಗಿಸಿಕೊಂಡಿತು.[23] ಚಾರಿತ್ರಿಕವಾಗಿ ವಿಜಯನಗರದ ಕಾಲಾವಧಿಯಲ್ಲಿ ಸಣ್ಣಪ್ರಮಾಣದೊಂದಿಗೆ ಆರಂಭವಾದ ಮತಪ್ರಚಾರಕರ ಸಾಮಾಜಿಕ ಬದಲಾವಣೆಯ ಈ ಪರಿಕಲ್ಪನೆ ನಂತರದ ಕಾಲಘಟ್ಟದಲ್ಲಿ ಚಳುವಳಿಯಾಗಿ ರೂಪಾಂತರಗೊಂಡು ತುಳುವ ಸಮಾಜದಲ್ಲಿ ಸಂಚಲನ ಮೂಡಿಸಿತು. ಗೋವಾದಿಂದ ಹಂತ ಹಂತವಾಗಿ ಜಾರಿಗೊಂಡ ಕ್ರೈಸ್ತರ ವಲಸೆ ಪ್ರಕ್ರಿಯೆಗಳು ವಸಾಹತಿನಲ್ಲಿ ಸಾಮಾಜಿಕ ಪರಿವರ್ತನೆಯ ಶಕೆಯೊಂದನ್ನು ಹುಟ್ಟುಹಾಕಿತು. ಗೋವಾದಿಂದ ತುಳುನಾಡಿಗೆ ವಲಸೆ ಬಂದವರು ಸಾಮಂತರಸರ ಬೆಂಬಲ ಹಾಗೂ ಪ್ರೋತ್ಸಾಹ ಪಡೆದುಕೊಂಡು ತುಳುನಾಡಿನ ಆಯಕಟ್ಟಿನ ಪ್ರದೇಶಗಳಲ್ಲಿ ವಾಸ್ತವ್ಯ ಹೂಡಿದರು. ಕ್ರೈಸ್ತರು ಪ್ರಮುಖವಾಗಿ ಬಸರೂರು, ಬಾರ್ಕೂರು, ಶಿರ್ವ, ಮುಂಡ್ಕೂರು, ಮೂಲ್ಕಿ, ಕಿರೆಮ್, ಪೇಜಾವರ, ಮೂಡಬಿದಿರೆ, ಬಂಟ್ವಾಳ, ಮೊಡಂಕಾಪು, ಮಿಲಾಗ್ರಿಸ್, ಬೊಂದೆಲ್, ಕೊರ್ಡೆಲ್, ವಾಮಂಜೂರು ಮುಂತಾದ

ಪ್ರದೇಶಗಳಲ್ಲಿ ಕೃಷಿಕರಾಗಿ ನೆಲೆಯೂರಿದರು.[24] ಹೀಗೆ ವಲಸೆ ಬಂದವರು ಸಂಪೂರ್ಣವಾಗಿ ಕೊಂಕಣಿಗಳಾಗಿದ್ದು, ಆರಂಭದಲ್ಲಿ ಕೃಷಿಕರಾಗಿ ಹೆಚ್ಚು ಕಷ್ಟಜೀವಿಗಳಾಗಿ ಜೀವನವನ್ನು ಕಂಡುಕೊಂಡವರು. ವಸಾಹತುಶಾಹಿಯ ಅದರಲ್ಲೂ ಮುಖ್ಯವಾಗಿ ಪೋರ್ಚುಗೀಸರ ವ್ಯಾವಹಾರಿಕ ಕಾಲಘಟ್ಟದಲ್ಲಿ ಪ್ರೇರಿತಗೊಂಡ ಕ್ರೈಸ್ತೇತರ ಸ್ಥಳೀಯರು ಅವರ ಧಾರ್ಮಿಕ ಪ್ರಕ್ರಿಯೆಗಳಿಗೆ ಒಳಗಾಗಿ ತಮ್ಮ ಹಳೆಯ ವಾರಸುದಾರಿಕೆಯ ಪ್ರಕ್ರಿಯೆಗಳಿಂದ ದೂರ ಇಡಲ್ಪಟ್ಟರು. ಮತಪ್ರಚಾರಕರಲ್ಲಿ ಪ್ರಮುಖರಾಗಿದ್ದ ಫ್ರಾನ್ಸಿಸ್ಕನ್ನರು ಕೊಂಕಣಿ ಕ್ರೈಸ್ತರನ್ನು ಹೊರತುಪಡಿಸಿ ಉಳ್ಳಾಲ, ಮಂಗಳೂರು, ಫರಂಗಿಪೇಟೆ ಮುಂತಾದೆಡೆಗಳಲ್ಲಿ ಸ್ಥಳೀಯರನ್ನು ಸಾಮಾಜಿಕ ಬದಲಾವಣೆಯ ಉದ್ದೇಶವನ್ನಿಟ್ಟುಕೊಂಡು ಅವರ ಧಾರ್ಮಿಕ ಪ್ರಕ್ರಿಯೆಗಳಿಗೆ ಒಳಪಡಿಸಿದರು. ಮಾತ್ರವಲ್ಲದೆ ಕ್ರೈಸ್ತ ಧಾರ್ಮಿಕ ಪ್ರಕ್ರಿಯೆಗಳಿಗೆ ಒಳಪಟ್ಟ ಸ್ಥಳೀಯರನ್ನು ಗೋವಾದ ಸಾಮಾಜಿಕ ನೀತಿ ನಿಯಮಗಳ ಇಲ್ಲವೇ ಕಾನೂನುಗಳ ಪ್ರಭಾವಕ್ಕೆ ಒಳಪಡಿಸಲಾಯಿತು.[25] ಗೋವಾದ ಕೊಂಕಣಿ ಕ್ರೈಸ್ತ ವಲಸೆಗಾರರು ಫ್ರಾನ್ಸಿಸ್ಕನ್ನಗಳ ನೆರವಿನೊಂದಿಗೆ ಗುರಿಕಾರ ಪದ್ಧತಿಯನ್ನು ಜಾರಿಗೆ ತಂದರು. ಗುರಿಕಾರ ಸಾಮಾಜಿಕವಾಗಿ ವಿಶ್ವಾಸಾರ್ಹತೆಯನ್ನು ಪಡೆದ ವ್ಯಕ್ತಿಯಾಗಿದ್ದನು. ತನ್ನ ವ್ಯಾಪ್ತಿಗೆ ಒಳಪಟ್ಟ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವಲ್ಲಿ ಪಾತ್ರ ಹಿರಿದಾದುದು. ಮಂಗಳೂರು, ಫರಂಗಿಪೇಟೆ, ಉಳ್ಳಾಲದಲ್ಲಿ ಈ ವ್ಯವಸ್ಥೆಯನ್ನು ಜಾರಿಗೆ ತಂದರು. ಈ ಸಾಂಸ್ಥಿಕ ವ್ಯವಸ್ಥೆ ಸಾಮಾಜಿಕವಾಗಿ ಪರಿವರ್ತಿತ ಕ್ರೈಸ್ತರ ಸಾಮಾಜಿಕ ಸ್ವಾಯತ್ತತೆಯನ್ನು ಹಾಗೂ ಮತಶ್ರದ್ಧೆಯನ್ನು ಸಭಲೀಕರಿಸಿತು. ಸಾಮಾನ್ಯಶಕೆ 1681ರಿಂದ ತುಳುನಾಡಿನಲ್ಲಿ ಮತಪರಿವರ್ತನೆಯ ಮೂಲಕ ಸಾಮಾಜಿಕ ಬದಲಾವಣೆ ನಿರಂತರವಾಗಿ ಮುಂದುವರೆಯಿತ್ತಲ್ಲದೇ ಮತಪರಿವರ್ತಕರಲ್ಲಿ ಪ್ರಧಾನನಾಗಿದ್ದ ಜೋಸೆಫ್‌ವಾಜ್ ಈ ಕಾರ್ಯಕ್ಕೆ ಸಂಬಂಧಿಸಿದಂತೆ ಮುಂಚೂಣಿಯಲ್ಲಿ ಕಾಣಿಸಿಕೊಂಡನು. ಪಾದ್ರಿ ಜೋಸೆಫ್‌ವಾಜ್ ಇನ್ನಿತರ ಮತಪರಿವರ್ತಕರ ಸಹಕಾರದೊಂದಿಗೆ ಚರ್ಚುಗಳನ್ನು ಪುನರ್‌ನಿರ್ಮಿಸಿ, ಕ್ರೈಸ್ತಮತದ ಅನುಯಾಯಿಗಳ ಸಂಖ್ಯೆಯನ್ನು ವೃದ್ಧಿಸುವಲ್ಲಿ ಯಶಸ್ವಿಯಾದರು. ಇದರ ಜೊತೆಗೆ ಗೋವಾದಿಂದ ನಿಯುಕ್ತಿಗೊಳ್ಳಲ್ಪಟ್ಟವರು, ವಿದೇಶದಿಂದ ಬಂದ ಜೆಸೂಯಿಟ್ ಮತಪರಿವರ್ತಕರ ಜೊತೆ ಕೈಜೋಡಿಸಿದ ವ್ಯಾವಹಾರಿಕ ಕಾಲಘಟ್ಟದಲ್ಲೂ ಮತಪ್ರಚಾರ ಮತ್ತು ಸಾಮಾಜಿಕ ಬದಲಾವಣೆಯಂತಹ ಸಾಮಾಜಿಕ ಪ್ರಕ್ರಿಯೆಗಳನ್ನು ತ್ವರಿತಗೊಳಿಸಿದರು. ಪರಿಣಾಮವಾಗಿ ಹದಿನೆಂಟನೆಯ ಶತಮಾನದ ಕೊನೆಯ ದಶಕಗಳ ಕಾಲಘಟ್ಟದಲ್ಲಿ ತುಳುನಾಡಿನಾದ್ಯಂತ ಸುಮಾರು ಇಪ್ಪತೇಳು ಚರ್ಚುಗಳು ಕಾರ್ಯೋನ್ಮುಖಗೊಂಡವಲ್ಲದೇ ಅನುಯಾಯಿಗಳ ಸಂಖ್ಯಾಬಲವನ್ನು ತೀವ್ರವಾಗಿ ಹೆಚ್ಚಿಸಿಕೊಂಡಿತು. ಹೀಗೆ ಮತಪರಿವರ್ತಕರ ಕಾರ್ಯಯೋಜನೆ, ಕಾರ್ಯನಿಷ್ಠೆ ಮತ್ತು ಸತತ

ಪ್ರಯತ್ನಗಳ ಫಲವಾಗಿ ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ದೇಶಿ ಕ್ರೈಸ್ತರ ನೂರಾರು ಕುಟುಂಬಗಳು ಆಸ್ತಿತ್ವಕ್ಕೆ ಬಂದವು.[26] ಈ ಎಲ್ಲಾ ಬೆಳವಣಿಗೆಗಳಿಂದಾಗಿ ಹತ್ತೊಂಬತ್ತನೇ ಶತಮಾನದ ವಸಾಹತುಶಾಹಿಯ ದಾಖಲೆ ಮತ್ತು ಬಾಸೆಲ್ ಮಿಷನರಿಗಳ ವರದಿಗಳನ್ನು ವಿಶ್ಲೇಷಿಸಿದಾಗ ಸಾಮಾಜಿಕ ಪರಿವರ್ತನೆಯ ಬೇರುಗಳು ಆಳವಾಗಿ ಬೇರೂರುವ ಮೂಲಕ ಇಲ್ಲಿನ ಸಾಮಾಜಿಕ ಪರಿವರ್ತನೆಯ ವಾರಸುದಾರಿಕೆ ನಿಧಾನವಾಗಿ ಕಾರ್ಯಪ್ರವೃತ್ತವಾಗಿದ್ದನ್ನು ಸಮರ್ಥಿಸಿಕೊಳ್ಳಬಹುದು. ಮಿಷನರಿಗಳ ನೇತೃತ್ವದಲ್ಲಿ ಕುಂದಾಪುರ, ಗಂಗೊಳ್ಳಿ, ಮಂಗಳೂರಿನಲ್ಲಿ ಚರ್ಚು ಮರುನಿರ್ಮಾಣಗೊಂಡಿತು. ಫಾದರ್ ಜೋಸೆಫ್‌ವಾಜ್ ಉಳ್ಳಾಲವನ್ನು ಕಾರ್ಯಕ್ಷೇತ್ರವನ್ನಾಗಿಸಿ ಹಲವಾರು ಚರ್ಚುಗಳ ನಿರ್ಮಾಣ ಮಾಡಿಸಿದನು. 1681ರಲ್ಲಿ ಜೋಸೆಫ್‌ವಾಜ್ ಸಾಮಾಜಿಕ ಪರಿವರ್ತನೆ ಮಾಡುವಲ್ಲಿನ ಸಂದರ್ಭದ ಕ್ರೈಸ್ತರ ಸಂಖ್ಯೆ ಸುಮಾರು 15,000 ಅನುಯಾಯಿಗಳಿಗೆ ಏರಿಕೆಯಾಯಿತು. ಜೊತೆಗೆ ಬಿದನೂರು ಮತ್ತು ಸೋಂದಾ ರಾಜರುಗಳ ರಾಜಾಶ್ರಯವು ಕ್ರೈಸ್ತಧರ್ಮದ ಉನ್ನತಿಗೆ ಕಾರಣವಾಯಿತ್ತಲ್ಲದೇ ಹಲವಾರು ಕ್ರೈಸ್ತ ಭೂಮಾಲಕರ ಹುಟ್ಟಿಗೂ ಕಾರಣವಾಯಿತು. ಹೈದರಾಲಿ ಟಿಪ್ಪುಸುಲ್ತಾನರ ಆಡಳಿತ ಕಾಲದ ಅವಧಿಯಲ್ಲಿ ತುಳುನಾಡಿನ ಕ್ರೈಸ್ತರ ಸಂಖ್ಯೆ ಸುಮಾರು ಎಂಬತ್ತು ಸಾವಿರ ಎಂದು ಅಂದಾಜಿಸಿದ್ದಾರೆ. ಸ್ಥಳೀಯ ಕ್ರೈಸ್ತರಲ್ಲಿ ಹಲವಾರು ಪಂಗಡಗಳಿವೆ. ಅವುಗಳಲ್ಲಿ ಪ್ರಮುಖವಾದುದು, ಮೂಡಬಿದಿರೆ ಪರಿಸರದಲ್ಲಿ ಜೈನರಿಂದ ಮತಾಂತರಗೊಂಡವರನ್ನು ಪಡುವಾಳರೆಂದು, ಉಳ್ಳಾಲ, ಸುರತ್ಕಲ್, ಬಾರ್ಕೂರು ಪರಿಸರದ ಕ್ರೈಸ್ತರು ಶೂದ್ರರಾಗಿರುವ ಕಾರಣ ಅವರನ್ನು ಗೌಡಿಗಳೆಂದು, ಬೋಳಾರ ಪರಿಸರದ ಕ್ರೈಸ್ತರನ್ನು ಬೊಮ್ಮನ್ಗಳೆಂದು, ಮತ್ತಿನ್ನಿತರ ಜಾತಿಗಳಿಂದ ಮತಪರಿವರ್ತನೆಗೊಂಡವರನ್ನು ಚಾರೋಡಿಯನ್ನರೆಂದು ವಿಭಾಗಿಸಲಾಗಿತ್ತು. ಸಂಸ್ಕಾರ ಮತ್ತು ಸಂಬಂಧಗಳ ದೃಷ್ಟಿಯಿಂದ ಸ್ಥಳೀಯ ಕ್ರೈಸ್ತರಿಗೂ, ವಲಸೆ ಬಂದ ಕ್ರೈಸ್ತರಿಗೂ ಸಂಪರ್ಕಗಳಿರದೇ ಪ್ರತ್ಯೇಕತೆಯನ್ನು ಹೊಂದಿದ್ದರು. ಆದರೆ ಗೋವಾದಿಂದ ವಲಸೆ ಬಂದ ಕೊಂಕಣಿ ಕ್ರೈಸ್ತರು ತಮ್ಮ ಪೂರ್ವದ ಹಿಂದು ಬಾಂಧವರೊಂದಿಗೆ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಕ್ರೈಸ್ತರಲ್ಲಿ ಏಕಪ್ರಕಾರದ ಸಾಮಾಜಿಕ ವ್ಯವಸ್ಥೆಗಳಿರದಿರುವುದರಿಂದ ಸ್ವಕೀಯ ಸಂಸ್ಕಾರಗಳನ್ನು ಮಾಡಲು ಸಾಧ್ಯವಾಗಿಲ್ಲ. 20ನೇ ಶತಮಾನದ ಮೊದಲಾರ್ಧದಲ್ಲಿ ನಾರಾವಿ, ವೇಣೂರು, ಅರುವ, ಪಾವೂರು, ಮಂಗಳೂರು ಮುಂತಾದೆಡೆ ಸಾಮಾಜಿಕವಾಗಿ ಮತಪರಿವರ್ತನೆ ಎಗ್ಗಿಲ್ಲದೇ ಸಾಗಿತ್ತು. ಬಾಸೆಲ್ ಮಿಷನ್ ತನ್ನ ಮತಾಂತರದ ಒಘವನ್ನು ವೇಗಗೊಳಿಸಲು ತುಳು ಅಂದೋಲನವನ್ನು ಪ್ರಾರಂಭಿಸಿತು. ತುಳುನಾಡಿನ ಬಿಲ್ಲವ ಸಮುದಾಯದ ಪೂಜಾರಿಗಳನ್ನು ಕೇಂದ್ರವಾಗಿಸಿ 1843ರಲ್ಲಿ ಮುಲ್ಕಿಯ ಹೆಸರಾಂತ ಬಿಲ್ಲವ ಪೂಜಾರಿಯನ್ನು ಮತಾಂತರಗೊಳಿಸಿದರೆ, 1855ರಲ್ಲಿ

ಗುಡ್ಡೆ, 1859ರಲ್ಲಿ ಉರ್ವಾ, 1875ರಲ್ಲಿ ಪಾದೂರು, 1880ರಲ್ಲಿ ಮಡಂಬು, ಬೆಳ್ಳ, ಅಮ್ಮೆಂಬಳ ಮುಂತಾದೆಡೆ ಈ ಕೆಲಸದಲ್ಲಿ ಸಕ್ರಿಯಗೊಂಡಿತು. ಅವರ ಪ್ರಕಾರ ಬಿಲ್ಲವ ಸಮುದಾಯದ ಮುಖ್ಯ ಪೂಜಾರಿಯನ್ನು ಮತಪರಿವರ್ತಿಸಿದರೆ ಅವನೊಂದಿಗೆ ಇಡೀ ಸಮುದಾಯವೇ ಮತಪರಿವರ್ತನೆಗೊಳ್ಳಬಹುದೆಂಬ ಅಭಿಲಾಷೆಯನ್ನು ಹೊಂದಿತ್ತು. ಈ ಪ್ರಕ್ರಿಯೆ ಅವರನ್ನು ತಮ್ಮ ಮೂಲ ಸಾಮಾಜಿಕ ವಾರಸತೆಯಿಂದ ವಿಮುಖಗೊಳಿಸಿತ್ತಲ್ಲದೇ, ನಿಧಾನವಾಗಿ ಅವರದೇ ಆದ ಸಾಮಾಜಿಕ ಚಿಂತನೆಗಳನ್ನು ಒಪ್ಪಿಕೊಳ್ಳುವಂತೆ ಮಾಡಿತು. 'ನಾವು ವಸಾಹತನ್ನು ಸಾಮಾಜಿಕ ಸೇವೆಯ ಮೂಲಕ ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪರಿವರ್ತಿಸಲು ಹೊರಟಿರುವ ಕಾರಣ ಚರ್ಚ್ ಹಾಗೂ ಆಡಳಿತ ನಮಗೆ ಸಹಾಯ ಮಾಡಬೇಕು' ಎಂಬುವುದು ಮತಪರಿವರ್ತಕರ ಆಶಯವಾಗಿತ್ತು. ಇವರಲ್ಲಿ ಡಬ್ಲ್ಯೂ.ಡಬ್ಲ್ಯೂ ಹಂಟರ್ ಪಶ್ಚಿಮದ ಮತ ಪ್ರಚಾರಕ್ಕೆ ಉತ್ತೇಜನ ನೀಡಿದವರಲ್ಲಿ ಪ್ರಮುಖ ವ್ಯಕ್ತಿಯಾಗಿ ಕಾಣಿಸಿಕೊಂಡರೇ, ಸಾಮಾಜಿಕ ಪರಿವರ್ತನೆಗಾಗಿ ವಸಾಹತುಶಾಹಿ ಸಮಯ ವಿನಿಯೋಗಿಸಬೇಕೆಂದು ಶಿಕ್ಷಣ ತಜ್ಞನೆನಿಸಿಕೊಂಡಿದ್ದ ಮೆಕಾಲೆ ವಾದ ಮಂಡಿಸಿದ್ದನು. ಈ ನೆಲೆಯಲ್ಲಿ ಹಲವಾರು ಮತಪರಿವರ್ತಕರು ತುಳುನಾಡಿನ ಸಾಮಾಜಿಕ ಪರಿವರ್ತನೆಯನ್ನು ಮುಂದಿಟ್ಟುಕೊಂಡು ಕಾರ್ಯಪ್ರವೃತ್ತವಾದವಲ್ಲದೇ ವಸಾಹತುಶಾಹಿಯ ಆಡಳಿತಯಂತ್ರದ ನೆರವು ಪಡೆದುಕೊಳ್ಳಲು ಯಶಸ್ವಿಯಾದವು.[27] ತುಳುನಾಡಿನಲ್ಲಿ ಮತಪರಿವರ್ತಕರ ಸಾಮಾಜಿಕ ಬದಲಾವಣೆಯ ಚಟುವಟಿಕೆಗಳು ವಸಾಹತುಶಾಹಿ ಆಡಳಿತದ ಪ್ರಭಾವಕ್ಕೊಳಗಾಗಿ ಕಾನೂನುಬದ್ಧಗೊಂಡಿತು. ತುಳುನಾಡಿನಲ್ಲಿ ಮಾತ್ರವಲ್ಲ, ಇಡೀ ವಸಾಹತಿನಲ್ಲಿ ಅಧುನಿಕ ವಿದ್ಯಾಭ್ಯಾಸವನ್ನು ಹರಡುವ ನೆಪದಲ್ಲಿ ಸಾಮಾಜಿಕ ಬದಲಾವಣೆಯ ತೀವ್ರತೆ ಎಷ್ಟು ಬಲವಾಗಿತ್ತೆಂಬುವುದನ್ನು ವಿಮರ್ಶಕ ಗೌರಿ ವಿಶ್ವನಾಥನ್ ಆಧಾರಗಳ ಮೂಲಕ ಈ ರೀತಿಯಾಗಿ ಉಲ್ಲೇಖಿಸಿದ್ದಾರೆ–"ಹಿಂದೂಯಿಸಂ ಅನ್ನುವ ಪದ ಪಂಚಾಂಗದಿಂದ ಒಂದಲ್ಲ ಒಂದು ದಿನ ಮರೆಯಾಗುತ್ತದೆ ಮತ್ತು ಸುವಾರ್ತೆಯು ಅದರ ಅವಶೇಷಗಳ ಮೇಲೆ ಕಟ್ಟಲ್ಪಡುತ್ತದೆ" ಎಂಬ ವಿಶ್ವಾಸ ಮತಪರಿವರ್ತಕರ ಸಾಮಾಜಿಕ ಬದಲಾವಣೆಯಂತಹ ಸಾಮಾಜಿಕ ಚಳುವಳಿಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ಮುಂದುವರೆದು ಪಶ್ಚಿಮದ ವಿಜ್ಞಾನ ಮತ್ತು ಅಧುನಿಕರಣದ ಮೂಲಕ ಎಲ್ಲರೂ ಒಂದೇ ಧರ್ಮದಡಿಯಲ್ಲಿ ಸೇರಬೇಕೆಂಬುವುದು ಮತಪರಿವರ್ತಕರ ಸ್ಪಷ್ಟ ನಿರ್ಧಾರವಾಗಿತ್ತು. ಧಾರ್ಮಿಕವಾಗಿ ಸಾಮಾಜಿಕ ಪರಿವರ್ತನೆಯ ಇನ್ನೊಂದು ಮಗ್ಗುಲಿನಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಹಮ್ಮಿಕೊಂಡ ಮತಪರಿವರ್ತಕರು, ಆ ಚಟುವಟಿಕೆಗಳನ್ನು ಪಾಶ್ಚಾತ್ಯ ಚಿಂತನೆ, ಅದರ ಅನುಕೂಲತೆಗಳು ಹಾಗೂ ಸ್ಥಳೀಯ ವ್ಯವಸ್ಥೆಯ ನ್ಯೂನ್ಯತೆಗಳನ್ನು ಎತ್ತಿ ಹಿಡಿಯುವ ಕಾರ್ಯಕ್ಕೆ ಸೀಮಿತಗೊಳಿಸಿತು. ಹೊರಜಗತ್ತಿಗೆ

ತಾನು ಅಭಿವೃದ್ಧಿಯ ಹರಿಕಾರನೆಂದು ತೋರ್ಪಡಿಸುವ ನಿಟ್ಟಿನಲ್ಲಿ ಸಾಹಿತ್ಯ, ಕೈಗಾರಿಕೆ, ವೈದ್ಯಕೀಯ ಇತ್ಯಾದಿಗಳಿಗೆ ಪ್ರಾಮುಖ್ಯತೆ ನೀಡಿತು. ಈ ಎಲ್ಲಾ ಬೆಳವಣಿಗೆಗಳಿಂದ ತಾಯ್ನಾಡಿನ ಶಿಕ್ಷಿತ ಮೇಲ್ವರ್ಗ ಸುಲಭವಾಗಿ ವಸಾಹತುಶಾಹಿಯ ಪ್ರಭಾವಕ್ಕೊಳಗಾದರೆ, ಆಶಿಕ್ಷಿತ ಕೆಳವರ್ಗ ನಿಧಾನವಾಗಿ ಇದರೆಡೆ ಯೋಚಿಸುವಂತೆ ಮಾಡಿತು. ಕೆಳವರ್ಗದ ಜನರ ಜೀವನದ ಕಠಿಣ ಸಂದರ್ಭಗಳಲ್ಲಿ ಮತಪ್ರಚಾರಕ ಸಾಮಾಜಿಕ ಸುಧಾರಣವಾದಿಗಳು ಅಪದ್ಬಾಂದವರಂತೆ ಕಾಣತೊಡಗಿದರು.[28] ಅಧುನಿಕ ವಿದ್ಯಾಭ್ಯಾಸದಂತಹ ಮಿಷನರಿ ಕಾರ್ಯಕ್ರಮದ ಧಾರ್ಮಿಕ ಮಗ್ಗುಲಿನ ಜೊತೆಜೊತೆಯಲ್ಲಿಯೇ ಅವರು ಶಿಕ್ಷಣ, ಕೈಗಾರಿಕೆ, ಸಾಹಿತ್ಯ, ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ದುಡಿಯಬೇಕಾಯಿತ್ತಲ್ಲದೇ, ಈ ಕ್ಷೇತ್ರಗಳಲ್ಲಿ ದುಡಿಯದೇ, ಇಲ್ಲವೇ ಪ್ರಾಜ್ಞರನ್ನಾಗಿ ಮಾಡದೇ ಧರ್ಮದ ಬಗ್ಗೆ ಯೋಚಿಸುವುದು ಹೆಚ್ಚಿನ ಸಂದರ್ಭಗಳಲ್ಲಿ ಕಷ್ಟಕರವಾಗಿತ್ತು. ಕೆಲವೊಮ್ಮೆ ಧಾರ್ಮಿಕ ಕಾರ್ಯಗಳು ಆಚಾನಕವಾಗಿ ಅನಿರೀಕ್ಷಿತ ಸಂದರ್ಭಗಳ ಮೂಲಕ ಹೊಸ ಕ್ಷೇತ್ರಗಳಲ್ಲಿ ಕೆಲಸ ಮಾಡುವಂತೆ ಪ್ರೇರೆಪಿಸುತ್ತಿದ್ದ ಕಾರಣವಾಗಿ ಆ ಕೆಲಸಗಳು ವರ್ತಮಾನದಲ್ಲಿ ಈ ಪ್ರದೇಶದಲ್ಲಿ ಸಮುದಾಯಗಳು ಮಿಷನರಿಗಳ ಕೊಡುಗೆಯಿಂದ ಸವಾಲನ್ನು ಎದುರಿಸಲು ಸಹಾಯವಾಗಿತ್ತೆನ್ನಲಾಗಿ ಬಿಂಬಿಸಲ್ಪಟ್ಟವು. ತ್ರಾಸವಿಲ್ಲದೇ ಸಾಲ ಸಂದಾಯ ಮತ್ತು ಎರಡು ಹೊತ್ತಿನ ಊಟ, ತಮಾಷೆಯ ವಿಷಯವೆಂದರೆ ನೂರು ರೂಪಾಯಿಯನ್ನು ತಲೆಗೊಂದರಂತೆ ಪಾವತಿಸಿದರೆ ಇಪ್ಪತ್ತು ಜನರ ಮತಾಂತರಕ್ಕೆ ವ್ಯವಸ್ಥೆ ಮಾಡಬಹುದೆಂಬ ಬೇಡಿಕೆಯು ಸಹ ಸ್ಥಳೀಯರಿಂದ ಸಲ್ಲಿಸಲ್ಪಟಿತ್ತು.

ವಸಾಹತುಶಾಹಿಯ ಅಧಿಕಾರ, ಆಡಳಿತ ವ್ಯವಸ್ಥೆ ಮತ್ತು ಮತಪರಿವರ್ತಕರ ಶತಮಾನಗಳ ಅಧ್ಯಯನದ ಫಲಶ್ರುತಿಯಿಂದಾಗಿ ಅಸಂಖ್ಯ ದಾಖಲೆಗಳು, ಲೇಖನಗಳು ಹಾಗೂ ಗ್ರಂಥಗಳು ಸಂಗ್ರಹಿಸಲ್ಪಟ್ಟವಲ್ಲದೇ ಪಶ್ಚಿಮದ ಜ್ಞಾನದ ತುಡಿತ ಇಲ್ಲಿನ ಮನಸ್ಸುಗಳನ್ನು ಪಾಶ್ಚಾತ್ಯೀಕರಿಸಿದವು. ಮಾತ್ರವಲ್ಲ ತುಳುನಾಡಿನ ವಿಶಿಷ್ಟ ಸಾಮಾಜಿಕ ವ್ಯವಸ್ಥೆಗಳು ರೂಪಾಂತರಗೊಂಡು ಎಲ್ಲಾ ಸ್ತರಗಳಲ್ಲೂ ಅಮೂಲಾಗ್ರ ಬದಲಾವಣೆಗೆ ಅವಕಾಶಗಳನ್ನು ಒದಗಿಸಿಕೊಟ್ಟಿತ್ತು. ಸಾಮಾನ್ಯಶಕೆ ಹತ್ತೊಂಬತ್ತನೇ ಶತಮಾನದ ತುಳುನಾಡಿನಲ್ಲಿ ತಳವೂರಿದ ಬಾಸೆಲ್‌ಮಿಷನಿನ ಕಾರ್ಯಚಟುವಟಿಕೆಗಳು ಮತ್ತು ವಸಾಹತುಶಾಹಿಯ ಅಧಿಕಾರದ ಪ್ರವರ್ತನೆಗಳು ಒಟ್ಟಾಗಿ ಕಾರ್ಯಪ್ರವೃತ್ತಗೊಂಡು ವಿಭಿನ್ನ ಸಮುದಾಯಗಳ ನಡುವಿನ ಪ್ರಸ್ತಾವ, ಸಂಧಾನ ಹಾಗೂ ಚಟುವಟಿಕೆಗಳಿಗೆ ಒಂದು ಬಗೆಯ ಉತ್ಕಟತೆಯನ್ನು ತಂದುಕೊಟ್ಟವಲ್ಲದೇ ಅವುಗಳ ಬಲವರ್ಧನೆ, ಅಧುನಿಕ ಶಿಕ್ಷಣ, ಅಭಿವೃದ್ಧಿ, ಸಾಮಾಜಿಕ ಪರಿವರ್ತನೆ ಮುಂತಾದವುಗಳಿಂದ ಪ್ರಭಾವಿಸಿ ಅಧುನಿಕತೆಯನ್ನು ತುಳುನಾಡಿನ

ವಿಭಿನ್ನ ಸಮುದಾಯಗಳಿಗೆ ಮುಟ್ಟಿಸುವ ಕೆಲಸವನ್ನು ಬಹುಮಟ್ಟಿಗೆ ಮಾಡಿತು. ಮತಪರಿವರ್ತಕರು ಈ ರೀತಿಯ ಕಾರ್ಯಚಟುವಟಿಕೆಗಳಿಂದ ವಸಾಹತಿನ ಸಾಮಾಜಿಕ ಪಲ್ಲಟ ಮಾತ್ರವಲ್ಲದೇ ಧಾರ್ಮಿಕ ವಾರಸುದಾರಿಕೆಯನ್ನು ಬದಲಾಯಿಸುವ ಉದ್ದೇಶವನ್ನು ಹೊಂದಿದ್ದವು. ಮಾತ್ರವಲ್ಲ ಸಮಾಜ ಸೇವೆಯ ಹಿಂದಿದ್ದ ಸಾಮಾಜಿಕ ಪರಿವರ್ತನೆ ಇಲ್ಲವೇ ಸಾಮಾಜಿಕ ಬದಲಾವಣೆ ಇಲ್ಲಿನ ವಾರಸುದಾರಿಕೆಯ ಆಯಾಮಗಳ ಮೇಲೆ ಪ್ರಭಾವಿಸಿದ್ದವು.[29] ಮತಪ್ರಚಾರಕ ಪ್ರೇರಿತ ಚಾರಿಟಿ ಸಂಸ್ಥೆಗಳು ಮಹಿಳಾ ಸಬಲೀಕರಣದ ಉದ್ದೇಶವನ್ನಿಟ್ಟುಕೊಂಡು ಅಧುನಿಕ ವಿದ್ಯಾಭ್ಯಾಸವನ್ನು ಪರಿಚಯಿಸಿದೆ ಎಂಬ ಅಭಿಪ್ರಾಯವಾದರೆ, ವಾಸ್ತವದಲ್ಲಿ ಮತಪರಿವರ್ತನೆಯ ಧಾರ್ಮಿಕ ಮಗ್ಗುಲಿನ ಜೊತೆಜೊತೆಯಲ್ಲಿಯೇ ಹಲವು ಕ್ಷೇತ್ರಗಳಲ್ಲಿ ದುಡಿಯುವ ಅವಶ್ಯಕತೆ, ಅನಿವಾರ್ಯತೆ ಅವರನ್ನು ಕೇವಲ ಧರ್ಮಪ್ರಚಾರಕ್ಕೆ ಸೀಮಿತಗೊಳಿಸದೇ ಇಲ್ಲಿನ ಸಾಮಾಜಿಕ ಸುಧಾರಣೆಯ ನೆಪದಲ್ಲಿ ಇಲ್ಲಿನ ವ್ಯವಸ್ಥೆಯನ್ನು ಅಧುನಿಕ ಶಿಕ್ಷಣದ ಮೂಲಕ ಪಾಶ್ಚಿಮಾತ್ಯಗೊಳಿಸುವುದು ಇಲ್ಲವೇ ಅವರದೇ ಶೈಲಿಯಲ್ಲಿ ನಾಗರೀಕತೆಯನ್ನು ಪೋಷಿಸುವುದು ಎಂಬ ಮುಖವಾಡವಾಗಿ ಅಣುಕು ಪ್ರದರ್ಶನಕ್ಕೆ ಒಳಗಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. 1841ರಲ್ಲಿ ಬಾಸೆಲ್‌ಗಳು ಮುದ್ರಣ ಯಂತ್ರವನ್ನು ಪರಿಚಯಿಸುವುದರ ಮೂಲಕ ತುಳುಸಾಹಿತ್ಯವನ್ನು ಲಿಪಿಗೊಳಿಸಲು ಪ್ರಾರಂಭಿಸಿತು. ಸಾಮಾನ್ಯಶಕೆ 1849–1859ರಲ್ಲಿ ಸುಮಾರು ಎಂಟುನೂರ ಮೂವತ್ತಾನಾಲ್ಕು ಗ್ರಂಥಗಳನ್ನು ಪ್ರಕಟಣೆ ಮಾಡಿದ ಬಾಸೆಲ್‌ಮಿಶನ್‌ನ ಕಾರ್ಯ ವಸಾಹತಿನ ದೃಷ್ಟಿಯಿಂದ ಸಾಮಾಜಿಕ–ಶೈಕ್ಷಣಿಕ, ಸಾಹಿತ್ಯಿಕ ಕೊಡುಗೆ ಎಂದೆನಿಸಿದರೂ ಇದರ ಹಿಂದೆ ಧರ್ಮಪ್ರಚಾರ ಮತ್ತು ಸಾಮಾಜಿಕ ಪರಿವರ್ತನೆಯ ಉದ್ದೇಶವಿತ್ತೆಂದು ಇತಿಹಾಸದ ಪುಟಗಳು ಸಾಧರಪಡಿಸಿವೆ.[30] ಮತಪ್ರಚಾರಕರು ಏಕದೇವಾರಾಧನೆಯನ್ನು ಪ್ರಮಾಣವನ್ನಾಗಿಸಿ ತಾವು ಪ್ರಾರಂಭಿಸಿದ ಶೈಕ್ಷಣಿಕ ವ್ಯವಸ್ಥೆಗಳಲ್ಲಿ ಅದನ್ನು ಅನ್ವಯಿಸಿ ಬಹುದೇವತಾರಾಧನೆ ಉಂಟುಮಾಡಿದ್ದ ಅಸಮಾನತೆಯನ್ನು ಮೀರುವ ನೀತಿ ನಿಯಮಗಳನ್ನು ರೂಪಿಸಿ ಕಾರ್ಯಗತಗೊಳಿಸಿದವು.[31] ಎ.ಆರ್ ದೇಸಾಯಿಯವರು ಅಭಿಪ್ರಾಯದಲ್ಲಿ "ಭಾರತೀಯರನ್ನು ನಾಗರೀಕರನ್ನಾಗಿಸುವ ಉದ್ದೇಶವನ್ನು ಹೊಂದಿದ್ದ ಮತಪರಿವರ್ತಕರು ಬಹುದೇವತಾರಾಧನೆ ಮತ್ತು ಜಾತಿಪದ್ಧತಿಗಳಿಂದ ಉಂಟಾದ ಅಸಮಾನತೆಗಳ ಮೇಲೆ ದಾಳಿ ನಡೆಸಿದವು. ವಿಜ್ಞಾನ ಮತ್ತು ಅಧುನಿಕ ಅಧ್ಯಯನದ ಮೂಲಕ ಎಲ್ಲರೂ ಒಂದೇ ಧರ್ಮಕ್ಕೆ ಬರಬೇಕು ಎನ್ನುವುದು ಮತಪ್ರಚಾರಕರ ಸ್ಪಷ್ಟ ನಿರ್ಧಾರವಾಗಿತ್ತು. ಅವರು ಕೈಗೊಂಡ ಶತಮಾನಗಳ ಅಧ್ಯಯನ ವಸಾಹತಿನ ವಿಶಿಷ್ಟ ಸಾಮಾಜಿಕ ಪರಿಸ್ಥಿತಿಗಳು ಅನಾವರಣಗೊಳ್ಳಲು ಕಾರಣವಾಯಿತ್ತಲ್ಲದೇ, ಬೇರೆ ಬೇರೆ ಸಮುದಾಯಗಳ ನಡುವಿನ ಪ್ರಸ್ತಾವ, ಸಂಧಾನ ಮತ್ತು ಚಟುವಟಿಕೆಗಳಿಗೆ

ಒಂದು ಉತ್ಕಟತೆಯನ್ನು ತಂದುಕೊಟ್ಟಿತ್ತು. ಈ ಉತ್ಕಟತೆ ವಸಾಹತುಪೂರ್ವದ ಸಾಮಾಜಿಕ ವಾರಸುದಾರಿಕೆಯ ಚಿಂತನೆಗಳು ಮರುರೂಪುಗೊಂಡು ಧಾರ್ಮಿಕ ವಾರಸುದಾರಿಕೆಗಳ ನ್ಯಾಯಬದ್ಧತೆ ಹಾಗೂ ಅಗತ್ಯತೆಗಳನ್ನು ಪ್ರಶ್ನಿಸಲು ಅವಕಾಶ ಮಾಡಿಕೊಟ್ಟಿತ್ತು".[32] ಸ್ವ-ಮತದ ಪ್ರಚಾರದ ರಭಸದಲ್ಲಿ ಮಿಶನರಿಗಳಿಂದಾದ ಸತತ ಆಘಾತ ಭಾರತೀಯರಲ್ಲಿ ಸ್ವ-ಧರ್ಮ, ಸ್ವದೇಶದ ಕುರಿತಾದ ಜನ್ಮಜಾತ ಅಭಿಮಾನಗಳು ಹುಟ್ಟಿಕೊಂಡವು. ಪಾಶ್ಚಾತ್ಯ ಸೆಳೆತಗಳಲ್ಲಿ ಸಿಕ್ಕಿ ಭಾರತೀಯರು ವಿಚಾರ ಮಂಥನ ಮಾಡಲಾಗಿ ಬಾಲ್ಯವಿವಾಹ, ಸತೀ ಪದ್ಧತಿ, ವಿಧವಾ ವಿವಾಹ, ಬಹುಪತ್ನಿತ್ವ, ಮೂಢನಂಬಿಕೆಗಳು ಚರ್ಚೆಗೊಳಗಾದವು. ಮಾನವತೆಯ ಹಿನ್ನೆಲೆಯಲ್ಲಿ ಸಾಮಾಜಿಕ ಸುಧಾರಣೆಗಳ ಮಂಡನೆ, ಸ್ವಧರ್ಮ, ಸ್ವಭಾಷೆಗಳಲ್ಲಿ ಆಸಕ್ತಿ, ಸುಧಾರಣಾ ಚಿಂತನೆಗಳು ಹುಟ್ಟಿಕೊಂಡವು. ಮೂಢಸಂಪ್ರದಾಯಗಳ ಸಂಕೋಲೆ ಕಳಚಿ ಹಳೆಯ ಪರಂಪರೆಗಳಿಗೆ ಹೊಸ ಅರ್ಥ ಹಚ್ಚಿ ಜನಜಾಗೃತಿ ಮೂಡಿಸಲು ಕಾರಣವಾಯಿತು. ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಗಳಲ್ಲಿ ಎರಡು ನಿಶ್ಚಿತ ಗುರಿಗಳನ್ನು ನೋಡಬಹುದು. 19ನೇ ಶತಮಾನದ ಕೊನೆಘಟ್ಟದಲ್ಲಿ ವಸಾಹತುಶಾಹಿ ತನ್ನ ಉದಾರವಾದಿ ಮತ್ತು ಪ್ರಗತಿಶೀಲತೆಯನ್ನು ಮತಾಂತರಿತ ವರ್ಗಕ್ಕೆ ಸಂಬಂಧಿಸಿದಂತೆ ಯಾವ ನಿಲುವುಗಳನ್ನು ಇಟ್ಟುಕೊಂಡಿರಲಿಲ್ಲ. ನೇರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಮತಪರಿವರ್ತಿತರ ಹಕ್ಕುಗಳನ್ನು ರಕ್ಷಿಸುವಂತೆ, ದೇಶೀಯ ಸಂಸ್ಥಾನಗಳಲ್ಲಿ ಹಿಂದೂ ಧರ್ಮದ ಚಿಂತನೆಗಳನ್ನು ರಕ್ಷಿಸುವತ್ತ ಹೆಚ್ಚು ಪ್ರಾಮುಖ್ಯತೆ ನೀಡಿರುವುದು ಅವರ ಆಡಳಿತದ ವಿರೋಧಾಭಾಸ. ಹಿಂದು ಕಾನೂನಿಂದ ಹೊರಗೆ ದಬ್ಬಲ್ಪಟ್ಟ ಮತಪರಿವರ್ತಿತರ ಪರಿಸ್ಥಿತಿಯನ್ನು ಉತ್ತಮಪಡಿಸಲು ವಸಾಹತುಶಾಹಿ ಸರಕಾರ 1850ರಲ್ಲಿ ಲೆಸಿ-ಲೋಸಿ ಅಥವಾ ಕಾಸ್ಟ್ ಡಿಸೆಬಿಲಿಟಿ ರಿಮೂವಲ್ ಆಕ್ಟ್ ಆಫ್ 1850ನ್ನು ಜಾರಿಗೆಗೊಳಿಸಿತು. ಈ ವಿಚಾರವನ್ನು ಸ್ಪಷ್ಟವಾಗಿ 1850ರಲ್ಲಿ ಜಾರಿಗೆ ಬಂದ ಕಾಸ್ಟ್ ಡಿಸೆಬಿಲಿಟಿಸ್ ರಿಮೂವಲ್ ಆಕ್ಟ್ 21 ಆಫ್ 1850ರಲ್ಲಿ ಕಾಣಬಹುದಾಗಿದೆ. ಇದಲ್ಲದೇ 19ನೇ ಶತಮಾನದ ಉತ್ತರಾರ್ಧದಲ್ಲಿ ಮತಪರಿವರ್ತಕರು ಸಿವಿಲ್ ಡಿಸ್‌ಎಬಿಲಿಟಿಸ್ ಆಫ್ ಕ್ರಿಶ್ಚನ್ ಕನ್ವರ್ಟ್ಸ ತೆಗೆದುಹಾಕುವಲ್ಲಿ ದೊಡ್ಡ ಪ್ರಚಾರಾಂದೋಲನವನ್ನು ಮಾಡುವ ಮೂಲಕ ಮತಪರಿವರ್ತಿತ ವ್ಯಕ್ತಿ ತನ್ನ ಮೂಲ ಉತ್ತರಾಧಿಕಾರಕ್ಕೆ ಸಂಬಂಧಿಸಿದ ಕಾನೂನುಗಳಲ್ಲಿನ ಅಧಿಕಾರವನ್ನು ನಿರಾಕರಿಸಿದಲ್ಲಿ ಅವರನ್ನು ಬೆಂಬಲಿಸುವ ಬಗ್ಗೆ ವಾದಿಸುವುದಾಗಿತ್ತು. ಜೊತೆಗೆ ಮತಪರಿವರ್ತಿತರಿಗೆ ಉತ್ತಾರಾಧಿಕಾರದ ಹಕ್ಕು ಕೊಡಬೇಕೆನ್ನುವುದು ಮತಪ್ರಚಾರಕರ ಹಕ್ಕೊತ್ತಾಯವಾಗಿತ್ತು. ಅವಿಭಕ್ತ ಕುಟುಂಬ ತುಳುನಾಡಿನ ಸಾಮಾಜಿಕ ವ್ಯವಸ್ಥೆಯ ತಿರುಳಾಗಿರುವುದರಿಂದ ಆ ಕುಟುಂಬದಿಂದ ಮತಪರಿವರ್ತಿತಗೊಂಡರೇ ಅವನು ಆ ವ್ಯವಸ್ಥೆಯಲ್ಲಿ ಸತ್ತಂತೆ. ಆದಕಾರಣ ಯಾವುದೇ

ಹಕ್ಕುಗಳು ಅವನ ಮೂಲಕುಟುಂಬದಿಂದ ಲಭ್ಯವಾಗುವುದಿಲ್ಲ. ಈ ದಿಸೆಯಲ್ಲಿ ಮತಪರಿವರ್ತಿತಗೊಂಡವರ ಹಿತರಕ್ಷಣೆಗೆ ವಸಾಹತುಶಾಹೀ ಸರಕಾರ ಅನುಕೂಲ ಕಾನೂನುಗಳನ್ನು ಜಾರಿಗೆ ತರಬೇಕೆನ್ನುವುದು ಮತಪರಿವರ್ತಕರ ಹಕ್ಕೊತ್ತಾಯವಾಗಿತ್ತು.[33] ಹಿಂದೂ ಕಾನೂನು ಮಿತಾಕ್ಷರದ ಪ್ರಕಾರ ಒಬ್ಬನಿಗೆ ಉತ್ತಾರಾಧಿಕಾರದ ಹಕ್ಕು ಪ್ರಾಪ್ತವಾಗುವುದು ತನ್ನ ಪಿತೃಗಳ ಅಂತೇಷ್ಠಿ ಕಾರ್ಯದಲ್ಲಿ ಭಾಗವಹಿಸುವ ಹಕ್ಕು ಪಡೆದಾಗ. ಈ ಕಟ್ಟುಕಟ್ಟಳೆಯಲ್ಲಿ ತೊಡಗಿಸಿಕೊಂಡರೆ ಮಾತ್ರ ಮೃತಕನಿಗೆ ಮೋಕ್ಷ ಲಭಿಸುವುದು ಎಂಬ ನಂಬಿಕೆ ಹಿಂದುಗಳಲ್ಲಿದೆ. ಮತ ಪರಿವರ್ತಿತಗೊಂಡು ಜಾತಿಯಿಂದ ದಬ್ಬಲ್ಪಟ್ಟರೆ ಈ ರೀತಿಯ ಅಧಿಕಾರ ಪ್ರಾಪ್ತವಾಗುವುದಿಲ್ಲ. ಈ ಸಂದರ್ಭದಲ್ಲಿ ಎರಡು ವಿಚಾರಗಳನ್ನು ಮನನ ಮಾಡಬೇಕಾಗುತ್ತದೆ. ಮತಪರಿವರ್ತಿತಗೊಂಡು ಡಿಗ್ರೇಡ್ ಸ್ಟಾಟಸ್‌ನಿಂದ ಉತ್ತಾರಾಧಿಕಾರ ಕಳೆದುಕೊಂಡಿರುವುದು, ಇಲ್ಲವೇ ಮತ ಪರಿವರ್ತಿತಗೊಂಡ ಧರ್ಮದ ಕಟ್ಟುಪಾಡುಗಳಿಗೆ ಬಲಿಬಿದ್ದು ತನ್ನ ಉತ್ತಾರಾಧಿಕಾರದ ಹಕ್ಕುಗಳನ್ನು ಕಳೆದುಕೊಂಡಿರುವುದು. ಇನ್ನೊಂದೆಡೆ ವಸಾಹತುಶಾಹೀ ಸರಕಾರದ ಈ ನಿಲುವು ಭಾರತದಲ್ಲಿ ಸಾಮಾಜಿಕ ಸುಧಾರಣೆಗೆ ಅವಕಾಶವನ್ನು ಮಾಡಿಕೊಟ್ಟಿತ್ತು. ಸಾಮಾಜಿಕ ಸುಧಾರಣೆಯ ಹಿನ್ನೆಲೆ, ಮತಪರಿವರ್ತಿತರ ಹಿತರಕ್ಷಣೆ ಕಾಯುವಲ್ಲಿ ವಸಾಹತುಶಾಹಿ ಸರಕಾರ ಮಧ್ಯಪ್ರವೇಶಿಸಿದ್ದಲ್ಲಿ ಬಹುಸಂಖ್ಯಾಕರ ವಿರೋಧ ಕಟ್ಟಿಕೊಂಡತಾಗುವುದನ್ನು ನಿವಾರಿಸಲು ಲೆಸಿ-ಲೋಸಿ ಹೆಸರಿನಲ್ಲಿ ಕಾನೂನನ್ನು ಜಾರಿಗೆ ತರಲಾಯಿತು. ಈ ಕಾನೂನನ್ನು ಜಾರಿಗೆ ತರುವ ಉದ್ದೇಶವೇ ವಸಾಹತಿನ ಧರ್ಮದಿಂದ ಹೊರದಬ್ಬಲ್ಪಟ್ಟ ಇಲ್ಲವೇ ವಸಾಹತಿನ ಧರ್ಮಕ್ಕೆ ತಿಲಾಂಜಲಿ ನೀಡಿ ಸಮುದಾಯದಿಂದ ಬಹಿಷ್ಕೃತಗೊಂಡು ವಸಾಹತುಶಾಹಿಯ ಧರ್ಮವನ್ನು ಒಪ್ಪಿ ಬದ್ಧರಾದ ಜನರ ನಾಗರೀಕ ಕಾನೂನುಗಳನ್ನು ರಕ್ಷಿಸುವುದಾಗಿತ್ತು.[34] ವಸಾಹತುಶಾಹಿ ಕಾನೂನು ತುಳುನಾಡಿನ ವಿಭಿನ್ನ ಸಮುದಾಯಗಳಿಂದ ಮತಾಂತರಿತ ಜನರ ಹಕ್ಕುಗಳನ್ನು ರಕ್ಷಿಸಲು ತನ್ನ ನಡವಳಿಕೆಯಲ್ಲಿ ವಿರೋಧಾಭಾಸಗಳನ್ನು ಹುಟ್ಟುಹಾಕಿತು. ಉತ್ತಾರಾಧಿಕಾರಕ್ಕೆ ಸಂಬಂಧಿಸಿ ಆಸ್ತಿಯನ್ನು ಒಳಗೊಂಡಂತೆ ಮತಾಂತರಿತರ ಸಾಮಾಜಿಕ ಮತ್ತು ಧಾರ್ಮಿಕ ಅನನ್ಯತೆಯ ಬಗ್ಗೆಯೂ ಪಂಥ ಕಟ್ಟುವ ಪ್ರಯತ್ನಗಳು ಆದವು. ವಸಾಹತುಶಾಹಿಯ ಪ್ರಕಾರ ವಾರಸುದಾರಿಕೆಗೆ ಸಂಬಂಧಿಸಿದ ವಿಚಾರಗಳು ಸಂಕೀರ್ಣವಾಗಿದ್ದು, ಯಾವುದೇ ಸರ್ವಮಾನ್ಯವಾದ ಕಾನೂನುಗಳಿರಲಿಲ್ಲ. ಇಲ್ಲಿರುವ ವಿಭಿನ್ನ ಸಮುದಾಯಗಳಲ್ಲಿ ವಿಭಿನ್ನ ವಾರಸುದಾರಿಕೆಯ ಚಿಂತನೆಗಳಿರುವುದು ಸಾಮಾನ್ಯವಾಗಿತ್ತು. ಬೇರೆ ಬೇರೆ ವರ್ಗಗಳಿಂದ ಮತಾಂತರಿತಗೊಂಡ ಕ್ರೈಸ್ತರಿಗೂ ವಾರಸುದಾರಿಕೆಗೆ ಸಂಬಂಧಿಸಿದ ವಿಚಾರಗಳಲ್ಲಿ ನ್ಯಾಯಿಕ ಹಾಗೂ ಸಾಂಸ್ಕೃತಿಕ ಸಂಕೀರ್ಣತೆ, ಬಹು ತತ್ವವಾದವನ್ನು ಒಂದೇ ಕಾನೂನಡಿ ತರುವ

ಪ್ರಯತ್ನಗಳನ್ನು ಮಾಡಿತು. ಹೀಗೆ 1865ರಲ್ಲಿ ಕಾಯಿದೆಯನ್ನು ಜಾರಿಗೆ ತರುವುದರ ಮೂಲಕ ವಸಾಹತುಶಾಹಿ ನ್ಯಾಯಾಂಗ ಇಲ್ಲಿನ ಹಲವಾರು ಕ್ರೈಸ್ತ ಕುಟುಂಬಗಳನ್ನು ಅವುಗಳನ್ನು ಮೂಲದ ಕುಟುಂಬದ ನೆಲೆ, ಜಾತಿ ಸಂಪ್ರದಾಯಗಳಿಂದ ಬೇರ್ಪಡಿಸಿ ವಿದೇಶಿ ಸಮುದಾಯ ಎಂಬುವುದಾಗಿ ಪರಿವರ್ತಿಸಿತು.[35]

**ಅಳಿಯಸಂತಾನ-ವಂಶಾರ್ಜಿತತೆ-ವಸಾಹತುಶಾಹಿ**

ತುಳುನಾಡಿನಲ್ಲಿ ವಸಾಹತುಶಾಹೀ ನಿರ್ಣಾಯಕವಾಗಿ ಸ್ಪರ್ಶಿಸಿದ ಕ್ಷೇತ್ರಗಳೆಂದರೆ ಅಳಿಯಸಂತಾನ ಕುಟುಂಬ ವ್ಯವಸ್ಥೆ ಮತ್ತು ವಂಶಾರ್ಜಿತ ಕಲ್ಪನೆ.[36] ನಿಜವಾಗಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ವಸಾಹತುಶಾಹಿಯ ಮಧ್ಯಸ್ಥಿಕೆ ಮತ್ತು ಅದು ಹುಟ್ಟು ಹಾಕಿದ ಬೇಡಿಕೆಗಳು ಆ ಸಮಾಜಗಳ ಆರ್ಥಿಕ ಮತ್ತು ಸಾಮಾಜಿಕ ನೇಯ್ಗೆಗಳನ್ನು ಬದಲಾಯಿಸುವ ಬೆಳವಣಿಗೆಗಳು ದೊಡ್ಡರೀತಿಯಲ್ಲಿ ಪರಿಣಾಮ ಬೀರಿದವು. ವಸಾಹತುಶಾಹಿ ವ್ಯಾಖ್ಯಾನವು ಕಾನೂನು ಮತ್ತು ರೂಢಿಗಳ ನಡುವೆ ಒಂದು ವ್ಯತ್ಯಾಸವನ್ನು ಮಾಡಿತು ಮತ್ತು ಎರಡನೆಯದನ್ನು ನಿಮ್ನತರ ಹಾಗೂ ಕಡಿಮೆ ನ್ಯಾಯಸಮ್ಮತ ಎಂದು ಪರಿಗಣಿಸಿತು. ನ್ಯಾಯಾಂಗಕ್ಕೆ ಇದೊಂದು ಕೀಟಲೆಯಾಗಿದ್ದು, ಇದನ್ನು ಅದು ಮೌನದಿಂದ ಸಮ್ಮತಿಸಬೇಕಿತ್ತು. ತುಳುನಾಡಿನಲ್ಲಿ ಕಾಣಲ್ಪಟ್ಟ ಪ್ರಮುಖ ಸಾಮಾಜಿಕ ಬದಲಾವಣೆಯೆಂದರೆ ಕುಟುಂಬ ಮತ್ತು ಉತ್ತಾರಾಧಿಕಾರಕ್ಕೆ ಸಂಬಂಧಿಸಿದುದು. ಶಿಕ್ಷಣ, ಉದ್ಯೋಗ, ಸಾರ್ವಜನಿಕ ಕ್ಷೇತ್ರಗಳಲ್ಲಿ ಹೊಸ ಅವಕಾಶಗಳು, ಕಾನೂನು ಮತ್ತು ಆಡಳಿತದಲ್ಲಿ ಹೊಸ ಮಧ್ಯಸ್ಥಿಕೆ ತಂದ ಉದಾರವಾದಿ ಕಲ್ಪನೆಗಳು, ಮತ್ತು ಬದಲಾಗುತ್ತಿರುವ ಸಮಾಜದಲ್ಲಿ ಬೇರೆ ಬೇರೆ ಪಂಥಗಳ ಆಸೆ, ಬೇಡಿಕೆ, ಭಿನ್ನತೆ ಮತ್ತು ಪ್ರತಿಪಾದನೆಗಳನ್ನು ಮುಂಚಾಚಿದ ಪ್ರಖರ ಮುದ್ರಣ ಸಂಸ್ಕೃತಿ-ಇವುಗಳು ತುಳುವರ ಜೀವನದ ಹೆಚ್ಚು ಕಡಮೆ ಎಲ್ಲಾ ಕ್ಷೇತ್ರಗಳನ್ನು ವಸಾಹತುಶಾಹಿ ಯಜಮಾನಿಕೆಯು ಸ್ಪರ್ಶಿಸುವಂತೆ ಮಾಡಿದವು. ಹೀಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ವಸಾಹತುಶಾಹಿಯ ಮಧ್ಯಸ್ಥಿಕೆ ಮತ್ತು ಅದು ಹುಟ್ಟು ಹಾಕಿದ ಬೇಡಿಕೆಗಳು ತುಳುನಾಡಿನ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗಳನ್ನು ದೊಡ್ಡ ರೀತಿಯಲ್ಲಿ ಬದಲಾಯಿಸಲು ಕಾರಣವಾದವು. ವಸಾಹತುಶಾಹಿ ತುಳುನಾಡಿನ ಕಾನೂನು ಮತ್ತು ರೂಢಿಗಳ ನಡುವೆ ಸ್ಪಷ್ಟವಾದ ವಿಭಜನೆ ಮಾಡಿ ರೂಢಿ-ಸಂಪ್ರದಾಯಗಳನ್ನು ನಿಮ್ನತರ ಹಾಗೂ ಕಡಿಮೆ ನ್ಯಾಯಸಮ್ಮತ ಎಂದು ಪರಿಗಣಿಸಿ ವ್ಯಾಖ್ಯಾನಿಸಿತು. ತುಳುವರು ಶತಮಾನಗಳಿಂದ ಜೀವನದ ಭಾಗವಾಗಿಸಿದ್ದ ರೂಢಿ-ಸಂಪ್ರದಾಯಗಳು ವಸಾಹತುಶಾಹೀ ದೃಷ್ಟಿಯಲ್ಲಿ ಮೂಢನಂಬಿಕೆಗಳೆನಿಸಿಕೊಂಡವು. ಅವರ ಪ್ರಕಾರ ಅದಿಕಾಲದಲ್ಲಿ ಅನಾಗರೀಕ ನಡೆಗಳಿಗೆ ತುಳುನಾಡು ಉದಾರ ಅವಕಾಶ ಮಾಡಿಕೊಟ್ಟಿದ್ದು ಪ್ರಮುಖ ಕಾಯಿದೆ ಅಥವಾ ಪ್ರಮಾಣಗ್ರಂಥಗಳು ಅವುಗಳಿಗೆ ಸಮ್ಮತಿ ಕೊಡದಿದ್ದರೂ ಅವು ಕೆಲವು ಜಾತಿ ಸಮುದಾಯಗಳ

ವಿಕೃತ ಆಭ್ಯಾಸಗಳಾಗಿ ಕಾರ್ಯಗತಗೊಂಡಿದ್ದವು. ಆದ್ದರಿಂದ ತುಳುನಾಡಿನಲ್ಲಿ ಕಾನೂನು ಮತ್ತು ಆಡಳಿತಗಳಲ್ಲಿ ಏಕರೂಪತೆಯನ್ನು ತರಲಿಚ್ಛಿಸಿದ ವಸಾಹತುಶಾಹಿಯ ಕಾನೂನುತಜ್ಞರು ಅಳಿಯಸಂತಾನಕಟ್ಟು ವ್ಯವಸ್ಥೆಯನ್ನು ವಿಲಕ್ಷಣತೆಯ, ಹತಾಶೆಗಳ ಪರಮಾವಧಿಗಳೆಂದು ಅಭಿಪ್ರಾಯಪಟ್ಟರು. ಉತ್ತಾರಾಧಿಕಾರಕ್ಕೆ ಸಂಬಂಧಿಸಿದ ಮೊಕದ್ದಮೆಗಳು ಹೆಚ್ಚಿನ ಸಂಖ್ಯೆಯಲ್ಲಿ ದಾಖಲಾದುದರಿಂದ ವಿಷಯಗಳನ್ನು ಸರಳಗೊಳಿಸಲು ಸಾಧ್ಯವಿಲ್ಲವೆಂದು ಮನಗಂಡು ವಸಾಹತುಶಾಹಿ ಮಧ್ಯಸ್ಥಿಕೆಯಲ್ಲಿ ಮರುಸೇರುವೆಯಾಗಲು ಪ್ರಯತ್ನಪಟ್ಟಿತ್ತು. ಆದರೆ ಅಳಿಯಸಂತಾನ ವ್ಯವಸ್ಥೆಯ ಬಗ್ಗೆ ವ್ಯಕ್ತವಾದ ಸಾರ್ವಜನಿಕ ಅಭಿಪ್ರಾಯ ಹಾಗೂ ಕಾನೂನು ಮಧ್ಯಸ್ಥಿಕೆಯು ಈ ವ್ಯವಸ್ಥೆಯನ್ನು ಮತ್ತಷ್ಟು ಗೊಂದಲ ಹಾಗೂ ಕ್ಷೋಭೆಗೊಳಿಸಿದವು.[37] ಉದಾಹರಣೆಗೆ ಕಾಶ್ಮೀರ್ ರೆಬೆಲ್ಲೊ ಎದುರು ಲಿಂಗು ಪ್ರಕರಣದಲ್ಲಿ ನ್ಯಾಯಲಯವು ಅಳಿಯ ಸಂತಾನಕಟ್ಟನ್ನು ವ್ಯಕಿಯೂ ಸಂಬಂಧಿಸಿರುವ ವರ್ಗದ ಖಾಸಗಿ ಅಂತಸ್ತಿನ ಕಾನೂನಿನ ಭಾಗವಾಗಿ ಪರಿಗಣಿಸಿತ್ತಲ್ಲದೇ ಅಳಿಯ ಸಂತಾನ ಸಂಪ್ರದಾಯವನ್ನು ಜಿಲ್ಲೆಯ ಸ್ಥಳೀಯ ಕಾನೂನಾಗಿ ಪರಿಗಣಿಸಲು ಸಾಧ್ಯವಿಲ್ಲ ಎಂದಿತು. 1843ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಾಶಗೊಂಡ ಅಳಿಯಸಂತಾನಕ್ಕೆ ಸಂಬಂಧಿಸಿದ ಕಿರುಹೊತ್ತಗೆಯೊಂದು ವಸಾಹತುಶಾಹಿಗಳ ಪಾಲಿಗೆ ಅವಿಚಾರಿ, ಬಾಲಿಶ, ತಿಳಿಗೇಡಿ, ಸುಳ್ಳುಗ್ರಂಥವೆಂದು ಪರಿಗಣಿತವಾದರೂ ಅಳಿಯಸಂತಾನ ಅಲಿಖಿತವಾಗಿ ಈ ಪ್ರದೇಶದ ಆಚರಣೆಯಲ್ಲಿರುವ ಒಂದು ಸಂಪ್ರದಾಯವಾಗಿ, ಒಂದು ಮಾನವಶಾಸ್ತ್ರೀಯ ಹಾಗೂ ಸಾಮಾಜಿಕ ಕುತೂಹಲವಾಗಿ ಅ ನ್ಯಾಯಾಂಗ ಸಾಂಧರ್ಭಿಕವಾಗಿ ನಿಭಾಯಿಸಬೇಕಾದ ಪ್ರಶ್ನೆಯಾಗಿ ಕಾಣಿಸಿಕೊಂಡು ಮುಂದುವರೆಯಿತು.[38] ಬದಲಾಗುತ್ತಿದ್ದ ಸಂದರ್ಭದಲ್ಲಿ ಕಾನೂನಿಗೆ ತೊಡಕಾಗಿ ಪರಿಣಮಿಸಿದ ಅಳಿಯಸಂತಾನ ವ್ಯವಸ್ಥೆಯನ್ನು ರದ್ದುಪಡಿಸುವ ಪ್ರಯತ್ನಗಳು ಮನವಿಗಳ ಮೂಲಕ ಹಲವಾರು ಬಾರಿ ವಸಾಹತುಶಾಹಿಗಳ ಗಮನಕ್ಕೆ ತರಲಾಯಿತಾದರೂ ಬಹುಸಂಖ್ಯೆಯ ಜನರು ಇಂತಹ ಬೇಡಿಕೆಗಳನ್ನು ವಿರೋಧಿಸಿದ್ದರಿಂದ ಈ ಮನವಿಗಳ ಬಗ್ಗೆ ತುರ್ತು ತೀರ್ಮಾನ ಕೈಗೊಳ್ಳಲು ಸರಕಾರಕ್ಕೆ ಸಾಧ್ಯವಾಗಲಿಲ್ಲ.[39] ಅದಾಗ್ಯೂ ವಸಾಹತುಶಾಹಿಗಳ ದೃಷ್ಟಿಯಲ್ಲಿ ಅಳಿಯಸಂತಾನ ವ್ಯವಸ್ಥೆಯಲ್ಲಿ ಆಸ್ತಿಗೆ ಸಂಬಂಧಿಸಿದಂತೆ ಪಟ್ಟಭದ್ರ ಹಿತಾಸಕ್ತಿಗಳು ಬಹುಮಟ್ಟಿಗೆ ದುಸ್ತರತೆಯನ್ನು ತಂದೊಡ್ಡುತ್ತಿವೆ ಎಂಬ ವಿಶ್ಲೇಷಣೆಗಳಾದವು.[40] ಆ ಕಾಲಘಟ್ಟದಲ್ಲಿ ಸಾಮಾಜಿಕ ಅಗತ್ಯಗಳಿಗೆ ಹೊಂದಿಕೆಯಾಗಿದ್ದ ಸಂಪ್ರದಾಯಗಳು ಕಾನೂನುಗಳನ್ನು ಮೀರಿ ಬೆಳೆದಿದ್ದವು. ಆದರೆ ಉತ್ತರಾಧಿಕಾರದ ಸಂಪ್ರದಾಯವು ಬದಲಾಗುತ್ತಿರುವ ಕಾಲಕ್ಕೆ ಹೊಂದಿಕೆಯಾಗದ ಕಾರಣ ವಸಾಹತುಶಾಹಿಗಳ ತಾಟಸ್ಥ್ಯ ಅಥವಾ ಮಧ್ಯಪ್ರವೇಶ ಎಂಬೆರಡು ಪರಸ್ಪರ ವಿರುದ್ಧ ಭಾವನೆಗಳ ನಡುವೆ ತೊನೆದಾಡುತ್ತಿದ್ದಾಗ ಅದರಿಂದ ಸಂಭಾವ್ಯ ಪರಿಣಾಮಕ್ಕೆ ಒಳಗಾಗುವ ಸಮುದಾಯಗಳು ಮಧ್ಯಪ್ರವೇಶಿಸಿ

ಬೇಡಿಕೆಗಳನ್ನು ಮುಂದಿಟ್ಟವು. ಬದಲಾವಣೆಯ ಸಂದರ್ಭದಲ್ಲಿ ಕಾನೂನಿನ ನಿರ್ಬಂಧಗಳು, ಸಾರ್ವಜನಿಕ ಚರ್ಚೆ ಮತ್ತು ಮುದ್ರಿತ ಮಾಧ್ಯಮಗಳ ಮೂಲಕ ಸಾರ್ವಜನಿಕ ಅಭಿಪ್ರಾಯ ಮೂಡಿಸುವ, ಜಾಗೃತಿ ಉಂಟು ಮಾಡುವ ಪ್ರಯತ್ನಗಳು ನಡೆದವು. ಪ್ರಾಚೀನ ಸಂಪ್ರದಾಯವೊಂದನ್ನು ಬದಲಾಯಿಸಿ ಪುನರ್‌ರಚಿಸುವ ಮೂಲಕ ಗೌರವಿಸಲು ಸಾಧ್ಯ ಎಂಬ ವಾದಗಳು ಮುಂದಿಡಲ್ಪಟ್ಟವು. ಇದು ಶಾಸನದ ತೊಡಕುಗಳು ಮತ್ತು ಪರಿಣಾಮಗಳು, ಅದಕ್ಕೆ ಒಳಗಾಗುವ ಸಮುದಾಯಗಳಲ್ಲಿ ಉಂಟುಮಾಡಿದ ಸಂಚಲನ ಮತ್ತು ಶಿಕ್ಷಿತರಲ್ಲಿ ಉಂಟುಮಾಡಿದ ಚರ್ಚೆಗಳಲ್ಲಿ ಪ್ರತಿಫಲಿತವಾಯಿತು.

ಅಳಿಯಸಂತಾನ ಸಮುದಾಯಕ್ಕೆ ಸಂಬಂಧಿಸಿದ ವಸಾಹತುಶಾಹಿ ಚಿಂತನೆಗಳಿಂದ ಪ್ರೇರಿತವಾದ ಯುವ ಸಮುದಾಯವು ಅಳಿಯಸಂತಾನ ಆಸ್ತಿಗೆ ಬದಲಾಗಿ ಸ್ವಾರ್ಜಿತ ಆಸ್ತಿ ಮತ್ತು ಆದಾಯಗಳನ್ನು ಹೊಂದತೊಡಗಿದ್ದರಿಂದ ಸಂಪ್ರದಾಯದ ಬದಲಾವಣೆಗೆ ಅಂದಿನ ಮಾಧ್ಯಮಗಳ, ಇಲ್ಲವೇ ಸಂಘಟನೆಗಳ ಮೂಲಕ ಅಗ್ರಹಿಸಿರುವುದು, ಬದಲಾವಣೆಯನ್ನು ಬಯಸಿರುವುದು ಮತ್ತು ಅದನ್ನು ಪ್ರತಿನಿಧಿಸುವ ಮೂಲಕ ವಸಾಹತುಶಾಹಿಯ ವಾರಸುದಾರಿಕಾ ಚಿಂತನೆಗೆ ಪ್ರಾಮುಖ್ಯತೆ ನೀಡಿರುವುದನ್ನು ಕಾಣಬಹುದು. ಇದಕ್ಕೆ ವಿರುದ್ಧವಾಗಿದ್ದ ಹಳೆಯ ಸಂಪ್ರದಾಯಸ್ಥ ವ್ಯವಸ್ಥೆಗಳ ಸಮರ್ಥಕರು ಬದಲಾವಣೆಯ ಗಾಳಿಯನ್ನು ಗುರುತಿಸಿದರಾದರೂ, ಸಂಪ್ರದಾಯದ ಮೇಲೆ ಭರವಸೆ ಮುಂದುವರೆಸಿದರು. ಆಳಿಯಸಂತಾನಕ್ಕೆ ಪೂರ್ಣ ಕಾನೂನಿನ ಮಾನ್ಯತೆ ಕೊಡದ ವಸಾಹತುಶಾಹಿ ಅದು ತುಳುನಾಡಿನ ಎಲ್ಲಾ ಸಮುದಾಯಗಳ ಕಾನೂನು ಕಟ್ಟಳೆಯಾಗಲು ಸಾಧ್ಯವಿಲ್ಲ ಎಂಬ ವಾದವನ್ನು ಮಂಡಿಸಿತು.[41] ಅದಕ್ಕನುಗುಣವಾಗಿ ವಸಾಹತುಶಾಹಿ ಆಡಳಿತ ಆಳಿಯಸಂತಾನದ ಪ್ರಕಾರ ನಡೆಯುವ ವಿವಾಹ ಸಂಬಂಧಗಳಿಗೆ ಕಾನೂನು ಮಾನ್ಯತೆ ನೀಡಲಿಲ್ಲ. ಅಳಿಯ ಸಂತಾನದ ಕಟ್ಟಳೆಯಂತೆ ನಡೆಯುವ ಕುಲಾಚಾರದ ಮದುವೆಯ ಪ್ರಕಾರ ಹೆಣ್ಣು ಗಂಡನ್ನು ಪತಿಯ ರೂಪದಲ್ಲಿ ಪಡೆದು ತನ್ನಿಷ್ಟದಂತೆ ಗಂಡನನ್ನು ಒಪ್ಪಬಹುದು ಇಲ್ಲವೇ ನಿರಾಕರಿಸಬಹುದು. ಈ ವ್ಯವಸ್ಥೆಯಲ್ಲಿ ಮಹಿಳೆ ತನ್ನ ಕುಟುಂಬದೊಂದಿಗೆ ನೆಲೆಸುತ್ತಾಳೆ. ಗಂಡು ತನಗಿಷ್ಟವಿದ್ದಂತೆ ಹೆಂಡತಿಯನ್ನು ಕೂಡಿಕೊಳ್ಳಬಹುದಾಗಿತ್ತಾದರೂ ಗಂಡ ಹೆಂಡತಿಯನ್ನು ಸಂರಕ್ಷಣೆ ಮಾಡುವ ಜವಾಬ್ದಾರಿ ಆತನ ಮೇಲಿರಲಿಲ್ಲ.[42]

ತುಳುನಾಡಿನಲ್ಲಿ ಕಾನೂನು ಮತ್ತು ಆಡಳಿತದಲ್ಲಿ ಏಕರೂಪತೆ ತರಲು ಇಚ್ಚಿಸಿದ ವಸಾಹತುಶಾಹಿಯ ಕಾನೂನು ಪಾರುಪತ್ಯಗಾರರು ಈ ವ್ಯವಸ್ಥೆಯನ್ನು ವಿಲಕ್ಷಣ ಮತ್ತು ಹತಾಶೆಗಳೆಂದು ಪರಿಗಣಿಸಿ ಈ ಸಾಮಾಜಿಕ ಪರಂಪರೆಯನ್ನು ಬದಲಾಯಿಸುವ ಇಲ್ಲವೇ ಅದರ ವಾಸ್ತವವನ್ನು ನಿರಾಕರಿಸುವ ಪ್ರಯತ್ನ ಮಾಡಿದರು.[43] ಈ ಎಲ್ಲಾ ಬೆಳವಣಿಗೆಗಳ

ಪರಿಣಾಮವಾಗಿ ವಸಾಹತುಶಾಹಿಯ ಮಾನಸಿಕತೆಯನ್ನು ಒಪ್ಪಿಕೊಂಡ ಅಥವಾ ಅದರ ಪ್ರಭಾವಕ್ಕೆ ಒಳಗಾದ ತುಳುನಾಡಿನ ಹೊಸ ಪೀಳಿಗೆ ಸಾಮಾನ್ಯಶಕೆ 1868ರಲ್ಲಿ ಅಳಿಯಸಂತಾನದ ಕುಟುಂಬಗಳ ಸದಸ್ಯರು ಸಹಿ ಹಾಕಿದ ಮನವಿಯೊಂದನ್ನು ಸರಕಾರಕ್ಕೆ ಹಸ್ತಾಂತರಿಸುವಂತೆ ಕೋರಿ ಜಿಲ್ಲಾಧಿಕಾರಿಗಳಿಗೆ ನೀಡಲಾಗಿತ್ತು. ಈ ಮನವಿಯ ಪ್ರಮುಖ ವಿಷಯವೆಂದರೆ ಅಳಿಯಸಂತಾನ ಕ್ರಮವನ್ನು ರದ್ದುಪಡಿಸಿ ಸಾಮಾನ್ಯ ಪಿತೃಮೂಲ ಉತ್ತರಾಧಿಕಾರ ಪದ್ಧತಿ ಜಾರಿಗೆ ತರುವಂತೆ ಬೇಡಿಕಯಿಟ್ಟದ್ದು.[44] ಬದಲಾವಣೆಯ ಸಂದರ್ಭಗಳಲ್ಲಿ ಕಾನೂನಿನ ನಿರ್ಬಂಧಗಳು, ಸಾರ್ವಜನಿಕ ಚರ್ಚೆ ಮತ್ತು ಮುದ್ರಿತ ಮಾಧ್ಯಮಗಳ ಮೂಲಕ ಸಾರ್ವಜನಿಕ ಅಭಿಪ್ರಾಯ ಮೂಡಿಸುವ, ಜಾಗೃತಿ ಉಂಟುಮಾಡುವ ಪ್ರಯತ್ನಗಳು ನಡೆದವು.

ಸಾಮಾನ್ಯಶಕೆ 1870ರ ಹಿಂದು ಉಯಿಲು ಶಾಸನ ಇಲ್ಲಿನ ಸಮುದಾಯಗಳಲ್ಲಿ ಸಂಚಲನ ಹಾಗೂ ಶಿಕ್ಷಿತರಲ್ಲಿ ಒಂದು ಬಗೆಯ ಚರ್ಚೆಗಳನ್ನು ಮೂಡಿಸಿತ್ತು. ಹಾಗೂ ಇದು ಪ್ರಾಚೀನ ಸಂಪ್ರದಾಯ ಮತ್ತು ವಾರಸುದಾರಿಕಾ ಚಿಂತನೆಗಳಲ್ಲಿ ಅಮೂಲಾಗ್ರ ಬದಲಾವಣೆ ತಂದಿತು.[45] 1910ರಲ್ಲಿ ಪ್ರಕಟವಾದ ಸ್ವದೇಶಾಭಿಮಾನಿಯ ಪತ್ರಿಕೆಗಳಲ್ಲಿ. 1. ಸಂಪಾದಕರಿಗೆ ಪತ್ರ–ಮಾತೃಮೂಲ ಕುಟುಂಬಕ್ಕೆ ಸೇರಿದ ಕಿರಿಯ ಸದಸ್ಯನೊಬ್ಬ ಅಳಿಯಸಂತಾನ ಕಾನೂನಿನಲ್ಲಿ ಬದಲಾವಣೆಗೆ ಅಗ್ರಹಿಸಿದ. ಕುಟುಂಬದ ಯಜಮಾನರು ಹೊಸ ಕಾನೂನುಗಳನ್ನು ಒಪ್ಪಿಕೊಳ್ಳುವ ನಿರಾಕರಿಸಿದ ಬಗೆಗೆ ಅದರಲ್ಲಿ ಖಿನ್ನತೆ ವ್ಯಕ್ತವಾಯಿತು. ಶಿಕ್ಷಣ ಮತ್ತು ಬೇರೆ ಬೇರೆ ಅವಕಾಶಗಳನ್ನು ಉಪಯೋಗಿಸಿಕೊಂಡು ಕುಟುಂಬಗಳ ಕಿರಿಯ ಸದಸ್ಯರು ಸ್ವಾರ್ಜಿತ ಆಸ್ತಿ ಮತ್ತು ಆದಾಯ ಹೊಂದತೊಡಗಿದ್ದು, ಇದನ್ನು ಮನೆಯ ಒಟ್ಟು ಆಸ್ತಿಗೆ ಸೇರಿಸಿ ತಮ್ಮ ಮಕ್ಕಳಿಗೆ ಸಿಗದಂತೆ ಮಾಡಲು ಅವರು ತಯಾರಿರಲಿಲ್ಲ. 2. ಮನೆತನದ ಆಸ್ತಿಯನ್ನು ಪಾಲು ಮಾಡಲು ಬಿಟ್ಟರೆ ಹಳ್ಳಿಯಲ್ಲಿ ಪ್ರತಿಯೊಬ್ಬರೂ ಅದಕ್ಕೆ ಬಲಿಯಾಗುತ್ತಾರೆ. ಜಮೀನನ್ನು ಮಾರುತ್ತಾರೆ. ಪರಿಣಾಮವಾಗಿ ಹಲವು ವರ್ಷಗಳಿಂದ ಮನೆತನಗಳು ಅನುಭವಿಸಿಕೊಂಡು ಬಂದ ಅಧಿಕಾರ–ಪ್ರಭಾವಗಳು ನಷ್ಟವಾಗುತ್ತವೆ ಎಂಬ ಭಯವೂ ಇತ್ತು. ಅಳಿಯಸಂತಾನ ಸಂಪ್ರದಾಯದ ತಿದ್ದುಪಡಿಯ ಬಗ್ಗೆ ಚರ್ಚಿಸುವ ವಿಚಾರಗಳು ಮಾಧ್ಯಮಗಳ ಮೂಲಕ ಅನಾವರಣಗೊಂಡಾಗ ಅದರ ಒಳಿತು–ಕೆಡುಕುಗಳು, ಮನೆತನದ ಆಸ್ತಿಪಾಸ್ತಿಗಳ ವಿಭಜನೆ, ವಸಾಹತುಪೂರ್ವದಿಂದಲೂ ಅನುಭವಿಸಿಕೊಂಡು ಬಂದಿರುವ ಅಧಿಕಾರ, ಸಾಮಾಜಿಕ ಮಾನ್ಯತೆಗಳ ನಷ್ಟ, ಯಜಮಾನನ ಅಧಿಕಾರ ಮತ್ತು ಗುತ್ತಿನ ಹೊಂದಿಕೆಗಳಿಗೆ ಬರುವ ಚ್ಯುತಿ, ಸಾಮಾಜಿಕ ವಿಘಟನೆ ಒಟ್ಟಿನಲ್ಲಿ ಹಲವು ಹೊಯ್ದಾಟಗಳಿಂದಾಗಿ ಸಂಪ್ರದಾಯಗಳು ಆ ಕಾಲಕ್ಕೆ ಹೊಂದಿಕೆಯಾಗುತ್ತಿಲ್ಲವೆಂಬ ಅಳಲು ಒಂದೆಡೆ ವ್ಯಕ್ತವಾದರೆ, ಇವೇ ವಿಚಾರಗಳು ನ್ಯಾಯಾಲಯಗಳಲ್ಲಿ ದಾವೆಗಳಾಗಿ ದಾಖಲಿಸಲ್ಪಟ್ಟು ಅಳಿಯ ಸಂಪ್ರದಾಯವನ್ನು ಅನುಸರಿಸುವ

ಸಮುದಾಯಗಳು ಅದರ ರಕ್ಷಣೆಗೆ ಪಣತೊಟ್ಟರೆ[46] ಆ ದಾವೆಗಳ ಕಾವನ್ನು ತಗ್ಗಿಸುವ ಉದ್ದೇಶದಿಂದ ಸಂಪ್ರದಾಯಸ್ಥರು ಸಹ ಈ ವ್ಯವಸ್ಥೆಯಿಂದ ಹೊರಬರಲು ಕಾತರರಾಗಿದ್ದಾರೆ ಎಂಬ ಚಿಂತನೆಯನ್ನು ವಸಾಹತುಶಾಹಿಗಳು ಹರಿಯಬಿಟ್ಟರು.[47]

ಇಪ್ಪತ್ತನೇ ಶತಮಾನದ ಮೂರನೇಯ ಮತ್ತು ನಾಲ್ಕನೇ ದಶಕಗಳಲ್ಲಿ ಸಂಪ್ರದಾಯಗಳನ್ನು ಬದಲಾಯಿಸುವ ಪ್ರಕ್ರಿಯೆಗಳೆಡೆಗೆ ತುಳುನಾಡು ಕುತೂಹಲ, ಆತಂಕ ಮತ್ತು ನಿರೀಕ್ಷೆ ಮಿಶ್ರಿತ ಪ್ರತಿಕ್ರಿಯೆಗಳನ್ನು ನೀಡಿತು. 1933ರಲ್ಲಿ ಅಳಿಯಸಂತಾನ ವ್ಯವಸ್ಥೆಗೆ ಒಳಗಾದವರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಮಸೂದೆಯನ್ನು ಪ್ರಸ್ತಾಪಿಸಿ ಅದರ ಬಗೆಗೆ ಸಾರ್ವಜನಿಕ ಅಭಿಪ್ರಾಯವನ್ನು ಪಡೆಯಲಾಯಿತು. ಈ ಸಂಪ್ರದಾಯವನ್ನು ಅನುಸರಿಸುವ ಎಲ್ಲ ಸಮುದಾಯಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದವು. 1948ರಲ್ಲಿ ಅಳಿಯಸಂತಾನ ಕಾನೂನು ಜಾರಿಗೆ ಬಂದು ಅಳಿಯಸಂತಾನದ ಮುಖ್ಯ ಮತ್ತು ವಿವಾದಿತ ಅಂಶಗಳನ್ನು ನಿವಾರಿಸಲು ಪ್ರಯತ್ನಿಸಿತು. ಅದು ಬಹುವಾಗಿ ಮತ್ತು ಪರಿಣಾಮಕಾರಿಯಾಗಿ ಹಿಂದೂ ಕಾನೂನಿನ ಮುಖ್ಯವಾಹಿನಿಗೆ ಅನುಗುಣವಾಗಿತ್ತು. ಅದಾಗ್ಯೂ ಈ ಕಾನೂನು ಮಾತೃವಂಶೀಯತೆಗೆ ಅರ್ಥಪೂರ್ಣ ಅಧಿಕಾರ ನೀಡಲಿಲ್ಲ. ಅದು ಮಹಿಳೆಯ ಅಧಿಕಾರವನ್ನು ವಿಧಿವತ್ತಾಗಿ ಸಂಸ್ಕರಿಸಿದರೂ ಅಧಿಕಾರ ಚಲಾಯಿಸುವ ಅನುಮತಿಯನ್ನು ಯಜಮಾನನಿಗೆ ನೀಡಿತು. ವಸಾಹತುಶಾಹಿ ಆಡಳಿತದ ನಂತರದ ತುಳುನಾಡಿನ ಸಂದರ್ಭದಲ್ಲಿ ಅಳಿಯಸಂತಾನ ಕೇವಲ ಆಚರಣೆ ಮತ್ತು ಭಾವನಾತ್ಮಕ ಗೌರವವನ್ನು ಪಡೆಯುತ್ತಿದ್ದು, ಸಂಪ್ರದಾಯದಲ್ಲಿ ನಾಮಾಕಾವಸ್ಥೆಯ ವಸ್ತುವಾಗಿ ಅದು ತನ್ನ ಪ್ರಧಾನ ತಿರುಳನ್ನು ಕಳೆದುಕೊಂಡಿದೆ. ಆದರೆ ಕೂಡುಕುಟುಂಬಕ್ಕೆ ಸಂಬಂಧಿಸಿದಂತೆ ಕುಟುಂಬದ ಆಸ್ತಿಯ ನಿರ್ವಹಣೆ, ಸ್ವಾರ್ಜನೆ, ಇನಾಮು ಮತ್ತದರ ತೊಡಕುಗಳು, ಪರಾಭಾರೆ ಮತ್ತು ಅದರ ಹಿಶೆ, ವಿಭಜನೆ ಮತ್ತು ಪೋಷಣೆ ವ್ಯವಸ್ಥೆಗೆ ಬೇಕಾದ ದಾಖಲೆಗಳ ರಚನೆ ಇವುಗಳು ಸೇರಿ ಅಳಿಯಸಂತಾನ ಶಾಸನ ಮತ್ತು ಸಾಂಪ್ರದಾಯಿಕ ಕಾನೂನು ಇನ್ನೂ ಅನ್ವಯದಲ್ಲಿವೆ. ಇವುಗಳನ್ನು ಹೊರತುಪಡಿಸಿ ಮರಣಶಾಸನ ಬರೆಯಲ್ಪಡದ ಆಸ್ತಿಯ ಉತ್ತಾರಾಧಿಕಾರ, ದತ್ತುಸ್ವೀಕಾರ, ಪಾಲಕತನ, ಪೋಷಕತನ, ಮದುವೆ ಮತ್ತು ಅದರ ಪರಿಣಾಮಗಳು, ಇವುಗಳಿಗೆ ಸಂಬಂಧಿಸಿದಂತೆ ಈಗ ಹಿಂದೂ ಕಾನೂನು ವ್ಯವಸ್ಥೆಯ ವಿಧಿಗಳು ಅನ್ವಯಿಸಲ್ಪಡುತ್ತವೆ. ಶಾಸನದ ಪ್ರಸ್ತಾವನೆಯಲ್ಲಿ ಕಾಣಿಸುವ ಮಾತಿನ ಜೋಡಣೆಯನ್ನು ನಾವು ಅನುಸರಿಸುವುದಾದರೆ ವಿವಾಹ, ಅಶನಾರ್ಥ, ಪಾಲಕತನ ಮತ್ತು ಉಯಿಲುರಹಿತ ಉತ್ತಾರಾಧಿಕಾರಗಳಿಗೆ ಸಂಬಂಧಿಸಿ ಅದು ನಿರೂಪಿಸಿದ್ದನ್ನು ಧ್ವನಿತವಾಗಿ ಹಿಂತೆಗೆದುಕೊಂಡಿದೆ. ಕುಟುಂಬ ನಿರ್ವಹಣೆ ಮತ್ತು ಹಿಶೆಗೆ ಸಂಬಂಧಿಸಿ ಅದು ಮಾಡಿದ ತಿದ್ದುಪಡಿಯು ಕುಗ್ಗಿದ ಕಸುವಿನೊಂದಿಗೆ ಉಳಿಯುತ್ತದೆ. ಭಾರತೀಯ ಉತ್ತಾರಾಧಿಕಾರ

ಶಾಸನವು ಅಳಿಯಸಂತಾನ ಉಯಿಲಿಗೆ ಸಂಬಂಧಿಸಿದ ಪ್ರಕರಣವನ್ನು ಹಿಂದು ಕಾನೂನಿಗನುಗುಣವಾಗಿ ನಿಯಂತ್ರಿಸುತ್ತದೆ. ಅವಿಭಕ್ತ ಕುಟುಂಬಗಳ ಒಡೆಯುವಿಕೆ, ವಾಣಿಜ್ಯ ಹಾಗೂ ಕೈಗಾರಿಕಾಭಿವೃದ್ಧಿ ಮತ್ತು ಭೂಸುಧಾರಣಾ ಮಸೂದೆಗಳ ಪ್ರವೇಶದಿಂದಾಗಿ ಕೃಷಿ ಭೂಮಿಯ ಒಕ್ಕಲುತನ ರದ್ಧತಿಯಾಗಿ, ಕುಟುಂಬಗಳ ಸಾಮಾಜಿಕ ವಿನ್ಯಾಸ, ಒಡೆತನ ಮತ್ತು ಆಸ್ತಿಗಳ ಹಿಡುವಳಿ ಇತ್ಯಾದಿಗಳು ಬಹಳಷ್ಟು ಬದಲಾಗಿದ್ದು ಅಳಿಯಸಂತಾನ ವ್ಯವಸ್ಥೆಯನ್ನು ಅನುಸರಿಸುತ್ತಿರುವ ಸಮುದಾಯಗಳ ಮೇಲೆ ಬಹಳಷ್ಟು ಪರಿಣಾಮ ಬೀರಿವೆ.[48] ಹೀಗೆ ತುಳುನಾಡಿನ ಸಾಮಾಜಿಕ ವಾರಸುದಾರಿಕಾ ಪರಿಕಲ್ಪನೆಯು ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಸ್ಥಿತ್ಯಂತರಕ್ಕೆ ಒಳಗಾಯಿತು. ಈ ಬದಲಾವಣೆಗೆ ಋಣಾತ್ಮಕ ಹಾಗೂ ಧನಾತ್ಮಕ– ಹೀಗೆ ಎರಡು ಮುಖಗಳಿದ್ದುದು ಸ್ಪಷ್ಟ. ವಸಾಹತುಪೂರ್ವದ ವಾರಸುದಾರಿಕೆ ಸ್ಥಳೀಯ ಪ್ರಾಬಲ್ಯ ಅಥಾವ ಅಧಿಕಾರಿ ವ್ಯವಸ್ಥೆಯಡಿಯಲ್ಲಿ ರೂಪಿತವಾಗಿದ್ದರೆ ಅದರ ಮೂಲಬೇರು ವಸಾಹತುಶಾಹಿ ವ್ಯವಸ್ಥೆಯಡಿಯಲ್ಲಿ ಕತ್ತರಿಸಲ್ಪಟ್ಟಿತು. ಈ ರೀತಿಯ ವಾರಸುದಾರಿಕೆ ಅನಿವಾರ್ಯವಾಗಿ ಬದಲಾದ ವ್ಯವಸ್ಥೆಗೆ ಹೊಂದಿಕೊಳ್ಳಬೇಕಾಯಿತು. ಈ ಬದಲಾವಣೆಗೆ ಮೂಲ ಕಾರಣ ವಸಾಹತುಶಾಹಿ ಆಡಳಿತ ಮತ್ತು ಅದರ ಅವಿಭಾಜ್ಯ ಅಂಗವಾಗಿದ್ದ ಮತಪ್ರಚಾರಕರು ಆರಂಭಿಸಿದ್ದ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಬದಲಾವಣಾ ಅಂದೋಲನಗಳು. ಈ ಚಳುವಳಿಗಳು ದೇಶಿಯ ವ್ಯವಸ್ಥೆಯಲ್ಲಿ ತನಗನುಕೂಲವಾಗಿದ್ದ ಮೂಲಾಂಶಗಳನ್ನು ಉಳಿಸಿಕೊಂಡು ತನ್ನ ಮುಂದುವರೆಯುವಿಕೆಗೆ ಮಾರಕವಾಗಬಲ್ಲವುಗಳನ್ನು ಕಿತ್ತೊಗೆಯುವ ಗುರಿಯನ್ನು ಇಟ್ಟುಕೊಂಡಿದ್ದವು. ಈ ಉದ್ದೇಶಕ್ಕೆ ವಸಾಹತುಶಾಹಿ ಬಳಸಿದ ಪ್ರಬಲ ಅಸ್ತ್ರಗಳಲ್ಲಿ ಆಧುನಿಕ ಶಿಕ್ಷಣದ ಪರಂಪರೆಯನ್ನು ಹುಟ್ಟುಹಾಕಿ ಮೇಲ್ವರ್ಗದ ಸಮುದಾಯಗಳ ಮಾನಸಿಕ ಸ್ಥಿತ್ಯಂತರ ಮಾಡಿರುವುದು ಒಂದು. ಇದು ಆಡಳಿತದಲ್ಲಿ ಮೇಲ್ವರ್ಗಗಳ ಶಿಕ್ಷಿತರನ್ನು ಪಾಲುದಾರರನ್ನಾಗಿಸಿದರೇ ಕೆಳವರ್ಗದ ಶೋಷಣೆಗೆ ನಾಂದಿ ಹಾಡಲು ಅವಕಾಶ ಮಾಡಿಕೊಟ್ಟಿತು. ಮೇಲ್ವರ್ಗದ ಬೆಂಬಲ ವಸಾಹತುಶಾಹಿಗೆ ವರದಾನವಾಯಿತ್ತಲ್ಲದೇ ಕೆಳವರ್ಗಗಳ ಚಳುವಳಿಗಳನ್ನು ಮಟ್ಟಹಾಕಲು ಅನುಕೂಲವಾಯಿತು. ಒಂದೆಡೆ ಮೇಲ್ವರ್ಗದವರ ಹೊಂದಾಣಿಕಾ ಮನೋಭಾವ ಇನ್ನೊಂದೆಡೆ ಕೆಳವರ್ಗದವರ ಕ್ಷೀಣಗೊಂಡ ಪ್ರತಿರೋಧ ತುಳುನಾಡಿನ ಸಾಮಾಜಿಕ ವ್ಯವಸ್ಥೆಯಲ್ಲಿ ಅಮೂಲಾಗ್ರ ಬದಲಾವಣೆ ತಂದಿತ್ತಲ್ಲದೆ ವಾರಸುದಾರಿಕೆಯಲ್ಲಿ ಸ್ಥಿತ್ಯಂತರವನ್ನು ಅನಿವಾರ್ಯಗೊಳಿಸಿತು. ವಸಾಹತುಶಾಹಿಯ ಸಾಮಾಜಿಕ ಪರಿವರ್ತನೆಯಿಂದಾಗಿ ಅಳಿಯಸಂತಾನ ವ್ಯವಸ್ಥೆಗೊಳಪಟ್ಟ ಸಮುದಾಯಗಳು ಹೊಸ ಸಾಮಾಜಿಕ ವಾರಸುದಾರಿಕೆಯನ್ನು ಸೃಷ್ಟಿಸಿತ್ತಲ್ಲದೇ, ಸುಶಿಕ್ಷಿತ ತುಳುವರು ಹೊಸ ಚಿಂತನೆಗಳಿಂದ ಪ್ರಭಾವಿತಗೊಂಡರು.

ಒಂದೊಮ್ಮೆ ಅವಿಭಕ್ತ ಕುಟುಂಬಗಳಾಗಿದ್ದವು ಇಂದು ವಿಭಕ್ತ ಕುಟುಂಬಗಳಾಗಿ ಕೂಡುಕಟ್ಟು ಚಿಂತನೆಗಳನ್ನು ಮರೆತಿರುವುದು ವಸಾಹತುಶಾಹಿಯ ದೂರಗಾಮಿ ಪ್ರಭಾವ. ಜೊತೆಗೆ ಕೃಷಿಯ ವಾಣಿಜ್ಯೀಕರಣ ಇಲ್ಲಿನ ಜನಜೀವನದ ಮೇಲೆ ಮಹತ್ತರವಾದ ಪರಿಣಾಮವನ್ನು ಬೀರಿತ್ತಲ್ಲದೇ ಹಳೆಯ ಸಾಮಾಜಿಕ ಪದ್ಧತಿ ಹೊಸ ರೂಪವನ್ನು ಪಡೆದುಕೊಂಡು ಕೃಷಿ ಸಮಾಜದೊಳಗಿನ ಅಂತರ್-ಸಂಬಂಧಗಳನ್ನು ಏರುಪೇರಾಗಿಸಿತು.

## ---ಕೊನೆಟಿಪ್ಪಣಿ---

1 ಅವಿಭಕ್ತ ಕುಟುಂಬಗಳು ನಿಧಾನವಾಗಿ ವಿಭಕ್ತ ಕುಟುಂಬಗಳಾಗಿ ಮಾರ್ಪಾಡು ಹೊಂದುವ ಪ್ರಕ್ರಿಯೆ, ಕುಟುಂಬದ ಆಸ್ತಿಯ ವಿಂಗಡನೆ, ಭಾವನಾತ್ಮಕ ಸಮಾಜದ ಚೌಕಟ್ಟಿನಲ್ಲಾದ ಬದಲಾವಣೆ ಮುಂತಾದವುಗಳು.

2 ರಣಜಿತ್ ಗುಹಾ, ಡಾಮಿನೆನ್ಸ್ ವಿತ್ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟ 2.

3 ವೈಟ್‌ಹೆಡ್, ದ. ವಿಲೆಜ್ ಗಾಡ್ಸ್ ಒಫ್ ಸೌತ್ ಇಂಡಿಯಾ.

4 1871ರ ಜನಗಣತಿಯ ವರದಿಗಳು ಮತ್ತು ಗಜೆಟಿಯರ್‌ಗಳಲ್ಲಿ ವ್ಯಕ್ತವಾದ ಮಾಹಿತಿಗಳು.

5 ರಣಜಿತ್‌ಗುಹಾ, ಡಾಮಿನೆನ್ಸ್ ವಿತ್ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ, ಒ.ಯು.ಪ್ರೆಸ್ ದಿಲ್ಲಿ; 1998,

6 ಪ್ರಾನ್ಸಿಸ್ ಬುಖಾನನ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, ಪುಟಗಳು 12.

7 ಪ್ರಾನ್ಸಿಸ್ ಬುಖಾನನ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, ಪುಟಗಳು 12.

8 ಮೆಟಕಾಫ್, ಐಡಿಯಾಲಜಿ ಆಫ್ ದಿ ರಾಜ್, 1995 ಪುಟ 115-117.

9 ಆರ್‍ನಾಲ್ಡ್-ಪುಟ 39. ಪ್ರಾನ್ಸಿಸ್ ಬುಖಾನನ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, ಹಾಗೂ ಮೆಕೆಂಜಿಯ ಕೈಪಿಯತ್ತುಗಳು.

10 ದ ಸೆನ್ಸಸ್ ಆಫ್ ಇಂಡಿಯಾ 1891, ತಾಲೂಕ್, ವಿಲೇಜ್ ಸ್ಟಾಟಿಸ್ಟಿಕ್ಸ್, ಸೌತ್‌ಕೆನರಾ, ದ ಗವರ್ನಮೆಂಟ್ ಪ್ರೆಸ್ ಮದ್ರಾಸ್ ಸಂ.115, ಆರ್ 4.

11 ಎ.ಎಸ್ ಪ್ರಭಾಕರ, ಆಧಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ 2006, ಪುಟಗಳು 19, 206: ಅಪರಾಧಿ ಬುಡಕಟ್ಟು ನಿಯಮ 1871ರಲ್ಲಿ ರಚಿಸಲಾಯಿತು. 1897ರಲ್ಲಿ ಅಪರಾಧಿ ಬುಡಕಟ್ಟು ಅಧಿನಿಯಮ ರಚನೆಯಾಗಿ 1911, 1923, 1924, 1947ರಲ್ಲಿ ವಸಾಹತುಶಾಹಿಯ ಆಶಯಕ್ಕನುಗುಣವಾಗಿ ತಿದ್ದುಪಡಿ ಮಾಡಲ್ಪಟ್ಟಿತ್ತು.

12 ಬಾ.ಇ.ಎಮ್, 63ನೇ ವರದಿ 1903, ಕೆ.ಟಿ.ಸಿ ಪತ್ರಗಾರ, ಪುಟ 30. ಎಸ್. ಚಂದ್ರಶೇಖರ ದಕ್ಷಿಣಭಾರತದಲ್ಲಿ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ ಹಂಪಿ, ವಿ, ವಿ 2000, 1871ರ ಜನಗಣತಿ. ಸಾಮ್ಯೂವೆಲ್ ಮಿಲ್ಲೆ, ಕೆನರಾ ಪಾಸ್ಟ್ ಎಂಡ್ ಪ್ರೆಸೆಂಟ್, ಮದ್ರಾಸ್ 1875, ಪುಟ 19. ಪ್ರಾನ್ಸಿಸ್ ಬುಖಾನನ್, ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, ವಿ.111 ಪುಟ 16.

13 ಕೋಸ್ಬರ್ ಮೈರ್, ಸರ್ವೆ ಆಫ್ ಹಿಂದೂಯಿಸಂ, ಉದ್ಧೃತ, ಎಂ.ವಿ.ಶಾಸ್ತ್ರಿ ಯಾವುದು ಚರಿತ್ರೆ ? ದ್ರಾವಿಡ ವಿಶ್ವವಿದ್ಯಾನಿಲಯ ಕುಪ್ಪಂ 2008. ಅನುವಾದ ಬಾಬುಕೃಷ್ಣ ಮೂರ್ತಿ. ಇತ್ತೀಚಿನ ಸಂಶೋಧನೆಗಳು ಆರ್ಯ-ದ್ರಾವಿಡ ಎಂಬ ಜನಾಂಗಬೇಧ ಬ್ರಿಟಿಷರ ಕಲ್ಪನೆ ಎಂದು ಹೇಳಿವೆಯಲ್ಲದೇ ಭಾರತದಲ್ಲಿ ಈ ರೀತಿಯ ಬೇಧಗಳಿರಲಿಲ್ಲವೆಂದು ಅಮೇರಿಕಾದ ಮಾನವಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಮಾತ್ರವಲ್ಲ ಆರ್ಯ-ದ್ರಾವಿಡ ಸಿದ್ಧಾಂತ ಪೊಳ್ಳು ಎಂದು ಸಾಬೀತುಪಡಿಸಿದ್ದಾರೆ.

14 ಸಿ.ಡಿ ಮ್ಯಾಕ್ಲೀನ್, ಮ್ಯಾನುವೆಲ್ ಆಫ್ ದಿ ಅಡ್‌ಮಿನಿಸ್ಟ್ರೇಷನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ 1885, ನ್ಯೂದಿಲ್ಲಿ, ಪುಟ 109.

15 ಚಂದ್ರ ಮಲ್ಲಂಪಳ್ಳಿ, ಕ್ರಿಶ್ಚನ್ಸ್ ಅಂಡ್ ಪಬ್ಲಿಕ್ ಲೈಫ್ ಇನ್ ಕೊಲೊನಿಯಲ್ ಸೌತ್‌ಇಂಡಿಯಾ, 2004 ಪುಟ 40.

16 1910 ರ ನಂತರದ ವರ್ಷಗಳಲ್ಲಿ ಬಂಟರ ಯಾನೆ ನಾಡವರ ಸಂಘ, ಬಿಲ್ಲವರ ಯೂನಿಯನ್‌ಗಳಂತಹ ಹಲವಾರು ಜಾತಿ ಸಂಘಟನೆಗಳು ಕಾರ್ಯಪ್ರವೃತ್ತಗೊಂಡವು.

17 ಬಿಪನ್‌ಚಂದ್ರ, ಇಸ್ಟರಿ ಓಫ್ ಮಾಡರ್ನ್ ಇಂಡಿಯಾ, 2010, ಪುಟ 168.

18 ಎಂ.ವಿ.ಆರ್ ಶಾಸ್ತ್ರಿ, ಯಾವುದು ಚರಿತ್ರೆ ?, ಅನುವಾದ ಬಾಬು ಕೃಷ್ಣಮೂರ್ತಿ, ದ್ರಾವಿಡ ವಿಶ್ವವಿದ್ಯಾಲಯ ಕುಪ್ಪಂ, 2008. ಉಧೃತ, ದ. ಲೈಫ್ ಎಂಡ್ ಲೆಟರ್ಸ್ ಒಫ್ ಮ್ಯಾಕ್ಸ್‌ಮುಲ್ಲರ್ ಸಂಪುಟ 1, ಪುಟ 328. 2.ಉಧೃತ, ದ. ಲೈಫ್ ಎಂಡ್ ಲೆಟರ್ಸ್ ಒಫ್ ಮ್ಯಾಕ್ಸ್‌ಮುಲ್ಲರ್ ಸಂಪುಟ 1, ಪುಟ 358. ಭಾರತದಲ್ಲಿ ಹುಳುತು ಹೋದ 'ವೇದ ಸಂಸ್ಕೃತಿ ವೃಕ್ಷದ' ಕೃತ್ರಿಮ ಉಸಿರಾಟವನ್ನು ಕಿತ್ತು ಹಾಕಿ ಅದನ್ನು ಬೀಳಿಸುವ ಪವಿತ್ರ ಹೋರಾಟದಲ್ಲಿ ಆತ್ಮಾಹುತಿ ದಳದ ಸದಸ್ಯನಾಗಲು ಸಹ ಸಿದ್ಧವೆಂದು... ಕ್ರೈಸ್ತಪತಾಕೆಯಲ್ಲಿ ಭಾರತ ದೇಶದಲ್ಲಿ ಜಾಜ್ವಲ್ಯಮಾನವಾಗಿ ಹಾರಾಡಿಸಲು ಸಹಾಯ ಮಾಡಲು ತನ್ನ ಪಾಲಿನ ಸಹಾಯ ಹಸ್ತವನ್ನು ನೀಡುವುದಾಗಿಯೂ ಹಳೆಯ ಪರಿಚಯಸ್ಥ ಬುನ್ಸೆನ್ ಮಹಾಶಯನಿಗೆ ಉದಾರವಾಗಿ ಆಫರ್

ಮಾಡುವುದರಿಂದಷ್ಟೇ ಅವನ ಕ್ರೈಸ್ತ ಮತಾವೇಶ ನಿಲ್ಲಲಿಲ್ಲ. 1868ರಲ್ಲಿ ಸೆಕ್ರೆಟರಿ ಆಫ್ ಸ್ಟೇಟ್‌ಗೆ ಬರೆದ ಪತ್ರದಲ್ಲಿ 'ಇಂಡಿಯಾದ ಪುರಾತನ ವೃಕ್ಷ ವಿನಾಶಕ್ಕಾಗಿ ಸಿದ್ಧವಾಗಿ ನಿಂತಿದೆ. ಕ್ರೈಸ್ತಮತ ಹೆಜ್ಜೆ ಇರಿಸದಿದ್ದರೆ ತಪ್ಪು ಯಾರದು?

ಉಧೃತ, ದ. ಲೈಫ್ ಎಂಡ್ ಲೆಟರ್ಸ್ ಒಫ್ ಮ್ಯಾಕ್ಸ್‌ಮುಲ್ಲರ್ ಸಂಪುಟ 1, ಪುಟ 238. ಯೂನಿವರ್ಸಿಟಿ ಪ್ರೆಸ್‌ಗಾಗಿ ಪವಿತ್ರ ಗ್ರಂಥಗಳ ಅನುವಾದವನ್ನು ಮಾಡಲು ನಾನು ಒಪ್ಪಿಕೊಂಡಾಗ, ಭಾರತದಲ್ಲಿನ ಮಿಷನರಿಗಳಿಗೆ ಸಹಾಯ ಮಾಡುವುದು ನನ್ನ ಧ್ಯೇಯಗಳಲ್ಲೊಂದಾಗಿತ್ತು.

19 ಎ.ಸಿ ಬರ್ನೆಲ್, ರೆವರೆಂಡ್ ಮೆನ್ನರ್, ಆರ್.ಸಿ ಟೆಂಪಲ್, ವೈಟ್‌ಹೆಡ್ ಮುಂತಾದವರ ಬರವಣಿಗೆಗಳು ಈ ನೆಲೆಯಲ್ಲಿನವುಗಳು. ಉದಾಹರಣೆಗೆ ಡೆವಿಲ್ ವರ್ಷಿಪ್ ಆಫ್ ತುಳುವಾಸ್; ಎ.ಎಸ್ ಪ್ರಭಾಕರ, ಆಧಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ 2006, ಪುಟ 20. ಬಾ.ಇ.ಮಿ 33ನೇ ವರದಿ 1872, ಮಂಗಳೂರು 1873, ಪುಟಗಳು 33–34. ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ. 211. ಜಯಪ್ರಕಾಶ ರಾಘವಯ್ಯ, ಬಾಸೆಲ್ ಮಿಷನ್ ಇಂಡಸ್ಟ್ರೀಸ್ ಇನ್ ಮಲಬಾರ್ ಅಂಡ್ ಸೌತ್ ಕೆನರಾ 1834–1914. ಪುಟಗಳು 65–80. ರಣಜಿತ್‌ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟ 62.

20 ಮಿಶನರಿಗಳು ಚಟುವಟಿಕೆಗಳಿಗೆ ಭಾರತದಲ್ಲಿ ಮುಕ್ತ ಅವಕಾಶ ಕಲ್ಪಿಸಿರುವುದು. ಮೆಕಾಲೆಯನ್ನು ಕಾನೂನು ಆಯೋಗದ ಮುಖ್ಯಸ್ಥನನ್ನಾಗಿ ನೇಮಕ ಮಾಡಿರುವುದು. ಇಂಡಿಯನ್ ಪೀನಲ್ ಕೋಡ್‌ನ ರಚನೆ.(ಐ.ಪಿ.ಸಿ)

21 ಉದಾಹರಣೆಗೆ ಕೊಪರ್ನಿಕಸ್ ಎಂಬಾತ ಕ್ರಾಂತಿಯ ಸಹಯೋಗದೊಂದಿಗೆ ವಸಾಹತಿನ ಜನರ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನವನ್ನು ಪರಿವರ್ತಿಸುವ ಕನಸನ್ನು ಕಂಡಿದ್ದನು. ಈ ಕನಸಿನಂತೆ ಚರ್ಚಿನ ಬೆನ್ನಿಗೆ ನಿಂತ ವಸಾಹತುಶಾಹಿ ಆಡಳಿತ ಮತಪ್ರಚಾರಕ ಸೇವಾಕರ್ತರ ಕನಸನ್ನು ನನಸು ಮಾಡುವ ಸಾಂಸ್ಥಿಕ ಸಂಸ್ಥೆಯಾಗಿ ಪರಿವರ್ತನೆಗೊಂಡಿತು.

22 ಹೆಚ್.ಎ ಸ್ಟೂವರ್ಟ್ ಪುಟ 27. ಕ್ಯಾಥೋಲಿಕರು ಮತ್ತು ಬಾಸೆಲ್‌ಗಳು ಪಿತೃಪ್ರಧಾನ ವ್ಯವಸ್ಥೆಯ ಪ್ರತಿಪಾದಕರು. ಬಾಸೆಲ್‌ಗಳ ಪ್ರಕಾರ ಬಿಲ್ಲವ, ಮೊಗವೀರ ಮುಂತಾದವರ ಮತಾಂತರ ಸಮಾಜದಲ್ಲಿ ಪ್ರತಿಷ್ಠೆ ಹೊಂದಲು ಎಂಬ ಕಾರಣವನ್ನು ಕೊಡುತ್ತಾರೆ.

23 ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ, ಪುಟ 36.

24 ವಸಂತ ಮಾಧವ ಕೆ.ಜಿ, ರೋಲ್ ಓಫ್ ಕೊಂಕಣಿ ಪೀಪಲ್ ಇನ್ ಅಗ್ರೇರಿಯನ್ ಸೆಟ್-ಅಪ್ ಓಫ್ ಕೋಸ್ಟಲ್ ಕರ್ನಾಟಕ 1535–1800, ಮಿಥಿಕ್ ಸೊಸೈಟಿ ಕ್ವಾಟರ್ಲಿ ಜರ್ನಲ್ ಜುಲೈ–ಡಿಸೆಂಬರ್ 1990 ಪುಟ 351. 1587ರ ಮೊಡಂಕಾಪುವಿನಲ್ಲಿ ದೊರಕಿದ ಶಾಸನ ಕ್ರೈಸ್ತರನ್ನು ಕೃಷಿಕರು ಎಂದು ಸಮರ್ಥಿಸಿದೆ.

25 ಕ್ರಾಂತಿ ಪರಾಯಸ್, ದ. ಕ್ರಿಶ್ಚನ್ ಇಂಪಾಕ್ಟ್ ಇನ್ ಸೌತ್‌ಕೆನರಾ ಪುಟಗಳು 46–47, 57–61; ವಿಶಾನ್ಸ್, ಅಪ್ರಕಟಿತ ಸಂಶೋಧನ ಪ್ರಬಂಧ, ಮಂ.ವಿ.ವಿ ಪುಟ 56, ಪೀಟರ್ ವಿಲ್ಸನ್ ಪ್ರಭಾಕರ್, ಅಪ್ರಕಟಿತ ಸಂಶೋಧನ ಪ್ರಬಂಧ, ಮಂ.ವಿ.ವಿ ಪುಟಗಳು 59–62.

26 ಕ್ರಾಂತಿ ಪರಾಯಸ್, ದ ಕ್ರಿಶ್ಚನ್ ಇಂಪಾಕ್ಟ್ ಇನ್ ಸೌತ್ ಕೆನರಾ, ಪುಟ 31. ಸೆವರಿಸ್ ಡಿ ಸಿಲ್ವ, ಸಂಪುಟ–1, ಕುಮಟಾ 1957, ಪುಟ 38;

27 ಗೌರಿ ವಿಶ್ವನಾಥನ್, ಮಾಸ್ಕ್ ಆಫ್ ಕಾಂಕ್ವೆಸ್ಟ್, ಒ.ಯು.ಪಿ ದಿಲ್ಲಿ 1998, ಪುಟಗಳು 31–44.

28 ಬಾ.ಇ.ಮಿ 31ನೇ ವಾರ್ಷಿಕ ವರದಿ, 1879 ಪುಟ 18, ಬಾ.ಇ.ಮಿ 32ನೇ ವಾರ್ಷಿಕ ವರದಿ, ಪುಟ 20, ಬಾ.ಇ.ಮಿ 61ನೇ ವಾರ್ಷಿಕ ವರದಿ, 1900 ಮಂಗಳೂರು(1901) ಪುಟ 38. ಬಾ.ಇ.ಮಿ 66ನೇ ವಾರ್ಷಿಕ ವರದಿ, ಪುಟ 45.

29 ಗೌರಿ ವಿಶ್ವನಾಥನ್, ಮಾಸ್ಕ್ ಆಫ್ ಕಾಂಕ್ವೆಸ್ಟ್; ಮತಪ್ರಚಾರಕ ಪ್ರೇರಿತ ಚಾರಿಟಿ ಸಂಸ್ಥೆಗಳು ಮಹಿಳಾ ಸಬಲೀಕರಣದ ಉದ್ದೇಶವನ್ನಿಟ್ಟುಕೊಂಡು ಅಧುನಿಕ ವಿದ್ಯಾಭ್ಯಾಸವನ್ನು ಪರಿಚಯಿಸಿದೆ ಎಂಬ ಅಭಿಪ್ರಾಯವಾದರೆ, ವಾಸ್ತವದಲ್ಲಿ ಮತಾಂತರದ ಧಾರ್ಮಿಕ ಮಗ್ಗುಲಿನ ಜೊತೆಜೊತೆಯಲ್ಲಿಯೇ ಹಲವು ಕ್ಷೇತ್ರಗಳಲ್ಲಿ ದುಡಿಯುವ ಅವಶ್ಯಕತೆ, ಅನಿವಾರ್ಯತೆ ಅವರನ್ನು ಕೇವಲ ಧರ್ಮಪ್ರಚಾರಕ್ಕೆ ಸೀಮಿತಗೊಳಿಸದೇ ಇಲ್ಲಿನ ಸಾಮಾಜಿಕ ಸುಧಾರಣೆಯ ನೆಪದಲ್ಲಿ ಇಲ್ಲಿನ ವ್ಯವಸ್ಥೆಯನ್ನು ಅಧುನಿಕ ಶಿಕ್ಷಣದ ಮೂಲಕ ಪಾಶ್ಚಿಮಾತ್ಯಗೊಳಿಸುವುದು ಇಲ್ಲವೇ ಅವರದೇ ಶೈಲಿಯಲ್ಲಿ ನಾಗರೀಕತೆಯನ್ನು ಪೋಷಿಸುವುದು ಎಂಬ ಮುಖವಾಡವಾಗಿ ಅಣುಕು ಪ್ರದರ್ಶನಕ್ಕೆ ಒಳಗಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

30 ಜಯಪ್ರಕಾಶ ರಾಘವಯ್ಯ, ಬಾಸೆಲ್ ಮಿಷನ್ ಇಂಡಸ್ಟ್ರೀಸ್ ಇನ್ ಮಲಬಾರ್ ಅಂಡ್ ಸೌತ್ ಕೆನರಾ 1834–1914. ಪುಟಗಳು 81–92.

31 ಎ.ಆರ್ ದೇಸಾಯಿ ಸೋಷಲ್ ಬ್ಯಾಕ್ ಗ್ರೌಂಡ್ ಆಫ್ ಇಂಡಿಯನ್ ನೇಷನಾಲಿಸಂ, ಪುಟ 139. ಪ್ರಾಂತೀಯ ಭಾಷೆಯಾಗಿದ್ದ ಅಂಗ್ಲ ಭಾಷೆ ಪ್ರಸ್ತುತ ಅಂತರರಾಷ್ಟ್ರೀಯ ಭಾಷೆಯಾಗಿ ಬೆಳವಣಿಗೆ

ಹೊಂದಿರುವುದು. ತುಳುಭಾಷಿಕರಾದರೂ 75% ತುಳುವರು ಅಂಗ್ಲಮಾಧ್ಯಮದಲ್ಲಿ ವ್ಯವಹಾರ ನಡೆಸುತ್ತಿರುವುದು.

32 ಶ್ರೀನಿವಾಸ ಹಾವನೂರು ಎಸ್.ಕೆ, ಹೊಸಗನ್ನಡದ ಅರುಣೋದಯ, ಮೈಸೂರು 1974, ಪುಟ 26.

33 ಚಂದ್ರ ಮಲ್ಲಪಳ್ಳಿ, ಕ್ರಿಶ್ಚನ್ಸ್ ಅಂಡ್ ಪಬ್ಲಿಕ್ ಲೈಫ್ ಇನ್ ಕೊಲೊನಿಯಲ್ ಸೌತ್ ಇಂಡಿಯಾ, ಪುಟ 22.

34 ಚಂದ್ರ ಮಲ್ಲಪಳ್ಳಿ, ಕ್ರಿಶ್ಚನ್ಸ್ ಅಂಡ್ ಪಬ್ಲಿಕ್ ಲೈಫ್ ಇನ್ ಕೊಲೊನಿಯಲ್ ಸೌತ್ ಇಂಡಿಯಾ, ಪುಟ 23.

35 ಚಂದ್ರ ಮಲ್ಲಂಪಳ್ಳಿ, ಪುಟ 38. ನೇಟಿವ್ ಕ್ರಿಶ್ಚನ್ ಸಕ್ಸೇಷನ್ ಆಕ್ಟ್ 10 ಆಫ್ 1865.

36 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ 294.

37 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ. ಬಿ ಅರ್ತಿಕಜೆ ಪುಟ 294–296.

38 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 297.

39 ಗಂಗೊಳ್ಳಿ ಕೃಷ್ಣರಾವ್, ಎ ಟ್ರೀಟೈಸ್ ಅನ್ ಅಳಿಯಸಂತಾನ ಲಾ ಅಂಡ್ ಯೂಸೇಜ್ ಮಂಗಳೂರು 1898; ಪುಟ 25.

40 ಸ್ಟರಕ್ ಜೆ,. ಸೌತ್‌ಕೆನರಾ, ಸಂಪುಟ–1 ಮದ್ರಾಸ್ ಪ್ರೆಸಿಡೆನ್ಸಿ, ಮದ್ರಾಸ್, 1864, ಪುಟ 158.

41 ಗ.ಕೃಷ್ಣರಾವ್, ಎ ಟ್ರೀಟೈಸ್ ಆನ್ ಅಳಿಯಸಂತಾನ ಲಾ ಅಂಡ್ ಯುಸೇಜ್, ಮಂಗಳೂರು 1898 ಪುಟ.1

42 ಗ.ಕೃಷ್ಣರಾವ್, ಎ ಟ್ರೀಟೈಸ್ ಆನ್ ಅಳಿಯಸಂತಾನ ಲಾ ಅಂಡ್ ಯುಸೇಜ್, ಮಂಗಳೂರು 1898 ಪುಟ. 24

43 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟಗಳು 294–295. ಗ. ಕೃಷ್ಣರಾವ್, ಎ ಟ್ರೀಟೈಸ್ ಆನ್ ಅಳಿಯಸಂತಾನ ಲಾ ಅಂಡ್ ಯುಸೇಜ್, ಮಂಗಳೂರು 1898.

44 ಗ. ಕೃಷ್ಣರಾವ್, ಎ ಟ್ರೀಟೈಸ್ ಆನ್ ಅಳಿಯಸಂತಾನ ಲಾ ಅಂಡ್ ಯುಸೇಜ್, ಮಂಗಳೂರು 1898 ಪುಟ 25.

45 ಸುರೇಂದ್ರರಾವ್ ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟಗಳು 299–300. ಮನೆತನದ ಆಸ್ತಿಯನ್ನು ಪಾಲು ಮಾಡಲು ಬಿಟ್ಟರೆ ಹಳ್ಳಿಯಲ್ಲಿ ಪ್ರತಿಯೊಬ್ಬರೂ ಅದಕ್ಕೆ ಬಲಿಯಾಗುತ್ತಾರೆ. ಜಮೀನನ್ನು ಮಾರುತ್ತಾರೆ. ಪರಿಣಾಮವಾಗಿ ಹಲವು ವರ್ಷಗಳಿಂದ ಮನೆತನಗಳು ಅನುಭವಿಸಿಕೊಂಡು ಬಂದ ಅಧಿಕಾರ–ಪ್ರಭಾವಗಳು ನಷ್ಟವಾಗುತ್ತವೆ ಎಂಬ ಭಯವೂ ಇತ್ತು.

46 ಧಾರ್ಮಿಕ ದತ್ತಿ ಇಲಾಖೆಯ ಪತ್ರಗಳು–ಜಿಲ್ಲಾಧಿಕಾರಿ ಕಚೇರಿ ಮಂಗಳೂರು.

47 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 300.

48 ಎಂ.ವಿ ಶಂಕರಭಟ್ಟ, ಅಳಿಯಸಂತಾನ ಲಾ, 2004, ಪುಟಗಳು 188–189.

## ಧಾರ್ಮಿಕ-ಸಾಂಸ್ಕೃತಿಕ ವಾರಸುದಾರಿಕೆ ಮತ್ತು ವಸಾಹತುಶಾಹಿ

ವಸಾಹತುಶಾಹಿ ತನ್ನ ಆರಂಭದ ದಿನಗಳಲ್ಲಿ ವಸಾಹತಿನ ಧರ್ಮ ಮತ್ತು ಸಾಂಸ್ಕೃತಿಕ ವಿಚಾರಗಳಲ್ಲಿ ಹಸ್ತಕ್ಷೇಪ ನಡೆಸಲಿಲ್ಲ ಎಂಬುದು ಮೇಲ್ನೋಟ್ಟಕ್ಕೆ ಕಂಡುಬಂದ ತೀರ್ಮಾನವಾಗಿತ್ತೇ ಹೊರತು ನೈಜ ಧೋರಣೆಯಾಗಿರಲಿಲ್ಲ. ತನ್ನ ಸರಕು ಹಡಗುಗಳಲ್ಲಿ ಕ್ರೈಸ್ತಮತಪ್ರಚಾರಕ ಗುಂಪನ್ನೇ ಕರೆತರುತ್ತಿದ್ದದ್ದು ಅವರ ಕಪಟ ನೀತಿಗೆ ಸಾಕ್ಷಿಯಾಗಿತ್ತು. ಮಾತ್ರವಲ್ಲ ಮತಪ್ರಚಾರಕರಾಗಿ ವಸಾಹತುಶಾಹಿಯ ಅಣತಿಯಂತೆ ವಸಾಹತಿಗೆ ಬರುತ್ತಿದ್ದರು. ಇದೇ ಸಂದರ್ಭದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕನಾಗಿದ್ದ ಚಾರ್ಲ್ಸ್‌ಗ್ರಾಂಟ್ ವಸಾಹತಿನಲ್ಲಿ ತನ್ನ ವಸಾಹತುಶಾಹಿಯ ಆಡಳಿತವನ್ನು ಶಾಶ್ವತವಾಗಿ ಸ್ಥಾಪಿಸಬೇಕಾಗಿದ್ದರೇ ಹಿಂದೂಗಳನ್ನು ಕ್ರೈಸ್ತರನ್ನಾಗಿ ಧಾರ್ಮಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಪರಿವರ್ತನೆಗೊಳಿಸುವುದು ಅತ್ಯಗತ್ಯವೆಂದು ಪ್ರತಿಪಾದಿಸಿದ್ದನು. ವಸಾಹತನ್ನು ಕ್ರೈಸ್ತ ರಾಷ್ಟವನ್ನಾಗಿ ಪರಿವರ್ತಿಸುವ ಉದ್ದೇಶ ಹೊಂದಿದ್ದ ಮತಪ್ರಚಾರಕರ ಕಾರ್ಯಯೋಜನೆಗಳು ಸ್ಥಳೀಯ ಧಾರ್ಮಿಕ ಚಿಂತನೆಗಳ ಮೇಲೆ ಆಕ್ರಮಣ ಮಾಡಿದವಲ್ಲದೇ, ಮತಪರಿವರ್ತನಾ ಕಾರ್ಯಕ್ಕೆ ವಸಾಹತುಶಾಹಿ ಆಡಳಿತ ಕಾನೂನು ಬೆಂಬಲ ನೀಡಬೇಕೆಂಬ ವಿಚಾರವನ್ನು ಒತ್ತಾಯಿಸಿದ ಚಿಂತನೆಯ ಜಾಡುಗಳು ಉಪಯುಕ್ತವಾದಿ, ಮತಪ್ರಚಾರಕ ಚಿಂತನೆಗಳಲ್ಲಿ ಅಡಗಿದ್ದವು.[1] ಈ ನೆಲೆಯಲ್ಲಿ ವಸಾಹತುಶಾಹಿ ಜಾರಿಗೆ ತಂದ ಕಾನೂನುಗಳಲ್ಲಿ ಮುಖ್ಯವಾಗಿ 1793ರಲ್ಲಿ ಅಂಗೀಕೃತಗೊಂಡ ಕಾಯ್ದೆ, ಮತ ಪ್ರಚಾರಕ್ಕೆ ಹಸಿರು ನಿಶಾನೆ ಮತ್ತು ಅನುಮೋದನೆಯನ್ನು ನೀಡಿತ್ತು. ವಸಾಹತುಶಾಹಿಯ ಈ ಕಾರ್ಯಸೂಚಿ ವಸಾಹತು ಸುಧಾರಣಾ ಕಾರ್ಯಯೋಜನೆಗಳಿಗೆ ಪೂರಕವಾಗಿ ರೂಪಿಸಲ್ಪಟ್ಟು ಅದನ್ನು ಸಮರ್ಥಿಸಿತು.[2]

ವಸಾಹತುಶಾಹಿಗೆ ಸ್ಥಿರತೆ ಮತ್ತು ಸಂರಕ್ಷಣೆ ಒದಗಿಸುತ್ತದೆ ಎಂದು ನೆಚ್ಚುವ ಹಾಗಿಲ್ಲವಾದುದರಿಂದ ಕೆಳವರ್ಗಗಳ ಸತ್ವಶಾಲಿ ಧರ್ಮಕ್ಕಿಂತ ವಸಾಹತುಶಾಹಿಯ ಸ್ಥಿರತೆಯನ್ನು ಬೇರೆ ನೆಲೆಗಳಲ್ಲಿ ಹುಡುಕಬೇಕಾಗಿರುವುದು ಅಗತ್ಯವಾಗಿ ಕಂಡುಬಂದಿತ್ತು. ವಸಾಹತುಶಾಹಿಗೆ ಸುಭದ್ರ ನೆಲೆ ಒದಗಿಸಬಲ್ಲ ಧಾರ್ಮಿಕ ಹಾಗೂ ಸರಕಾರದ ತತ್ವಗಳನ್ನು ರೂಪಿಸಿ ಏಕರೂಪದ ಸೈದ್ಧಾಂತಿಕೆಯನ್ನು ತರಬಯಸಿತು. ಅಧಿಕಾರವನ್ನು ಸುಲಲಿತಗೊಳಿಸಲು ಹಾಗೂ ವಸಾಹತಿನಲ್ಲಿರುವ ಸಹಯೋಗಿಗಳ ನಂಬಿಕೆಯನ್ನು ಬಲಪಡಿಸಲು ಶಾಸ್ತ್ರೀಯ ಕಲಿಕೆಯನ್ನು ತೀವ್ರ ರೀತಿಯಲ್ಲಿ ಪ್ರೋತ್ಸಾಹಿಸಿ ಬ್ರಾಹ್ಮಣವಾದದ ಹಳೆಯ ಶಾಸ್ತ್ರೀಯ ಗ್ರಂಥಗಳಲ್ಲಿ, ವಸಾಹತುಶಾಹಿಗೆ ಸರಿಹೊಂದುವ ಚಿಂತನೆಗಳನ್ನು ಗುರುತಿಸಲಾಯಿತು. ಈ ಪ್ರಕಾರ ಒರಿಯಂಟ್ ಬರವಣಿಗೆಗಳು ರೂಪತಾಳಿ ವಸಾಹತಿನ ಚರಿತ್ರೆಯನ್ನು ತನ್ನದೇ ಆದ ಸಿದ್ಧಾಂತಗಳ ಹೆಣಿಗೆಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿತು. ಮುಖ್ಯವಾಗಿ ವಂಚನೆಯ ಪ್ರವರ್ತನೆಗಳನ್ನು

ಸಮರ್ಥಿಸುವ ಅಧ್ಯಯನಗಳು ಮಾಡಲ್ಪಟ್ಟು ಅವುಗಳನ್ನು ನೈತಿಕವೆಂದು ಸಾರಲು ಪ್ರಯತ್ನಿಸಿದವಲ್ಲದೇ ಇಲ್ಲಿನ ಸಾಂಸ್ಕೃತಿಕ, ಧಾರ್ಮಿಕ ಹಾಗೂ ಜ್ಞಾನಿಕ ವ್ಯವಸ್ಥೆಗಳು ವಸಾಹತುಶಾಹಿಯ ಆಶಯಕ್ಕನುಗುಣವಾಗಿ ಬದಲಾವಣೆಗೆ ಒಳಪಡುವ ಅನಿವಾರ್ಯತೆಯನ್ನು ಸೃಷ್ಟಿಸಿದವು. ಮಾತ್ರವಲ್ಲದೇ ಈ ಪ್ರದೇಶದ ಬಗೆಗಿನ ಜ್ಞಾನ ವಸಾಹತುಶಾಹಿಯ ಆಳ್ವಿಕೆಗೆ ಅನುಗುಣವಾಗಿ_ಮುಂದಿನ ಚಾರಿತ್ರಿಕ ನಡೆಗಳಲ್ಲಿ ಪ್ರಮುಖವಾಗಿ ಕಾಣಿಸಿಕೊಂಡಿತು.[3]

ವಸಾಹತುಶಾಹಿಯು ಶಾಸ್ತ್ರೀಯ ಕಲಿಕೆಯೊಂದಿಗೆ ವಸಾಹತಿನ ಅನೈಕ್ಯತೆ ಹಾಗೂ ಸಂಘರ್ಷಗಳ ಗರಿಷ್ಠ ಲಾಭ ಪಡೆದು ಸಾಮ್ರಾಜ್ಯವನ್ನು ಸ್ಥಾಪಿಸುವ ಅಂತಿಮ ಗುರಿಯನ್ನು ಹೊಂದಿತ್ತು. ಅಧಿಕಾರದ ಉಳಿವಿಕೆಗಾಗಿ ಹಾಗೂ ಅನಿಯಮಿತ ಸಂಪತ್ತಿನ ಸಂಚಯನಕ್ಕಾಗಿ ಸ್ಥಳೀಯ ಸಂಸ್ಕೃತಿಯ ಅಧ್ಯಯನಗಳಿಗೆ ಹೆಚ್ಚು ಒತ್ತುಕೊಟ್ಟು ವಸಾಹತುಶಾಹಿ ಹಿಡಿತವನ್ನು ಬಲಗೊಳಿಸಿತು. ತುಳುನಾಡಿನ ಅಧ್ಯಯನವೂ ಈ ನಿಟ್ಟಿನಲ್ಲಿ ಹೆಚ್ಚು ಆದ್ಯತೆಯನ್ನು ಪಡೆಯುವುದರೊಂದಿಗೆ ಪಶ್ಚಿಮದ ಚಿಂತನೆಯಲ್ಲಿ ಸಹಭಾಗಿತ್ವವನ್ನು ಹೊಂದಿತ್ತು. ರೆವರೆಂಡ್ ಫರ್ಡಿನಾಂಡ್ ಕಿಟೆಲರ ಅಧ್ಯಯನಗಳು, ರೆವರೆಂಡ್ ಮೆನ್ನರ, ಎ.ಸಿ ಬರ್ನೆಲನ ಡೆವಿಲ್ ವರ್ಶಿಪ್ ಇದಕ್ಕೊಂದು ಒಳ್ಳೆಯ ಉದಾಹರಣೆ. ಇದಲ್ಲದೇ ಈ ರೀತಿಯ ವಿಚಾರಗಳು ವಸಾಹತುಶಾಹಿ ಅಧಿಕಾರಕ್ಕೆ ಸಂಬಂಧಿಸಿದ ಕಾರ್ಯಕ್ಷೇತ್ರದ ಕಡತ, ಗಜೆಟಿಯರ್ ಮ್ಯಾನುವೆಲ್ಗಳು, ಪ್ರವಾಸಿ ಕಥನ, ಸರಕಾರಿ ಆಜ್ಞೆ, ಪತ್ರವ್ಯವಹಾರ, ಮುಂತಾದವುಗಳಲ್ಲಿ ದಾಖಲುಗೊಂಡಿವೆ. ಜೊತೆಗೆ ಇಲ್ಲಿನ ಜನಸಮುದಾಯಗಳನ್ನು ಮತ್ತು ಇಲ್ಲಿನ ವ್ಯವಸ್ಥೆಯನ್ನು ಅನಾಗರೀಕ ವ್ಯವಸ್ಥೆ ಮತ್ತು ಅದರ ಪ್ರತಿನಿಧಿಗಳೆಂದು ಬಿಂಬಿಸಿ ವಸಾಹತುಶಾಹಿಯ ಮುಂದುವರಿಯುವಿಕೆಗೆ ಅನುಕೂಲವಾಗುವಂತೆ ಪರಿವರ್ತಿಸುವ ಮೂಲಕ ವಸಾಹತುಪೂರ್ವದ ವಾರಸುದಾರಿಕೆಯನ್ನು ಸ್ಥಿತ್ಯಂತರಗೊಳಿಸುವಲ್ಲಿ ಯಶಸ್ವಿಯಾಯಿತು. ಈ ಉದ್ದೇಶ ಸಾಧನೆಗೆ ವಸಾಹತುಶಾಹಿ ಬಳಸಿದ್ದು ವಂಚನೆ ಹಾಗೂ ಅವಕಾಶವಾದಿತನವೆಂಬ ಅನೈತಿಕ ಆಯುಧಗಳೇ ಹೊರತು ನೈತಿಕ ಅಥವಾ ಕಾನೂನುಬದ್ಧ ಮಾರ್ಗವಲ್ಲ ಎಂಬುದು ಇತಿಹಾಸಕಾರರ ಅಭಿಪ್ರಾಯ.[4]

ಮತ ಪರಿವರ್ತನೆಯ ಸಂದರ್ಭದಲ್ಲಿ ಇಲ್ಲಿನ ಧಾರ್ಮಿಕ ಚಿಂತನೆಗಳು ಕ್ಷುದ್ರದೇವತೆಗಳ ಚಿಂತನೆಗಳಾಗಿ ಜನರನ್ನು ತಮ್ಮ ಧರ್ಮದಿಂದಲೇ ವಿಮುಖವಾಗಿಸುವಲ್ಲಿ ಮಿಷನರಿಗಳು ಯಶಸ್ಸನ್ನು ಪಡೆದಿರುವುದು ಬಾಸೆಲ್ ಮಿಷನಿನ ದಾಖಲೆಗಳಲ್ಲಿ ಉಲ್ಲೇಖಿತವಾಗಿದೆ. ಆ ಕಾಲದಲ್ಲಿ ಮಿಷನರಿಗಳು ಮಾಡಿದ ಕಾರ್ಯಕ್ಷೇತ್ರಗಳಲ್ಲಿ ಮಾಡಿದ ಅಧ್ಯಯನಗಳು ವರ್ತಮಾನದಲ್ಲಿ ವಸಾಹತಿನ ಸಂಸ್ಕೃತಿಗಳ ಅಧ್ಯಯನಕ್ಕೆ ಕೊಡುಗೆಯಾದರೆ, ಅಂದಿನ ವಿಕೃತಿಗಳು ಅನಾಗರೀಕತೆಯ ಲಕ್ಷಣಗಳಾಗಿ ಮೂಡಿದೆ. ಉದಾಹರಣಗೆ ರೆವರೆಂಡ್ ಮೆನ್ನರ್,

ಎ.ಸಿ ಬರ್ನೆಲ್ ಇಲ್ಲಿನ ರಕ್ಷಕ ದೈವಗಳನ್ನು ಭೂತಗಳಾಗಿ ಇಲ್ಲವೇ ದೆವ್ವಗಳಾಗಿ ದಾಖಲಿಸಿರುವುದು. ಇದನ್ನು ಮಾನದಂಡವಾಗಿಸಿ ಅಧ್ಯಯನ ಮಾಡಿದ ತುಳುನಾಡಿನ ಹಲವಾರು ವಿದ್ವಾಂಸರು ವಸಾಹತುಶಾಹಿಯ ಮಾನಸಿಕತೆಯನ್ನು ಮುಂದುವರೆಸಿ ಇಲ್ಲಿನ ರಕ್ಷಕ ದೈವಗಳನ್ನು ಭೂತಗಳಾಗಿ, ದೆವ್ವಗಳಾಗಿ ಮರುಸೃಷ್ಟಿಸುವ ವಿದ್ವತ್ ಕೆಲಸವನ್ನು ಮಾಡಿರುವುದು ವಿಷಾದನೀಯ. ಹೀಗೆ ವಸಾಹತುಶಾಹಿಯ ಚಿಂತನೆ ಹಾಗೂ ಭೂಒಡೆತನ ಆಧಾರಿತ ವಸಾಹತಿನ ಸಂಸ್ಕೃತಿಯ ಬಗೆಗಿನ ತಿಳಿವು, ಸಂಸ್ಕೃತಿಯಲ್ಲಿನ ದೌರ್ಬಲ್ಯಗಳನ್ನು ಅವರ ದೃಷ್ಟಿಕೋನಕ್ಕೆ ಅನುಗುಣವಾಗಿ ಅನಾವರಣಗೊಳಿಸಿತ್ತಾದರೂ ವಸಾಹತನ್ನು ಅರ್ಥೈಸಿಕೊಳ್ಳಲು ನಡೆಸಲ್ಪಟ್ಟ ಎಲ್ಲ ಅಧ್ಯಯನಗಳು ವಸಾಹತುಶಾಹೀ ಯಜಮಾನಿಕೆ ಇಲ್ಲವೇ ವಾರಸುದಾರಿಕೆ ವಿನ್ಯಾಸಗೊಳಿಸುವಲ್ಲಿ ಪರ್ಯಾಪ್ತಗೊಂಡಿತು.

ಯುರೋಪಿನ ಚಿಂತನೆಗಳು ವಸಾಹತಿನಲ್ಲಿ ಬಲವಂತದ ಬದಲಾವಣೆಗಳನ್ನು ಮಾಡಿದುದರ ಫಲವಾಗಿ ವಸಾಹತಿನಲ್ಲಿ ಪಶ್ಚಿಮ ರಾಷ್ಟ್ರಗಳ ಮಾನಸಿಕತೆ ಮೊಳಕೆಯೊಡೆಯಿತು. ಇದಲ್ಲದೇ ವಸಾಹತುಶಾಹಿ ಮತ್ತದರ ಪಾಲುದಾರಿಕಾ ಸಂಸ್ಥೆಗಳು ಸ್ಥಾಪಿಸಿದ ಯಜಮಾನಿಕೆಯ ಪಾರಮ್ಯ ಒಂದೆಡೆ ತುಳುನಾಡಿನ ಸಂಸ್ಕೃತಿಗಳ ವರ್ಧನೆಗೆ ವಿಪುಲ ಅವಕಾಶಗಳಿವೆಯೆಂದು ನಂಬಿಸುವ ಕಾರ್ಯಯೋಜನೆಯಾದರೆ ಇನ್ನೊಂದೆಡೆ ವಸಾಹತನ್ನು ವಂಚನೆಯ ಮೂಲಕ ಒಡೆದು ಆಳುವಲ್ಲಿ ಯಶಸ್ಸನ್ನು ಪಡೆಯಿತು. ವಸಾಹತುಶಾಹಿಯ ಸಹಯೋಗದ ಬಾಸೆಲ್ ಮಿಷನು ಶೈಕ್ಷಣಿಕ ಸಂಸ್ಥೆಗಳಲ್ಲಿ ಪಠ್ಯಪುಸ್ತಕಗಳ ಮೂಲಕ ಮತಧರ್ಮದ ಚಿಂತನೆಗಳನ್ನು ಹರಡುವಲ್ಲಿ ಸಫಲಗೊಂಡಿರುವುದಲ್ಲದೇ ಮುದ್ರಣ ಕೈಗಾರಿಕೆ ಹೊಸತಾಗಿ ಕ್ರೈಸ್ತಧರ್ಮಕ್ಕೆ ಮತಪರಿವರ್ತನೆಗೊಂಡವರಿಗೆ ಉದ್ಯೋಗ ಅವಕಾಶಗಳನ್ನು ಸೃಷ್ಟಿಸಿತು. ಇನ್ನೊಂದೆಡೆ ತುಳು ಸಂಸ್ಕೃತಿಯ ವಿಚಾರಗಳನ್ನು ಅಧ್ಯಯನಿಸಿ ಮತಪರಿವರ್ತನೆಗೆ ಒಳ್ಳೆಯ ಫಸಲುಗಳನ್ನು ಪಡೆಯುವಲ್ಲಿನ ಪ್ರಯತ್ನ ಹಾಗೂ ಗ್ರಂಥ ಪ್ರಕಟಣೆ ಜ್ಞಾನದ ಮೇಲೆ ಏಕಸ್ವಾಮ್ಯ ಪಡೆಯುವಲ್ಲಿ ಯಶಸ್ಸನ್ನು ಪಡೆಯಿತು.

ಭಾರತದ ಸಂದರ್ಭದಲ್ಲಿ ರೆಗ್ಯೂಲೇಟಿಂಗ್ ಕಾಯಿದೆಯಿಂದ ಪ್ರಾರಂಭಗೊಂಡ ವಸಾಹತುಶಾಹಿಯ ಹಿಡಿತಗಳು ಕ್ರಮೇಣ ವಸಾಹತುವಿನ ಆಡಳಿತದ ಚಾಲನಾ ಶಕ್ತಿಗಳನ್ನು ತನ್ನ ಆಡಳಿತ ಮತ್ತು ಅಧಿಕಾರ ವಿಸ್ತರಣೆಗೆ ಅನುಕೂಲವಾಗುವಂತೆ ಬಳಸಿಕೊಂಡು ನೆಲೆಯನ್ನು ಮತ್ತಷ್ಟು ಭದ್ರಪಡಿಸಿಕೊಂಡಿತು. ವಸಾಹತುಶಾಹಿ ಜಾರಿಗೊಳಿಸಿದ ಚಾರ್ಟರ್ ಕಾಯಿದೆಗಳು ನೇರವಾಗಿ ವಸಾಹತನ್ನು ವಸಾಹತುಶಾಹೀ ರಾಷ್ಟ್ರದ ಭಾಗವನ್ನಾಗಿಸಿತ್ತಲ್ಲದೇ ಬ್ರಿಟಿಷ್ ಭಾರತವಾಗಿ ರೂಪುಗೊಂಡಿತು. ಸಾಮಾನ್ಯಶಕೆ 1858ರ ನಂತರ ಜಾರಿಗೆ ಬಂದ ಕಾಯಿದೆಗಳು

ವಸಾಹತುಶಾಹಿ ಮಾನಸಿಕತೆಯಲ್ಲಿ ಬೆಳೆದು ಪಾರಂಪರಿಕ ಅಧಿಕಾರದ ನೆಲೆಗಟ್ಟುಗಳು ಧಾರ್ಮಿಕ-ಸಾಂಸ್ಕೃತಿಕವಾಗಿ ಮಾತ್ರ ಉಳಿದುಕೊಂಡವು.

ವಸಾಹತುಶಾಹಿಯ ಧಾರ್ಮಿಕ-ಸಾಂಸ್ಕೃತಿಕ ಪರಿವರ್ತನೆಯ ಕಾರ್ಯಯೋಜನೆಯನ್ನು ಬಲಪಡಿಸುವ ಹಾಗೂ ವಸಾಹತಿನ ಧರ್ಮದ ಮೇಲೆ ಪ್ರಹರಿಸುವ ಉದ್ದೇಶದಿಂದ ವಸಾಹತಿನ ಧಾರ್ಮಿಕತೆಯು ಅತ್ಯಂತ ಕ್ರೂರ, ಹೇಯ ಹಾಗೂ ಬೀಭತ್ಸ ಸ್ವರೂಪದವುಗಳೆಂದು ಪ್ರಚಾರ ಮಾಡಿಸಲಾಯಿತು. ಇದರಿಂದ ಪ್ರಭಾವಿತಗೊಂಡ ಮತಪ್ರಚಾರಕರು ಅದರ ಚಿಂತನೆಯ ನೆರಳಿನಲ್ಲಿ ವಸಾಹತಿನ ಧರ್ಮಗಳ ವಿಸ್ತೃತ ಅಧ್ಯಯನ ಕೈಗೊಂಡು ವಿಮರ್ಶೆಗೆ ಒಳಪಡಿಸಿದರು. ವಸಾಹತಿನ ಸಾಂಸ್ಕೃತಿಕ ಕಲ್ಪನೆಯನ್ನು ಜರೆಯುವಲ್ಲಿ ಕಾರ್ಯಪ್ರವೃತ್ತರಾದರಲ್ಲದೇ, ಮುಂಚೂಣಿಯಲ್ಲಿ ನಿಂತು ಅವಹೇಳನಕ್ಕೆ ಒಳಪಡಿಸಿದರು. ಈ ದಿಸೆಯಲ್ಲಿ ಮತಪ್ರಚಾರಕ ತಂತ್ರಗಾರಿಕೆಯ ಬಗ್ಗೆ ಅಪಾರ ನಂಬಿಕೆಯನ್ನಿಟ್ಟಿದ್ದ ಮೆಕಾಲೆ ವಸಾಹತಿನ ಪ್ರತಿಯೊಂದು ಸಂಪ್ರದಾಯಗಳ ಬಗ್ಗೆ ತಿರಸ್ಕಾರವನ್ನೆ ಮೈಗೂಡಿಸಿಕೊಂಡಿದ್ದನು. ಪತ್ರವೊಂದರಲ್ಲಿ ತನ್ನ ಪ್ರತಿಪಾದನೆಯ ಶಿಕ್ಷಣದ ವಿಧಾನದಿಂದ ಮುಂದಿನ ಎರಡು ಅಥವಾ ಮೂರು ಪೀಳಿಗೆಯೊಳಗಾಗಿ ವಸಾಹತಿನದಲ್ಲಿ ಮೂರ್ತಿಪೂಜಕರೆನ್ನುವವರು ಯಾರೂ ಉಳಿಯುವುದಿಲ್ಲ ಎಂದು ಬರೆದಿದ್ದನು. ಒಟ್ಟಾರೆ ಈ ವಸಾಹತನ್ನು ಆಸೆ, ಆಮಿಷ, ಮತ್ತು ಅತಂಕಗಳ ತಂತ್ರಗಾರಿಕೆಗಳನ್ನು ಬಳಸಿ ನಿಯಂತ್ರಿಸುವ ಉದ್ದೇಶವನ್ನು ಅಂದಿನ ಆಡಳಿತಗಾರರು ಮತ್ತು ಕ್ರೈಸ್ತಮತಪ್ರಚಾರಕರು ಜಂಟಿಯಾಗಿ ನಡೆಸಿ ಯಶಸ್ವಿಯಾದರು.[5] ಹೀಗೆ ಸಾಮಾನ್ಯಶಕೆ ಹತ್ತೊಂಬತ್ತನೆಯ ಶತಮಾನದ ನಂತರದ ಕಾಲಘಟ್ಟವನ್ನು ವಸಾಹತು ಧಾರ್ಮಿಕ-ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪಲ್ಲಟಗೊಳ್ಳುವ ಇಲ್ಲವೇ ಪರಿವರ್ತನೆಗೊಳ್ಳುವ ಆರಂಭದ ಕಾಲವೆಂದು ಪರಿಗಣಿಸಬಹುದು.

ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಗಳನ್ನು ಬದಲಾಯಿಸುವ ವಸಾಹತುಶಾಹಿಯ ಯೋಜನೆ ತುಳುನಾಡಿನ ಸಾಮಾಜಿಕ ಸ್ತರಗಳಲ್ಲಿ ಬದಲಾವಣೆಯನ್ನು ತಂದವು. ಅವುಗಳಲ್ಲಿ ಮುಖ್ಯವಾದವು ವಸಾಹತುಶಾಹಿ ಪ್ರಖರಗೊಳಿಸಿದ ಸಾಮಾಜಿಕ ಅಸ್ಮಿತೆಯ ನೆಲೆಯ ಜಾತಿ, ಜಾತಿಯ ಜೊತೆಗೆ ಜಾತೀಯ ಉಪನಾಮಗಳು ಅಂಟಿಕೊಂಡು ಬಳಕೆಯಾಗಿರುವುದು. ಇದರ ಪರಿಣಾಮವಾಗಿ ವಸಾಹತುಪೂರ್ವದಲ್ಲಿನ ವೃತ್ತಿ ಆಧಾರಿತ ಕಸುಬುಗಳು ಕಾಲಕ್ರಮೇಣ ಜಾತಿಗಳಾಗಿ ರೂಪಾಂತರಗೊಂಡು ಬಳಿಗಳು ಜಾತೀಯ ಉಪನಾಮಗಳಾಗಿ ಬಳಕೆಯಾಗುವ ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಾಣುತ್ತೇವೆ. ಒಟ್ಟಿನಲ್ಲಿ ಬೇರೆ, ಬೇರೆ ಕಸುಬುಗಳನ್ನು ಮಾಡುತ್ತಿದ್ದ ಮತ್ತು ಅಧಿಕಾರವನ್ನು ನಡೆಸುತ್ತಿದ್ದ ವಿಭಿನ್ನ ಪಂಗಡಗಳು ಸಮುದಾಯ, ಜಾತಿಗಳಾಗಿ ರೂಪುಗೊಂಡಿರಬಹುದು. ಹೀಗೆ ವಿವಿಧ ಕುಲಕಸುಬಿನ

ಪಂಗಡಗಳು ಜಾತಿಸಮುದಾಯಗಳಾಗಿ ಧ್ರುವಿಕರಣಗೊಳ್ಳುವ ಪ್ರಕ್ರಿಯೆಗಳು ವಸಾಹತುಕಾಲದಲ್ಲಿ ಕಂಡುಬಂದರೇ, ವಸಾಹತುನಂತರದಲ್ಲಿ ಸಾಮಾಜಿಕ ನ್ಯಾಯದ ನೆಲೆಯಲ್ಲಿ ರೂಪುಗೊಂಡಿರುವ ಜಾತಿಗಳು ಮರುಬೆರೆಸುವ ಇಲ್ಲವೇ ಮರುಕಲಸುವ ಪ್ರಕ್ರಿಯೆಗೆ ಒಳಗಾಗುತ್ತಿರುವುದನ್ನು ಕಾಣಬಹುದು. ಸಾಂಸ್ಕೃತಿಕ ರಾಷ್ಟ್ರೀಯವಾದದ ಇಂದಿನ ಸನ್ನಿವೇಶದಲ್ಲಿ ತುಳುನಾಡಿನ ಜಾತಿಸಮುದಾಯ ಧಾರ್ಮಿಕ ಸಮಾಜಗಳಾಗಿ ಮರುರೂಪುಗೊಳ್ಳುವ, ರೂಪಾಂತರಗೊಳ್ಳುವ ಈ ಮೂಲಕ ಹರಳುಗಟ್ಟುವ ಪ್ರಕ್ರಿಯೆಗಳಿಗೆ ಒಳಗಾಗುತ್ತಿದೆ. ವಸಾಹತುಶಾಹಿ ಪ್ರಕ್ರಿಯೆಗಳಲ್ಲಿ ತಲೆದೋರಿದ ಈ ಬಗೆಯ ವಿದ್ಯಾಮಾನಗಳು ಏಕರೂಪಿ ವಾದದ ಬೀಜರೂಪಗಳು ಮೊಳಕೆಯೊಡೆಯುವುದಕ್ಕೆ ಸಾಂಸ್ಕೃತಿಕವಾದ ಅವಕಾಶಗಳನ್ನು ಕಲ್ಪಿಸಿದವು. ಬಹುರೂಪಿ ಚಹರೆಗಳು ಏಕರೂಪಿಕರಣದ ಪ್ರಕ್ರಿಯೆಗೆ ಒಳಗಾಗಿರುವುದು ವಸಾಹತುಶಾಹಿ ಕಾಲಘಟ್ಟದಲ್ಲಿಯೇ. ಪರಸ್ಪರ ಸಂಬಂಧವನ್ನು ಹೊಂದಿರುವ ಬಹರೂಪೀ ಪರಂಪರೆಗಳನ್ನು ಅವುಗಳ ಒಳಬೇದ, ಪ್ರಬೇಧಗಳನ್ನು ಹಾಗೇಯೆ ಉಳಿಸಿಕೊಂಡು ಇಲ್ಲವೇ ಕಾಪಾಡಿಕೊಂಡು ಏಕರೂಪಿ ವಾದದ ಪ್ರತಿಪಾದನೆಯಲ್ಲಿ ಕ್ರೋಢಿಕರಿಸುವ ಸಾಂಸ್ಕೃತಿಕ ಯಾಜಮಾನ್ಯದ ರಾಜಕಾರಣಗಳು ಬಲಗೊಂಡವು.[6] ಇದರ ಪರಿಣಾಮವಾಗಿ ಭೂಆಧಾರಿತ ಮೂಲ ದೇಶಿ ಪರಿಕಲ್ಪನೆ ಮತ್ತು ರಚನೆಗಳು ನಿಧಾನವಾಗಿ ಪ್ರಾಮುಖ್ಯತೆಯನ್ನು ಕಳೆದುಕೊಂಡವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[7]

## ನಂಬಿಕೆಗಳು-ಮತಪ್ರಚಾರಕರು-ವಸಾಹತುಶಾಹಿ

ತುಳುನಾಡನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳಲು ಮತ್ತು ಇಲ್ಲಿನ ಧಾರ್ಮಿಕ ವಾರಸುದಾರಿಕೆಯ ಆಯಾಮಗಳನ್ನು ಬದಲಾಯಿಸಲು ವಸಾಹತುಶಾಹಿಗೆ ಸಹಕಾರ ನೀಡಿದ್ದು ಮತಪ್ರಚಾರಕರು ಹಾಗೂ ಅವರು ಆಯ್ದುಕೊಂಡ ಧರ್ಮಪ್ರಚಾರ. ಅವರ ಪ್ರಭಾವ, ಧರ್ಮಪ್ರಚಾರ ತಂತ್ರಗಳು ವಸಾಹತುಶಾಹಿಯ ಅಡಿಪಾಯವನ್ನು ಬಲಪಡಿಸಿ ಅದು ಪ್ರತಿಪಾದಿಸಿದ ಆಧುನಿಕತೆಯ ಚಿಂತನೆಗಳನ್ನು ವಸಾಹತಿನ ವಿಭಿನ್ನ ಸಮುದಾಯಗಳಿಗೆ ತಲುಪಿಸುವ ಕಾರ್ಯಗಳು ಬಹುಮಟ್ಟಿಗೆ ಯಶಸ್ವಿಯಾದವು. ಈ ನೆಲೆಯಲ್ಲಿ ತುಳುವ ಸಮುದಾಯಗಳ ಬೇಡಿಕೆಗಳು, ಲಭ್ಯವಿದ್ದ ಹೊಸ ಆಯ್ಕೆಗಳು, ಬಾಸೆಲ್‌ಮಿಷನ್ ಮತ್ತು ಕಂಪನಿ ಸರಕಾರ ಅವುಗಳಿಗೆ ಸ್ಪಂದಿಸಿದ ರೀತಿ ಅತ್ಯಂತ ವಿಶಿಷ್ಟ ಸ್ವರೂಪದಾಗಿತ್ತು. ಹೀಗೆ ವಸಾಹತುಶಾಹಿಯ ಚಿಂತನೆಗಳು ತುಳುನಾಡನ್ನು ವಿಭಿನ್ನ ರೂಪದ, ಪರಸ್ಪರ ವಿರೋಧಾಭಾಸಗಳಿಂದ ಕೂಡಿದ, ಬಹುತ್ವದ ವ್ಯವಸ್ಥೆ ಎಂದು ವ್ಯಾಖ್ಯಾನಿಸಿ ಹೊಸ ಭಾಷ್ಯಕ್ಕೆ ಮುನ್ನುಡಿಸಿದವು.[8]

ವಸಾಹತುಶಾಹಿ ಆಳ್ವಿಕೆಯಡಿಯಲ್ಲಿ ವಸಾಹತಿನ ಧಾರ್ಮಿಕ ಚಿಂತನೆಗಳು ಹಾಗೂ ಸಾಂಸ್ಕೃತಿಕ ನೆಲೆಗಟ್ಟು, ಪರಂಪರೆ, ಸಂಸ್ಕೃತಿ, ಚರಿತ್ರೆ, ಭಾಷೆ ಅತೀ ಹೆಚ್ಚು ಆಕ್ರಮಣಕ್ಕೆ ಹಾಗೂ ಅದಕ್ಕನುಗುಣವಾಗಿ ಪುನರ್‌ವ್ಯಾಖ್ಯಾನಕ್ಕೆ ಒಳಗಾಯಿತು. ಜೊತೆಗೆ ಅಧ್ಯಯನದ ದೃಷ್ಟಿಯಿಂದ ಈ ಭಾಗದ ಸಂಸ್ಕೃತಿ ನಿರಂತರವಾಗಿ ಪುನರ್‌ವಿಶ್ಲೇಷಣೆಗೆ ಒಳಗಾಯಿತು. ಸಮುದಾಯಗಳ ಆಧುನಿಕಪೂರ್ವ ನಂಬಿಕೆ, ಆಚಾರ, ವಿಚಾರ, ಸಂಸ್ಕೃತಿಯ ಭಿನ್ನ ಸ್ವರೂಪ- ಇವೆಲ್ಲವೂ ವಸಾಹತುಶಾಹಿಯ ಪ್ರತಿಕ್ರಿಯೆ ಹಾಗೂ ಅರ್ಥೈಸುವಿಕೆಯ ಕ್ಷೇತ್ರಗಳಾಗಿ ಪರಿವರ್ತಿತಗೊಂಡವು. ಇದಕ್ಕನುಗುಣವಾಗಿ ವಸಾಹತುಶಾಹಿಯಿಂದ ನಾಗರೀಕ-ಅನಾಗರೀಕ, ಸಾಂಪ್ರದಾಯಿಕ-ಆಧುನಿಕಗಳೆಂಬ ವಿಭಜನೆಗಳು ಹುಟ್ಟುಹಾಕಲ್ಪಟ್ಟು ಅದರಿಂದ ಗರಿಷ್ಠ ಲಾಭ ಪಡೆದುಕೊಳ್ಳುವ ಯೋಜನೆ ಕಾರ್ಯಗತಗೊಂಡವಲ್ಲದೇ ಧಾರ್ಮಿಕ ಹಾಗೂ ಸಾಂಸ್ಕೃತಿಕ ವಾರಸಾ ಅಧಿಕಾರದ ಮೇಲೆ ವಸಾಹತುಶಾಹಿ ಕಾಯಿದೆಗಳು ಸವಾರಿ ಮಾಡಿದವು. ಇದು ಸಾಮಾನ್ಯಶಕೆ 1793, 1813 ಮತ್ತು 1833ರ ಚಾರ್ಟರ್ ಕಾಯಿದೆಯಲ್ಲಿ ದಾಖಲಾದ ಉಲ್ಲೇಖಗಳಿಂದ ಸ್ಪಷ್ಟ. ಈ ಕಾಯಿದೆಗಳ ಮುಖ್ಯ ಉದ್ದೇಶ ವಸಾಹತುಶಾಹಿ ಮತ್ತು ಅದನ್ನು ಬೆಂಬಲಿಸುವ ಮತಪ್ರಚಾರಕರಿಗೆ ಈ ಪ್ರದೇಶವನ್ನು ತಮ್ಮ ಉದ್ದೇಶ ಸಾಧನೆಗೆ ಸುಪರ್ಧಿಗೆ ತೆಗೆದುಕೊಳ್ಳಲು ಅನುವು ಮಾಡುವುದಾಗಿತ್ತು. 1833ರ ಚಾರ್ಟರ್ ಕಾಯಿದೆ ಮಿಷನರಿಗಳ ಚಟುವಟಿಕೆಗಳಿಗೆ ಹಸಿರು ನಿಶಾನೆ ತೋರಿಸಿರುವುದರಿಂದ ಮತಾಂತರದ ಕಾರ್ಯಚಟುವಟಿಕೆಗಳಿಗೆ ಅವಕಾಶವನ್ನು ಕಲ್ಪಿಸುವುದರೊಂದಿಗೆ ವಸಾಹತುಶಾಹಿಯ ಆಡಳಿತಕ್ಕೆ ಅನುಕೂಲವಾಗುವ ಕಾರ್ಯಪಡೆಯನ್ನು ರೂಪಿಸುವಲ್ಲಿ ಯಶಸ್ಸನ್ನು ಪಡೆಯಲುದ್ದೇಶಿಸಿತು. ಈ ವಿಚಾರಗಳನ್ನು ಉದಾಹರಣೆಗಳೊಂದಿಗೆ ಸಮರ್ಥಿಸುವುದಾದರೆ ಹತ್ತೊಂಬತ್ತನೇ ಶತಮಾನದ ಮಧ್ಯಭಾಗದಲ್ಲಿ ಸುಮಾರು ಇನ್ನೂರಷ್ಟು ಮತಪ್ರಚಾರಕ ಸಂಸ್ಥೆಗಳು ವಸಾಹತಿನಲ್ಲಿ ಕಾರ್ಯತತ್ಪರಗೊಂಡಿದ್ದವೆಂಬುವುದು. ಜೊತೆಗೆ ಜಾಗತಿಕವಾಗಿ ಸುಮಾರು ನಾಲ್ಕುನೂರಕ್ಕೂ ಮಿಕ್ಕಿ ಮತಪ್ರಚಾರಕ ಸಂಸ್ಥೆಗಳು ಕ್ರಿಯಾಶೀಲಗೊಂಡಿರುವುದು. ತುಳುನಾಡಿನಲ್ಲೂ ಹತ್ತು-ಹಲವು ಮತಪ್ರಚಾರಕ ಸಂಸ್ಥೆಗಳು ಮತಪ್ರಚಾರದ ಮೂಲಕ ಧಾರ್ಮಿಕ ಪರಿವರ್ತನಾ ಕಾರ್ಯಕ್ಕೆ ಚಾಲನೆ ನೀಡಿರುವುದಕ್ಕೆ ಸಾಕ್ಷಿ. ಈ ಮತಪ್ರಚಾರಕರು ಪಶ್ಚಿಮದ ಶಿಕ್ಷಣದ ನೀತಿಯಡಿ ರೂಪಿಸಲ್ಪಟ್ಟವುಗಳಾಗಿದ್ದು, ತಮ್ಮ ಉದ್ದೇಶವನ್ನು ಸ್ಪಷ್ಟವಾಗಿ ಕಾರ್ಯಗತಗೊಳಿಸಿ ಮುಗಿಸಲು ಹಾತೊರೆಯುತ್ತಿದ್ದವು.[9]

ಮೂಲತಃ ಏಕಧರ್ಮ ಚಿಂತನೆ ಹೊಂದಿದ್ದ ವಸಾಹತುಶಾಹಿಗಳಿಗೆ ವಸಾಹತಿನಲ್ಲಿ ಕಂಡುಬಂದ ಧಾರ್ಮಿಕ ವೈವಿಧ್ಯತೆಗಳು ತಮ್ಮ ಸಾಮ್ರಾಜ್ಯ ಸ್ಥಾಪನೆಗೆ ಸಾಂದರ್ಭಿಕವಾಗಿ ಅಡ್ಡಿಯಾಗಿ ಪರಿಣಮಿಸಿದವು. ವಸಾಹತಿನಲ್ಲಿ ಒಂದು ಬಗೆಯ ಏಕಧರ್ಮ ಚಿಂತನೆಯನ್ನು

ತರಬೇಕೆಂಬ ಉದ್ದೇಶದಿಂದ ತಮ್ಮ ಚಟುವಟಿಕೆಗಳಲ್ಲಿ ಮತವನ್ನು ಪ್ರಧಾನವಾಗಿ ತೆಗೆದುಕೊಂಡಿತು.[10] ತತ್ವಶಾಸ್ತ್ರಜ್ಞ ಬಾಲಗಂಗಾಧರರ ಪ್ರಕಾರ ವಸಾಹತುಶಾಹಿಗಳು ವಸಾಹತಿನ ಕಾವ್ಯ, ಸ್ಮೃತಿ ಹಾಗೂ ಧಾರ್ಮಿಕ ಗ್ರಂಥಗಳ ಅಧ್ಯಯನ ನಡೆಸಿ ಹಿಂದೂ ಧರ್ಮವನ್ನು ತಮ್ಮ ಮತದ ನೆಲೆಗಟ್ಟಿನಲ್ಲಿ ವ್ಯವಸ್ಥಿತವಾಗಿ ಪುನರ್‌ರೂಪಿಸಿಕೊಂಡು ಹಿಂದುಧರ್ಮವನ್ನು ಮತದ ನೆಲೆಗಟ್ಟಿನಲ್ಲಿ ವಸಾಹತಿಗೆ ಪರಿಚಯಿಸಲು ಪ್ರಯತ್ನಿಸಿತು.[11] ಹದಿನೇಳನೆಯ ಶತಮಾನದ ಯುರೋಪಿನ ಪ್ರವಾಸಿಗಳು ತಮಗೆ ವಿಲಕ್ಷಣವಾಗಿ ಕಾಣಿಸಿದ ಸಂಸ್ಕೃತಿಗಳ ಕುರಿತು ತಮ್ಮ ವರದಿಗಳಲ್ಲಿ ಬಿಸಿಬಿಸಿಯಾದ ವರ್ಣನೆಗಳನ್ನು ನೀಡಿದರು. ಹದಿನೆಂಟನೆಯ ಶತಮಾನದ ಬುದ್ಧಿಜೀವಿಗಳು ಅದನ್ನು ಅರಗಿಸಿಕೊಂಡು ತದನಂತರ ಅದು ರಕ್ತಗತವಾಗಲು ಮೊಟ್ಟಮೊದಲನೆಯ ಸೂತ್ರವನ್ನು ಅಳವಡಿಸಿದರು. ಈ ಬೆಳವಣಿಗೆಯ ಒಂದು ಅತೀಮುಖ್ಯವಾದ ಲಕ್ಷಣವೆಂದರೆ ಐರೋಪ್ಯ ಬುದ್ಧಿಜೀವಿಗಳು ರಿಲಿಜನ್ನಿನ ಉಗಮದ ಪ್ರಶ್ನೆಯ ಕುರಿತು ತೊಡಗಿಸಿಕೊಂಡು ಅದರ ಗೀಳನ್ನು ಹತ್ತಿಸಿಕೊಂಡರು. ಬೈಬಲಿನ ಕಾಲಗಣನಾಶಾಸ್ತ್ರಕ್ಕೆ ಸವಾಲುಗಳು ಪ್ರಾರಂಭವಾಗಿದ್ದರೂ ಬೈಬಲ್ಲು ಪವಿತ್ರವಾದ ಸ್ಥಾನದಲ್ಲಿತ್ತು. ಇದರ ಅರ್ಥವೇನೆಂದರೆ ರಿಲಿಜನ್ನಿನ ಉಗಮವನ್ನೊಳಗೊಂಡಂತೆ ಹೆಚ್ಚಿನ ಚರ್ಚೆಗಳು ಬೈಬಲ್ಲಿನ ಇತಿಹಾಸದೊಳಗೇ ನಡೆದವು. ಪೇಗನಿಸಂ ಮತ್ತು ಆದಿಮ ಮನುಷ್ಯರನ್ನು ಕೇಂದ್ರಿಕೃತವಾಗಿ ಇಟ್ಟುಕೊಂಡು ರಿಲಿಜನ್ನಿನ ಉಗಮದ ಕುರಿತ ಊಹೆಗಳು ಪ್ರಚಲಿತಕ್ಕೆ ಬಂದವು. ಇದರಿಂದಾಗಿ ಒಂದೆಡೆಯಲ್ಲಿ ಆದಿಮದ ಮಿಥ್ ಹುಟ್ಟಿಕೊಂಡರೆ, ಮತ್ತೊಂದೆಡೆಯಲ್ಲಿ ಏಷಿಯಾದ ಸಂಸ್ಕೃತಿಗಳು ಪ್ರಾಚೀನ ಗ್ರೀಕರ, ರೋಮಿನ ಸಂಸ್ಕೃತಿಯ ಜೊತೆಗೆ ಬೆರೆತವು. ಆದಿಮದಿಂದ ಪೇಗನ್ ಮೂಲಕ ಅಧುನಿಕವನ್ನು ಜೋಡಿಸಿದ ಮನುಕುಲದ ವಿಕಾಸವೆಂಬ ಸೇತುವೆಯು ಇವುಗಳ ನಡುವಿನ ಅಂತರವನ್ನು ಬೆಸೆಯಿತು.

ವಸಾಹತುಶಾಹಿಗಳ ಪ್ರಕಾರ ವಸಾಹತಿನ ಧರ್ಮದ ಚಿಂತನೆಗಳು ಪಾಶ್ಚಿಮಾತ್ಯರ ಮತದಿಂದ ಎರವಲು ಪಡೆದವುಗಳು ಅಥವಾ ಪ್ರಭಾವಕ್ಕೆ ಒಳಗಾದವುಗಳು. ಇದರಲ್ಲಿ ವಸಾಹತಿನ ಎಂಬುವುದು ಶೋಷಣೆ ಮಾತ್ರ ಎಂಬ ವಾದವಾಗಿತ್ತು. ಮಾತ್ರವಲ್ಲ, ಅವುಗಳು ಜನಸಾಮಾನ್ಯರನ್ನು ಮೇಲ್ವರ್ಗಗಳಿಂದ ಪ್ರತ್ಯೇಕಿಸುವ ಸ್ವರೂಪದವುಗಳಾಗಿದ್ದವು. ಉದಾಹರಣೆಗೆ ಶ್ರೀ ಶಂಕರಾಚಾರ್ಯರು ಪ್ರತಿಪಾದನೆ ಮಾಡಿದ ಅದ್ವೈತ ಚಿಂತನೆಗಳು ಜನಸಾಮಾನ್ಯರಿಗೆ ನಿಲುಕದಂತವುಗಳಾಗಿದ್ದವು. ಅಂತೆಯೇ ಏಳನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದ ಉಡುಪಿಯ ಕಲ್ಯಾಣಪುರ ಕ್ರೈಸ್ತರ ಕೇಂದ್ರವು ಉಡುಪಿಯಲ್ಲಿ ಜನ್ಮತಳೆದ ಮಾಧ್ವರ ದ್ವೈತ ಚಿಂತನೆಯ ಮೇಲೆ ಕ್ರಿಸ್ತನ ಚಿಂತನೆಗಳು ಪ್ರಭಾವಿತವಾಗಿ ಬಲಗೊಳ್ಳುವಂತೆ ಮಾಡಿತು. ಜಾತಿ ಬಹಿಷ್ಕಾರ. ಪಂಚಮನ ಮೇಲೆ ದೇವರಿಗೆ ಪ್ರೀತಿ, ದೇಹವನ್ನೆ ದೇಗುಲವಾಗಿಸುವ ಬಸವಣ್ಣನ

ಬ್ರಾಹ್ಮಣರು ಒಳಗಾಗಲು ನಿರಾಕರಿಸಿದಾಗ ಸಮಾಜದ ಕೆಳವರ್ಗಗಳನ್ನು ಆಕರ್ಷಿಸುವಲ್ಲಿ ಕಾರ್ಯತಂತ್ರ ಹೆಣೆದರು. ಭೂತಾರಾಧಕರು (ದೈವಾರಾಧಕರು) ಮೇಲ್ವರ್ಗದವರ ಶೋಷಣೆಗೆ ಒಳಗಾಗಿರುವುದರಿಂದ ಸಮಾಜದಲ್ಲಿ ಯಾವುದೇ ರೀತಿಯ ಸುಧಾರಣೆಯಾಗಿಲ್ಲ; ತುಳುನಾಡಿನ ಬಹುಸಂಖ್ಯಾಕ ಜನವರ್ಗಗಳನ್ನು ಸಮಾಜದ ಮುಖ್ಯವಾಹಿನಿಯ ವಿರುದ್ಧ ಎತ್ತಿ ಕಟ್ಟಿದ ವಸಾಹತುಶಾಹಿ ಮತ್ತು ಮತಪ್ರಚಾರಕರು ಅವರು ಕಲ್ಪಿಸಿಕೊಂಡ ತುಳುನಾಡಿನ ಮೇಲ್ವರ್ಗಗಳು ಕಲಾಕಲಾಂತರಗಳಿಂದ ವಿಗ್ರಹ ಆರಾಧನೆ ಮತ್ತು ಭೂತಾರಾಧನೆಗಳಿಂದ ಮುಮುಕುಲದ ದಾರಿ ತಪ್ಪಿಸಿದೆ ಎಂದು ಅಪಪ್ರಚಾರವನ್ನು ಮಾಡಿದರು. ಮತಪ್ರಚಾರಕರ ಪ್ರಕಾರ ತುಳುವರ ಆರಾಧನೆಗಳಲ್ಲಿ ಹಲವಾರು ವೈರುಧ್ಯಗಳಿದ್ದರಿಂದ ಕ್ರಿಸ್ತನ ಉಪದೇಶಗಳಿಂದಾಗಿ ಅವುಗಳನ್ನು ಸರಿಪಡಿಸಬಹುದು. ಜೊತೆಗೆ ತಪ್ಪನ್ನು ತಿದ್ದಿಕೊಳ್ಳಲು ವಸಾಹತುಶಾಹಿ ಮತ್ತು ಮತಪ್ರಚಾರಕರು ಆರಂಭಿಸಿದ ಆಧುನಿಕ ವಿದ್ಯಾಭ್ಯಾಸ ಪೂರಕಗೊಂಡಿತ್ತಲ್ಲದೇ ಆಧುನಿಕತೆಯ ಪ್ರಭಾವದಿಂದ ಕೆಳವರ್ಗದ ತುಳುವರು ತಪ್ಪಿನ ಅರಿವು ಮೂಡಿಸಿಕೊಂಡರು. ತಪ್ಪುಗಳು ಪುನಾರಾವರ್ತನೆಯಾಗದಂತೆ ಧಾರ್ಮಿಕವಾಗಿ ಜಾಗೃತರಾಗಿ ಸಾಮಾಜಿಕವಾಗಿ ಪರಿವರ್ತನೆಗೊಂಡು ಸತ್ಯವೇದದ ಕಡೆಗೆ ಹೆಚ್ಚು ಆಕರ್ಷಿತಗೊಳ್ಳುವಲ್ಲಿ ಹೊಸ ಆಯಾಮಗಳನ್ನು ಕಲ್ಪಿಸಿಕೊಟ್ಟಿತು.

ತುಳುನಾಡಿನ ಧಾರ್ಮಿಕ ವಾರಸುದಾರಿಕೆಯ ಬಗೆಗಿನ ಋಣಾತ್ಮಕ ಅಭಿಪ್ರಾಯಗಳು ವಸಾಹತುಶಾಹಿ ಮತ್ತು ಮತಪ್ರಚಾರಕರ ನೀತಿಗಳಲ್ಲಿ ಕಾರ್ಯಗತಗೊಂಡು ತುಳುವರ ನಂಬಿಕೆಯಲ್ಲಿ ಅಮೂಲಾಗ್ರ ಬದಲಾವಣೆಯನ್ನು ಮಾಡಿತು. ಅವರ ಪ್ರಕಾರ ಹಿಂದೂಗಳ ಜಾತಿ ಆಧಾರಿತ ದೇವರು, ಶೈವ, ವೈಷ್ಣವರ ವಿಭಿನ್ನ ದೈವಿಕ ಆರಾಧನ ಕ್ರಮ, ದೈವಾರಾಧನೆ (ಭೂತಾರಾಧನೆ) ಪಿಶಾಚ ಧರ್ಮಾಚರಣೆ ಮುಂತಾದವುಗಳು ಏಕದೇವ ಕಲ್ಪನೆಗೆ ವಿರುದ್ಧವಾಗಿದ್ದು ಕ್ರೈಸ್ತರ ನಂಬಿಕೆ, ಆರಾಧನ ಕ್ರಮಕ್ಕೆ ಸರಿಸಾಟಿಯಾಗಲಾರವು.[13] ತುಳುವರ ಕ್ರೈಸ್ತಧರ್ಮದಂತೆ ಸಮೂಹ ಧರ್ಮವಲ್ಲ ಬದಲಾಗಿ ವ್ಯಕ್ತಿಗತ ಧರ್ಮ ಇಲ್ಲವೇ ಕೌಟುಂಬಿಕ ಧರ್ಮವಾಗಿದೆ. ಪೂಜಾವಿಧಾನಗಳೆಲ್ಲ ಸಾಮಾಜಿಕವಾಗಿರದೇ ಕೇವಲ ತೋರಿಕೆಗೆ ಮಾತ್ರವಿದೆ. ಅದು ಪ್ರತಿಪಾದಿಸಿದ ಯೋಗ ಮಾರ್ಗಗಳಿಂದ ಜನಸಾಮಾನ್ಯರು ಮೋಕ್ಷ ಪಡೆಯುವುದು ಸಾಧ್ಯವಿಲ್ಲ. ಬ್ರಾಹ್ಮಣರಿಂದ ರೂಪಿತವಾದ ತ್ರಿಮೂರ್ತಿಗಳ ಆರಾಧನೆಯಿಂದ ಯಾವುದೇ ಪ್ರಯೋಜನವಿಲ್ಲ. ತ್ರಿಮೂರ್ತಿಗಳ ನಡವಳಿಕೆಗಳು ಸಂದೇಹಕ್ಕೆ ಎಡೆ ಮಾಡಿ ಕೊಟ್ಟಿರುವುದರಿಂದ ಆರಾಧನೆಗೆ ಯೋಗ್ಯವಲ್ಲ.[14] ವಸಾಹತಿನ ದೇವರುಗಳ ಜೀವನ ಕ್ರಮವೇ ಅನೇಕ ತಪ್ಪುಗಳಿಂದ ಕೂಡಿದ್ದಾಗಿದೆ. ಕ್ರೈಸ್ತಪೂರ್ವದಲ್ಲಿ ಈ ರೀತಿಯ ದೇವರುಗಳ ಆರಾಧನೆಗಳನ್ನು ಪೇಗನ್‌ಗಳು ಮಾಡುತ್ತಿದ್ದರು.[15] ವಸಾಹತಿನ ದೇವರ ಅವತಾರದ

ಪರಿಕಲ್ಪನೆ ಕೇವಲ ಊಹೆ. ಅದಕ್ಕೆ ಯಾವುದೇ ಸೈದ್ಧಾಂತಿಕ ಹಿನ್ನೆಲೆಯಿಲ್ಲ. ವಸಾಹತಿನ ಶಾಸ್ತ್ರಗಳು ಕೇವಲ ದಂತಕತೆಗಳು ಮಾತ್ರವಲ್ಲ ಭ್ರಮೆ ಭ್ರಾಂತಿಗಳ ಮಾಧ್ಯಮ.[16] ಹೀಗೆ ವಸಾಹತಿನ ಧಾರ್ಮಿಕ ಪರಿವರ್ತನೆಯನ್ನು ಮಾಡುವ ದೃಷ್ಟಿಯಿಂದ ತುಳುವ ಸಮುದಾಯದ ಅಮಾಯಕ ಜನರಲ್ಲಿ ಅವರ ನಂಬಿಕೆಯ ದೇವರುಗಳ ಬಗ್ಗೆ ಸಂದೇಹಗಳನ್ನು ಬಿತ್ತುವುದರೊಂದಿಗೆ ಧಾರ್ಮಿಕ ಪರಿವರ್ತನೆಗೆ ಹಾದಿಯನ್ನು ಸುಗಮಗೊಳಿಸುವಲ್ಲಿ ಪ್ರಯತ್ನಿಸಿದರು. ಅಂತೆಯೇ ತುಳುನಾಡಿನ ಪ್ರಾಟೆಸ್ಟಂಟ್ ಮತಪ್ರಚಾರಕ ಸಂಸ್ಥೆಗಳು ವಿಗ್ರಹ ಆರಾಧನೆಯ ಬಗ್ಗೆ ಸಾಕಷ್ಟು ಟೀಕೆಗಳನ್ನು ಮಾಡಿತು.[17] ತುಳುವರೆಲ್ಲರೂ ವಿಗ್ರಹ ಆರಾಧನೆಯಲ್ಲಿ ಮುಳುಗಿದ್ದರಿಂದ ಕ್ರೈಸ್ತಮತಕ್ಕೆ ಸಾಮಾಜಿಕವಾಗಿ ಪರಿವರ್ತನೆ ಅವಶ್ಯ ಎಂಬ ನೀತಿಯನ್ನು ರೂಪಿಸಿತು.[18] ಪ್ರಪಂಚದಲ್ಲಿ ಯಾರೂ ಶಾಶ್ವತರಲ್ಲವಾದುದರಿಂದ ಬ್ರಾಹ್ಮಣ ಅಬ್ರಾಹ್ಮಣರೆಂಬ ವಿಭಜನೆ ನ್ಯಾಯಯುತವಲ್ಲ. ಮುಂದುವರೆದು ವಸಾಹತುಧರ್ಮ ವಿರೋಧಿ ನಿಲುವುಗಳನ್ನು ಪ್ರಕಟಿಸಿ ಧಾರ್ಮಿಕ ಪರಿವರ್ತನೆಯ ಪ್ರಕ್ರಿಯೆಯನ್ನು ಶಬ್ದಶಃ ಸುಲಭೀಕರಿಸಿಕೊಂಡರು. ಈ ಬಗೆಯ ಟೀಕೆಗಳು ಕ್ರೈಸ್ತಧರ್ಮದ ಉತ್ಕೃಷ್ಟತೆಯನ್ನು ಸಾರುವ ಗುಪ್ತ ಉದ್ದೇಶವನ್ನು ಹೊಂದಿತ್ತು.[19] ತುಳುನಾಡಿನ ದೈವಸ್ಥಾನ, ದೇವಸ್ಥಾನಗಳು ಶಿಥಿಲಗೊಂಡಿರುವುದನ್ನು ಉಲ್ಲೇಖಿಸಿ ಆ ಧರ್ಮದ ಅಧಃಪತನವಾಗುತ್ತಿದೆ ಎಂದಿದೆಯಲ್ಲದೇ, ಪಾಶ್ಚಾತ್ಯ ಚಿಂತನೆ ಹಾಗೂ ಅಧುನಿಕ ವಿದ್ಯಾಭ್ಯಾಸದಿಂದ ಪರಿಚಿತರಾದ ತುಳುವರು ತಮ್ಮ ಪೂರ್ವಿಕರ ಆರಾಧನ ಸಂಪ್ರದಾಯಗಳತ್ತ ಆಸಡ್ಡೆ ವಹಿಸಿದ್ದು, ಈ ಪ್ರದೇಶವನ್ನು ಕ್ರೈಸ್ತೀಕರಣಗೊಳಿಸಲು ಸುಲಭವಾಗಬಹುದೆಂಬ ಆಶಯವನ್ನು ಇಂಗಿತ ಪಡಿಸಿತು. ಅದಾಗ್ಯೂ ವಸಾಹತುಶಾಹಿ ಮತ್ತು ಅದರ ಹಿಂಬಾಲಕರಿಂದ ನಡೆಯುತ್ತಿದ್ದ ಅವ್ಯಾಹತ ಅಪಪ್ರಚಾರದಿಂದ ವಸಾಹತಿನ ಜನ ಪೂರ್ಣವಾಗಿ ತಮ್ಮ ಪಾರಂಪರಿಕ ಧಾರ್ಮಿಕ ವಾರಸುದಾರಿಕೆಗಳನ್ನು ಬಿಟ್ಟುಕೊಡಲು ತಯಾರಿರಲಿಲ್ಲ. ಅವರು ವಸಾಹತುಶಾಹಿಯ ಎಲ್ಲವನ್ನು ಪ್ರಶ್ನಾರ್ಥಕ ದೃಷ್ಟಿಯಿಂದಲೇ ನೋಡಿ ಮತಪ್ರಚಾರಕರ ಅಪಪ್ರಚಾರದಿಂದ ದೂರ ಉಳಿದರು. ತಮ್ಮ ಹಿರಿಯರು ಆರಾಧಿಸಿಕೊಂಡು ಬರುತ್ತಿದ್ದ ದೈವಗಳ ಬಗೆಗಿನ ಟೀಕೆಗಳು ತುಳುವರಲ್ಲಿ ಸಂದಿಗ್ಧತೆಗಳನ್ನು ಮೂಡಿಸಿತ್ತಾದರೂ ಆಗಿರುವ ಪ್ರಮಾದಗಳನ್ನು ಸರಿಪಡಿಸುವ ಪ್ರಯತ್ನಗಳನ್ನು ಆರಂಭಿಸಿದ್ದರು. ಆದರೂ ಮತಪ್ರಚಾರಕರ ಚಟುವಟಿಕೆಗಳು ವಸಾಹತು ರಚನಾ ವ್ಯವಸ್ಥೆಯ ಸಾಧನಗಳಾಗಿ ಉಳಿದುಕೊಂಡಿತ್ತು.

ಪಾಶ್ಚಿಮಾತ್ಯ ರೀತಿಯಲ್ಲಿ ನಾಗರೀಕ ಸಮಾಜದ ನಿರ್ಮಾಣ ಮಾಡಿ ಅಧಿಕಾರ ನಿರ್ವಹಿಸಲು ಬೇಕಾದ ಸ್ಥಳೀಯ ಜ್ಞಾನಗಳು ಮತಪ್ರಚಾರಕರ ಚಟುವಟಿಕೆಗಳಿಂದಾಗಿ ಲಭ್ಯವಾಯಿತ್ತಲ್ಲದೆ ವಸಾಹತುಶಾಹಿಗೆ ತನ್ನ ಅಧಿಕಾರದ ಆಯುಷ್ಯ ವೃದ್ಧಿಗೂ ಅವಕಾಶ

ಮಾಡಿಕೊಟ್ಟಿತು. ಧಾರ್ಮಿಕ ಬಹುತ್ವದ ತುಳುನಾಡು ಏಕತ್ವದ ನೆಲೆಯಲ್ಲಿ ಮರುರೂಪುಗೊಳ್ಳುವ ಪ್ರಕ್ರಿಯೆಗೆ ಒಳಪಟ್ಟಿತು. ಪಾಶ್ಚಿಮಾತ್ಯ ಜ್ಞಾನಪರ್ವ ಮತ್ತು ಮತಪ್ರಚಾರಕರ ಧಾರ್ಮಿಕ ಪರಿವರ್ತನೆಯ ಕಾರ್ಯಯೋಜನೆ ವಸಾಹತು-ವಸಾಹತುಶಾಹಿಗಳ ನಡುವೆ ಊಹಿಸಲಾರದ ಕಂದರವನ್ನು ನಿರ್ಮಿಸಿತು.[20] ಅವರ ಪ್ರಕಾರ ಬ್ರಾಹ್ಮಣರನ್ನು ಹೊರತುಪಡಿಸಿದರೆ ತುಳುನಾಡಿನ ಬಹುಸಂಖ್ಯಾತರು ಕ್ಷುದ್ರ ದೇವತೆಗಳ ಪೂಜಕರು. ಮುಂದುವರೆದು ವಸಾಹತುಶಾಹಿ ಚಿಂತನೆಯ ಪ್ರಜ್ಞೆ, ಮತಧರ್ಮ, ಪರಂಪರೆ, ಸಂಸ್ಕೃತಿ, ಚರಿತ್ರೆ, ಭಾಷೆ ವಸಾಹತಿನ ಮೇಲೆ ಪ್ರಭಾವ ಬೀರಿತು. ವಸಾಹತು ತನ್ನ ಮೂಲ ಆಸ್ತಿತ್ವವನ್ನು ಕಳೆದುಕೊಳ್ಳುವ ಹಾದಿಯಲ್ಲಿ ಕ್ರಮಿಸತೊಡಗಲು ಅವಕಾಶವನ್ನು ಕಲ್ಪಿಸಿತು. ಮಾತ್ರವಲ್ಲ ತುಳುನಾಡಿನ ಧಾರ್ಮಿಕ ಪಾರಂಪರಿಕ ವ್ಯವಸ್ಥೆ ಏಕಾತ್ಮಕ ಬಂಧದಡಿಯಲ್ಲಿ ಹೆಣೆಯಲ್ಪಟ್ಟಿತ್ತು. ಅಧುನಿಕ ಪೂರ್ವದ ಬೇರೆ ಬೇರೆ ಜನಸಮುದಾಯಗಳ ನಂಬಿಕೆ, ಆಚಾರ ವಿಚಾರ, ಸಂಸ್ಕೃತಿಯ ಭಿನ್ನ ಸ್ವರೂಪ ಸವಾಲುಗಳಿಗೆ ಉತ್ತರ ಕೊಡುವ ಬದಲಿಗೆ ವಸಾಹತುಶಾಹಿ ಅಪನಂಬಿಕೆಯ ಪರದೆಯನ್ನು ಹಾಕುವಲ್ಲಿ ಯಶಸ್ವಿಯಾಯಿತು. ಕಾನೂನುಪ್ರಣೀತ ಆಡಳಿತ, ಮುಕ್ತ ವ್ಯಾಪಾರ, ವ್ಯಕ್ತಿಗತ ಹಕ್ಕುಗಳು, ಖಾಸಗಿ ಆಸ್ತಿಯ ಹಕ್ಕು ಮುಂತಾದವುಗಳು ವಸಾಹತುಶಾಹೀಯ ಕೊಡುಗೆಗಳಾಗಿದ್ದು, ಜೊತೆಗೆ ಈ ಪ್ರದೇಶ ಹೊಸ ಧಾರ್ಮಿಕ ಚಿಂತನೆಗಳ ಮೂಲಕ ಅಭಿವೃದ್ಧಿ ಹೊಂದಿ ಸಾರ್ವತ್ರಿಕ ನಾಗರೀಕತೆಯಾಗುತ್ತಿರುವುದು ಅಧುನಿಕತೆಯ ದೃಷ್ಟಿಯಿಂದ ಹೊಸ ಇತಿಹಾಸವೆಂದು ಪ್ರಚುರಪಡಿಸಿದರು. ಮಾತ್ರವಲ್ಲ ಸಾರ್ವತ್ರಿಕ ನಾಗರೀಕತೆಯನ್ನು ಒಪ್ಪಿಕೊಂಡ ಸಾಮಾಜಿಕ-ಸಾಂಸ್ಕೃತಿಕವಾಗಿ ಪರಿವರ್ತಿತಗೊಂಡವರಿಗೆ ನ್ಯಾಯಯುತ ಹಕ್ಕನ್ನು ದಯಪಾಲಿಸುವಲ್ಲಿ ಕಾನೂನುಗಳು ರೂಪಿಸಲ್ಪಟ್ಟಿತ್ತು.[21] ಅಭಿವೃದ್ಧಿಯ ಹಿನ್ನಡೆಗೆ ಕಾರಣವಾಗಿದ್ದ ವಸಾಹತಿನ ಧರ್ಮ, ಜಾತಿಶ್ರೇಣಿಕರಣ, ಹಳ್ಳಿಸಮುದಾಯ, ನಿರಂಕುಶತೆ ಇವುಗಳು ವಸಾಹತುಶಾಹಿಯ ಎದುರು ಗೌಣವಾಯಿತು.[22] ಹೀಗೆ ವಸಾಹತುಶಾಹಿ ಮತ್ತು ಮತಪ್ರಚಾರಕರ ನಂಬಿಕೆಯ ಮೇಲೆ ಪ್ರಭಾವ ಬೀರುವ ಕಾರ್ಯಯೋಜನೆಗಳು ಎರಡು ಪ್ರಧಾನ ಭೂಮಿಕೆಗಳನ್ನು ನಿಭಾಯಿಸಿತು. ಮತಪ್ರಚಾರಕರು ಒಂದೆಡೆ ವಸಾಹತಿನ ಔನ್ನತ್ಯದ ಏಜೆಂಟರುಗಳಾಗಿ ಇನ್ನೊಂದೆಡೆ ಅಧುನಿಕತೆಯ ಹರಿಕಾರರಾಗಿ ಕಂಡುಬಂದರು.[23]

### ತುಳುಕ್ರೈಸ್ತರು-ವಸಾಹತುಶಾಹಿ

ತುಳುನಾಡಿನಲ್ಲಿ ಮತಪ್ರಚಾರಕ ಧಾರ್ಮಿಕ ಯೋಜನೆಗಳು ಹಾಗೂ ಸಾಮಾಜಿಕ ಪರಿವರ್ತನೆಯ ಚಟುವಟಿಕೆಗಳು ಹೊಸ ಭರವಸೆಯ ಬೆಳಕನ್ನು ಮೂಡಿಸುತ್ತಿದೆ ಎಂಬ ಭ್ರಮೆಯನ್ನು ಸೃಷ್ಟಿಸಿತು. ಇದಕ್ಕೆ ಪೂರಕವಾಗಿ ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ

ಪರಿವರ್ತನೆಗೊಂಡವರ ಹೊಸ ಜೀವನಶೈಲಿ, ಸಾಮಾಜಿಕ ಸ್ಥಿತಿಗತಿ ತೋರಿಕೆಗಾದರೂ ಉಳಿದ ಸಮುದಾಯಗಳಿಗೆ ಪಂಥಾಹ್ವಾನ ನೀಡುವಂತೆ ಭಾಸವಾಗುತಿತ್ತು.[24] ತುಳುವರು ದೈವಾರಾಧನೆಯ ನೆಲೆಗಟ್ಟಿಗನುಗುಣವಾಗಿ ಆಂತರಿಕ ಜೀವನವನ್ನು ನಡೆಸುವ ಪರಿ ಒಂದೆಡೆಯಾದರೆ, ಈ ವ್ಯವಸ್ಥೆಯಿಂದ ಹೊರಬಂದು ಹೊಸತಾಗಿ ಪಶ್ಚಿಮದ ಧರ್ಮವನ್ನು ಒಪ್ಪಿಕೊಂಡು ಹೊಸ ದೇವರುಗಳ ಮೇಲೆ ತೋರುವ ಆಸ್ಥೆ ಹಾಗೂ ತೋರಿಕೆಗೆ ಪ್ರಶಾಂತ ಜೀವನವನ್ನು ನಡೆಸುವ ವೈಖರಿ ತುಳುವ ಸಮಾಜದಲ್ಲಿ ಒಂದು ರೀತಿಯ ಸಂಚಲನೆಯನ್ನು ಸೃಷ್ಟಿಸಿತು.[25] ವೈಯುಕ್ತಿಕ ಹಾಗೂ ಸಾಮಾಜಿಕ ಪರಿವರ್ತನೆಯಿಂದಾದ ಬದಲಾವಣೆ-ಧರ್ಮ ಪರಿವರ್ತಿತರಲ್ಲಿ ಹೊಸ ಧಾರ್ಮಿಕತೆ ಧೈರ್ಯ ಹಾಗೂ ನಿಷ್ಠೆಯನ್ನು ಬಲಪಡಿಸಿತು. ಜೊತೆಗೆ ಮತಪ್ರಚಾರಕರ ಧ್ಯೇಯ-ನಿಷ್ಠೆ-ಕರ್ತವ್ಯ ಧರ್ಮ ಪರಿವರ್ತಿತ ತುಳುವರಲ್ಲಿ ಜೀಸಸ್‌ನ ಚಿಂತನೆಗಳನ್ನು ಪ್ರಬಲವಾಗಿ ಒಪ್ಪಿಕೊಳ್ಳುವಂತೆ ಮಾಡಿತು. ಮುಂದುವರೆದು ಈ ತೆರನಾದ ಬೋಧನೆಯಿಂದಾದ ಬೆಳವಣಿಗೆಗಳು ತುಳು ನಂಬಿಕೆಯ ಆಧಾರವಾಗಿದ್ದ ಭೂತಗಳ ಹೆದರಿಕೆ ಇಲ್ಲವೇ ಸಾವಿನ ಭಯದಿಂದ ಧರ್ಮಪರಿವರ್ತಿತರನ್ನು ಪಾರುಮಾಡಿತು.[26] ಅವರ ಪ್ರಕಾರ ಕ್ರೈಸ್ತಧರ್ಮ ಮಾತ್ರ ಸತ್ಯದ ಪ್ರತೀಕವಾಗಿದೆ. ಕ್ರಿಸ್ತನ ಬಲ ಸಾವಿರ ಭೂತಗಳಿಂದಲೂ ಹೆಚ್ಚಿನದಾಗಿರುವುದರಿಂದ ಈತನ ಆರಾಧನೆಯ ಮೂಲಕ ವಸತಿನ ಜನ ಭೂತಕ್ಕೆ (ದೈವಕ್ಕೆ) ಹೆದರದೇ ನೆಮ್ಮದಿಯ ಜೀವನ ಮಾಡಬಹುದು. ಚರ್ಚಿನ ಘಂಟಾನಾದದಿಂದ ಭೂತಗಳ (ದೈವಗಳ) ಶಕ್ತಿ ಉಡುಗಿ ಹೋಗಿ ದುರ್ಬಲವಾಗುತ್ತವೆ ಎಂಬಿತ್ಯಾದಿ ವಾದಗಳನ್ನು ಮುಂದಿಟ್ಟುಕೊಂಡು ತಲತಲಾಂತರದ ನಂಬಿಕೆಗಳು ಹಾಗೂ ತುಳುನಾಡಿನ ಧರ್ಮದ ಮೇಲಿನ ವಾರಸುದಾರಿಕೆಯ ವ್ಯವಸ್ಥೆಗಳನ್ನು ವಿಘಟನೆಗೊಳಿಸುವ ಪ್ರಯತ್ನ ಮಿಷನರಿಗಳಿಂದ ಆರಂಭಗೊಂಡಿತು. ವಿಘಟನೆಗೊಳಿಸುವ ಮುಖ್ಯ ಉದ್ದೇಶ ಮತಾಂತರದ ಹಾದಿ ಸುಗಮ ಮಾಡಿಕೊಳ್ಳುವುದಾಗಿತ್ತು. ಸ್ಥಳೀಯವಾಗಿ ಭೂತದ ಆರಾಧನೆ ಮಾಡುತ್ತಿದ್ದ ಪೂಜಾರಿ, ಬಿಲ್ಲವ ಮತ್ತು ಅವರ ಕುಟುಂಬದವರಿಂದ ಕ್ರೈಸ್ತಧರ್ಮದ ಸ್ವೀಕಾರ ಮತಪರಿವರ್ತನೆಗಳು ಬಾಸೆಲ್‌ಮಿಷನಿನವರಿಗೆ ಮಹೋನ್ನತ ಜಯವಾಗಿ ಪರಿಣಮಿಸಿತ್ತೆಂಬುವುದನ್ನು ಉಡುಪಿಯ ಕಾಪು ಮುಂತಾದೆಡೆ ನಡೆದ ಕೆಲವು ಉದಾಹರಣೆಗಳಿಂದ ತಿಳಿದುಬರುತ್ತದೆ. ಭೂತಾರಾಧನೆಯಿಂದ ಪಾಪ ಕಟ್ಟಿಕೊಂಡ ಆತ್ಮಗಳು ಮತಪರಿವರ್ತನೆಗೊಂಡಾಗ ಸ್ವರ್ಗದೆಡೆ ತೆರಳಲು ಜೀಸಸ್ ದಾರಿ ತೋರಿಸಿದನು. ದೈವಾರಾಧಕರಾಗಿದ್ದ ಬಿಲ್ಲವರು ಬಹುಸಂಖ್ಯೆಯಲ್ಲಿ ಮತಾಂತರಗೊಂಡರಲ್ಲದೇ ತಮ್ಮ ವಾರಸವಾಗಿ ಬಂದಿದ್ದ ಧಾರ್ಮಿಕ ಕಲ್ಪನೆಗಳಿಗೆ ತಿಲಾಂಜಲಿ ನೀಡಿ ಹೊಸ ಧರ್ಮವನ್ನು ಒಪ್ಪಿಕೊಂಡರು. ಬಾಸೆಲ್ಗಳ ಈ ಪ್ರಯತ್ನ ಕಾಪು. ಮುದರಂಗಡಿ, ಪಾಂಗಾಳ, ಗುಡ್ಡೆಗುತ್ತು, ಮಲ್ಪೆ, ಕಟಪಾಡಿ, ಕಾರ್ನಾಡ್, ಮುಲ್ಕಿ ಮುಂತಾದೆಡೆ ಜರಗಿದ

ಘಟನೆಗಳಾನ್ನಾಧರಿಸಿದೆ. ಜೊತೆಗೆ ಬಾಸೆಲ್‌ಮಿಷನ್ ಪ್ರಾರಂಭಿಸಿದ ತುಳು ಮೂವ್ಮೆಂಟ್ ಈ ಭಾಗದ ಜನರನ್ನು ಸಾಮಾಜಿಕವಾಗಿ ಪರಿವರ್ತಿಸಿ ಅವರ ಧಾರ್ಮಿಕ ವಾರಸುದಾರಿಕೆಯ ಬದಲಾವಣೆಗೆ ಇಂಬುಕೊಟ್ಟಿತು. ಸ್ಥಳೀಯವಾಗಿ ಭೂತದ ಆರಾಧನೆ ಮಾಡುತ್ತಿದ್ದ ಪೂಜಾರಿ, ಬಿಲ್ಲವ ಮತ್ತು ಅವರ ಕುಟುಂಬದವರಿಂದ ಕ್ರೈಸ್ತಧರ್ಮದ ಸ್ವೀಕಾರ ಮತಪರಿವರ್ತನೆಗಳು ಬಾಸೆಲ್‌ಮಿಷನಿನವರಿಗೆ ಮಹೋನ್ನತ ಜಯವಾಗಿ ಪರಿಣಮಿಸಿತ್ತೆಂಬುವುದನ್ನು ಉಡುಪಿಯ ಕಾಪು ಮುಂತಾದೆಡೆ ನಡೆದ ಕೆಲವು ಉದಾಹರಣೆಗಳಿಂದ ತಿಳಿದುಬರುತ್ತದೆ. ಭೂತಾರಾಧನೆಯಿಂದ ಪಾಪ ಕಟ್ಟಿಕೊಂಡ ಆತ್ಮಗಳು ಮತಾಂತರಗೊಂಡಾಗ ಸ್ವರ್ಗದೆಡೆ ತೆರಳಲು ಜೀಸಸ್ ದಾರಿ ತೋರಿಸಿದನು. ದೈವಾರಾಧಕರಾಗಿದ್ದ ಬಿಲ್ಲವರು ಬಹುಸಂಖ್ಯೆಯಲ್ಲಿ ಮತಾಂತರಗೊಂಡರಲ್ಲದೇ ತಮ್ಮ ವಾರಸವಾಗಿ ಬಂದಿದ್ದ ಧಾರ್ಮಿಕ ಕಲ್ಪನೆಗಳಿಗೆ ತಿಲಾಂಜಲಿ ನೀಡಿ ಹೊಸ ಧರ್ಮವನ್ನು ಒಪ್ಪಿಕೊಂಡರು. ಬಾಸೆಲ್ಗಳ ಈ ಪ್ರಯತ್ನ ಕಾಪು. ಮುದರಂಗಡಿ, ಪಾಂಗಾಳ, ಗುಡ್ಡೆಗುತ್ತು, ಮಲ್ಪೆ, ಕಟಪಾಡಿ, ಕಾರ್ನಾಡ್, ಮುಲ್ಕಿ ಮುಂತಾದೆಡೆ ಜರಗಿದ ಘಟನೆಗಳಾನ್ನಾಧರಿಸಿದೆ. ಜೊತೆಗೆ ಬಾಸೆಲ್‌ಮಿಷನ್ ಪ್ರಾರಂಭಿಸಿದ ತುಳು ಮೂವ್ಮೆಂಟ್ ಈ ಭಾಗದ ಜನರನ್ನು ಸಾಮಾಜಿಕವಾಗಿ ಪರಿವರ್ತಿಸಿ ಅವರ ಧಾರ್ಮಿಕ ವಾರಸುದಾರಿಕೆಯ ಬದಲಾವಣೆಗೆ ಇಂಬುಕೊಟ್ಟಿತು. ಮತಪ್ರಚಾರಕರು ಧರ್ಮ ಪರಿವರ್ತಿತರಿಗೆ ಸರಕಾರಿ ಸೌಲಭ್ಯಗಳ ಜೊತೆಗೆ ವಿಶೇಷ ನೀತಿ ನಿಯಮಗಳನ್ನು ಜಾರಿಗೆ ತಂದು ವಸಾಹತಿನ ಧರ್ಮಪರಿವರ್ತಿತರ ಸಾಮಾಜಿಕ, ಸಾಂಸ್ಕೃತಿಕ ನೆಲೆಗಟ್ಟುಗಳನ್ನು ಪಲ್ಲಟಗೊಳಿಸಿದರು. ತುಳುವರ ಅಳಿಯಸಂತಾನದ ಕಟ್ಟು-ಕಟ್ಟಳೆ ರೀತಿಯಲ್ಲೆ ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, (ಹಿಂದುಸ್ತಾನದಲ್ಲಿರುವ ಬಾಸೆಲ್‌ಮಿಶನ್‌ನಿನ ಸೌವಾರ್ತಿಕ ಸಭೆಯ ಕಟ್ಟುಪಾಡುಗಳು) ಶೀರ್ಷಿಕೆಯಡಿಯಲ್ಲಿ ಧರ್ಮಪರಿವರ್ತಿತರಿಗೆ ಕಾನೂನು-ಕಟ್ಟಳೆಗಳು ಜಾರಿಗೆ ಬಂದವು. ಈ ಕಟ್ಟಳೆಗಳನ್ನು ಕಾಲಕಾಲಕ್ಕೆ ತಿದ್ದುಪಡಿ ಮಾಡಿ ಧರ್ಮ ಪರಿವರ್ತನೆಗೊಂಡ ತುಳುವರಿಗೆ ತಮ್ಮ ಬದಲಾದ ಜೀವನ ಕ್ರಮಕ್ಕೆ ಹೊಂದಿಕೊಳ್ಳುವಂತೆ ಅವಕಾಶವನ್ನು ಒದಗಿಸಿತು. ಮತಪ್ರಚಾರಕರು ಹೊಸ ಕಟ್ಟುಕಟ್ಟಳೆಯ ಪೀಠಿಕೆಯನ್ನು ದೈವಿಕ ನೆಲೆಯನ್ನು ಸ್ಥಾಪಿಸುವ ಸಲುವಾಗಿ ದೇವರ ವಾಕ್ಯದೊಂದಿಗೆ ಆರಂಭಿಸಿ ವಸಾಹತುಶಾಹಿ ಸರಕಾರದ ಕಾನೂನುಗಳೊಂದಿಗೆ ಸಂಘರ್ಷಕ್ಕಿಳಿಯದಂತೆ ಎಚ್ಚರ ವಹಿಸಿತು. ಆದರೆ ತನ್ನ ನಿಲುವಿಗೆ ಒಗ್ಗದ ಅಂಶಗಳಿಗೆ ಸಂಬಂಧಿಸಿದಂತೆ ಸರಕಾರದ ಕಾನೂನಿನ ಆಶಯದಂತೆ ಈ ಕಟ್ಟುಕಟ್ಟಳೆಗಳು ನಡೆಯತಕ್ಕವಲ್ಲ ಎಂದು ಸ್ಪಷ್ಟಪಡಿಸಿ, ಅದರ ಉರ್ಜಿತತೆಯನ್ನು ಕನಿಷ್ಠಗೊಳಿಸಿತು. ಜೊತೆಗೆ ಸರಕಾರದ ಕಾಯಿದೆಗಳು ಅನೂರ್ಜಿತಗೊಳ್ಳುವ ಸ್ವರೂಪ ಪಡೆದುಕೊಂಡರೆ ಕಾಲಕಾಲಕ್ಕೆ ಅವುಗಳನ್ನು

ದೇವರ ಹೆಸರಿನಲ್ಲಿ ತಿದ್ದುಪಡಿ ಮಾಡಬೇಕೆಂಬ ಆಶಯವನ್ನು ಇಟ್ಟುಕೊಂಡಿತು. ವಾಸ್ತವವಾಗಿ ಈ ಕಟ್ಟಳೆಯಲ್ಲಿರುವ ವಸ್ತುವಿಚಾರಗಳು ವಸಾಹತಿನ ಭಾವನಾತ್ಮಕ ವಾರಸುದಾರಿಕೆಯ ಪ್ರತಿರೂಪವಾಗಿದ್ದರೂ ಅಳಿಯಸಂತಾನದ ವಿರೋಧಿ ನೆಲೆಯಲ್ಲಿ ವ್ಯಾಖ್ಯಾನಗೊಂಡವುಗಳು. ವಸಾಹತಿನ ಸಾಮುದಾಯಿಕ ಸೌಹಾರ್ದತೆ ಬಿಂಬಿಸುವ ಕೆಲವೊಂದು ಆಚರಣೆಗಳು ಉತ್ತಮ ಆಶಯವನ್ನು ಇಟ್ಟುಕೊಂಡಿದ್ದರೂ ಕೃಷಿ ಅಧಿಕಾರ ರಚನೆಯಲ್ಲಿ ಅವುಗಳು ಅಧೀನತೆಯ ಸೂಚಕಗಳಾಗಿ ಪರಿವರ್ತನೆಗೊಂಡವು.[27] ತುಳುನಾಡಿನ ಆಚರಣೆಗಳನ್ನು ವಾರಸುದಾರಿಕೆಯ ನೆಲೆಯಲ್ಲಿ ಅರ್ಥೈಸಿಕೊಂಡಾಗ ಪ್ರಬಲ-ದುರ್ಬಲ ಸಂಬಂಧಗಳು ಸ್ಪಷ್ಟವಾಗಿ ಗೋಚರಿಸುತ್ತವೆ.[28] ಪ್ರಬಲ ವರ್ಗವನ್ನು ಪ್ರತಿನಿಧಿಸುವ ಸಾಂಸ್ಥಿಕ ವ್ಯವಸ್ಥೆಗಳು ಆಸುಪಾಸಿನ ಪರಿಶಿಷ್ಟ ವ್ಯವಸ್ಥೆಯ ಮೇಲೆ ಅಧಿಕಾರ ಚಲಾಯಿಸುವ ಮೂಲಕ ಉಳಿಗಮಾನ್ಯ ವ್ಯವಸ್ಥೆಗೆ ಅಡಿಪಾಯಗಳಾಗಿದ್ದವು.[29] ಏಣಿ-ಶ್ರೇಣಿಯ ಅಧಿಕಾರ ರಚನೆಯಲ್ಲಿ ಸೀಮೆಯ ದೇವಸ್ಥಾನಗಳು ಅದರ ವ್ಯಾಪ್ತಿಯಲ್ಲಿ ಬರುವ ದೈವಸ್ಥಾನ, ದೇವಸ್ಥಾನಗಳಿಗೆ ಮಾರ್ಗದರ್ಶನ ನೀಡುವ ಪರಿಕಲ್ಪನೆ. ಸೀಮೆಯ ಅರಸ ತನ್ನ ವ್ಯಾಪ್ತಿಯೊಳಗಿನ ಅಧೀನ ವ್ಯವಸ್ಥೆಗಳಿಂದ ಪಡೆಯುವ ಮಾನ-ಸಮ್ಮಾನ ಇತ್ಯಾದಿ. ಅಂತೆಯೇ ವಸಾಹತುಶಾಹಿಯಡಿ ಮತಪ್ರಚಾರಕರು ರೂಪಿಸಿಕೊಂಡ ಆಚರಣೆ, ಚರ್ಚಿನ ಕಟ್ಟುಕಟ್ಟಳೆ ಮುಂತಾದವುಗಳು ಧರ್ಮ ಪರಿವರ್ತನೆಗೊಳಗಾದವರನ್ನು ಪರಿಶಿಷ್ಟಗೊಳಿಸಿ ಚರ್ಚಿನ (ಪಶ್ಚಿಮದ ಮತಪ್ರಚಾರಕರ ಧಾರ್ಮಿಕ ಸಾಂಸ್ಥಿಕ ರಚನೆ) ಉಳಿಗಮಾನ್ಯ ವ್ಯವಸ್ಥೆಗೆ ಅಡಿಪಾಯವನ್ನಾಗಿಸಿದರು. ಜೊತೆಗೆ ಪ್ರಬಲ ದುರ್ಬಲ ಸಂಬಂಧಗಳನ್ನು ಹುಟ್ಟುಹಾಕುವಲ್ಲಿ ಯಶಸ್ಸನ್ನು ಪಡೆದರು. ವಸಾಹತಿನ ವಾರಸುದಾರಿಕೆಯ ವಿಭಿನ್ನ ಸ್ತರಗಳ ನಡುವೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಂಬಂಧಗಳು ಅಧಿಕಾರ ಸ್ವರೂಪದ್ದಾಗಿದ್ದರೂ, ಅವುಗಳು ಹೆಚ್ಚು ಭಾವನಾತ್ಮಕವಾಗಿದ್ದವು. ಅಜಲಿನ ಮನೆತನಕ್ಕೂ ಅದರ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಕುಟುಂಬಗಳಿಗೂ ಭಾವನಾತ್ಮಕ ಸಂಬಂಧವಿರುವುದು ಇತಿಹಾಸದ ಪುಟಗಳಲ್ಲಿ ದಾಖಲುಗೊಂಡಿವೆ. ಈ ರೀತಿಯ ಭಾವನಾತ್ಮಕ ಸಂಬಂಧವನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಿದ್ದ ಮತಪ್ರಚಾರಕ ಸಂಸ್ಥೆಗಳು ಅಂಥವುಹುದೇ ವ್ಯವಸ್ಥೆಯನ್ನು ರೂಪಿಸುವ ಚರ್ಚ್ ಕೇಂದ್ರಿತ ಭಾವನಾತ್ಮಕ ನೆಲೆಗಟ್ಟನ್ನು ರೂಪಿಸಿ ತುಳು ರೂಢ-ಸಂಪ್ರದಾಯಗಳಿಗೆ ಪರ್ಯಾಯ ವ್ಯವಸ್ಥೆ ರೂಪಿಸುವ ಮುಖ್ಯಭೂಮಿಕೆಯನ್ನು ನಿಭಾಯಿಸಿತು. ಬಾಸೆಲ್‌ಮತ ಪ್ರಚಾರಕರ ದಿನನಿತ್ಯದ ಪ್ರಾರ್ಥನೆಯಲ್ಲಿ ಅಡಕವಾಗಿದ್ದ ಸಾಮಾಜಿಕ-ಸಾಂಸ್ಕೃತಿಕ ಸಂಬಂಧಗಳು ಈ ರೀತಿ ಇದ್ದವು. "*ಯಂಕುಳು ಆತ್ಮ ಸುಖೋಟ್ಟ್ ಬದುಕುಲೆಕ್ಕ, ನಿನ ವಾಕ್ಯೋನು ಎಂಕುಳೆಗ್ ಜೀವದ ಆಹಾರ ಅಂದ್ ಇನಿ ಕೊರುದು, ಬೋಡಾಪಿ ಬುದ್ದಿ ಬೋಧನೆ, ಎಚ್ಚರಿಕೆ ಸಮಜೈಸಿಗೆನ್*

*ಏಡ್ದ್ ದಯಮಲ್ಪುಲಾ, ನಿನ ವಾಕ್ಯೋನು ನಂಬೆರೆತಕ್ಕ ಇತ್ತಿ ಯಥಾರ್ಥ ಹೃದಯೊನುಳಾ, ದೃಡ ವಿಶ್ವಾಸೊನುಳಾ ಯೆಂಕುಳೆಗ್ ಉಂಡು ಮಲ್ಪುಲ, ಯೆಂಕುಲೆನ್ಲಾ ನಿನ ಮಾತಾ ಸಭೆನ್‌ಲಾ ಮಾತಾ ತರತ ದುಭೋ‌ರ್ದನೆಳೆಗ್ ತಪ್ಪಾದ್ ಕಾಪುಲ. ನಿಕ್ಕ್ ಮೆಚ್ಚಂದಿ ಮಾತಾ ಪಡಿಕೆ ಮನಸ್‌ಳೆನ್ ಯೆಂಕುಳೆಡ್ದ್ ದೆತ್ತ್ದ್ ನಿನ ದಂಬಡಿಗೆಗ್ ಸರಿಯಾದ್ ದಿನೊಟ್ ಪರಿಶುದ್ದ ಮಲ್ಪೆರೆ ಕಲ್ಪಾಲ......ಇನಿ ನಿನ ವಾಕ್ಯೋನು ಸಾರುನಕ್‌ಲೆಗ್ ಬೋಡಾಪಿ ಬುದ್ದಿಲಾ ಒಲಲಾ ಕೊರುದ್ ಕೇಣುನಾಕುಳೆ ಹೃದಯೊನು ಐಕ್ ತಯಾರ್ ಮಲ್ತ್ದ್, ನಿನ್ನ ವಾಕ್ಯ ಏಡ್ಡೆ ಫಲ ಕೊರ್ಪಿಲೆಕ್ಕಾ ಮಲ್ಪುಲಾ, ಸಾಲೆಳೆಡ್ ನಡಪು ಕೆಲಸೊಡ್ದ್ ಜೋಕುಳೆ ಮನಸ್ಸ್‌ನ್ ನಿನ್ನ ಕೈಯತ್ತಡೆ ಒಯಿತೋಣ್ಣ, ನಿನ್ನ ವಾಕ್ಯೋನ್ ಸಸಾರ ಮಲ್ಪ್‌ನಾಕುಳೆಗ್ ಎಚ್ಚರಿಪುಲ, ಯೆಂಕುಳು ಅಲ್‌ಂಭವ ಮಳ್ಪು ರಕ್ಷಣೆದ ಮಲ್ಲಾದಿಗೆ ಅಕ್ರೈಸ್ತರೆಗ್‌ಲಾ ಗೊಂತ್ತಾಪಿಲೆಕ್ಕಾ ಮಳ್ಪುಲಾ.*[30] ನಾವು ಆತ್ಮ ಸುಖಕ್ಕಾಗಿ ಬದುಕುವವರು. ನಿನ್ನ ವಾಕ್ಯಗಳು ನಮ್ಮ ಜೀವನದ ದಾರಿದೀಪಗಳು, ಒಳ್ಳೆಯ ಬುದ್ಧಿ, ಸಮಾನ ವಿಚಾರಗಳು, ದಾರಿತಪ್ಪಿದ್ದಲ್ಲಿ ಸೂಕ್ತ ಎಚ್ಚರಿಕೆ, ನಿನ್ನನ್ನು ನಂಬುವಲ್ಲಿ ವಿಶಾಲ ಹೃದಯ, ದೃಢ ವಿಶ್ವಾಸವನ್ನು ನಮಗೆ ಕೊಡು. ಕೆಟ್ಟ ವಿಚಾರಗಳಿಂದ ನಮ್ಮನ್ನು ರಕ್ಷಿಸು ಮಾತ್ರವಲ್ಲ, ನಿನ್ನನ್ನು ದೂಷಣೆ ಮಾಡುವವರ ಮನಸ್ಸನ್ನು ಪರಿಶುದ್ಧಗೊಳಿಸು. ನಿನ್ನ ನಾಮಸ್ಮರಣೆಯನ್ನು ಮಾಡುವವರಿಗೆ ಸದ್ಬುದ್ಧಿಯನ್ನು, ನಾಮಸ್ಮರಣೆ ಮಾಡುವಲ್ಲಿನ ಬದ್ಧತೆಯನ್ನು ಅವರಿಗೆ ದಯಪಾಲಿಸು. ನಿನ್ನ ದಿವ್ಯ ಸ್ಮರಣೆಗಳಿಂದ ಫಲಪ್ರದಾಯಕವಾಗುವಂತೆ ಮಾಡು. ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುತ್ತಿರುವ ಮಕ್ಕಳ ಮನಸ್ಸನ್ನು ನಿನ್ನ ಸನ್ನಿದಾನಕ್ಕೆ ಒದಗುವಂತೆ ಮಾಡು. ನಿನ್ನನ್ನು ದಿಕ್ಕರಿಸಿ ನಡೆಯುವವರಿಗೆ ಯಾವಾಗಲೂ ಎಚ್ಚರಿಕೆಯನ್ನು ನೀಡು. ನಾವು ಅನುಭವಿಸುತ್ತಿರುವ ಒಳ್ಳೆಯ ಜೀವನ ಸಾರವನ್ನು ಅವರಿಗೂ ತಿಳಿಯುವಂತೆ ಮಾಡು. ತುಳುವರ ನಂಬಿಕೆಯ ಆಧಾರವಾಗಿದ್ದ ಭೂತಾರಾಧನೆ ವಸಾಹತುಶಾಹಿ ಮತ್ತು ಮತಪ್ರಚಾರಕರ ನಿರಂತರ ದಾಳಿಗೆ ಒಳಗಾಯಿತು. ಉದಾಹರಣೆಗೆ "*ಮೂರ್ತಿಪೂಜೆದ ಸಂಬಂದೊಡು ಅವಡ್, ಭೂತ ಪ್ರೇತದ ಸಂಬಂದೊಡು ಉಪ್ಪು ವಾ ಒಂಜಿ ಗುರ್ತಲಾ ಮೂಲಿಗೆ ಮಲ್ಪುನವು, ಯಂತ್ರ ಕಟ್ಟುನವು, ಜುಟ್ಟು ಬೊಟ್ಟು ಮಿನಿ ಕ್ರೈಸ್ತೆರೆ ಸಭೆಟ್ ಉಪ್ಪೆರೆ ಅವಂದ್, ಬಲ್ಮೆ ಪನ್ಪುನವ್, ಅತ್ತ್‌ಡ ಕೇನುಣವು, ಮಾಟ ಮಂತ್ರ ಮಲ್ಪುನವ್, ಮಳ್ಪಾಣವ್, ಜ್ಯೋತಿಷ್ಯ ತೂಪಿನವ್, ಇಂಚಿತ್ತಿನವ್ ಮಾತಾ ಕತ್ತಲೆದ ಕೆಲಸ ಅದುಪ್ಪುನೆಡ್ದ್ ದೇವೆರೆ ಬಾಳೆಲು ಉಂದೆಟ್ ರೆಂಕೆಯರೆ ಬಲ್ಲಿ*".[31] ವಸಾಹತಿನ ಧರ್ಮದಿಂದ ಬೇರ್ಪಟ್ಟ ಪರಿಶುದ್ಧ ಕ್ರೈಸ್ತನಾಗಿ ಚರ್ಚಿನ ವ್ಯವಸ್ಥೆಗೆ ಸೇರ್ಪಡೆಗೊಳ್ಳುವವರು ಕಡ್ಡಾಯವಾಗಿ ಅಂತರಂಗದಲ್ಲಿ ಆಗಲೀ ಬಹಿರಂಗದಲ್ಲಿ ಆಗಲೀ ಮೂರ್ತಿಪೂಜೆಯನ್ನು ಮುಂದುವರಿಸುವಂತಿಲ್ಲ. ತುಳುವ ಆಚರಣೆಗಳು, ಅವುಗಳನ್ನು

ಪ್ರತಿನಿಧಿಸುವ ಸಂಕೇತಗಳನ್ನು ಧರಿಸುವುದು ಮತಪ್ರಚಾರ ಸಂಸ್ಥೆಗಳಿಗೆ ಅಪರಾಧವಾಗಿ ಕಂಡಿತು. ಆದ್ದರಿಂದ ಅವುಗಳನ್ನು ಕಡ್ಡಾಯ ನಿಷೇಧಿಸುವ ನಿಲುವುಗಳನ್ನು ತಳೆದವು. ಒಟ್ಟಿನಲ್ಲಿ ಮತಪ್ರಚಾರಕರು ತಮ್ಮ ಸಾಮಾಜಿಕ ಧರ್ಮದ ಪರಿವರ್ತನೆಯ ಚಟುವಟಿಕೆಗಳನ್ನು ಪ್ರಾರಂಭಿಸಿದಂದಿನಿಂದ ಈ ಪ್ರದೇಶದ ಸಂಸ್ಕೃತಿಯ ಬಗ್ಗೆ ನಕರಾತ್ಮಕ ನಿಲುವನ್ನು ತಳೆದರು. ಧಾರ್ಮಿಕವಾಗಿ ಸಾಮಾಜಿಕವಾಗಿ ಪರಿವರ್ತನೆಗೊಂಡವರ ಮೇಲೆ ಪಶ್ಚಿಮದ ಸಂಸ್ಕೃತಿಯನ್ನು ಹೇರಿತ್ತಲ್ಲದೇ ಪರಿವರ್ತಿತರನ್ನು ಹಳೆಯ ವಾರಸುದಾರಿಕೆಯ ವ್ಯವಸ್ಥೆಗಳಿಂದ ದೂರ ಸರಿಸುವಂತೆ ಪ್ರಯತ್ನಸಿದರು. ಒಂದು ಕುಟುಂಬವೇ ಕ್ರೈಸ್ತಮತ ಸೇರ್ಪಡೆಯಾಗುವುದಿದ್ದಲ್ಲಿ ಎಂಟು ವರ್ಷದ ಮಕ್ಕಳಿಗೂ ದೀಕ್ಷಾ ಸ್ನಾನವನ್ನು ಕೊಡಬಹುದು, ಎಂಟು ವರ್ಷದ ಮೇಲಾಗಿದ್ದಲ್ಲಿ ಅವರಿಗೆ ಸ್ವಲ್ಪ ಕಾಲ ಬೋಧನೆ ನೀಡಿ ದೀಕ್ಷಾ ಸ್ನಾನವನ್ನು ಕೊಡಬಹುದೆಂಬ ಅಂಶವನ್ನು ಕಟ್ಟಳೆಯಲ್ಲಿ ಸೇರಿಸಲಾಗಿತ್ತು. ಕ್ರೈಸ್ತರಾಗುವರೆಲ್ಲ ತುಳುನಾಡಿನ ಅವಿಭಕ್ತ ಕುಟುಂಬದ ರೀತಿಯಲ್ಲಿ ಚರ್ಚಿನ ಸದಸ್ಯರಾಗುವುದರ ಜೊತೆಗೆ ಯಾವುದೇ ಸಮುದಾಯ ಇಲ್ಲವೇ ಜಾತಿಯಿಂದ ಪರಿವರ್ತನೆಯಾದರೆ, ಗಂಡಾದರೆ ಸಹೋದರರಂತೆ, ಹೆಣ್ಣಾದರೆ ಸಹೋದರಿ ಭಾವದಲ್ಲಿ ಇರುವಂತೆ ಸೂಕ್ತ ಕಟ್ಟಳೆಯನ್ನು ರೂಪಿಸಿಕೊಂಡಿತು. ಮಾತ್ರವಲ್ಲ ಪ್ರೀತಿ, ಆತ್ಮದ ಐಕ್ಯತೆಯ ದೃಷ್ಟಿಯಿಂದ ಕೂಡುಕುಟುಂಬದ ರೀತಿಯಲ್ಲಿ ಬಾಳುವೆ ನಡೆಸಿ ಧನ್ಯರಾಗಬೇಕೆಂದು ವಿಜ್ಞಾಪಿಸಿತು. (ನಮ ಸಭೆತಾಕುಳು ದುಂಬುಡ್ ವಾ ಜಾತಿದಾಕುಳ್ ಅಂಡಲಾ ಇತ್ತೆ ಒರಿಯನ್ ಒರಿ ಕರ್ತವಡ್ ಸಹೋದರೆರ್ ಸಹೋದರಿಯಾಡ್ಡು ಅಂದ್‌ದ್ ಬಾವಿತೋಣುವೆರ್, ಬೊಕ್ಕ ತಗ್ಗ್‌ತನೊಟ್, ಸಜ್ಜನಿಕೆಡ್ ದೀರ್ಘ ಶಾಂತಿಡ್ ನಡತೋಣ್ದ್ ಒರಿಯನ್ ಒರಿ ಪ್ರೀತಿಡ್ ತಾಳೊಣ್ದು, ಆತ್ಮದ ಐಕ್ಯೋನ್ ಸಮಾಧಾನದ ಕಟೊಡ್ ಒರಿತೋಣಿಯೆರೆ ಸಾಪ ಮಳ್ಪುವೆರ್, ವಿಶ್ವಾಸದ ಮಾರ್ಗೊಡು ಒರಿಯಗ್ ಒರಿ ಸಹಾಯ ಮಲ್ತ್‌ದ್ ಕೈಕೊರ್ಪಿಲೆಕ್ಕ ಒರಿಯನ್ ಒರಿ ಯಚ್ಚರಿತ್‌ದ್ ಬಲ ಮಲ್ತ್‌ದ್ ಕ್ರಮ ತತ್ತಿನಕುಳೆಗ್ ಬುದ್ಧಿ ಪಂಡ್‌ದ್, ಮನಸ್ ಕುಂದಿನಾಕುಳೆನ್ ಸಮಜಯಿಸ್‌ದ್ ಬಲ ದಾತ್ತಿಂನಕುಳೆನ್ ತಾಂಗ್‌ದ್ ಪತ್ತೊಡು, ಇಂಚನೆ ಮಾತಾ ದಿಕ್ಕ್ ಡ್ ಕರ್ತವ ಪುದರ್‌ಗ್ ಮಹಿತಾ ಅವ್ರೋಡ್)[32] ಮತಪ್ರಚಾರಕರಲ್ಲಿ ಯಾವುದೇ ಬೇಧಗಳಿಲ್ಲ ಎಂಬ ವಿಚಾರ ಈ ರೀತಿ ಸಮರ್ಥನೆಗೊಂಡಿದೆ. ರೋಮನ್ ಕ್ಯಾಥೊಲಿಕ್ ಸಭೆಕ್‌ಲಾ ನಂಕ್‌ಲಾ ಅನ್ಯಮಾನ್ಯ ಉಪ್ಪೆರೆ ಬಲ್ಲಿ. ಬೋಧನೆಡ್, ಕಟ್ಟಳೆಡ್ ನಂಕ್‌ಳಾ ಅಕ್‌ಲೆಗ್‌ಳಾ ಎಚ್ಚಿ ಕಡಿಮೆ ಇತ್ತ್‌ಂಡಳಾ ಕ್ರೈಸ್ತತ್ವದ ಮುಖ್ಯ ಬೋಧನೆಳ್‌ಡ್ ಅಕುಳ್ ನಮಡೊಪ್ಪ ಒಂಜೇ ಅದುಲ್ಲೆರ್.[33] ವಸಾಹತಿನ ಸಾಂಸ್ಕೃತಿಕ ನೆಲೆಗಟ್ಟನ್ನು ವಸಾಹತುಶಾಹಿ ಆಡಳಿತದ ಮೂಲಕ ಸಂಪೂರ್ಣ ಛೇದಿಸಲು ಸಾಧ್ಯವಿಲ್ಲ ಎಂದು ತಿಳಿದುಕೊಂಡ ಮತಪ್ರಚಾರಕರು ವಸಾಹತಿನಲ್ಲಿ ಅಧುನಿಕ ವಿದ್ಯಾಭ್ಯಾಸದ

ನೀತಿಯನ್ನು ಪ್ರಾಯೋಜಿಸಿ ಅವು ಸ್ಥಾಪಿಸಿದ ಸಂಸ್ಥೆಗಳ ಅಧ್ಯಾಪಕ ವೃಂದವನ್ನು ಸಾಮಾಜಿಕ ಪರಿವರ್ತನೆಗೆ ಬಳಸಿಕೊಂಡಿರುವುದು ಸ್ಪಷ್ಟ. ವಾ ವೊಂಜಿ ಸಾಲೆಡ್ ಕೆಲಸ ಮಳ್ಪು ಐಗುಳ್‌ನಾಕುಳ್ ತನುಕುಳೆನ್ ದೇವೆರೆ ರಾಜ್ಯಗಾದ್, ಸಭೆತಾ ಎಡ್ಡೆಗಾದ್ ಕೆಲಸ ಮಳ್ಪೆರೆ ದೀತ್‌ಂಡ್ ಅಂದ್‌ದ್ ಮರಪೆರೆ ಅವಂದ್. ಅಂಚಾಯಿನೆಡ್ದ್ ಅಕುಳ್ ತನುಕುಲೆನಾ ಕೆಲಸೊನು ಕ್ರೈಸ್ತೆರೆಗ್ ಇತ್ತಿ ನಂಬಿಗೆಡ್ಲಾ ಭಯಭಕ್ತಿಡ್ ನಡಪೊಡು ಇನ್ಪಿನವ್ ಮಾತ್ರ ಅತ್, ತನ್‌ಕ್‌ಳೆಗ್ ಒಚ್ಚಿದಿ ಕೊರ್ತಿ ಜೋಕುಳೆನ್ ಪಾತೆರೊಡುಲಾ ಎಡ್ಡೆ ಮಾದ್ರಿ ಕೊರ್ದುಲಾ ಕರ್ತವೆ ಅದುಪ್ಪು ಯೇಸು ಕೈತ್ತಡೆಗ್ ನಡಪುಡೊಡು ಇನ್ಪಿನೆನ್ ಮಾತೆಡ್ದ್ ದುಂಬು ಮನಸ್ಸ್‌ಡ್ ದೆತೊನೊಡು.[34] ಕರ್ತವ ದಿನ ಅದುಪ್ಪು ಆದಿತ್ಯವಾರೊನು ಸಭೆತಾಕುಳ್ ವಿಶ್ರಾಂತಿದ ದಿನ, ದಯತ ದಿನ ಅಂದ್‌ದ್ ಯೆನ್ನುವೆರ್, ಅತ್ತಂದೆ ಆ ದಿನ ಕ್ರೈಸ್ತತ್ವದ ಆಶೀರ್ವಾದ ವಿಶೇಷ ತರೊಟ್ಟ್ ತಿಕ್ಕುಂಡ್ ಅಂದ್‌ದ್‌ಲಾ ಪಿದಕೊಣುವೆರ್. ಮತಪ್ರಚಾರಕರ ಶಿಕ್ಷಣ ಸಂಸ್ಥೆಗಳಲ್ಲಿ ದುಡಿಯುವ ಪ್ರತಿಯೊಬ್ಬ ಶಿಕ್ಷಕನು ಯೇಸುಕ್ರಿಸ್ತನ ತತ್ವಗಳನ್ನು ಮಕ್ಕಳಲ್ಲಿ ತುಂಬಬೇಕಲ್ಲದೇ, ಶಿಕ್ಷಕನು ಮಾಡುವ ಪ್ರತಿಯೊಂದು ನಡೆಯು ಮತಪ್ರಚಾರಕ್ಕೆ ಅನುಗುಣವಾಗಿರಬೇಕು. ಆದಿತ್ಯವಾರ ಕ್ರಿಸ್ತನಿಗೆ ಪ್ರಿಯವಾದ ದಿನವಾದುದರಿಂದ, ಆ ದಿನವನ್ನು ವಿಶ್ರಾಂತಿಯ ದಿನವೆಂದು ಪರಿಗಣಿಸಬೇಕು. ಹೀಗೆ ದಿನದ ಆಚರಣೆಯಲ್ಲೂ ಕೂಡಾ ಪಶ್ಚಿಮದ ವಾರಸುದಾರಿಕೆಯನ್ನು ಹೇರಿದ ಮತಪ್ರಚಾರಕರು ತುಳುವರ ದಿನನಿತ್ಯದ ಆಚರಣೆಗಳನ್ನು ನಿಕೃಷ್ಟರಾಗಿ ಕಂಡರು. ಸಮುದಾಯಗಳ ಚಲನೆಗೆ ಇಲ್ಲವೇ ಸಂಪರ್ಕಗಳಿಗೆ ಸಂಬಂಧಿಸಿದಂತೆ ತುಳುವರ ಆಶಯಗಳನ್ನೆ ಮೂಲವಾಗಿಟ್ಟುಕೊಂಡ ಮತಪ್ರಚಾರಕರು ಪತ್ತೇರಿಕೂಟ, ಅಜಲು ಮೀರಿ ನಡೆಯುವಲ್ಲಿನ ತಪ್ಪುಗಳನ್ನು ಸರಿಪಡಿಸಲು ಚರ್ಚ್‌ನ್ನು ಅಜಲು ಕ್ಷೇತ್ರವಾಗಿಸಿ ಅದಕ್ಕೆ ಪೂರಕವಾದ ನೀತಿ ನಿಯಮಗಳನ್ನು ರೂಪಿಸಿಕೊಂಡರು. ಮಾತ್ರವಲ್ಲ ರಾತ್ರಿ ಭೋಜನ[35] ರಾತ್ರಿ ಭೋಜನದಲ್ಲಿ ಭಾಗವಹಿಸುವವರು ಏಸುವಿನ ನಿಜವಾದ ಭಕ್ತರು ಎಂಬ ಪ್ರತೀತಿಯಿದೆ. ನೆಪದಲ್ಲಿ ಹೇಗೆ ನಡೆದುಕೊಳ್ಳಬೇಕು ಎಂಬುವುದನ್ನು ಸ್ಪಷ್ಟಪಡಿಸಿ, ಚರ್ಚ್‌ಗೆ ಸೇರಿದ ಪ್ರತಿಯೊಬ್ಬರು ಸಾವಿನ ಸೂತಕದಲ್ಲಿ ಪಾಲು ಪಡೆಯಬೇಕೆಂಬ ಲಿಖಿತ ನಿಯಮಗಳನ್ನು ಮಾಡಿದರು. (ಸಭೆತ್ತಾಯೆ ಒರಿ ಸೈಪಿನಾಂಡ ಅವು ಇಡೀ ಸಭೆಕ್ ತಾಗು ಸಂಗತಿ, ಮಾತೆರ್ಲಾ ಐನ್ ಮನಸ್ಸ್‌ಗ್ ದೆತ್ತೊನುದ್ ಐಟ್ ಪಾಲ್‌ಗಾರೆರಾವೊಡ್, ಮಾತ್ರ ಅತ್ ಕಡೆತಾ ಪಾಸಡಿ ಪಂಡ್‌ದ್ ಆ ಕಾರ್ಯೊಡ್ ಭಾಗಪಡೆವೊಡ್. ನಿತ್ಯ ಜೀವನದ ಆಶೆಡ್ ಸಂತೋಷ ಮಲ್ತೊಂದುಪ್ಪು ಕ್ರೈಸ್ತೆರ್, ಆಶೆದಾಂತಿ ಪಿದಾಯಿದ ಜನತ ಲೆಕ್ಕನೆ ಮುರಿಯ ಪಾಡಾಯೆರ್.) ಅಂತ್ಯೇಷ್ಟಿಗೆ ಸಂಬಂಧಿಸಿದಂತೆ ಬಹಿಷ್ಕಾರಗೊಂಡು ಮರಣಹೊಂದಿದವನಿಗೆ ಎಲ್ಲರಿಗೂ ಮಾಡುವ

ಅಂತ್ಯೇಷ್ಠಿಯ ಕ್ರಮದಲ್ಲಿ ಶವ ಸಂಸ್ಕಾರ ಮಾಡುವುದಿಲ್ಲ. ಬದಲಾಗಿ ತುಳುವರ ಸಂಪ್ರದಾಯದಲ್ಲಿರುವಂತೆ ಪ್ರತ್ಯೇಕ ವ್ಯವಸ್ಥೆ ಮಾಡಿರುವುದು ಮುಂತಾದವುಗಳನ್ನು ಅವಲೋಕಿಸಬಹುದು. ತುಳುವರ ಕಜಂಬು ಅಥವಾ ಚೌಲ ಕ್ರಿಯೆಯಂತೆ ಕ್ರೈಸ್ತಮತ ಸೇರುವ ಕುಟುಂಬಗಳ ಹದಿನಾಲ್ಕು ವರ್ಷ ಪ್ರಾಯದ ಮಕ್ಕಳಿಗೆ ದೇವಾರಾಧನೆಯಲ್ಲಿ ದೃಢೀಕರಣ ನೀಡುವ ಕ್ರಮವನ್ನು ಜಾರಿಗೊಳಿಸಲಾಯಿತು. ಮದುವೆಗೆ ಸಂಬಂಧಿಸಿದ ಕ್ರಿಯಾವಿಧಿಗಳಲ್ಲೂ ಚರ್ಚ್ ತನ್ನದೇ ಆದ ನೀತಿ, ನಿಯಮಗಳನ್ನು ರೂಪಿಸಿತು. ಚರ್ಚ್ ಅನ್ಯಮತೀಯ (ಚರ್ಚ್‌ನ ಮತಕ್ಕೆ ಒಳಪಡದ) ಮದುವೆಗೆ ಒಪ್ಪಿಗೆ ನಿರಾಕರಿಸಿತು. ಒಂದು ವೇಳೆ ರೊಮನ್ ಕ್ರೈಸ್ತರೊಂದಿಗೆ ಮದುವೆಯಾದರೂ ಈ ನಿಯಮವನ್ನು ಊರ್ಜಿತಕ್ಕೆ ತಂದಿತು. ಗೌಪ್ಯ ಮದುವೆಗಳಿಗೆ ಅವಕಾಶ ನೀಡಿದ ಚರ್ಚ್ ಇಬ್ಬರು ಸಾಕ್ಷಗಳಿದ್ದಲ್ಲಿ ಅದನ್ನು ಮಾನ್ಯಗೊಳಿಸಬಹುದೆಂದು ಠರಾವು ಮಂಡಿಸಿತು.[36] ಕೈಧಾರೆ, ಬುಡುಧಾರೆಯ ಬಗ್ಗೆ ವಿರೋಧ ವ್ಯಕ್ತಪಡಿಸಿದ ಮತಪ್ರಚಾರಕರು ಅವುಗಳನ್ನು ದೃಢಪಡಿಸುವಲ್ಲಿ ಹಿಂದೇಟು ಹಾಕಿದಲ್ಲದೆ ತುಳುವರಲ್ಲಿದ್ದ ವಾರಸುದಾರಿಕೆಯನ್ನು ಮಾನ್ಯಮಾಡಿಲ್ಲ. ಅವರ ಪ್ರಕಾರ ಬಹುಪತ್ನಿತ್ವ ವ್ಯಭಿಚಾರಕ್ಕೆ ಸಮ ಎಂದಿದೆಯಲ್ಲದೇ ಏಕಪತ್ನಿಯನ್ನು ಹೊಂದುವ ನಿಯಮ ಹಾಗೂ ಮದುವೆಗಿರುವ ಕಟ್ಟುಕಟ್ಟಳೆಗಳನ್ನು ಸಮರ್ಥಿಸಿಕೊಂಡಿತು. ಜೊತೆಗೆ ವಸಾಹತುಶಾಹಿ ಆಡಳಿತ ಅಳಿಯಸಂತಾನದ ಪ್ರಕಾರ ನಡೆಯುವ ಮತಪರಿವರ್ತಿತರ ಮದುವೆಗಳನ್ನು ಮಾನ್ಯಮಾಡಲಿಲ್ಲ. ಅವರ ಪ್ರಕಾರ ಕೈಧಾರೆ, ಬುಡುಧಾರೆಯ ಅನುಗುಣವಾಗಿ ಬಹುಪತ್ನಿತ್ವ ಹೊಂದಿದ ಮತಪರಿವರ್ತಿತ ತುಳುವರು ಮನಸಾಕ್ಷಿಗೆ ಸರಿಯಾಗಿ ಒಬ್ಬಳಿಗೆ ಬರ ಚೀಟನ್ನು ಕೊಡಲೇಬೇಕು ಎಂಬ ವಾದವನ್ನು ಸಮರ್ಥಿಸಿಕೊಂಡರು. ಮತಪರಿವರ್ತಿತರು ತಮ್ಮ ಪೂರ್ವದ ಹಬ್ಬ-ಹರಿದಿನಗಳಲ್ಲಿ ಭಾಗವಹಿಸದಂತೆ ಎಚ್ಚರಿಕೆ, ಹತ್ತಿರದ ಸಂಬಂಧಿಗಳನ್ನು ಇಲ್ಲವೆ ಒಂದೇ ಠಾಣ್ಯಕ್ಕೆ ಸಂಬಂಧಿಸಿದ ಸದಸ್ಯರನ್ನು ಮದುವೆ ಮಾಡಿಕೊಳ್ಳುವುಕ್ಕೂ ನಿಷಿದ್ದ ಹೇರಿತು. (ತುಳುವರ ಒಂದೇ ಬಳಿಯ ಸದಸ್ಯರು ವಿವಾಹವಾಗುವಲ್ಲಿ ನಿಷೇಧ ಇರುವಂತೆ) ಕೈದಾರೆ, ಬುಡುದಾರೆಯ ಸಂಪ್ರದಾಯದಂತೆ ಮದುವೆಯಾದ ಪತ್ನಿಯರು ಕ್ರೈಸ್ತರಾಗದೇ ಇದ್ದ ಪಕ್ಷದಲ್ಲಿ ಬಿಡುವುದಾದರೆ ಊರಿನ ಮರ್ಯಾದೆಗೆ ತಕ್ಕ ಪರಿಹಾರಗಳನ್ನು ಕೊಟ್ಟು ಬಿಡುವುದು ಸೂಕ್ತ ಎಂದಿದೆ. ಕಂಡಣ್ಯಗ್ ಬಾಳೆನ್ ಪೆದ್ದ್‌ದ್ ವಿಶೇಷಾದ್ ಕ್ರೈಸ್ತೆದಿ ಅಯಿಮಿತ್ತ್ ಕ್ರಮೊಟ್ಟು ನಡತೊಣುಂಡ ಬುಡಿಯೆರೆ ಬಲ್ಲಿ. ಅವರ ಪ್ರಕಾರ ಕ್ರೈಸ್ತ ಕಂಡಣ್ಯೆ ಬೊಡೆದಿ ಪಿದಾಯಿದಾಕುಳೆ ರೂಢಿಗ್ ತಕ್ಕ ಅತ್ತ್ ದೇವೆರೆ ವಾಕ್ಯೋಗು ಸರಿ ಬೂರುಲೆಕ್ಕ ನಡತೊಣುದುಪ್ಪೊಡು, ಪೊಣುಜೆವೆಳೆ ಸಂಗತಿಡ್ ಮದ್‌ಮಾಳ್ ಅನಗ, ಬಂಜಿನಾಳ್ ಅನಗ ಪೂಮಿನಿ ಮುಡಿಪಾವುನವ್, ಒಣಸ್ ಮಲ್ಪಾವ್‌ನವ್ ಇಂಚಿತ್ತಿ ಗೌಜಿ ಮಲ್ಪೆರೆ ಅವಂದ್

ಎಂಬ ವಿಚಾರವನ್ನು ಮತಪರಿವರ್ತಿತರಿಗೆ ಸ್ಪಷ್ಟವಾಗಿ ತಿಳಿಸಿತ್ತು. ಮದುವೆಯಾದ ಗಂಡ-ಹೆಂಡಿರು ಬಹಳ ಸಮಯದ ವರೆಗೆ ವಿಂಗಡ ಇರಬಾರದು ಎಂಬ ಸೂಕ್ಷ್ಮಗಳ ಜೊತೆಗೆ ಮತಪರಿವರ್ತನೆ ಹೊಂದಿದವರು ಆದಷ್ಟೂ ತಮ್ಮ ಪೂರ್ವದ ಕಟ್ಟುಕಟ್ಟಳೆಗಳನ್ನು ಪಾಲಿಸದಂತೆ ನಿರ್ದೇಶಿಸಿದರು. ಅತಂಕದಲ್ಲಿದ್ದುಕೊಂಡೆ ಮತಪರಿವರ್ತಿತರ ಕಾರ್ಯಚಟುವಟಿಕೆಗಳ ಮೇಲೆ ನಿಗಾ ವಹಿಸಿದರು. ನಮ್ಮ ಸಭೆಯವರು ಮತಪರಿವರ್ತನೆಯ ಪೂರ್ವದ ಜಾತಿಯಿಂದ ಹೊರಬಂದ ಕಾರಣ ಜಾತಿಬೇಧವನ್ನು ತೋರಿಸಬಾರದು. ಜಾತಿಬೇಧವನ್ನು ಸಂಕೇತಿಸುವ ಉಡುಪು, ಬಹಿರಂಗದಲ್ಲಿ ಕಾಣಿಸಿಕೊಳ್ಳುವ ಜಾತಿಸೂಚಕ ಗುರುತುಗಳು, ಹಚ್ಚೆ ಹಾಕಿಸಿಕೊಳ್ಳುವ ಇಲ್ಲವೇ ಧಾರ್ಮಿಕ ಚಿಹ್ನೆಗಳನ್ನು ಧರಿಸದಂತೆ ತಾಕೀತು ಮಾಡಿ ಎಚ್ಚರಿಸಿತು. ಶರಾಬು, ಶೇಂದಿ, ಅಫೀಮು ಮುಂತಾದ ಅಮಲು ಪದಾರ್ಥಗಳ ಸೇವನೆ, ಮಾರಾಟಕ್ಕೆ ನಿಷೇಧವನ್ನು ಹೇರಿ, ಅನ್ಯಾಯದ ಸಂಪಾದನೆ ಮಾಡುವಲ್ಲಿ ವಿರೋಧಿ ನಿಲುವನ್ನು ತಾಳಿತು.[37] ಮತಪರಿವರ್ತಿತರು ಸೈನ್ಯಕ್ಕೆ ಸೇರುವಲ್ಲಿ ದ್ವಂದ್ವತೆಯನ್ನು ಪ್ರಕಟಿಸಿದ ಮತಪ್ರಚಾರಕರು 'ದಂಡ್‌ಗ್ ಸೇರುನಾಂಡ, ಸರ್ಕಾರ ಅಪ್ಪಣೆ ಕೊರ್ಪುನಾಂಡ ವಿದೇಯಕ ತನುಕುಳ್ ಮಾತಾ ಕ್ರೈಸ್ತೆರಾದ್ ತೋಜಾವೊಡು'. ಸರಕಾರ ನಮಡ ಕೇಣಿ ಬಗೆ ಬಗೆತ ಪಣವು ನಮ ಸಮೊಟು ಕೊರ್ದು ದೇವೆರೆ ವಾಕ್ಯೊಗ್ ವಿರೋಧ ಅದುಪ್ಪಂದಿ ಮಾತಾ ಅಪ್ಪಣೆಗ್ ನಂಬಿಗೆಡ್ ವಿದೇಯ ಅದುಪ್ಪೊಡು[38]

ತುಳುನಾಡಿನ ಪತ್ತೇರಿಕೂಟ, ಅಜಲು ಸಂಬಂಧಿ ವಾದವಿವಾದಗಳನ್ನು ಗ್ರಾಮ, ಮಾಗಣೆ, ಸೀಮೆ ರೀತಿಯ ಏಣಿ-ಶ್ರೇಣಿಯ ವ್ಯವಸ್ಥೆಯಲ್ಲಿ ಪರಿಹರಿಸುವಂತೆ ಹೊಸತಾಗಿ ರೂಪಿತಗೊಂಡ ಚರ್ಚು ವ್ಯವಸ್ಥೆಗಳು ಸಾಮಾಜಿಕವಾಗಿ, ಧಾರ್ಮಿಕವಾಗಿ ಮತಪರಿವರ್ತಿತರ ವಾದವಿವಾದ, ಕೌಟುಂಬಿಕ ಸಂಘರ್ಷಗಳನ್ನು ಪರಿಹರಿಸಲು ಹಿರಿಯರ ಕೂಟಗಳನ್ನು ವ್ಯವಸ್ಥೆಗೊಳಿಸಿತ್ತಲ್ಲದೇ ಒಂದು ಠಾಣ್ಯದ ಕಿರಿಯಕೂಟಕ್ಕೆ ತೀರ್ಪು ಕೊಡಲು ಸಾಧ್ಯವಿಲ್ಲವೆಂದಾದಲ್ಲಿ ಮೇಲ್‌ವಿಚಾರದ ಹಿರಿಯರ ಕೂಟಕ್ಕೆ ದೂರು ನೀಡಬಹುದು. ಇಲ್ಲಿಯೂ ತೀರ್ಪು ಸಾಧ್ಯವಿಲ್ಲ ಎಂದಾದಲ್ಲಿ ಜಿಲ್ಲೆಯ ಮೇಲ್ವಿಚಾರಣೆ ಮಾಡುವ ಮಿಶನರಿ ಮೇಲ್‌ಕೂಟಕ್ಕೆ ಅಪೀಲು ಮಾಡಬಹುದೆಂಬ ಆಶಯವನ್ನು ವ್ಯಕ್ತಪಡಿಸಿತು. ಆದರೆ ಈ ರೀತಿಯ ಕೂಟಕಳದಲ್ಲಿ ತುಳುವರ ಪದ್ಧತಿಯಂತೆ ಸತ್ಯಪ್ರಮಾಣ ಮಾಡುವಲ್ಲಿ ಒಪ್ಪಿಗೆಯನ್ನು ನೀಡಿಲ್ಲ. ಸಭೆಯಿಂದ ಬಹಿಷ್ಕಾರಗೊಂಡವರಿಗೆ ಚರ್ಚ್ ಕೊಡಮಾಡುವ ಹಕ್ಕುಗಳನ್ನು ಮೊಟಕುಗೊಳಿಸಲಾಯಿತು. ಉದಾಹರಣೆಗೆ ಹಿರಿಯರ ಕೂಟದಲ್ಲಿ ಗೌರವ ಪಾಲು ಪಡೆಯುವ ಸಾಕ್ಷಿ, ಮದುವೆ, ಅಂತ್ಯೇಷ್ಠಿ, ಸಹಭೋಜನ ಮುಂತಾದ ಹಕ್ಕುಗಳನ್ನು ತೆಗೆದುಹಾಕುವುದು.[39] ಒಂದು ಠಾಣ್ಯದಲ್ಲಿ ಮಾಡಿದ ತಪ್ಪುಗಳನ್ನು ಇನ್ನೊಂದು ಠಾಣ್ಯದಲ್ಲಿ ಮನ್ನಿಸುವುದಾಗಿದ್ದಲ್ಲಿ

ತಪ್ಪು ಮಾಡಿದ ಠಾಣ್ಯದ ವ್ಯಾಪ್ತಿಗೊಳಪಡುವ ಹಿರಿಯರ ಒಪ್ಪಿಗೆ ಸಿಕ್ಕಿದ ನಂತರವಷ್ಟೆ ಪರಿಹರಿಸಬಹುದು. ತುಳುನಾಡಿನ ವಾರಸುದಾರಿಕೆಯ ಸಂದರ್ಭಗಳಲ್ಲೂ ಈ ರೀತಿಯ ಕಟ್ಟುಕಟ್ಟಳೆಗಳು ವಿಧಿತವಾಗಿರುವುದನ್ನು ಕಾಣಬಹುದು.

ವಸಾಹತುಶಾಹಿಯ ಈ ಕ್ರಮದಿಂದಾಗಿ ತುಳುನಾಡಿನ ಪ್ರಜ್ಞಾವಂತರಲ್ಲೂ ಕೂಡಾ ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಸುಧಾರಣೆಯ ಗಾಳಿ ಬೀಸತೊಡಗಿತ್ತಲ್ಲದೇ, ಹಲವಾರು ಅಂದೋಲನಗಳು ಈ ನಿಟ್ಟಿನಲ್ಲಿ ಪ್ರಾರಂಭಗೊಂಡವು. ಅವುಗಳಲ್ಲಿ ಬ್ರಹ್ಮ ಶ್ರೀ ನಾರಾಯಣ ಗುರುಗಳ ಧರ್ಮಪರಿಪಾಲನ ಅಂದೋಲನ, ಕುದ್ಮುಲ್ ರಂಗರಾಯರ ಅಸ್ಪೃಶ್ಯತಾ ನಿವಾರಣೆ. ಜೊತೆಗೆ ನಾಳೆಯ ಒಳ್ಳೆಯ ದಿನಗಳಿಗಾಗಿ ಶಿಕ್ಷಣ ಅತೀ ಅಗತ್ಯವೆಂದು ಮನಗಂಡ ಸ್ಥಳೀಯ ನಾಯಕರುಗಳು ಸಮುದಾಯಗಳ ಅಭಿವೃದ್ಧಿಯ ಕಡೆ ಗಮನಹರಿಸಿದರು. ಮಾತ್ರವಲ್ಲ ಎಲ್ಲ ರಂಗದಲ್ಲೂ ವಸಾಹತುಶಾಹಿಗಳಿಗೆ ಸರಿಸಮಾನವಾಗಿ ಬೆಳೆಯುವ ಪ್ರಯತ್ನ ಮಾಡಿದರು.

## ---ಕೊನೆಟಿಪ್ಪಣಿ---

1 ಸತೀಶಚಂದ್ರ ಮಿತ್ತಲ್, 1857ರ ಸಮರ, ಒಂದು ಹಿನ್ನೋಟ ಭಾರತೀಯ ಇತಿಹಾಸ ಸಂಕಲನ ಸಮಿತಿ ಕನ್ನಡಕ್ಕೆ ಚಂದ್ರಶೇಖರ ಭಂಡಾರಿ, 2007, ಪುಟ 4.

2 ಥಾಮಸ್ ಆರ್ ಟ್ರಾಟಮನ್, ಅರ್ಯನ್ಸ್ ಅಂಡ್ ಬ್ರಿಟಿಷ್ ಇಂಡಿಯಾ, ನ್ಯೂದಿಲ್ಲಿ ವಿಸ್ತಾರ್ ಪಬ್ಲಿಕೇಷನ್ಸ್, 1997, ಪುಟ 101.

3 ಶ್ಯಾಮಭಟ್ ಎನ್, ಸೌತ್‌ಕೆನರಾ-ಕಲೋನಿಯಲ್ ರೂಲ್ ಎಂಡ್ ರೀಜನಲ್ ರೆಸ್ಪಾನ್ಸ್ 1799-1860 ಮಿತ್ತಲ್ ಪಬ್ಲೀಕೇಷನ್ಸ್ ನ್ಯೂದಿಲ್ಲಿ 1998, ಚಿನ್ನಪ್ಪಗೌಡರ ಭೂತಾರಾಧನೆ ಒಂದು ಜಾನಪದೀಯ ಅಧ್ಯಯನ ಇದಕ್ಕೊಂದು ಒಳ್ಳೆಯ ಉದಾಹರಣೆ.

4 ಬಿಪನ್‌ಚಂದ್ರ, ಹಿಸ್ಟರಿ ಓಫ್ ಮಾಡರ್ನ್ ಇಂಡಿಯಾ; 2010, ಪುಟ 91.

5 ಸತೀಶಚಂದ್ರ ಮಿತ್ತಲ್, 1857ರ ಸಮರ, ಒಂದು ಹಿನ್ನೋಟ ಭಾರತೀಯ ಇತಿಹಾಸ ಸಂಕಲನ ಸಮಿತಿ ಕನ್ನಡಕ್ಕೆ ಚಂದ್ರಶೇಖರ ಭಂಡಾರಿ, 2007 ಪುಟ 5.

6 ಡಿ.ಆರ್ ನಾಗರಾಜ್, ಸಾಹಿತ್ಯ ಕಥನ; 2011, ಬೆಂಗಳೂರು, ಪುಟ 16. ಅಮೃತ ಸೋಮೇಶ್ವರ ಸಂಪಾದನ ಗ್ರಂಥ ಅಬ್ಬಕ್ಕ ಸಂಕಥನ, 2011, ಉಳ್ಳಾಲ. ಪುಟಗಳು 278-279.

7 ಡಿ.ಆರ್ ನಾಗರಾಜ್, ಸಾಹಿತ್ಯ ಕಥನ; 2011, ಬೆಂಗಳೂರು, ಪುಟ 11.

8 ಬಿ.ಎ ವಿವೇಕ ರೈ, ಸಂಪಾದನ ಗ್ರಂಥ, ತುಳು ಸಾಹಿತ್ಯ ಚರಿತ್ರೆ, ಪ್ರಸರಾಂಗ ಕ.ವಿ.ವಿ. ಹಂಪಿ 2007; ಪುಟಗಳು 806-811.

9 ಶ್ರೀನಿವಾಸ ಹಾವನೂರ್, ಹೊಸಗನ್ನಡದ ಅರುಣೋದಯ, ಪುಟಗಳು 11-15. ತುಳುನಾಡಿನಲ್ಲಿ ಜೆಸೂಯಿಟ, ಕಾರ್ಮೆಲೈಟ ಸೊಸೈಟಿ ಮುಂತಾದವುಗಳು ಮುಖ್ಯವಾದುದು. ಇವುಗಳ ಜೊತೆಗೆ ಬಾಸೆಲ್‌ಮಿಷನ್ ಬಹಳಷ್ಟು ಕ್ರಿಯಾಶೀಲವಾಗಿತ್ತು.

10 ದಿನೇಶ್ ನಾಯ್ಕ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂಗಳೂರು ವಿ.ವಿ. ಪುಟ 65

11 ಎಸ್.ಎನ್ ಬಾಲಗಂಗಾಧರ ಸ್ಮೃತಿ-ವಿಸ್ಮೃತಿ, ಭಾರತದ ಸಂಸ್ಕೃತಿ, ಕನ್ನಡ ಅನುವಾದ ರಾಜಾರಾಮ ಹೆಗಡೆ, ಹೆಗ್ಗೋಡು, 2010 ಪುಟಗಳು 133-134.

12 ಬಾಸೆಲ್ ಇವಾಂಜಲಿಕಲ್ ಮಿಷನು ವರದಿ 1870 ಪುಟ 31.

13 ಕ್ರೈಸ್ತರ ಹಾಗೂ ಹಿಂದೂ ಜನರ ಬಾಳುವಿಕೆಯ ವ್ಯತ್ಯಾಸ, ಮಂಗಳೂರು 1884, ಪುಟ 22.

14 ತಿರುಪತಿ ಯಾತ್ರೆ, ಮಂಗಳೂರು 1870, ಕೆ.ಟಿ.ಸಿ ಪತ್ರಗಾರ ಪುಟ 78; ದ್ವಿಮತ ಪರೀಕ್ಷೆ, ಮಂಗಳೂರು, 1866, ಕೆ.ಟಿ.ಸಿ ಪತ್ರಗಾರ ಪುಟಗಳು 18-20.

15 ಜ್ಞಾನಮಾರ್ಗ ಸೂಚನೆ, ಮಿಶನ್ ಪ್ರೆಸ್, ಬಲ್ಮಠ 1846 ಪುಟಗಳು 4-10. ಪ್ರೀಪೇಸ್, ಪುಟಗಳು 4,5,11,12,13,17. ದ್ವಿಮತ ಪರೀಕ್ಷೆ, ಮಂಗಳೂರು, 1866, ಕೆ.ಟಿ.ಸಿ ಪತ್ರಗಾರ, ಪುಟಗಳು 14-17.

16 ದೈವ ಪರೀಕ್ಷೆ, ಎಕ್ಸಾಮಿನೇಷನ್ ಆಫ್ ಹಿಂದೂಯಿಸಂ, ಮಂಗಳೂರು, 1870 ಕೆ.ಟಿ.ಸಿ ಪತ್ರಗಾರ ಪುಟ 34.

17 ಬಾ.ಇ.ಮಿ. 48ನೇ ವಾರ್ಷಿಕ ವರದಿ 1888, ಕೆ.ಟಿ.ಸಿ ಪತ್ರಗಾರ ಪುಟ 112.

18 ದ್ವಿಮತ ಪರೀಕ್ಷೆ, ಮಂಗಳೂರು 1866, ಕೆ.ಟಿ.ಸಿ ಪತ್ರಗಾರ, ಪುಟ 100. ನರಕುಲ ದೇವರು ಯಾರು, ಮಂಗಳೂರು 1892. ಕೆ.ಟಿ.ಸಿ ಪತ್ರಗಾರ, ಪುಟಗಳು 37, 44, 45. ಪ್ರಾಟೆಸ್ಟಂಟರಾಗುವವರು ಸಾರ್ವಜನಿಕವಾಗಿಯೂ, ವೈಯುಕ್ತಿಕವಾಗಿಯೂ ವಿಗ್ರಹ ಪೂಜೆಯನ್ನು ಮಾಡುವುದಿಲ್ಲವೆಂದು ಪ್ರಮಾಣ ಮಾಡಿಸಲಾಯಿತು.

19 ದ್ವಿಮತ ಪರೀಕ್ಷೆ, ಮಂಗಳೂರು 1866, ಕೆ.ಟಿ.ಸಿ ಪತ್ರಗಾರ, ಪುಟಗಳು 48, 90.

20 ಬ್ರಾಹ್ಮಣರನ್ನು ಹೊರತುಪಡಿಸಿದರೆ ತುಳುನಾಡಿನ ಬಹುಸಂಖ್ಯಾತರು ಕ್ಷುದ್ರ ದೇವತೆಗಳ ಪೂಜಕರು.

21 ಚಂದ್ರ ಮುಲ್ಲಂಪಳ್ಳಿ, ಕ್ರಿಶ್ಚನ್ಸ್ ಅಂಡ್ ಪಬ್ಲಿಕ್ ಲೈಫ್ ಇನ್ ಕೊಲೊನಿಯಲ್ ಸೌತ್‌ಇಂಡಿಯಾ, ಪುಟ 23. ಧರ್ಮದ ಬದಲಾವಣೆಯಿಂದ ಒಬ್ಬ ವ್ಯಕ್ತಿ ಈಗಾಗಲೇ ಪ್ರಚಲಿತದಲ್ಲಿರುವ ಆಯಾಯ ಪ್ರದೇಶಗಳ ರೂಢಿ-ಸಂಪ್ರದಾಯಗಳಿಗುಣವಾಗಿ ಆಸ್ತಿ, ಉತ್ತಾರಾಧಿಕಾರ, ಜಾತಿಯಿಂದ ಬಹಿಷ್ಕಾರಗೊಂಡರೂ ಅವನ ಕೌಟುಂಬಿಕ ವಿಚಾರಗಳಿಗೆ ಸಂಬಂಧಿಸಿದಂತೆ ಹಕ್ಕನ್ನು ಕೊಡಬೇಕು ಎಂಬ ವಾದ ಮಿಷನರಿಗಳಿಗೆ ವರದಾಯಕವಾಗಿ ಪರಿಣಮಿಸಿತು.

22 ಚಂದ್ರ ಮುಲ್ಲಂಪಳ್ಳಿ, ಕ್ರಿಶ್ಚನ್ಸ್ ಅಂಡ್ ಪಬ್ಲಿಕ್ ಲೈಫ್ ಇನ್ ಕೊಲೊನಿಯಲ್ ಸೌತ್‌ಇಂಡಿಯಾ, ಪುಟ 21.

23 ಥಾಮಸ್ ಮೆಟ್ಕಾಫ್, ಐಡಿಯಾಲಾಜಿಸ್ ಆಫ್ ರಾಜ್, ಕೇಂಬ್ರಿಡ್ಜ್ ಸಿ.ಯು.ಪಿ 1995, ಪುಟ 66.

24 ಡೆನಿಸ್ ಫೆರ್ನಾಂಡಿಸ್, ಅಪ್ರಕಟಿತ ಸಂಶೋಧನ ಪ್ರಬಂಧ, ಮಂಗಳೂರು ವಿ.ವಿ 2008. ಬಾಸೆಲ್‌ಮಿಷನಿನ ಕ್ರೈಸ್ತಮತ ಪ್ರಚಾರಕರು ತುಳುನಾಡಿನ ದೇವರು ಮತ್ತು ಭೂತದ ನಡುವಿನ ವ್ಯತ್ಯಾಸದ ಬಗ್ಗೆ ಚರ್ಚಿಸುತ್ತಾ

ಭೂತ ಸತ್ವದ ವಿರೋಧಿ, ಭೂತವನ್ನು ಆರಾಧನೆ ಮಾಡಿದವರಿಗೆ ದೇವರು ಕಠಿಣ ಶಿಕ್ಷೆಯನ್ನು ನೀಡುತ್ತಾನೆ ಎಂದು ವಾದಿಸಿದರು.

[25] ತಿರುಪತಿ ಯಾತ್ರೆ, ಮಂಗಳೂರು 1870, ಕೆ.ಟಿ.ಸಿ ಪತ್ರಗಾರ, ಪುಟ 67.

[26] ಬಾಸೆಲ್ ಇವಾಂಜಲಿಕಲ್ ವಾರ್ಷಿಕ ವರದಿ, 1873 ಪುಟ 39. ಬಾ.ಇ.ಮಿ 6ನೇ ವಾರ್ಷಿಕ ವರದಿ, 1846 ಕೆ.ಟಿ.ಸಿ ಪತ್ರಗಾರ ಮಂಗಳೂರು, ಪುಟಗಳು 6–11.

[27] ಬೆರ್ಮರ ಅಲಡೆಗಳು ನಾಗಬ್ರಹ್ಮ ಇಲ್ಲವೆ ಬ್ರಹ್ಮಲಿಂಗೇಶ್ವರ ದೇವಸ್ಥಾನಗಳಾಗಿ ಮಾರ್ಪಾಡು ಹೊಂದಿರುವ ಹಲವಾರು ಉದಾಹರಣೆಗಳನ್ನು ಕಾರ್ಯಕ್ಷೇತ್ರದಲ್ಲಿ ದಾಖಲಿಸಲಾಗಿದೆ.

[28] ಮೋಹನಕೃಷ್ಣ ರೈ, ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ, ಪುಟ 32.

[29] ಏಣಿ–ಶ್ರೇಣಿಯ ಅಧಿಕಾರ ರಚನೆಯಲ್ಲಿ ಸೀಮೆಯ ದೇವಸ್ಥಾನಗಳು ಅದರ ವ್ಯಾಪ್ತಿಯಲ್ಲಿ ಬರುವ ದೈವಸ್ಥಾನ, ದೇವಸ್ಥಾನಗಳಿಗೆ ಮಾರ್ಗದರ್ಶನ ನೀಡುವ ಪರಿಕಲ್ಪನೆ. ಸೀಮೆಯ ಅರಸ ತನ್ನ ವ್ಯಾಪ್ತಿಯೊಳಗಿನ ಅಧೀನ ವ್ಯವಸ್ಥೆಗಳಿಂದ ಪಡೆಯುವ ಮಾನ–ಸಮ್ಮಾನ ಇತ್ಯಾದಿ. ದಿನದಿನತ ಪ್ರಾರ್ಥನೆಳು, ಪ್ರಕಟನೆ ಬಾಸೆಲ್ ಮಿಶನ್ ಬುಕ್ ಎಂಡ್ ಟ್ರಾಕ್ಟ್ ಡೆಪೊಸಿಟರಿ ಮಂಗಳೂರು 1934.

[30] ದಿನದಿನತ ಪ್ರಾರ್ಥನೆಗಳು, ಪ್ರಕಟನೆ ಬಾಸೆಲ್ ಮಿಶನ್ ಬುಕ್ ಎಂಡ್ ಟ್ರಾಕ್ಟ್ ಡೆಪೊಸಿಟರಿ ಮಂಗಳೂರು 1934. ಪುಟಗಳು 20–21.

[31] ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, 1900 ಇಸವಿಡ್ ತಿದ್ದಿನವು, 1903. ಕೆ.ಟಿ.ಸಿ ಪತ್ರಾಗಾರ ಮಂಗಳೂರು ಪುಟ 13.

[32] ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, 1900 ಇಸವಿಡ್ ತಿದ್ದಿನವು, 1903. ಕೆ.ಟಿ.ಸಿ ಪತ್ರಾಗಾರ ಮಂಗಳೂರು ಪುಟ 17.

[33] ಅದೇ, ಪುಟ 18.

[34] ಅದೇ, ಪುಟ 19.

[35] ರಾತ್ರಿ ಭೋಜನದಲ್ಲಿ ಭಾಗವಹಿಸುವವರು ಏಸುವಿನ ನಿಜವಾದ ಭಕ್ತರು ಎಂಬ ಪ್ರತೀತಿಯಿದೆ.

[36] ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, 1900 ಇಸವಿಡ್ ತಿದ್ದಿನವು, 1903. ಕೆ.ಟಿ.ಸಿ ಪತ್ರಾಗಾರ ಮಂಗಳೂರು ಪುಟ 30.

[37] ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, 1900 ಇಸವಿಡ್ ತಿದ್ದಿನವು, 1903. ಕೆ.ಟಿ.ಸಿ ಪತ್ರಾಗಾರ ಮಂಗಳೂರು ಪುಟ 44.

[38] ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, 1900 ಇಸವಿಡ್ ತಿದ್ದಿನವು, 1903. ಕೆ.ಟಿ.ಸಿ ಪತ್ರಾಗಾರ ಮಂಗಳೂರು ಪುಟ 47.

[39] ಬಾಸೆಲ್ ಮಿಶನ್‌ಗ್ ಹಿಂದುಸ್ತಾನೊಡುಪ್ಪು ಸೌವಾರ್ತಿಕ ಸಭೆತಾ ಕಟ್ಟ್, 1900 ಇಸವಿಡ್ ತಿದ್ದಿನವು, 1903. ಕೆ.ಟಿ.ಸಿ ಪತ್ರಾಗಾರ ಮಂಗಳೂರು ಪುಟ 58.

## ಅಭಿವೃದ್ಧಿ-ಆಧುನಿಕತೆ-ವಸಾಹತುಶಾಹಿ

ತುಳುನಾಡಿನ ರಾಜಕೀಯ ಸ್ಥಿತ್ಯಂತರ, ಸ್ಥಳೀಯ ರಾಜಮನೆತನಗಳ ಅಧಃಪತನ, ಸ್ಥಳೀಯ ಸೈನ್ಯ ವ್ಯವಸ್ಥೆಯ ವಿಸರ್ಜನೆ, ಸಾಂಸ್ಥಿಕ ರಚನೆಗಳ ಬದಲಾವಣೆ, ಪಾರಂಪರಿಕ ವಿಚಾರಸರಣಿಗಳ ಮೇಲಾದ ಪರಿಣಾಮ, ಮೌಲ್ಯಗಳ ಸ್ಥಿತ್ಯಂತರ ಮುಂತಾದ ಬೆಳವಣಿಗೆಗಳಿಂದಾಗಿ ವಸಾಹತುಪೂರ್ವದ ಪಾರಂಪರಿಕ ಸ್ತರಗಳಲ್ಲಿ ಪಲ್ಲಟಗಳನ್ನುಂಟುಮಾಡಿದವು. ಜೊತೆಗೆ ವಸಾಹತುಶಾಹಿ ಅಧಿಕಾರಿಗಳ ಕಾರ್ಯಕ್ಷಮತೆ, ತುಳುನಾಡನ್ನು ಸಮರ್ಥವಾಗಿ ನಿಯಂತ್ರಣಕ್ಕೆ ತೆಗೆದುಕೊಂಡಿತ್ತಲ್ಲದೇ, ಅದರ ಆಡಳಿತದ ಹಿಡಿತ ಗ್ರಾಮ ಗ್ರಾಮಗಳಿಗೂ ಪ್ರಸಾರಗೊಂಡು ವಸಾಹತುಶಾಹಿ ಅನುಭಾವಗಳಿಗೆ ಒಳಗಾಯಿತು. ಇದರಿಂದಾಗಿ ಹಿಂದಿನ ರಾಜಕೀಯ ವಾತವರಣವು ಕಣ್ಮರೆಯಾಗಿ, ಪಾಶ್ಚಾತ್ಯರ ಚಿಕಿತ್ಸಕ ಮನೋದೃಷ್ಟಿ, ಪ್ರ್ಯಾವಹಾರಿಕ ದೃಷ್ಟಿ ತುಳುವರ ಬದುಕಿನ ಜೀವನದೃಷ್ಟಿಯನ್ನು ಬದಲಾಯಿಸಿದವಲ್ಲದೇ ಹಳೆಯ ವ್ಯವಸ್ಥೆಗಳ ಉರ್ಜಿತತೆಯನ್ನು ದುರ್ಬಲಗೊಳಿಸಿದವು.

ವಸಾಹತುಶಾಹಿ ಸೈನ್ಯದ ವ್ಯವಸ್ಥೆ ಮತ್ತು ಅದರ ಮೇಲೆ ಇಟ್ಟುಕೊಂಡ ಏಕಸ್ವಾಮ್ಯ, ಕಂದಾಯ ನೀತಿ, ವಸಾಹತುಶಾಹಿ ನ್ಯಾಯಾಧಿಕರಣ, ಪೋಲಿಸ್ ವ್ಯವಸ್ಥೆ, ನೌಕರಶಾಹಿ, ಹೊಸ ವಿಚಾರಸರಣಿ, ಮೌಲ್ಯ, ತಾಂತ್ರಿಕತೆ ಸ್ಥಳೀಯ ಆಯಾಮಗಳಲ್ಲಿ ಮಹತ್ವದ ಬದಲಾವಣೆಗಳಿಗೆ ಅವಕಾಶ ಮಾಡಿಕೊಟ್ಟಿತ್ತು. ತುಳುನಾಡಿನಲ್ಲಿ ವಸಾಹತುಶಾಹಿ ಆಡಳಿತದ ಕ್ರೋಢಿಕರಣ ಸಾಮಾಜಿಕ-ರಾಜಕೀಯವಾಗಿ ಅಧಿಕಾರ ಹೊಂದಿದ್ದ ಬಣನಾಯಕತ್ವ, ಜಾತಿ, ಗ್ರಾಮದ ಯಜಮಾನಿಕೆ, ವರ್ತಕಸಂಘ, ಮಠ, ದೇವಸ್ಥಾನ ಮುಂತಾದ ಸ್ಥಳಿಯ ಅಧಿಕಾರದ ಸಂರಚನೆಗಳು ಊನಗೊಂಡು ನೇಪಥ್ಯಕ್ಕೆ ಸರಿದವು.[1] ಉದಾಹರಣೆಗೆ ವಸಾಹತು ನ್ಯಾಯಾಧಿಕರಣ ವಸಾಹತುಪೂರ್ವದ ಸ್ಥಳಿಯ ರಾಜಮನೆತನಗಳ ರಾಜಕೀಯಾಧಿಕಾರ, ವಾದವಿವಾದಗಳನ್ನು ಪರಿಹರಿಸುವ ಅಧಿಕಾರ ಇಲ್ಲವೇ ದರ್ಭಾರು ಮುಂತಾದವುಗಳು ದಂಡದ ಅಧಿಕಾರಿಯ ಜವಬ್ದಾರಿಯನ್ನು ನೀಡಿದ್ದವು. ಆದರೆ ವಸಾಹತುಶಾಹಿ ತನ್ನ ಅಭಿವೃದ್ದಿ ಪರಿಕಲ್ಪನೆಯ ವಾದವನ್ನು ಮುಂದಿಟ್ಟು ವಸಾಹತುಶಾಹಿ ನ್ಯಾಯಿಕ ವ್ಯವಸ್ಥೆಗಳನ್ನು ಹೇರುವುದರೊಂದಿಗೆ ವಸಾಹತುಪೂರ್ವದ ನ್ಯಾಯಿಕ ಅಧಿಕಾರ ಚಲಾಯಿಸುತ್ತಿದ್ದ ನೆಲೆ ಇಲ್ಲವೇ ಸಾಂಸ್ಥಿಕ ವ್ಯವಸ್ಥೆಗಳನ್ನು ನಗಣ್ಯಗೊಳಿಸಿತು. ಪರಿಣಾಮವಾಗಿ ಅವುಗಳು ವಾದ ವಿವಾದಗಳನ್ನು ಅಲಿಸುವ, ತೀರ್ಪು ನೀಡುವ ಪಾರಂಪರಿಕ ಅಧಿಕಾರಗಳನ್ನು ಕಳೆದುಕೊಂಡವು.[2]

ಅಭಿವೃದ್ಧಿ ಮತ್ತು ಅಧುನಿಕತೆಯ ಕಾರ್ಯಯೋಜನೆಯ ಪ್ರಕಾರ ತುಳುನಾಡಿನಲ್ಲಿ ವಸಾಹತುಶಾಹಿ ಮಾದರಿಯ ಅಧಿಕಾರ ನಾಲ್ಕು ಬಗೆಯಲ್ಲಿ ಒದಗಿ ಬಂತು. 1 ಆಡಳಿತ

ವ್ಯವಹಾರ, 2. ಮುದ್ರಣ, 3. ಕ್ರೈಸ್ತಮತ ಪ್ರಚಾರ, 4. ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ. ಈ ಹೊಸ ಅಧಿಕಾರದ ಮಾದರಿ ವಸಾಹತುಪೂರ್ವದಲ್ಲಿ ಯಜಮಾನಿಕೆಯನ್ನು ಅನುಭವಿಸುತ್ತಿದ್ದ ಶಕ್ತಿಗಳ ಅಧಿಕಾರದ ಕಕ್ಷೆಯನ್ನು ಬದಲಾಯಿಸಿತ್ತಲ್ಲದೇ, ಪ್ರತಿರೋಧ ಒಡ್ಡಿದಾಗ ಅವುಗಳನ್ನು ಸಹಯೋಗದ ನೆಲೆಯಲ್ಲಿ ನಾಮಮಾತ್ರ ಅಧಿಕಾರದ ಸ್ಥಾನಮಾನಗಳನ್ನು ಹಂಚಿ, ಅವುಗಳನ್ನು ದುರ್ಬಲಗೊಳಿಸಿತು.[3] ಮಾತ್ರವಲ್ಲ ವಸಾಹತುಪೂರ್ವದಲ್ಲಿ ಪಾರಂಪರಿಕ ಯಜಮಾನಿಕೆಗಳು ಶಾಸ್ತ್ರವಿಧಿ, ಧರ್ಮಾಚರಣೆಗಳ ಆಧಾರದಲ್ಲಿ ರಾಜಕೀಯಾಡಳಿತದ ಗೌರವ-ಅಂತಸ್ತುಗಳನ್ನು ನಿರ್ಣಯಿಸುತ್ತಿದ್ದವು ಆದರೆ ವಸಾಹತುಶಾಹಿ ಅವುಗಳನ್ನು ಅಧುನಿಕತೆ, ಅಭಿವೃದ್ಧಿಯ ನೆಪದಲ್ಲಿ ಗೌಣಗೊಳಿಸಿತು. ಅದಾಗ್ಯೂ ವಸಾಹತುಪೂರ್ವದ ತುಳು ಸಮಾಜದಲ್ಲಿ ಸಾಂಪ್ರದಾಯಿಕ ಅಧಿಕಾರ ಅನುಭವಿಸಿದ ಪಳಿಯುಳಿಕೆಗಳು ವಸಾಹತುಶಾಹಿ ಆಡಳಿತದ ಕಾಲದಲ್ಲೂ ಯಥಾಸ್ಥಿತಿಯನ್ನು ಮುಂದುವರೆಸಿ ಅಧಿಕಾರ ಪಡೆದುಕೊಳ್ಳಲು ಪ್ರಯತ್ನಿಸಿರುವುದನ್ನು ಕಾಣಬಹುದು. ಹಳೆಯ ವ್ಯವಸ್ಥೆಯು ನೂತನ ವ್ಯವಸ್ಥೆಯೊಂದರ ರಚನೆಗೆ ಅನಿವಾರ್ಯವಾಗಿ ದಾರಿ ಮಾಡಿಕೊಟ್ಟಿತ್ತಾದರೂ ಅಲ್ಲಿ ನೆಲೆಯೂರಬಯಸಿ ಮುಂದಾಳತ್ವವನ್ನು ಉಳಿಸಿಕೊಳ್ಳಲು ಹೋರಾಡಿದ ಅವುಗಳು ವಸಾಹತುಶಾಹಿ ವ್ಯವಸ್ಥೆಯಲ್ಲಿ ಹೊಸ ಊಳಿಗಮಾನ್ಯದ ಲೇಪವನ್ನು ಪಡೆದುಕೊಂಡು ತಮ್ಮ ಇರುವಿಕೆಯನ್ನು ತೋರ್ಪಡಿಸಿದವು. ಆದರೆ ಬದಲಾಗುತ್ತಿದ್ದ ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಗಳಿಗೆ ಹೊಂದಿಕೊಳ್ಳಬೇಕಾದ ಅನಿವಾರ್ಯತೆಗಳು ಅವುಗಳಿಗಿದ್ದ ಕಾರಣ ಕೆಲವೊಂದು ಬಾರಿ ಅವುಗಳು ಹೊಸ ಸನ್ನಿವೇಶಗಳಿಗುಣವಾಗಿ ತಮ್ಮ ಪರಂಪರಾಗತ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ಮಾಡಿಕೊಂಡವು. ಇಂತಹ ಬದಲಾವಣೆಗಳಿಗೆ ತುಳುನಾಡು ಮಹತ್ವದ ನೆಲೆಯಾಗಿತ್ತು.[4]

ವಸಾಹತುಶಾಹಿ ಆಡಳಿತ ಅಧುನಿಕತೆಯ ವರಸೆಯನ್ನು ವಸಾಹತಿನ ಜನರಲ್ಲಿ ಭಿನ್ನತೆಗಳನ್ನು ಸೃಷ್ಟಿಸುವ ಉದ್ದೇಶದಿಂದ ಇಲ್ಲಿನ ಪರಂಪರಾಗತ ಆಚಾರ, ವಿಚಾರ, ನಂಬಿಕೆಗಳನ್ನು ಮೂಢನಂಬಿಕೆಗಳೆಂದು ದೂಷಿಸಿ ಅವುಗಳನ್ನು ಅನಾಗರೀಕವೆಂದು ವ್ಯಾಖ್ಯಾನಿಸಿತು. ಪ್ರಬಲರು-ದುರ್ಬಲರು, ಅಭ್ಯುಧಯಗೊಂಡವರು-ಅಭ್ಯುಧಯಗೊಳ್ಳದವರು, ಆಳುವವರು-ಆಳಲ್ಪಡುವವರೆಂದು ವಿಭಜಿಸಿ ಸರ್ವಸಾಧರಣಿಸಿಕೊಂಡಿತು.[5] ಅಧುನಿಕತೆಯ ಚಿಂತನೆಗಳ ಮೂಲಾಂಶಗಳೆಂದು ವಿಶ್ಲೇಷಿಸಲ್ಪಟ್ಟ ಪಾಶ್ಚಾತ್ಯರ ವೈಚಾರಿಕತೆ ಮತ್ತು ಲೌಕಿಕತೆಗಳು ದೇಶಿಯ ಪರಂಪರೆಗೆ ವಿರೋಧವಾದ ನಿಲುವುಗಳನ್ನು ಪ್ರತಿಪಾದಿಸಿ ಅವುಗಳ ವಿರುದ್ಧವಾಗಿ ಕಾರ್ಯತಂತ್ರ ರೂಪಿಸಿಕೊಂಡಿತ್ತಲ್ಲದೇ ಅದರದೇ ಆದ ಅನನ್ಯತೆಗಳನ್ನು ರೂಪಿಸಿ

ತನ್ನನ್ನು ನಿರ್ವಚಿಸಿತು.[6] ಉದಾಹರಣೆಗೆ ತುಳುನಾಡಿನ ಜೀತಪದ್ಧತಿ, ಗುಲಾಮಗಿರಿ, ಜಾತೀಯತೆ, ಅಸ್ಪೃಶ್ಯತೆ, ಸತಿ, ಬಾಲ್ಯವಿವಾಹ, ಹೆಣ್ಣು ಶಿಶುಹತ್ಯೆ, ಬಹುಪತ್ನಿತ್ವ, ಬಹುಪತಿತ್ವ ಮುಂತಾದವುಗಳು ಸಾಮಾಜಿಕ ಅನಿಷ್ಟಗಳೆಂದು ವ್ಯಾಖ್ಯಾನಿಸಲ್ಪಟ್ಟು ಅನಾಗರೀಕತೆಯ ಲಕ್ಷಣಗಳಾಗಿ ಬಿಂಬಿತವಾದವು. ಅವುಗಳನ್ನು ಬದಲಾಯಿಸಿ ವಸಾಹತುಶಾಹಿ ಚೌಕಟ್ಟಿನೊಳಗಿನ ವಾರಸುದಾರಿಕೆಯಾದ ಸುಧಾರಣೆ, ಆಧುನಿಕತೆ, ಅಭಿವೃದ್ಧಿಗಳೆಂಬ ಕಲ್ಪನೆಗಳಿಗೆ ಸರಿಹೊಂದಿಸಲಾಯಿತು. ಮುಂದೊಂದು ಬಾರಿ ಇವುಗಳು ವಸಾಹತುಶಾಹಿ ಅಧಿಕಾರದ ವ್ಯೂಹರಚನೆಗಳಾಗಿ[7] ಸಾಮ್ರಾಜ್ಯಶಾಹಿಯ ಹೇರಿಕೆಗೆ ಅವಕಾಶ ಕಲ್ಪಿಸಿದರೆ, ವಸಾಹತುಶಾಹಿಯ ಸಂರಚನೆಯಲ್ಲಿ ಅಧುನಿಕ ವಿದ್ಯಾಭ್ಯಾಸದಿಂದ ವಸಾಹತು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಸುಧಾರಣೆಗೊಳ್ಳುವ ಇಲ್ಲವೆ ವಸಾಹತನ್ನು ಭೌತಿಕವಾಗಿ ಸುಧಾರಿಸಿ ನಾಗರೀಕ ವಸಾಹತನ್ನಾಗಿಸುವ ಪ್ರಕ್ರಿಯೆಗಳೆಂದು ವೈಭವಿಕರಿಸಲ್ಪಟ್ಟಿತ್ತು. ಮುಂದುವರೆದು ಚರಿತ್ರೆ ಲೇಖನ, ಅವಲೋಕನ, ಪ್ರವಾಸಿ ಕಥನ, ಸಮೀಕ್ಷೆ, ಗಣತಿ, ಚಿಂತನೆ, ಕಣ್ಗಾವಲು ಮುಂತಾದ ತನಿಖಾ ಹಾಗೂ ಅಧ್ಯಯನ ವಿಧಾನಗಳ ಮೂಲಕ ವಸಾಹತುಶಾಹಿ ಅಧಿಕೃತ ಮತ್ತು ನ್ಯಾಯಯುತವೆಂದು ತನ್ನದೇ ರೀತಿಯಲ್ಲಿ ವ್ಯಾಖ್ಯಾನಿಸಲ್ಪಟ್ಟ ಅಧುನಿಕ ವಸಾಹತು ವ್ಯವಸ್ಥೆಯೊಂದನ್ನು ಸಿದ್ದಗೊಳಿಸಿತು. ಈ ಪ್ರಕ್ರಿಯೆಯಲ್ಲಿ ಆಳುವವರ ಮತ್ತು ಆಳಲ್ಪಡುವವರ ಧೋರಣೆಗಳು ರೂಪುಗೊಂಡು ವಿಚಾರಗಳ ರಚನೆ ಮತ್ತು ಬಳಕೆಗಳ ಮೇಲೆ ವಿಜಯ ಸಾಧಿಸಿತು.[8]

ಅಭಿವೃದ್ಧಿ, ಆಧುನಿಕತೆಯನ್ನು ಸ್ಫುಟಗೊಳಿಸುವ ಸಲುವಾಗಿ ವಸಾಹತುಶಾಹಿ ಆಡಳಿತದ ಆರಂಭದ ದಿನಗಳಲ್ಲಿ ತುಳುನಾಡನ್ನು ಆನಾಗರೀಕ, ಸುಧಾರಿಸದ, ವಿದೇಶಿಯರನ್ನು ಅನಾದರದಿಂದ ಕಾಣುವ ಪ್ರದೇಶವೆಂದು ಜರೆಯಲಾಗಿತ್ತು. ತದನಂತರ ಆರ್ಥಿಕ ವ್ಯಾಖ್ಯಾನಕ್ಕೆ ತೊಡಗಿದ ವಸಾಹತುಶಾಹಿ ತುಳುನಾಡಿನ ಅವ್ಯಾಹತ ಮಳೆ ಮಣ್ಣಿನ ಫಲವತ್ತತೆಯನ್ನು ಕಡಿಮೆ ಮಾಡಿದ್ದಲ್ಲದೇ ಮಣ್ಣು ಮರಳಿನ ದಿಣ್ಣೆಯಂತೆ ಇರುವುದರಿಂದ ಕೃಷಿ ಕಾರ್ಯಕ್ಕೆ ಉಪಯೋಗವಿಲ್ಲದ ಏನೂ ಬೆಳೆಯಲು ಸಾಧ್ಯವಾಗದ ಅನಭಿವೃದ್ಧ ಪ್ರದೇಶವೆಂದು ಮಾರ್ಪಡಿಸಿತ್ತು. ಇದಕ್ಕೆ ಪೂರಕ ದಾಖಲೆಗಳನ್ನು ಸಂಗ್ರಹಿಸಲು ಯತ್ನಿಸಿ ಅದರಲ್ಲಿ ಸಫಲತೆಯನ್ನು ಕಂಡ ವಸಾಹತುಶಾಹಿ ಆಡಳಿತ ತನ್ನ ಆನಾದರ, ತಾತ್ಸಾರ ಹಾಗೂ ಮತ್ಸರೀ ನಿಲುವುಗಳನ್ನು ಮತ್ತಷ್ಟು ಸ್ಫುಟಗೊಳಿಸಿ ಆಧುನಿಕತೆಯ ಅವಶ್ಯಕತೆಯನ್ನು ಮನದಟ್ಟುಗೊಳಿಸಿತು.[9] ಈ ದಿಸೆಯಲ್ಲಿ ತುಳುನಾಡು ಅಧುನೀಕಿಕರಣಗೊಳ್ಳಲು ಮತ್ತು ಅದು ತನ್ನನ್ನು ತಾನು ಆ ಪ್ರಕ್ರಿಯೆಯಲ್ಲಿ ಬದಲಾಯಿಸಿಕೊಳ್ಳಲು ವಸಾಹತುಶಾಹಿಯ ಆಡಳಿತ

ಮತ್ತು ಮತಪ್ರಚಾರಕರ ಸಾಮಾಜಿಕ ಪರಿವರ್ತನೆ ಬಹುಮುಖ್ಯವಾಗಿತ್ತೆಂಬ ಸಾಮಾನ್ಯ ಪರಿಕಲ್ಪನೆ ಪ್ರಚಾರಗೊಂಡಿತು.

ವಸಾಹತಿಗೆ ಸಂಬಂಧಿಸಿದ ವಸಾಹತುಶಾಹಿ ಚರಿತ್ರೆಯ ಬರವಣಿಗೆಗಳಲ್ಲಿ ವಸಾಹತಿಗೆ ಚರಿತ್ರೆಯೇ ಇಲ್ಲ ಹಾಗೂ ರಾಜ್ಯ ಕಲ್ಪನೆ ಇರಲಿಲ್ಲ ಎಂಬ ಜೇಮ್ಸ್‌ಮಿಲ್‌ನ ಸಮರ್ಥನೆ, ವಸಾಹತಿನ ಸಮಾಜದಲ್ಲಿನ ಬೆಳವಣಿಗೆಗಳು ಗತಿರಹಿತವಾಗಿತ್ತೆಂಬ ಅನಾದರ, ಜೊತೆಗೆ ವಸಾಹತಿನ ಸಂಸ್ಕೃತಿ ಅನಾಗರೀಕವೆಂದು ಬಹಿರಂಗವಾಗಿ ಸಾರುವ ವಿಶ್ಲೇಷಣೆಗಳು ಕಾಣಲ್ಪಟ್ಟವು. ಮುಸ್ಲಿಮರು ಆಕ್ರಮಣಕಾರರಾಗಿ ವಸಾಹತಿಗೆ ಕಾಲಿಟ್ಟು ಕತ್ತಲಯುಗಕ್ಕೆ ನಾಂದಿಯಾದರೂ ವಸಾಹತುಶಾಹಿಗಳ ಆಗಮನ ಕತ್ತಲಯುಗವನ್ನು ಕೊನೆಗೊಳಿಸಿ ಪರಿವರ್ತನೆಗೆ ಬಾಗಿಲು ತೆರೆಯಿತು ಎಂಬುವುದಾಗಿಯೂ ಪ್ರತಿಪಾದಿಸಲ್ಪಟ್ಟಿತ್ತು. ಇದಕ್ಕನುಗುಣವಾಗಿ ಅಭಿವೃದ್ಧಿಯ ಕಲ್ಪನೆಯನ್ನು ಮುಂದಿಟ್ಟ ವಸಾಹತುಶಾಹಿ, ವಸಾಹತನ್ನು ಸಾಂಕೇತಿಕವಾಗಿ ಸರ್ವೆಕ್ಷಣೆ ನಡೆಸಿತ್ತಲ್ಲದೇ ಸರ್ವೇಕ್ಷಣೆ ಮಾಡಿದ ಪ್ರದೇಶಗಳ ಮೇಲೆ ಅಧಿಕಾರ ಸ್ಥಾಪಿಸಿ ಅಭಿವೃದ್ಧಿ, ಅಧುನಿಕತೆಯ ಪರಿಕಲ್ಪನೆಯಲ್ಲಿ ಪ್ರಭುತ್ವದ ಮುದ್ರೆಯನ್ನು ಅಚ್ಚುಗೊಳಿಸಿತು.

ತುಳುನಾಡಿನ ಸಂದರ್ಭದ ಸಾಮಾಜಿಕ ಪರಿವರ್ತನೆಯ ಆಶಯ ಕ್ಯಾಥೋಲಿಕ್, ಬಾಸೆಲ್‌ಮಿಷನ್ ಮುಂತಾದ ಮತಪ್ರಚಾರಕ ಸಂಸ್ಥೆಗಳ ಕಾರ್ಯಚಟುವಟಿಕೆ ಅಭಿವೃದ್ಧಿ, ಆಧುನೀಕರಣಕ್ಕೆ ಮಾರ್ಗದರ್ಶಿಯನ್ನಾಗಿಸಿತು. ವರ್ತಮಾನದಲ್ಲೂ ಅಭಿವೃದ್ಧಿ, ಆಧುನೀಕರಣದ ಬಗ್ಗೆ ಈ ಬಗೆಯ ವಾದಗಳು ಜತನವಾಗಿದ್ದು ವಸಾಹತುಶಾಹಿ ಆಡಳಿತ ಇಲ್ಲವೇ ಮತಪ್ರಚಾರಕರ ಕಾರ್ಯಚಟುವಟಿಕೆ ಈ ದೇಶಕ್ಕೆ ಮಹೋನ್ನತ ಕೊಡುಗೆ ನೀಡಿದವರೆಂಬ ಭ್ರಮೆ ಹುಟ್ಟುಹಾಕುವಲ್ಲಿ ಯಶಸ್ಸು ಕಂಡಿದೆ.[10] ವಸಾಹತುಶಾಹಿ ತುಳುವರ ಮೇಲೆ ಆಗಾಧ ಪರಿಣಾಮ ಬೀರಿದ್ದರಿಂದ ಇಲ್ಲಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ನೆಲೆಗಳು ಬದಲಾವಣೆಗೆ ತೆರೆದುಕೊಂಡವು ಅಥವಾ ಬಲವಂತದಿಂದ ತೆರೆದುಕೊಳ್ಳುವಂತೆ ಮಾಡಲಾಯಿತು. ವಸಾಹತುಶಾಹಿ ಆಡಳಿತ ಮತ್ತು ಅದರ ಅಧುನಿಕತೆಯ ಪ್ರವರ್ತನೆಗಳು ವಸಾಹತಿನ ವಿವಿಧ ನೆಲೆಗಳಲ್ಲಿದ್ದ ಅಧಿಕಾರಗಳನ್ನು ಬೇರ್ಪಡಿಸಿದರೂ ಅವುಗಳು ತಮ್ಮ ವಾರಸುದಾರಿಕೆಯನ್ನು ಹೊಸ ರೂಪದಲ್ಲಿ ಮುಂದುವರೆಸಿದವು.[11]

ವಸಾಹತುಶಾಹಿ ಮಾದರಿಯ ಅಧುನಿಕತೆ ಸ್ಥಳೀಯವಾದುದೆಲ್ಲವುಗಳನ್ನು ಸಾಂಪ್ರದಾಯಿಕ ಎಂಬ ಹಣೆಪಟ್ಟಿಯಡಿಯಲ್ಲಿ ಬಂಧಿಸಿತು. ಕೈಗಾರಿಕ ಹಾಗೂ ಕೈಗಾರಿಕಾಪೂರ್ವ ಸಮಾಜಗಳು ಎನ್ನುವ ವಿಂಗಡನೆಯೇ ಈ ಧೋರಣೆಯನ್ನು ಧ್ವನಿಸುತ್ತದೆ. ಮಾನವ, ಮಾನವ ನಡುವಿನ ಹಾಗೂ ಮಾನವ ಪರಿಸರದ ನಡುವಿನ ಸಂಬಂಧಗಳು ಹೊಸ

ಬಗೆಯಲ್ಲಿ ವ್ಯಾಖ್ಯಾನಗೊಂಡು ಪ್ರತಿಯೊಂದು ಬದಲಾವಣೆಗಳಿಗೂ ವಸಾಹತುಶಾಹಿ ಸರಕಾರ ತನ್ನದೇ ಆದ ಸ್ಪಷ್ಟೀಕರಣವನ್ನು ಕೊಡುತ್ತಿತ್ತು. ಹಾಗೂ ಆ ಮೂಲಕ ಅಧಿಕೃತಗೊಳಿಸುತ್ತಿತ್ತು. ತುಳುವರ ದುರಾದೃಷ್ಟವೆಂದರೆ, ಯಾವುದೇ ಒಂದು ವ್ಯವಸ್ಥೆ ಹೇರಿಕೆಯ ರೂಪದಲ್ಲಿ ಬಂದಾಗ ಅದನ್ನು ಪ್ರತಿಭಟಿಸುವ ಸಾಮರ್ಥ್ಯವಾಗಲಿ ಅಥವಾ ಒಪ್ಪಿಕೊಳ್ಳುವ ಮನಸ್ಸಾಗಲಿ ಇಲ್ಲದೇ ಇದ್ದಾಗ ಅನಿವಾರ್ಯವಾಗಿ ತಮ್ಮದೇ ನೆಲದಲ್ಲಿ ಪರಕೀಯರಾಗುವ ಸ್ಥಿತಿ. ಈ ಸ್ಥಿತಿಯನ್ನು ಪ್ಲಾಂಟೇಷನ್ ಆರ್ಥಿಕತೆ ಜಾರಿಗೊಂಡಾಗ ತುಳುನಾಡಿನ ಸ್ಥಳೀಯ ರೈತರು ಎದುರಿಸಬೇಕಾಗಿ ಹಾಗೂ ಅನುಭವಿಸಬೇಕಾಗಿರುವುದು. ಜೊತೆಗೆ ತುಳುನಾಡಿನಲ್ಲಿ ಗುತ್ತು ಕೇಂದ್ರಿತ ಅಧಿಕಾರಗಳು ವಸಾಹತುಶಾಹಿಯ ಅಧಿಕಾರವನ್ನು ಪೋಷಿಸುವ ನರ್ಸರಿಗಳಾಗಿ ಸಹಯೋಗಗೊಂಡಿರುವುದು, ವಸಾಹತುಶಾಹಿಯ ಬಂಡವಾಳ ವರ್ಧಿಸುವ, ಲಾಭಗಳಿಸುವ ಅಭಿರುಚಿಯ ಮಾರುಕಟ್ಟೆಗಳ ನಿರ್ಮಾಣ, ಫ್ಯಾಕ್ಟರಿ ಮುಂತಾದವುಗಳ ನಿರ್ಮಾಣದಲ್ಲಿ ಜತೆಗೂಡಿತು. ಅಭಿವೃದ್ಧಿಯ ಮುಖವಾಡದ ಜೊತೆಗೆ ವಸಾಹತುಶಾಹಿಗಳ ಪರಿಶೋಧನೆ ಹಾಗೂ ವಸಾಹತಿನ ಬಗೆಗಿನ ಹೊಸ ವ್ಯಾಖ್ಯಾನಗಳು ಅದರ ರಾಜ್ಯಾಡಳಿತದ ಅನುಕೂಲಕ್ಕೆ ಬಳಸಲ್ಪಟ್ಟವು.[12] ಈ ಹಂತದಲ್ಲಿ ವಸಾಹತುಶಾಹಿಯ ಚಿಂತನೆ, ವಾಸ್ತವತೆಯನ್ನು ಅಲ್ಲಗಳೆದು ಅದರ ಉಪಯುಕ್ತತೆಯನ್ನು ಬೆಂಬಲಿಸಿ, ಸರಿಹೊಂದಿಸುವ ಪ್ರಕ್ರಿಯೆ ಮುಂತಾದವುಗಳು ಮುಂದಡಿಯಿಟ್ಟವು. ಇದು ವಸಾಹತುಶಾಹಿ ಅನುಭವಿಸಿದ ತೊಡಕುಗಳನ್ನು ನಿವಾರಿಸಲು ಆಧುನೀಕರಣ ಮತ್ತು ಆಭಿವೃದ್ಧಿಯ ಪ್ರತಿಪಾದನೆಗಳ ಮೂಲಕ ವಸಾಹತುಪೂರ್ವದ ವಾರಸುದಾರಿಕೆಯ ಆಯಾಮಗಳನ್ನು ಹೇಗೆ ಬಳಸಿಕೊಂಡಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ.

**ಅಭಿವೃದ್ಧಿ-ವಸಾಹತುಶಾಹಿ**

ವಸಾಹತು ಬಂಡವಾಳಶಾಹಿ ವ್ಯವಸ್ಥೆಗೆ ತೆರೆದುಕೊಂಡಾಗ ವಸಾಹತಿನ ಉತ್ಪಾದನ ವ್ಯವಸ್ಥೆ, ಬಹುಸಂಸ್ಕೃತಿ, ಬಹುರೂಪತೆ, ಮೌಖಿಕ ವಿಚಾರಗಳು ಏಕರೂಪಿ ಇಲ್ಲವೇ ಯುರೋಚಿಂತನೆಯ ಬಿಂಬದೊಳಗೆ ಸೇರ್ಪಡೆಗೊಂಡವು. ಉತ್ಪಾಧನೆಗೆ ಸಂಬಂಧಿಸಿ ಬಂಡವಾಳಶಾಹಿ ಗರಿಷ್ಠ ಉತ್ಪಾದನೆ ಮತ್ತು ಹೆಚ್ಚು ಲಾಭದ ಯೋಜನೆಯಲ್ಲಿ ತೊಡಗಿಸಿಕೊಂಡಿದ್ದರಿಂದ ಆ ಉದ್ದೇಶ ಸಾಧಿಸಿಕೊಳ್ಳಲು ವಸಾಹತುಶಾಹಿ ವಸಾಹತಿನ ಸಂಪತ್ತನ್ನು ವಶಪಡಿಸಿಕೊಂಡಿತು. ಜನರ ಉತ್ಪಾದನೆ, ಉತ್ಪಾದನೆಯ ವಿಧಾನ ಮತ್ತು ಉತ್ಪಾದನಾ ಹಂಚಿಕೆ ಇವೆಲ್ಲವನ್ನು ವಶಪಡಿಸಿಕೊಂಡ ವಸಾಹತುಶಾಹಿ, ವಸಾಹತು ಲೋಕವನ್ನು ತನ್ನ ಹಿತಾಸಕ್ತಿಗಳಿಗೆ ಪೂರಕವನ್ನಾಗಿ ಮಾರ್ಪಡಿಸಿಕೊಂಡಿತು. ತುಳುನಾಡಿನಲ್ಲಿ ರೈತವಾರಿ ಪದ್ಧತಿಯನ್ನು ಜಾರಿಗೊಳಿಸಿ ನಿಧಾನವಾಗಿ ಜಮೀನುದಾರರ ಸ್ಥಾನವನ್ನು ಸರ್ಕಾರವೇ

ವಹಿಸಿಕೊಂಡು ಹೆಚ್ಚು ಭೂಕಂದಾಯವನ್ನು ಸಂಗ್ರಹಿಸಿತು. ಜೊತೆಗೆ ಈ ರೀತಿಯ ಬೆಳವಣಿಗೆ ಕೃಷಿಯ ವಿನಾಶಕ್ಕೆ ಕಾರಣವಾಯಿತಲ್ಲದೇ ಭೂಮಿಯ ಮೇಲೆ ನಿಗದಿಪಡಿಸುತ್ತಿದ್ದ ಕಂದಾಯದ ಅಧಿಕ ಹೊರೆ ರೈತರು ಕೃಷಿಯ ಕಡೆ ಒಲವು ತೋರಿಸದಿರಲು ಬಹುಮುಖ್ಯ ಕಾರಣವಾಯಿತು. ಆದರೆ ಗುಡಿಕೈಗಾರಿಕೆಗಳ ನಾಶ ನಿರುದ್ಯೋಗವನ್ನು ಸೃಷ್ಟಿಸಿತ್ತಲ್ಲದೇ ಅವುಗಳನ್ನು ನಂಬಿ ಬದುಕುತ್ತಿದ್ದ ಸಮುದಾಯಗಳು ಜೀವನೋಪಾಯಕ್ಕಾಗಿ ಕೃಷಿಯ ಮೇಲೆ ಅವಲಂಬನೆಯನ್ನು ಮಾಡಿದ ಫಲವಾಗಿ ಕೃಷಿ ಕ್ಷೇತ್ರದಲ್ಲಿ ಜನಸಂಖ್ಯೆಯ ಒತ್ತಡ ಹೆಚ್ಚಿತು. ಜೊತೆಗೆ ಭೂಮಾಲಕರು, ಸಾಲ ನೀಡುವವರು, ವ್ಯಾಪಾರಿ ವರ್ಗಗಳು ಹಳ್ಳಿಯನ್ನು ಪ್ರವೇಶಿಸಿದ್ದರಿಂದ ಕೃಷಿಕನ ಬದುಕು ಮತ್ತಷ್ಟು ದುಸ್ಥಿತಿಗಳಿಯಿತು. ರೈತವಾರಿ ಪ್ರದೇಶದ ಬೆಳೆಗಾರರು ಸಾಲದ ಸುಳಿಗೆ ಬಿದ್ದು, ಭೂಮಿಯನ್ನು ಭೂಮಾಲಕರು, ಸಾಲ ನೀಡುವವರು, ವ್ಯಾಪಾರಿ ವರ್ಗಗಳಿಗೆ ಪರಭಾರೆ ಮಾಡಬೇಕಾಯಿತು. ಗೇಣಿದಾರ ಹಕ್ಕನ್ನು ಕಳೆದುಕೊಂಡ ರೈತರು ಉಪಗೇಣಿದಾರರಾಗಬೇಕಾಯಿತು.

ವಸಾಹತುಶಾಹಿ ವಸಾಹತನ್ನು ಈ ರೀತಿಯಲ್ಲಿ ವಶಪಡಿಸಿಕೊಳ್ಳಲು ಅದು ಅನುಸರಿಸಿದ ಮಾರ್ಗವೆಂದರೆ ತನ್ನ ಉದ್ಧೇಶ ಸಾಧನೆಗೆ ಮಾನ್ಯತೆ ಸಿಗುವಂತಹ ಸಂಸ್ಥೆಗಳನ್ನು ನಿರ್ಮಿಸಿರುವುದು. ತನ್ಮೂಲಕ ತನ್ನನ್ನು ತಾನು ಈ ನಾಡಿನ ಅಭಿವೃದ್ಧಿಯ ಪ್ರವರ್ತಕನೆಂದು ತೋರ್ಪಡಿಸಿಕೊಳ್ಳಲು ಉತ್ಪಾದನಾ ವಿಧಾನಗಳನ್ನು ಶಿಸ್ತುಬದ್ಧಗೊಳಿಸಿ ಜೀವನಾವಶ್ಯಕ ಸೌಕರ್ಯಗಳನ್ನು ಒದಗಿಸುವ ನಾಟಕವಾಡಿತು. ಒಟ್ಟಿನಲ್ಲಿ ವಸಾಹತಿನ ಜನರ ಜೀವನಕ್ರಮ, ವೈಚಾರಿಕತೆ, ಜೀವನ ಆಚರಣೆಗಳು ಹಾಗೂ ಸಂಸ್ಕೃತಿಯನ್ನು ಸ್ಪರ್ಶಿಸಿದ ವಸಾಹತುಶಾಹಿ ತನ್ನ ವಾರಸುದಾರಿಕೆಯನ್ನು ಆರಂಭಿಸಿತು. ಈ ಪ್ರಕ್ರಿಯೆಯನ್ನು ಬಲಪ್ರಯೋಗ ಇಲ್ಲವೇ ತೋಳ್ಬಲದಿಂದ ಪೂರ್ಣಗೊಳಿಸಿ ಜನರ ಒಪ್ಪಿಗೆಯನ್ನು ಪಡೆದು ಪರಸ್ಪರ ಮೇಳೈಸಿ ಆಳುವ ವರ್ಗಕ್ಕೆ ಯಜಮಾನಿಕೆಯನ್ನು ಸುಲಭವಾಗಿ ಸಿಗುವಂತೆ ಮಾಡಿಕೊಂಡಿತು.[13] ಕೌಂಟರ್ ಹೆಜಿಮನಿ ಸ್ಥಾಪಿಸುವಲ್ಲಿ ಊರಿನ ಎಲ್ಲಾ ಸಮುದಾಯಗಳಿಗೆ ಕೃಷಿ ಅಧಿಕಾರ ರಚನೆಯಲ್ಲಿ ಉತ್ಸವದ ಕಾರ್ಯಭಾಗಗಳನ್ನು ಸಾಂಸ್ಕೃತಿಕ ಅಧಿಕಾರದ ರೂಪದಲ್ಲಿ ಹಂಚಿಕೊಳ್ಳುವ ಪ್ರಕ್ರಿಯೆಗಳು. ವಸಾಹತುಪೂರ್ವದಲ್ಲಿ ಇದು ಅಧಿಕಾರವನ್ನು ಮೇಳೈಸುವ, ತುಳುನಾಡಿನ ಗುತ್ತು ವ್ಯವಸ್ಥೆಗಳು ದೈವದ ಉತ್ಸವಗಳ ಆಚರಣೆಯೊಂದಿಗೆ ಕೃಷಿ ಅಧಿಕಾರವನ್ನು ಪಡೆಯುವ ಕಾರ್ಯಯೋಜನೆ. ಬಲಪ್ರಯೋಗಿಸದೇ ಅಧಿಕಾರ ಚಲಾಯಿಸುವ ನಿರಂತರತೆ.

ವಸಾಹತುಪೂರ್ವದ ಕೃಷಿ ವಿಧಾನಗಳನ್ನು ಸರಿಯಾಗಿ ಅರ್ಥೈಸಿಕೊಳ್ಳಲು ವಿಫಲವಾದ ವಸಾಹತುಶಾಹಿ, ರೈತರು ಭೂಮಿಯನ್ನು ಕೃಷಿಯೋಗ್ಯ ಮಾಡುವ ಕನಿಷ್ಠ ಜ್ಞಾನ ಮತ್ತು ತುಳುವರ ಮಹದಾಶಯವನ್ನು ಅರ್ಥೈಸುವಲ್ಲಿ ವಿಫಲಗೊಂಡಿತ್ತೆಂದು

ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ತುಳುವರು ಭೂಮಿಯ ಆರ್ಥಿಕ ಮೌಲ್ಯಗಳಿಗೆ ಒತ್ತುನೀಡದೇ ಪ್ರಕೃತಿ ಸಮತೋಲನವನ್ನು ಕಾಯ್ದುಕೊಂಡು ಬರುವ ಉದ್ದೇಶದಿಂದ ಪರಿಸರಕ್ಕೆ ಯಾವುದೇ ಅಪಾಯ ಒದಗದಂತೆ ಕೃಷಿ ಮಾಡಿದ ಪ್ರದೇಶವನ್ನು ಜತನವಾಗಿ ಕಾಪಾಡಿಕೊಂಡಿದ್ದರು. ಆದರೆ ಬಂಡವಾಳಶಾಹಿಗಳ ಕೃಷಿನೀತಿ ಮತ್ತು ಕಬ್ಬಿಣದ ನೇಗಿಲುಗಳ ವ್ಯವಸ್ಥಿತ ಉಪಯೋಗದಿಂದಾಗಿ ಭೂಮಿ ನೇರ ಕೃಷಿಗೆ ಒಳಪಟ್ಟದ್ದರಿಂದ ಕಾಡು ನಾಡಾಗಿ ಪ್ರಕೃತಿಯ ಸಮತೋಲನದಲ್ಲಿ ಏರುಪೇರಾಯಿತು. ಜೊತೆಗೆ ಕಾಡು ಪ್ರದೇಶಗಳು ಕಾಫಿ, ಟೀ, ಮೆಣಸು, ಕೋಕಾ, ರಬ್ಬರ್, ಏಲಕ್ಕಿ ಮುಂತಾದ ವಾಣಿಜ್ಯ ಬೆಳೆಗಳ ಬೆಳೆಯುವ ತೋಟವಾಗಿ ಪರಿವರ್ತಿತಗೊಂಡು ವಸಾಹತುಶಾಹಿಯ ವ್ಯಾಪಾರಿ ನೀತಿಗೆ ಸರಿಹೊಂದಿಸಲ್ಪಟ್ಟಿತ್ತು.[14] ಒಂದೊಮ್ಮೆ ಕಾಡು ಅಥವಾ ಕೃಷಿಭೂಮಿಯಾಗಿ ಪರಿವರ್ತಿತಗೊಂಡ ಪ್ರದೇಶಗಳು ತುಳುವರಿಗೆ ಪೂಜ್ಯವಾಗಿ ಜೀವನಾಧಾರದ ಮೂಲವಾಗಿದ್ದರೆ, ವಸಾಹತುಶಾಹಿಗಳಿಗೆ ಅವುಗಳು ವಾಣಿಜ್ಯದ ಕೇಂದ್ರಗಳಾಗಿ, ವ್ಯಾಪಾರಿ ಮೌಲ್ಯಗಳನ್ನು ತಂದುಕೊಡುವ ಪ್ರದೇಶಗಳಾಗಿ ಮಾನ್ಯತೆ ಪಡೆದವು. ವಸಾಹತುಶಾಹಿ ಆಕ್ರಮಣಕಾರೀ ಧೋರಣೆಯಿಂದಾಗಿ ಭೂಮಿಯನ್ನು ಅವಲಂಬಿಸಿ ಬದುಕು ಕಂಡುಕೊಂಡು ಅದರ ಕಾನೂನುಗಳಿಗೆ ಬದ್ಧರಾಗಿ ಕೃಷಿಜೀವನ ನಡೆಸಿಕೊಂಡು ಬಂದವರು ಭೂಮಿಯ ಮಾಲೀಕರಾದರೇ ಭೂಮಿಯನ್ನು ಪೂಜ್ಯಭಾವನೆಯಿಂದ ಸ್ವೀಕರಿಸಿ ಬದುಕು ಕಂಡುಕೊಂಡವರು ಗುಲಾಮರಾಗಿ ಮಾಲೀಕರ ದೌರ್ಜನ್ಯಕ್ಕೆ ಒಳಪಟ್ಟರು. ಹೀಗೆ ವಸಾಹತುಶಾಹಿಗಳ ನೀತಿಯಿಂದ ಗುಲಾಮಗಿರಿ ಸ್ಥಿತಿಯನ್ನು ತಪ್ಪಿಸಿಕೊಂಡ ಜನಸಮುದಾಯಗಳಲ್ಲಿ ಕೆಲವು ಸಾಮಾಜಿಕವಾಗಿ ಪರಿವರ್ತನೆಗೊಂಡು ವಸಾಹತುಶಾಹೀ ಆಡಳಿತದ ಸಹಭಾಗಿಗಳಾದರು.[15]

ಕೆನರಾದ ಪ್ರಥಮ ಜಿಲ್ಲಾಧಿಕಾರಿಯಾಗಿದ್ದ ಮುನ್ರೋ ಈ ಪ್ರದೇಶವನ್ನು ಆರ್ಥಿಕವಾಗಿ ಪ್ರಯೋಜನಕಾರಿಯಲ್ಲದ, ಕೃಷಿಗೆ ಯೋಗ್ಯವಲ್ಲದ ಹಾಗೂ ಬಿಸಿಲಿನ ತಾಪದಿಂದ ಒಣಗಿದ ಪ್ರದೇಶವಾಗಿತ್ತು ಎಂಬ ಅಭಿಮತವನ್ನು ವ್ಯಕ್ತಪಡಿಸಿದ್ದನು. ಮುಂದುವರೆದು ಈ ಪ್ರದೇಶವನ್ನು ವಸಾಹತುಶಾಹಿಗಳಿಗೆ ಲಾಭದಾಯಕವಲ್ಲದ, ಜೀವನ ನಡೆಸಲು ಕಷ್ಟಕರವಾಗಿರುವ ಪ್ರದೇಶವೆಂದು ವ್ಯಾಖ್ಯಾನಿಸಿದ್ದನು. ವಸಾಹತುಶಾಹಿಯ ಆಡಳಿತದ ಆರಂಭದಲ್ಲಿಯೇ ವಸಾಹತು ಹೇಗೆ ಮತ್ತು ಯಾಕೆ ಅಭಿವೃದ್ಧಿಯಲ್ಲಿ ಹಿಂದುಳಿದಿದೆ ಎಂದು ಪ್ರಭಾವಿಸುವ ಮನೋಭೂಮಿಕೆಗಳು ಅದರ ನೀತಿಯ ಮೂಲಕ ಗೋಚರಿಸಿದವು. ಈ ಕಾರ್ಯಯೋಜನೆ ವಸಾಹತಿನ ಅಭಿವೃದ್ಧಿಯ ಬಗೆಗಿನ ವಸಾಹತುಶಾಹಿಗಳ ಮಾನದಂಡ ಅದರ ಮೂಗಿನ ನೇರಕ್ಕೆ ಹೇಗೆ ಕಾರ್ಯಾಚರಣೆ ರೂಪಿಸಿತ್ತು ಎಂಬುವುದು ಸ್ಪಷ್ಟ.[16]

ವಸಾಹತುಶಾಹಿಯ ಸರ್ವೇಕ್ಷಣೆ ವಸಾಹತುಪೂರ್ವದಲ್ಲಿ ಆಡಳಿತ ನಡೆಸಿದ ಸರಕಾರಗಳು ಶೋಷಣೆ, ಹೆಚ್ಚುವರಿ ಕಂದಾಯ ವಸೂಲಿ ಮತ್ತು ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕುವ ಬಗ್ಗೆ ಹೆಚ್ಚು ಗಮನಹರಿಸಿ ಅದರ ಅಭಿವೃದ್ಧಿಯೆಡೆಗೆ ಉದಾಸೀನ ಮನೋಭಾವ ಪ್ರದರ್ಶಿಸಿದ್ದರಿಂದ ಭೂಮಿ ಫಲವತ್ತತೆಯನ್ನು ಕಳೆದುಕೊಂಡು ಉಪಯೋಗವಿಲ್ಲದಂತಾಗಿದೆ. ನದಿ ಪಾತ್ರಗಳು ನೀರಾವರಿ ವ್ಯವಸ್ಥೆಗೆ ಯೋಗ್ಯವಲ್ಲ; ಮಳೆಗಾಲದಲ್ಲಿ ನೀರು ತುಂಬಿ ಹರಿಯುವುದರಿಂದ ತುಳುನಾಡು ವಾಣಿಜ್ಯ ಉದ್ದೇಶಗಳಿಗೆ ಯೋಗ್ಯವಲ್ಲವೆಂದು ಘೋಷಿಸಿರುವುದು ವಸಾಹತುಶಾಹಿಯ ಚಿಂತನೆ ಹೇಗಿತ್ತು ಎಂಬುವುದಕ್ಕೆ ಉತ್ತಮ ಉದಾಹರಣೆ. ಇನ್ನೊಂದೆಡೆ ತುಳುನಾಡು ವ್ಯವಸಾಯಕ್ಕೆ ಯೋಗ್ಯ ಕ್ಷೇತ್ರವಾಗಿದ್ದರೂ ಅದು ಕೃಷಿ ಕಚ್ಚಾಪದಾರ್ಥಗಳನ್ನು ಪೂರೈಸುವುದಕ್ಕೆ ಸೀಮಿತಗೊಂಡ ಪ್ರದೇಶವಾಗಿ ವಿಶ್ಲೇಷಿಸಲ್ಪಟ್ಟು ಬಂಡವಾಳಶಾಹಿಯ ಉದ್ಯಮರಂಗದ ನೀತಿಗೆ ಸರಿಹೊಂದುವ ಪ್ರದೇಶವಾಗಿಯೂ ಕಂಡುಕೊಳ್ಳಲಾಯಿತು.[17] ನಿಧಾನವಾಗಿ ವಸಾಹತುಶಾಹಿಯ ಅಭಿವೃದ್ಧಿ ಕಲ್ಪನೆ ಜಾರಿಗೆ ಬಂದಾಗ ಮೇಲಿನ ಚಿಂತನೆಗಳೆಲ್ಲ ವ್ಯತಿರಿಕ್ತ ವಾಖ್ಯಾನಕ್ಕೊಳಪಟ್ಟವು. ತುಳುನಾಡಿನ ಭೂಪ್ರದೇಶದ ಬಗ್ಗೆ ಈ ವರೆಗಿದ್ದ ನಕಾರಾತ್ಮಕ ನಿಲುವುಗಳು ಸಾಕಷ್ಟು ಬದಲಾಗಿ ವಸಾಹತುಶಾಹಿಗಳಿಗೆ ಚಿನ್ನದ ಮೊಟ್ಟೆಗಳನ್ನಿಡುವ ಪ್ರದೇಶವಾಗಿ ಮಾರ್ಪಾಟು ಹೊಂದಿತು. ಅಭಿವೃದ್ಧಿ, ಅಧುನಿಕತೆ ತುಳುನಾಡನ್ನು ಕೃಷಿ ಮತ್ತು ವ್ಯಾಪಾರಿ ನೀತಿಗೆ ಯೋಗ್ಯವಾಗಿ ಹೊಂದಿಕೊಳ್ಳುವ ಭೂಪ್ರದೇಶವನ್ನಾಗಿ ಕಂಡುಕೊಳ್ಳಲಾಯಿತು.[18]

ವಸಾಹತುಶಾಹಿಯ ಚಿಂತನೆಗಳು ಸಮರ್ಥಿಸಿಕೊಂಡಂತೆ ತುಳುನಾಡಿನ ಕೃಷಿ ಉತ್ಪನ್ನಗಳು ವಸಾಹತುಶಾಹಿಗೆ ಆಗಾಧ ಲಾಭವನ್ನು ತಂದುಕೊಟ್ಟಿದೆ ಎಂಬ ವಿಚಾರ ವಸಾಹುತಶಾಹಿ ದಾಖಲೆಗಳಲ್ಲಿ ಉಲ್ಲೇಖಿಸಲ್ಪಟ್ಟ ಅಂಕಿಅಂಶಗಳಿಂದ ಪುಷ್ಠೀಕರಿಸಬಹುದು.[19] ಉದಾಹರಣೆಗೆ ಕೃಷಿಯ ವಾಣಿಜ್ಯೀಕರಣದ ಪ್ರಕ್ರಿಯೆ ತುಳುನಾಡಿನ ಜನಜೀವನದ ಮೇಲೆ ಮಹತ್ತರವಾದ ಪರಿಣಾಮವನ್ನು ಬೀರಿತು. ಹಳೆಯ ಜಮೀನುದಾರಿ ಪದ್ಧತಿ ಹೊಸ ರೂಪವನ್ನು ಪಡೆದುಕೊಂಡು ಕೃಷಿ ಸಮಾಜದ ಅಂತರ್-ಸಂಬಂಧಗಳು ಏರುಪೇರಾಗತೊಡಗಿದವು. ಹೊಸ ಮಧ್ಯವರ್ತಿ ವರ್ಗ ನಿರ್ಣಾಯಕ ಪಾತ್ರವನ್ನು ವಹಿಸಲಾರಂಭಿಸಿ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ತನ್ನ ಸ್ಥಾನವನ್ನು ಗಟ್ಟಿಗೊಳಿಸಿತು. ಕಾಡು, ಬೆಟ್ಟ, ಗುಡ್ಡ, ಬಯಲು ಹಾಗೂ ಕರಾವಳಿ ಪ್ರದೇಶಗಳು ಹೊಸದಾಗಿ ಸರ್ವೇ ಹಾಗೂ ಭೂಕಂದಾಯ ನಿಗದಿಕರಣ ಪ್ರಕ್ರಿಯೆಗೆ ಒಳಗಾದವು. ಮಾನವ ಪರಿಸರದಂತೆ ಭೌಗೋಳಿಕ ಪರಿಸರವೂ ಬಂಡವಾಳದ ಆಧೀನಕ್ಕೆ ಬಂದು ಅಭಿವೃದ್ಧಿಯ ಹೆಸರಿನಲ್ಲಿ ಹಂತ ಹಂತವಾಗಿ ಕರಗಲಾರಂಭಿಸಿತು. ಕೃಷಿಯನ್ನು ಉದ್ದಿಮೆಯಾಗಿ ಪರಿವರ್ತಿಸುವ ಪ್ಲಾಂಟೇಶನ್

ಆರ್ಥಿಕತೆಯನ್ನು ಜಾರಿಗೆ ತಂದ ವಸಾಹತುಶಾಹಿ ಸರಕಾರ ಕೃಷಿಯನ್ನು ಲಾಭದಾಯಕವನ್ನಾಗಿಸುವ ಹಾಗೂ ಕೈಗಾರಿಕಾ ಅರ್ಥ ವ್ಯವಸ್ಥೆಗೆ ಪೂರಕವಾಗಿ ನಿಲ್ಲುವ ವ್ಯವಸ್ಥೆಯನ್ನಾಗಿ ಮಾಡಿಸಿತು. ಹೀಗೆ ಅಭಿವೃದ್ಧಿ ಮತ್ತು ಆಧುನಿಕತೆಯ ಮಾನದಂಡಗಳಡಿಯಲ್ಲಿ ಈ ಪ್ರದೇಶವನ್ನು ಅರ್ಥೈಸಿಕೊಂಡ ವಸಾಹತುಶಾಹಿ ಅದಕ್ಕನುಗುಣವಾಗಿ ಮುಂದಿನ ಕಾರ್ಯಯೋಜನೆಯನ್ನು ರೂಪಿಸಿ ಹಿಂದುಳಿದ ತುಳುನಾಡನ್ನು ಅಭಿವೃದ್ಧಿಪಡಿಸುವ ಜವಬ್ದಾರಿ ನಾಗರೀಕ ಪಶ್ಚಿಮದ ಮೇಲಿದೆ ಎಂದು ಬಿಂಬಿಸಿಕೊಂಡಿತು.[20]

ವಸಾಹತುಶಾಹಿ ನೆಲೆಯೂರಿದ ಆರಂಭದ ದಿನಗಳಲ್ಲಿ ಮತಪ್ರಚಾರಕರ ಅಭಿಲಾಷೆಯಂತೆ ಹಾಗೂ ವಸಾಹತುಶಾಹಿಗಳ ಆಶಯದಂತೆ ತುಳುನಾಡು ಅನಾಗರೀಕತೆಯ ಪ್ರತೀಕವಾಗಿ ಸಾಮಾಜಿಕವಾಗಿ ಪರಿವರ್ತನೆ ಅವಶ್ಯವೆಂದು ಪ್ರತಿಪಾದಿಸಿತು. ದಟ್ಟಕಾಡುಗಳು ಹಾಗೂ ಗ್ರಾಮೀಣ ಚಹರೆ ಪ್ರತಿನಿಧಿಸುತ್ತಿದ್ದ ನಾಡುಗಳು ವಸಾಹತುಶಾಹಿಗಳಿಗೆ ಮತ್ತು ಮತಪ್ರಚಾರಕರಿಗೆ ಚರ್ಚು, ಪಟ್ಟಣಗಳಿಲ್ಲದೇ ಆಧುನಿಕತೆಯ ಗಾಳಿ ಸೋಕದ ಅನಾಗರೀಕ ಹಾಗೂ ಸಂಸ್ಕಾರವಿಲ್ಲದ ಜನರ ನೆಲೆಗಳಾಗಿ ಗೋಚರಿಸಿತು. ಈ ವಾದಗಳಿಗೆ ಹೆಚ್ಚಿನ ಗಮನ ಹರಿಸಿದ ಮತಪ್ರಚಾರಕರು ಮಾಹಿತಿಗಳನ್ನು ಕಲೆ ಹಾಕಿ ಅವುಗಳ ಆಧಾರದಲ್ಲಿಯೇ ತುಳುನಾಡನ್ನು ಹೊರಜಗತ್ತಿಗೆ ಪರಿಚಯಿಸಲು ಪ್ರಯತ್ನಿಸಿದವು. ಮಾತ್ರವಲ್ಲ ಹೊರಜಗತ್ತು ವಸಾಹತಿನ ಬಗ್ಗೆ ತೀರ್ಮಾನಿಸಲು ಮತ್ತು ಬ್ರಿಟಿಷ್ ಆಡಳಿತ ವಸಾಹತಿಗೆ ಒದಗಿಬಂದ ವರ ಎಂದು ಅಭಿಪ್ರಯಿಸಲು ಈ ಮಾಹಿತಿಗಳು ಸಾಕಾಯಿತು. ಇದನ್ನು ಸಮರ್ಥಿಸಲೆಂಬಂತೆ ಸಾಮಾಜಿಕ ಪರಿವರ್ತನೆಯ ಉದ್ದೇಶವನ್ನು ಮುಂದಿಟ್ಟುಕೊಂಡು ತುಳುನಾಡನ್ನು ಕಾರ್ಯಕ್ಷೇತ್ರವಾಗಿಸಿದ ಜೆಸೂಯಿಟ್‌ಗಳು ಬಾರಕೂರಿನ ಬಸದಿ, ದೇವಸ್ಥಾನ ಹಾಗೂ ಕೋಟೆಯ ಅವಶೇಷಗಳನ್ನು ವಿವರಿಸುತ್ತಾ ಪ್ರಾಚೀನ ಹಿಂದೂಧರ್ಮ ತನ್ನದೇ ಕಾರಣಕ್ಕೆ ಹೇಗೆ ನೆಲಕಚ್ಚಿದೆ ಮತ್ತು ಕತ್ತಲಯುಗದ ಸಂಕೇತಗಳಾಗಿ ಮಸೀದಿಗಳು ಹೇಗೆ ತಲೆ ಎತ್ತಿವೆ ಎಂಬುವುದನ್ನು ತಮ್ಮದೇ ದೃಷ್ಟಿಕೋನಕ್ಕನುಗುಣವಾಗಿ ವಿವರಿಸಲು ಪ್ರಯತ್ನಿಸಿದರು. ಜೊತೆಗೆ ಚರ್ಚು, ಬ್ರಿಟಿಷರ ಆಧುನಿಕ ಶೈಲಿಯ ಮನೆಗಳು ಹಾಗೂ ಆಡಳಿತ ನಾಗರೀಕ ಜೀವನದ ಸಂಕೇತ ಎಂಬುವುದು ಮನದಟ್ಟು ಮಾಡಲು ಸರ್ವಪ್ರಯತ್ನಗಳು ನಡೆದವು. ಅದರಂತೆ ವಸಾಹತುಶಾಹಿ ಆಡಳಿತದ ಪರವಾಗಿದ್ದ ಮತಪ್ರಚಾರಕರು ಧಾರ್ಮಿಕವಾಗಿ ಪ್ರಾರಂಭಿಸಿದ ಚರ್ಚು, ಚರ್ಚು ಪ್ರತಿಪಾದಿಸಿದ ಧರ್ಮ ಮತ್ತು ಬೋಧನೆ ನಾಗರೀಕ ಲಕ್ಷಣಗಳಾಗಿ ಬಿಂಬಿಸಲ್ಪಟ್ಟವು. ಅದರದೇ ಆದ ಆರ್ಥಿಕ ಲಾಭಕೋಸ್ಕರ ಆ ಸಂದರ್ಭದಲ್ಲಿ ಕೈಗೆತ್ತಿಕೊಂಡ ಸಾರ್ವಜನಿಕ ಕೆಲಸಗಳಾದ ಉದಾಹರಣೆಗೆ ರಸ್ತೆ, ಅಂಚೆ ವ್ಯವಸ್ಥೆ, ಪೊಲೀಸ್ ಠಾಣೆಗಳು ರೈಲು ಹಳಿ, ಟೆಲಿಗ್ರಾಫ್ ವ್ಯವಸ್ಥೆ, ಆಧುನಿಕ ಶಾಲೆ ಮುಂತಾದವುಗಳು ಅಭಿವೃದ್ಧಿ,

ಅಧುನಿಕತೆ, ನಾಗರೀಕತೆಯ ಲಾಂಛನಗಳೆಂದು ಬಿಂಬಿತಗೊಂಡವು. ಈ ಎಲ್ಲಾ ಅಭಿವೃದ್ಧಿ ಮತ್ತು ಅಧುನೀಕತೆಯಿಂದಾಗಿ ತುಳುನಾಡು ಹೊಸ ರೂಪ ಪಡೆದುಕೊಂಡಿತೆಂದು ಅವರು ವಾದ ಮಂಡಿಸಿ ಅದಕ್ಕೆ ಒಪ್ಪಿಗೆಯ ಮುದ್ರೆಯನ್ನು ಪಡೆದುಕೊಳ್ಳಲು ಯಶಸ್ವಿಯಾದರು.[21]

ಮುಂದುವರೆದು ಪುನರುತ್ಥಾನ ಕಾಲದ ಜ್ಞಾನಪರ್ವದ ಪ್ರಭಾವದಿಂದ ಪಶ್ಚಿಮದ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ಶಿಕ್ಷಣ ಪಡೆದಿದ್ದ ಮತಪ್ರಚಾರಕರು ಈ ಪ್ರದೇಶಕ್ಕೆ ಬಂದು ತಮ್ಮದೇ ತಲೆಮಾರಿನ ಕಾಲಘಟ್ಟದಲ್ಲಿ ಕ್ರೈಸ್ತೀಕರಣ ಮಾಡುವ ಗುರಿ ಇಟ್ಟುಕೊಂಡಿದ್ದರಿಂದ ಅವರ ಧಾರ್ಮಿಕ ವಿಚಾರಗಳು ವಸಾಹತಿನ ಸಾಮಾಜಿಕ ರೂಢಿ, ಆಚರಣೆ ಹಾಗೂ ಸಂಪ್ರದಾಯಗಳ ಮೇಲೆ ಪ್ರಭಾವಿಸಿದವು. ವಸಾಹತಿನ ಜನರ ನಂಬಿಕೆಯ ಮೇಲೆ ಅವಿಶ್ವಾಸ ಮೂಡಿಸುವ ಪ್ರಯತ್ನ ಮತ್ತು ವಸಾಹತಿನ ಧರ್ಮದ ನಂಬಿಕೆಯಲ್ಲಿನ ಋಣಾತ್ಮಕ ಅಂಶಗಳನ್ನು ಪ್ರಸ್ತಾಪಿಸಿದ ವಸಾಹತುಶಾಹಿ ಮತಪ್ರಚಾರಕರು ವಸಾಹತಿನ ಜನರ ಮೂಲನಂಬಿಕೆಯ ಮೇಲೆ ದಾಳಿಯಿಟ್ಟು ಬದಲಾವಣೆ ಮಾಡಲು ತೀರ್ಮಾನಿಸಿದವು.[22]

ಸಾಮಾನ್ಯಶಕೆ 1851ರ ಕಾಲಘಟ್ಟದಿಂದ ವಸಾಹತುಶಾಹೀ ತನ್ನ ನೀತಿಗಳಿಗುಣವಾಗಿ ಅಭಿವೃದ್ಧಿಯ ಆರಂಭಿಕ ಹೆಜ್ಜೆಗಳನ್ನಿಟ್ಟಿತು.[23] ಸಾಮಾಜಿಕ ಪರಿವರ್ತನೆಯ ನೆಪದಲ್ಲಿ ಮತಪ್ರಚಾರಕರು ತಮ್ಮದೇ ರೀತಿಯಲ್ಲಿ ವ್ಯಾಖ್ಯಾನಿಸಿದ ಜಾತಿ, ಮೂಢನಂಬಿಕೆಗಳು ಹಾಗೂ ದೇಶೀಯ ಅಸಮಾನತೆಯ ವಿಶ್ಲೇಷಣೆಗಳು ಇಲ್ಲಿನ ಪಾರಂಪರಿಕ ಯಜಮಾನಿಕೆಯ ಮೇಲೆ ಪ್ರಭಾವ ಬೀರಿ ವಸಾಹತನ್ನು ವಿಘಟಿಸುವ ದಿಕ್ಕಿನಲ್ಲಿ ಮುಖಮಾಡಿದವು. ಜೊತೆಗೆ ವಸಾಹತಿನ ಸಾಮಾಜಿಕ ಪ್ರಕ್ರಿಯೆಗಳನ್ನು ಪಿಡುಗುಗಳೆಂದು ವಿಶ್ಲೇಷಿಸಿ ಅವುಗಳನ್ನು ಬದಲಾಯಿಸುವ ಮತಪ್ರಚಾರಕರ ಚಟುವಟಿಕೆಗಳು ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಗಳಾಗಿ ಪರ್ಯಾಪ್ತಗೊಂಡವು.[24] ವಾಸ್ತವವಾಗಿ ಮತಾಂತರಗೊಂಡ ಕೂಡಲೇ ದಿನವಹಿ ಸಂಬಳ ಕಾಳಜಿ ಮಾತ್ರ. ಮತಾಂತರಗೊಂಡವುಗಳು ಮತಪ್ರಚಾರಕರ 'ದ ಹೆವನ್ ಅನ್ ಅರ್ತ್' ಬಗ್ಗೆ ತಲೆಕೆಡಿಸಿಕೊಂಡಿರಲಿಲ್ಲ. ಸಾಮಾಜಿಕವಾಗಿ ಯಾವುದೇ ಮೇಲಿನ ಸ್ತರಗಳಿಗೆ ಭಡ್ತಿ ಹೊಂದಲಾಗಲಿಲ್ಲ. ವಸಾಹತುಶಾಹಿ ಮತ್ತು ಮತಪ್ರಚಾರಕರು ಪ್ರಾರಂಭಿಸಿದ ಕೈಗಾರಿಕೆಗಳು ಮತಪರಿವರ್ತನೆಗೊಂಡವರಿಗೆ ಪುನರ್‌ವಸತಿ ಕಲ್ಪಿಸುವ ಕೇಂದ್ರವಾಯಿತು. ಕೃಷಿ ಕೈಗಾರೀಕರಣದಿಂದಾಗಿ ಮತಪರಿವರ್ತನೆಗೊಂಡವರಿಗೆ ವಲಸೆಯ ಭಾಗ್ಯವನ್ನು ಕಲ್ಪಿಸಿತು. 1843ರಿಂದ 1867ರ ಅವಧಿಯಲ್ಲಿ ಪೆಪ್ಪರ್ ಪ್ಲಾಂಟೇಷನ್, ಟೀಕ್ ಪ್ಲಾಂಟೇಷನ್, ಕಾಫಿ, ಮೈನಿಂಗ್‌ಗಳಲ್ಲಿ ಧಾರ್ಮಿಕ ಮತಪರಿವರ್ತಿತರನ್ನು ಭರ್ತಿಮಾಡಲಾಗಿ, ಇವರೆಲ್ಲರೂ ರೆಸಿಡೆಂಟ್ ಕ್ಯಾಪ್ಟೀವ್ ಲೇಬರರ್ಸ್ ಆಗಿ ರೂಪಿತಗೊಡರು. ಈ ವಿಚಾರಗಳು ಬಾಸೆಲ್ ಮಿಷನರಿಗಳ ದಾಖಲೆಗಳಲ್ಲಿ ಪ್ರಾಧಾನ್ಯತೆ ಪಡೆದಿರುವುದನ್ನು ಕಾಣಬಹುದಾಗಿದೆ.

ಸಾಮಾಜಿಕ ಕಾರ್ಯಚಟುವಟಿಕೆ, ಉಪಯುಕ್ತತವಾದಿಗಳ ವಿಶ್ಲೇಷಣೆ ಹಾಗೂ ಯುರೋಪಿನ ಉದಾರವಾದ ವಸಾಹತನ್ನು ಪಶ್ಚಿಮದ ಮಾದರಿಗನುಗುಣವಾಗಿ ವ್ಯವಸ್ಥಿತಗೊಳಿಸಿತು. ವಸಾಹತಿನ ಪ್ರಭುತ್ವ ಹಾಗೂ ವಿಧೇಯತೆಯ ಪರಿಕಲ್ಪನೆಗಳು, ವಸಾಹತುಪೂರ್ವದ "ಧರ್ಮಾಧಾರಿತ ರಾಜಕೀಯ" ವಸಾಹತುಶಾಹಿಯ ದೃಢನಂಬಿಕೆ, ವಿಶ್ವಾಸ ಹಾಗೂ ಅಭಿವೃದ್ಧಿಯ ಆಯಾಮಗಳೊಂದಿಗೆ ತಳುಕು ಹಾಕಲ್ಪಟ್ಟು ವಿಮರ್ಶೆಗೊಳಗಾದವು. ಗ್ರಾಮೀಣ ಪ್ರದೇಶಗಳಲ್ಲಿ ವಸಾಹತುಶಾಹೀ ಆರಂಭಿಸಿದ ಆಧುನಿಕ ಶಾಲಾಶಿಕ್ಷಣದ ಕಾರ್ಯಯೋಜನೆಗಳು ವಸಾಹತುಶಾಹಿಯ ವಿಸ್ತರಣಾನೀತಿಯ ಪ್ರತಿನಿಧಿಯಾಗಿ ಹಾಗೂ ಸಾಮಾಜಿಕ ಪರಿವರ್ತನಾಕಾರರ ಕೇಂದ್ರವಾಗಿ ಮಾರ್ಪಟ್ಟವು. ತುಳುನಾಡಿನ ಜನರ ಮೂಢನಂಬಿಕೆ, ಸ್ವಧರ್ಮದ ನಿಷ್ಠೆ ಬದಲಾಯಿಸಿ ಕ್ರೈಸ್ತಧರ್ಮದಲ್ಲಿ ಆಸ್ಥೆ ಕುದುರಿಸುವುದಕ್ಕೆ ಪ್ರಥಮ ಸೋಪಾನವಾಗಿ ಪಾಶ್ಚಾತ್ಯ ಶಿಕ್ಷಣವನ್ನು ಹರಡಲಾಯಿತು. ಅವರ ಪ್ರಕಾರ ವಯಸ್ಕರ ಮನಸ್ಸಿನಿಂದ ನಂಬಿಕೆ ಬದಲಾಯಿಸುವುದು ಕಷ್ಟ. ಮಕ್ಕಳ ಮನಸ್ಸನ್ನು ಸುಲಭವಾಗಿ ಸೆಳೆದುಕೊಳ್ಳಲು ಬೈಬಲಿನ ನಿತ್ಯ ಪಠಣ, ಕ್ರೈಸ್ತ ತತ್ವಗಳನ್ನು ಒಳಗೊಂಡ ಪಠ್ಯಕ್ರಮಗಳನ್ನು ಅಳವಡಿಸಿಕೊಳ್ಳಲಾಯಿತು. ಜೊತೆಗೆ ಜಾತಿಯ ಶ್ರೇಣಿಕರಣ, ಸ್ಥಳೀಯ ಅಧಿಕಾರ ವಸಾಹತಿನಲ್ಲಿರುವ ವಿಭಿನ್ನ ಸಮುದಾಯಗಳ ಸ್ಥಿತಿಗತಿಯನ್ನು ಅಳೆಯುವ ಮಾನದಂಡಗಳಾಗಿ ಪರಿಗಣಿಸಲ್ಪಟ್ಟವು. ವಸಾಹತುಶಾಹಿಯ ಸಾಮಾಜಿಕ ಹಾಗೂ ರಾಜಕೀಯ ನೈತಿಕತೆ, ವಿಧೇಯತೆ, ಕರ್ತವ್ಯಪ್ರಜ್ಞೆ ವಸಾಹತಿನ ಜನಸಮುದಾಯಗಳ ಮಾದರಿಯೆಂದು ವಿವರಿಸಲ್ಪಟ್ಟು ನಾಗರೀಕತೆಯ ಮೂಲಾಂಶಗಳಾಗಿ ಸಂಕೇತಿಸಲ್ಪಟ್ಟವು. ಈ ಚಿಂತನೆಗಳಡಿಯಲ್ಲಿ ವಸಾಹತುಶಾಹಿಯ ಆಧೀನದಲ್ಲಿ ಕರ್ತವ್ಯ ನಿರತರಾದವರಿಗೆ 'ಸರಕಾರಿ ಸೇವೆ ದೇವರ ಕರ್ತವ್ಯವಾಗಿ' ವಿಧೇಯತೆಯನ್ನು ಪಾಲಿಸಲು ಹಲವು ಶಿಷ್ಟಾಚಾರಗಳು ಆಳವಡಿಕೆಯಾದವು.[25]

ವಸಾಹತುಪೂರ್ವದಲ್ಲಿದ್ದ ಧಾರ್ಮಿಕ ಶಿಷ್ಟಾಚಾರಗಳಂತೆ ಬಿರುದುಗಳ ನೀಡಿಕೆ, ಸನ್ಮಾನಪತ್ರಿಕೆಗಳನ್ನು ನೀಡುವುದು, ಕಚೇರಿ ಭೇಟಿ, ದರ್ಬಾರುಗಳನ್ನು ಏರ್ಪಡಿಸುವುದರ ಮೂಲಕ ಯಥಾರ್ಥ ಮತಧರ್ಮವನ್ನು ಆಯಾಯ ಅಧಿಕಾರದ ಸ್ತರ ಮಟ್ಟದಲ್ಲಿ ಜೀವಂತಿಕೆಯಲ್ಲಿಡುವ ಪ್ರಯತ್ನಗಳು ವಸಾಹತುಶಾಹಿಯ ಸಂದರ್ಭದಲ್ಲಿ ಗಟ್ಟಿಗೊಂಡವು. ಆಡಳಿತಾತ್ಮಕವಾಗಿ ಅಧಿಕಾರಿ ಮಟ್ಟದ ಪ್ರವಾಸ ಹಾಗೂ ಭೇಟಿಗಳು, ಹುಟ್ಟಿದ ಹಬ್ಬಗಳ ಆಚರಣೆ, ವರ್ಧಂತಿಗಳು, ಉತ್ಸವಗಳಂತಹ ಗಿಮಿಕುಗಳು ಆಳುವವರು ಮತ್ತು ಆಳಲ್ಪಡುವವರ ಮಧ್ಯೆ ಮಧುರ ಭಾವನೆಯನ್ನು ಒಂದೆಡೆ ವ್ಯವಸ್ಥಿತಗೊಳಿಸಿದ್ದಲ್ಲಿ ಇನ್ನೊಂದೆಡೆ ಕೆಳಹಂತದ ಅಧಿಕಾರಿಗಳ ವಿಧೇಯತೆಯನ್ನು ಪರೀಶೀಲನೆಗೆ ಒಳಪಡಿಸುವ ಮಾನದಂಡವಾಗಿ ಅಂಗೀಕೃತಗೊಂಡಿತು. ವಸಾಹತುಶಾಹಿ ನೆಲೆಯೂರುವ ಸಂದರ್ಭಗಳಲ್ಲಿ

ವಿಧೇಯತೆಗೆ ಸಂಬಂಧಿಸಿದ ಈ ನಿಲುವು ಪರಿಣಾಮಕಾರಿಯಾಗಿ ಕೆಲಸ ಮಾಡಿತು. ಸಹಯೋಗದ ರಾಷ್ಟ್ರೀಯವಾದ-ಸಾರ್ವಭೌಮತೆಯ ಅಡಿಯಲ್ಲಿ ಕರ್ತವ್ಯ ನಿರ್ವಹಿಸುವುದು ಗೌರವದ ಸಂಕೇತವಾಯಿತು. ತಾಯ್ನಾಡಿಗೆ ಸೇವೆ ಸಲ್ಲಿಸುವ ಅವಕಾಶದಿಂದ ರಾಷ್ಟ್ರಭಕ್ತಿಯನ್ನು ಅನಾವರಣ ಮಾಡಿದ ಸಂತೃಪ್ತಿ ಒಂದೆಡೆಯಾದರೆ ವಸಾಹತಿನಲ್ಲಿರುವವರ ಸೇವೆಯನ್ನು ಗುರುತಿಸಿ ಸನ್ಮಾನಿಸುವುದು, ಪುರಸ್ಕೃತಗೊಳಿಸುವುದು ಸೇವೆಗೆ ಸಂದ ಗೌರವವಾಗಿ ವಸಾಹತುಷಾಹಿಗೆ ಸಹಯೋಗದ ವಾಕ್ಸಂಪ್ರದಾಯವಾಗಿ ಪರಿಣಮಿಸಿತು. ಈ ಬೆಳವಣಿಗೆಗಳು ವಸಾಹತಿನ ಸಮಾಜದಲ್ಲಿ ಒಂದು ತೆರನಾದ ಕ್ರಾಂತಿಯ ಸ್ಥಿತಿಯನ್ನು ಸೃಷ್ಟಿಸಿದ್ದರಿಂದ ವಸಾಹತಿನ ಧರ್ಮ ಮತ್ತು ಧರ್ಮಾಚರಣೆಯ ಬಗ್ಗೆ ಸಂಬಂಧಿಸಿದಂತೆ ವಸಾಹತಿನ ಜನರಲ್ಲೇ ದಂದ್ವಗಳು ಪ್ರಾರಂಭಗೊಂಡವು. ಇದಕ್ಕೆ ಪೂರಕವಾಗಿ ತುಳುನಾಡಿನಲ್ಲಿ ಪಾಶ್ಚಿಮಾತ್ಯ ಮಾದರಿಯ ಶಿಕ್ಷಣಸಂಸ್ಥೆಗಳ ಹುಟ್ಟು ಪಾರಂಪರಿಕ ಕೌಶಲ್ಯ ಆಧಾರಿತ ಶಿಕ್ಷಣಕ್ಕೆ ಮರ್ಮಾಘಾತ ನೀಡುವಲ್ಲಿ ಯಶಸ್ವಿಯಾದವು.[26] ತನ್ಮೂಲಕ ವಸಾಹತುಶಾಹಿಯ ಸುಧಾರಣಾ ನಿಲುವುಗಳು ಮತ್ತು ಜ್ಞಾನ ಹರಡುವಿಕೆಯ ಧೋರಣೆಗಳು ವಸಾಹತುಶಾಹಿ ಅಧಿಕಾರ ಸ್ಥಿರಗೊಳಿಸುವ ಸಾಧನಗಳಾಗಿ ಮಾರ್ಪಟ್ಟವು ವಸಾಹತುಶಾಹಿ ಬರವಣಿಗೆಗಳು ಅವುಗಳನ್ನು ಅದೇ ದೃಷ್ಟಿಕೋನದಲ್ಲಿ ಸ್ವೀಕರಿಸಿದವು.

1784ರಲ್ಲಿ ವಾರನ್ ಹೇಸ್ಟಿಂಗ್ಸ ಕೋರ್ಟ್ ಆಫ್ ಡೈರೆಕ್ಟರ್ಸನ ನತಾನಿಯಲ್ ಸ್ಮಿತ್‌ಗೆ ಬರೆದ ಪತ್ರ-ಆಕ್ರಮಣದ ಮೂಲಕ ನಾವು ಪ್ರಾಬಲ್ಯ ಸ್ಥಾಪಿಸಿರುವ ಜನರೊಂದಿಗೆ ಸಾಮಾಜಿಕ ಸಂವಹನದಿಂದ ಗಳಿಸಿಕೊಳ್ಳುವ ಪ್ರತಿಜ್ಞಾನವು ಪ್ರಭುತ್ವಕ್ಕೆ ಪ್ರಯೋಜನಕಾರಿ. ಅದು ದೂರದ ಜನರ ವಿಶ್ವಾಸವನ್ನು ಆಕರ್ಷಿಸುತ್ತದೆ. ಅದು ದೇಶಿ ಜನರನ್ನು ಬಂಧಿಸಿರುವ ಸರಪಳಿಗಳ ತೂಕವನ್ನು ಕಡಿಮೆ ಮಾಡುತ್ತದೆ. ಅದು ದೇಶದ ಜನರ ಹೃದಯಗಳಲ್ಲಿ ಉದಾತ್ತತೆ ಮತ್ತು ಬದ್ಧತೆಯನ್ನು ಬೆಳೆಸುತ್ತದೆ. ಅವರ ನಿಜವಾದ ಗುಣಗಳನ್ನು ವೀಕ್ಷಣೆಗೆ ಒದಗಿಸುವ ಇದು ಅವರ ನೈಸರ್ಗಿಕ ಹಕ್ಕುಗಳ ಭಾವನೆಯನ್ನು ಅವರ ಬಗೆಗೆ ಉದಾರಿ ಕಲ್ಪನೆಗಳನ್ನು ಒದಗಿಸುತ್ತದೆ. ನಮ್ಮ ಮಾನದಂಡಗಳ ಮೂಲಕ ಅವರನ್ನು ಅಂದಾಜು ಮಾಡಲು ನೆರವಾಗುತ್ತದೆ. ಆದರೆ ಇಂತಹ ದೃಷ್ಟಾಂತಗಳು ನಮಗೆ ಸಿಗುವುದು ಅವರ ಬರಹಗಳಿಂದಲೇ. ಭಾರತದಲ್ಲಿ ದೀರ್ಘಕಾಲ ವಸಾಹತುಶಾಹಿಯ ಪ್ರಾಬಲ್ಯ ಕೊನೆಗೊಂಡ ನಂತರವೂ ಇವು ಇಲ್ಲಿ ಉಳಿದುಕೊಳ್ಳುತ್ತವೆ. ಸಂಪತ್ತು ಮತ್ತು ಅಧಿಕಾರ ಗಳಿಸಿಕೊಳ್ಳಲು ನೆರವಾಗುವ ಮೂಲಗಳ ನೆನಪಾಗಿ ಉಳಿಯುತ್ತದೆ. ಯುರೋಪಿನ ವಿಚಾರಧಾರೆಗಳನ್ನು ಆಂಗ್ಲ ಮಾಧ್ಯಮದ ಮೂಲಕ ಕಲಿಯುವುದು ಮತ್ತು ಅದನ್ನು ಸಾಮಾನ್ಯರು ಅಂಗೀಕರಿಸುವಂತೆ ಮಾಡುವುದಾಗಿತ್ತು. ಪಶ್ಚಿಮದ ಮಾದರಿಯ ಆರ್ಥಿಕ, ಕೈಗಾರಿಕಾ ಬೆಳವಣಿಗೆಗೆ

ಅನುಕೂಲವಾಗುವಂತಹ ಆಧುನಿಕತೆಯನ್ನು ಪರಿಚಯಿಸಿ ಪೂರ್ವದ ಮೌಲ್ಯಗಳಿಗೆ ತಿಲಾಂಜಲಿ ನೀಡುವುದಾಗಿತ್ತು.

ಆಧುನಿಕ ವಿದ್ಯಾಭ್ಯಾಸ ಸಾಮಾಜಿಕವಾಗಿ ಅರ್ಥಪೂರ್ಣವಾಗದೇ ಸಹಯೋಗಗೊಂಡ ಮೇಲ್ವರ್ಗ, ವಸಾಹತುಶಾಹಿಯ ಸಾಮಾಜಿಕ ಪರಿವರ್ತನೆಗೆ ಒಳಪಟ್ಟ ಜನರಿಗೆ ಮಾತ್ರ ಸೀಮಿತಗೊಂಡು ಸಾಮಾಜಿಕ ಭಿನ್ನತೆಗೆ ಅವಕಾಶ ಮಾಡಿಕೊಟ್ಟಿತು. ಅಧುನಿಕ ವಿದ್ಯಾಭ್ಯಾಸ ಪಡೆದ ತುಳುವ ಇಲ್ಲಿನ ಮೌಲ್ಯಗಳಿಗೆ ಭಿನ್ನವಾಗಿ ಸ್ಪಂದಿಸಿದಲ್ಲದೇ ಪಶ್ಚಿಮದ ಅನನ್ಯತೆಯಲ್ಲಿ ತನ್ನನ್ನು ತಾನು ಕಂಡುಕೊಳ್ಳಲು ಪ್ರಯತ್ನಿಸಿದನು. ಆಂಗ್ಲ ವಿದ್ಯಾಭ್ಯಾಸ, ಮಹಿಳೆಯರ ಸಬಲೀಕರಣ, ಜಾತಿನಿರ್ಮೂಲನೆ ಮುಂತಾದವುಗಳು ಮತಪ್ರಚಾರಕರ ಮತ್ತು ವಸಾಹತುಶಾಹಿ ಆಡಳಿತಗಳ ಕೇಂದ್ರ ವಿಚಾರಗಳಾಗಿ ಮಾರ್ಪಟ್ಟವು.[27] ಇದಕ್ಕೆ ಪೂರಕವಾಗಿ ಭೌಗೋಳಿಕ ಸರ್ವೇಕ್ಷಣೆ, ಆರ್ಥಿಕ ಸರ್ವೇಕ್ಷಣೆ, ಜನಗಣತಿ, ಸಾಮಾಜಿಕ ಅಧ್ಯಯನ ಮುಂತಾದವುಗಳು ಅಂಗ್ಲ ಭಾಷೆಯಲ್ಲಿ ಮಾಡಲ್ಪಟ್ಟವಲ್ಲದೇ ತುಳುನಾಡನ್ನು ನೈಜ್ಯ ತುಳುನಾಡನ್ನಾಗಿ ಸೃಷ್ಟಿಸದೇ ವಸಾಹತು ತುಳುನಾಡನ್ನಾಗಿ ಸೃಷ್ಟಿಸುವುದರೊಂದಿಗೆ ಸಾಮಾಜಿಕ ಪರಿವರ್ತನೆಯ ನಿಟ್ಟಿನಲ್ಲಿ ವಸಾಹತುಶಾಹೀ ಅಭಿವೃದ್ದಿ ಮತ್ತು ಅಧುನಿಕತೆಗಳನ್ನು ಸಮ್ಮಿಳಿತಗೊಳಿಸಿತು.[28] ಹೀಗೆ ಸಾಮಾನ್ಯಶಕೆ ಹತ್ತೊಂಬತ್ತನೇ ಶತಮಾನದ ವಸಾಹತುಶಾಹಿ ನೀತಿ ವಸಾಹತನ್ನು ತನ್ನ ದೃಷ್ಟಿಕೋನದೆಡೆಗೆ ತರುವ ಹಾಗೂ ತನ್ನ ಭವಿಷ್ಯದ ಕಾರ್ಯಕ್ಷೇತ್ರವನ್ನಾಗಿಸುವ ಉದ್ದೇಶಕ್ಕನುಗುಣವಾಗಿ ರೂಪಿಸಲ್ಪಟ್ಟಿತ್ತು. ಈ ಸಂದರ್ಭದಲ್ಲಿ ಆರಂಭಗೊಂಡ ಕಾರ್ನವಾಲೀಸನ ಆಡಳಿತ ವಸಾಹತುಶಾಹಿಯ ಅಭಿವೃದ್ಧಿ ಯೋಜನೆಗಳ ಹರಿಕಾರವೆಂಬಂತೆ ಬಿಂಬಿಸಲ್ಪಟ್ಟಿತ್ತು.[29] ಆಸ್ತಿವಂತ ಜಮೀನುದಾರರ ಸಹಯೋಗ ಸ್ಥಿರತೆ ಒದಗಿಸುವಲ್ಲಿ ವಸಾಹತುಶಾಹಿಯ ಕಂದಾಯ ನೀತಿಯಾದ ಖಾಯಂ ಗುತ್ತಾ ಪದ್ಧತಿ ಪ್ರಮುಖ ಪಾತ್ರವಹಿಸಿದೆ. 'ಇನ್‌ಡೆಸ್‌ಪೆನ್‌ಸಬ್‌ಲಿ ನೆಸಸರಿ ನಾಟ್ ಒನ್ಲಿ ಟು ರೆಸ್ಟೋರ್ ದಿಸ್ ಕಂಟ್ರಿ ಟು ಎ ಸ್ಟೇಟ್ ಒಫ್ ಪ್ರಾಸ್ಪರಿಟಿ, ಬಟ್ ಟು ಎನೆಬಲ್ ಇಟ್ ಟು ಕಂಟಿನ್ಯೂ ಟು ಬಿ ಎ ಸೊಲಿಡ್ ಸಪೋರ್ಟ್ ಟು ದ ಬ್ರಿಟಿಷ್ ಇಂಟ್ರೆಸ್ಟ್ಸ್ ಅಂಡ್ ಪವರ್ ಇನ್ ದಿಸ್ ಪಾರ್ಟ್ ಒಫ್ ದ ವರ್ಲ್ಡ್.' ವಸಾಹತುಶಾಹಿಯ ಅಭಿವೃದ್ಧಿಯ ಕಲ್ಪನೆಯಲ್ಲಿ ವಸಾಹತಿನ ಗುಲಾಮಗಿರಿಯನ್ನು ತಡೆಯುವ ನಿಟ್ಟಿನಲ್ಲಿ ತೋರಿಕೆಯ ಆಜ್ಞೆಗಳು ಬಹಳಷ್ಟು ಜಾರಿಗೆ ಬಂದವು. ಆದರೆ ಅವುಗಳ ಉದ್ದೇಶ ಮತಪ್ರಚಾರಕರ ಸಾಮಾಜಿಕ ಪರಿವರ್ತನೆಯ ಗುರಿ ತಲುಪುವ ಮಾರ್ಗವನ್ನು ಸರಳೀಕರಣಗೊಳಿಸುವುದೇ ಆಗಿತ್ತು.

1818ರಲ್ಲಿ ಮದ್ರಾಸ್ ಕಂದಾಯ ಇಲಾಖೆ, ಕರಾವಳಿ ಪ್ರದೇಶದ ಕೃಷಿ ಕೂಲಿ ಕಾರ್ಮಿಕರು ಮತ್ತು ಗುಲಾಮರಾಗಿ ಸೇವೆಯಲ್ಲಿದ್ದವರ ಸ್ಥಿತಿಗತಿಗಳಲ್ಲಿ ಬದಲಾವಣೆ ತರಲು

ಹೊಸ ಚರ್ಚೆಯನ್ನು ಆರಂಭಿಸಿ ಈ ಸಾಮಾಜಿಕ ಪಿಡುಗನ್ನು ನಿರ್ಮೂಲನಗೊಳಿಸಲು ಕಾನೂನಿನ ಪ್ರಕಾರ ಸಾಧ್ಯವೇ ಎಂಬುವುದನ್ನು ಗಂಭೀರವಾಗಿ ಪರಿಗಣಿಸಿತು. ಈ ನಿಟ್ಟಿನಲ್ಲಿ ಹಲವು ವಸಾಹತುಶಾಹಿ ಆಡಳಿತಾಧಿಕಾರಿಗಳು ಆಸಕ್ತಿಯನ್ನು ತೋರಿಸಿದರೂ, ಮೇಲಾಧಿಕಾರಿಗಳು ಅವರ ಸಲಹೆ ಸೂಚನೆಗಳನ್ನು ಕಾರ್ಯರೂಪಕ್ಕೆ ತರಲು ಯಾವುದೇ ಆಸಕ್ತಿಯನ್ನು ತೋರಿಸಲಿಲ್ಲ.[30] ಇಂಗ್ಲೆಂಡಿನಲ್ಲಿರುವ ಬ್ರಿಟಿಷ್ ಆಡಳಿತ ಭಾರತದಲ್ಲಿರುವ ಈ ಸಾಮಾಜಿಕ ಸಮಸ್ಯೆಯನ್ನು ಸುಧಾರಿಸಲು ಕೈಗೆತ್ತಿಕೊಂಡ ಕಾರಣ ಭಾರತದಲ್ಲಿ ಬ್ರಿಟಿಷ್ ಆಡಳಿತ ಒಂದಷ್ಟು ಪ್ರಯತ್ನ ಮಾಡಿತು. 1833ರ ಕಾಯಿದೆಯಲ್ಲಿ ಈ ವಿಷಯ ಪ್ರಸ್ತಾಪಗೊಂಡು ಬೋರ್ಡ್ ಕಂಟ್ರೋಲ್‌ನ ಅಧ್ಯಕ್ಷ ಚಾರ್ಲ್ಸ್ ಗ್ರಾಂಟ್ ಮತ್ತು ಕಾರ್ಯದರ್ಶಿ ಥೋಮಸ್ ಬ್ಯಾಬಿಂಗ್ಟನ್ ಮೆಕಾಲೆ ಚಾರ್ಟರ್ ಬಿಲ್‌ನಲ್ಲಿ ಗುಲಾಮ ಪದ್ಧತಿಯನ್ನು ನಿರ್ಮೂಲನೆ ಮಾಡಲು ಪ್ರಯತ್ನ ಮಾಡಲಾಗಿ ಕ್ರಮ ಕೈಗೊಳ್ಳುವಂತೆ ಸ್ಥಳೀಯ ಸರಕಾರಗಳಿಗೆ ಆದೇಶ ಹೊರಡಿಸಿದರು.[31] ವಸಾಹತಿನಲ್ಲಿ ಜಾರಿಗೆ ತರಲಾದ ಕಾನೂನುಗಳು ವಸಾಹತುಪೂರ್ವದ ಕೃಷಿ ಅಧಿಕಾರದ ರಚನೆಯಲ್ಲಿ ಜೀತದಾಳುಗಳಾಗಿದ್ದವರನ್ನು ಒಳಗೊಂಡಂತೆ ಬಲವಂತದ ಶ್ರಮಿಕರನ್ನು ಇಲ್ಲಿನ ಕೃಷಿ ಕ್ಷೇತ್ರದಿಂದ ಬೇರ್ಪಡಿಸುವ ಪ್ರಯತ್ನವನ್ನು ಮಾಡಿತ್ತಾದರೂ ಅದು ಫಲಪ್ರದಾಯಕವಾಗಿರಲಿಲ್ಲ.[32] ಕೆನರಾದ ಕಲೆಕ್ಟರ್ ರವೆನ್‌ಷಾನ ಪ್ರಕಾರ ಗುಲಾಮಗಿರಿಯ ಬಗ್ಗೆ, ಅದರ ಕುಂದುಕೊರತೆಗಳ ಬಗ್ಗೆ ಅರಿವು ಮೂಡಿಸಿದ್ದಲ್ಲಿ ಹಾಗೂ ತಮ್ಮ ಮಾಲೀಕರ ಕಪಿಮುಷ್ಠಿಯಿಂದ ತಾವೇ ಬಿಡಿಸಿಕೊಂಡು ಓಡಿಹೋಗಲು ಬ್ರಿಟಿಷ್ ಸರಕಾರ ಪ್ರೋತ್ಸಾಹ ನೀಡಿದ್ದಲ್ಲಿ ಅದು ತುಳುನಾಡಿನ ಉದ್ದಗಲಕ್ಕೂ ಆಸ್ತಿತ್ವದಲ್ಲಿದ್ದಂತಹ ಸಾಂಪ್ರದಾಯಿಕ ವ್ಯವಸ್ಥೆಗೆ ತೊಂದರೆಯಾಗುತ್ತದೆ. ಅಲ್ಲದೇ ಈ ರೀತಿಯ ಪ್ರಯತ್ನಗಳಿಂದ ಅವರಿಗೆ ಹರಿದು ಬರುತ್ತಿದ್ದ ಕಂದಾಯಕ್ಕೂ ಸಂಚಕಾರ ಬರಬಹುದು. ಹೆಚ್ಚಾಗಿ ಅದೇ ಮಾಲೀಕರು ಬ್ರಿಟಿಷ್ ಸರಕಾರಕ್ಕೆ ಕಂದಾಯ ನೀಡುವವರಾಗಿರುವುದರಿಂದ ಅವರು ಅನುಸರಿಸುತ್ತಿದ್ದ ಸಂಪ್ರದಾಯದಲ್ಲಿ ಹಸ್ತಕ್ಷೇಪ ನಡೆಸುವಲ್ಲಿ ಹಿಂದೇಟು ಹಾಕಿದರು. ಕಾರಣ ವಿಧೇಯರಿರುವ ಮಾಲೀಕರನ್ನು ಕೆರಳಿಸುವುದು ಲಾಭದ ದೃಷ್ಟಿಯಲ್ಲಿ ಸರಿಯಲ್ಲ. ಮುಂದೊಂದು ಬಾರಿ ಮತಪ್ರಚಾರಕರ ಸಾಮಾಜಿಕ ಪರಿವರ್ತನೆ ಹಾಗೂ ವಸಾಹತಿನ ಸಾಮಾಜಿಕ ಸುಧಾರಣೆಯ ನೆಪದಲ್ಲಿ ಕೆಳವರ್ಗದವರನ್ನು ಅದರಲ್ಲೂ ಮುಖ್ಯವಾಗಿ ಕೃಷಿ ಕಾರ್ಮಿಕರನ್ನು ಸಾಮಾಜಿಕವಾಗಿ ಪರಿವರ್ತಿಸಲು ಪ್ರಯತ್ನ ಮಾಡಿತು.[33] 1830ರ ಆಸುಪಾಸಿನಲ್ಲಿ ಕೃಷಿಯ ಹಿನ್ನಡೆಯಿಂದಾಗಿ ಚಾಲಗೇಣಿದಾರರು ಪರ್ಯಾಯ ಉದ್ಯೋಗ ಅರಸಿಕೊಂಡು ವಲಸೆ ಹೋದ ಪ್ರಸಂಗಗಳು ಇವೆ. ಮಾತ್ರವಲ್ಲ ಸಾಮಾಜಿಕವಾಗಿ ಪರಿವರ್ತನೆ ಹೊಂದಿದವರನ್ನು ಪ್ರತಿಬಂಧಿಸಿ ಯುರೋಪಿಯನ್ನರ ಹತ್ತಿ,

ಕಾಫಿ, ಚಹಾ, ಇಂಡಿಗೋ ತೋಟಗಳಿಗೆ ಹಮಾಲಿಗಳಾಗಿ ನೇಮಕಗೊಳಿಸಿದ ಪ್ರಸಂಗಗಳಿವೆ. ತುಳುನಾಡಿನಿಂದ ವಲಸೆ ಹೊರಟವರು ದೇಶದ ಬೇರೆ ಬೇರೆ ಭಾಗಗಳಿಗೆ ವಸಾಹತುಶಾಹಿಯ ಸರಕಾರಿ ಸೇವಕರಾಗಿ ಇಲ್ಲವೇ ಪ್ಲಾಂಟರುಗಳ ಕಾಫಿ, ಹಂಚು ಕಾರ್ಖಾನೆಗಳಿಗೆ ಇಲ್ಲವೇರಸ್ತೆಗಳ ನವೀಕರಣ ಮುಂತಾದ ಕೆಲಸಗಳಿಗೆ ವಲಸೆ ಹೋಗಬೇಕಾಯಿತು. ಪ್ರಸ್ತುತ ಸಕಲೇಶಪುರ, ಸೋಮವಾರಪೇಟೆ, ಕೊಡ್ಲಿಪೇಟೆ, ಕೊಡಗು, ಚಿಕ್ಕಮಗಳೂರು, ವಯನಾಡ್ ಮುಂತಾದ ಪ್ರದೇಶಗಳಲ್ಲಿ ವಾಸ್ತವ್ಯ ಕಂಡುಕೊಂಡಿದ್ದಾರೆ. ಈ ಬಗ್ಗೆ ಶಿವರಾಮ ಕಾರಂತರ ಚೋಮನ ದುಡಿಯಲ್ಲಿ ಮಹತ್ವದ ಚಿತ್ರಣವಿದೆ. ಘಟ್ಟಕ್ಕೆ ಹೋಗುವುದು ರೂಢಿಯಲ್ಲಿದ್ದ ಪದ.

ತುಳುನಾಡಿನ ಸಂದರ್ಭದಲ್ಲಿ ವಸಾಹತುಶಾಹಿಯ ನೌಕರಶಾಹಿಗಳು ಕಾಯಿದೆಗಳನ್ನು ಜಾರಿಗೆ ತಂದು ಆಜ್ಞೆಗಳ ಮೂಲಕ ವಸಾಹತಿನ ಮೇಲೆ ಅಧಿಕಾರ ಚಲಾಯಿಸಿದರು.[34] ಹೀಗೆ ಆಜ್ಞೆ ವಸಾಹತಿನಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ನಿರಾಕರಿಸಿ, ಅವರ ಹಕ್ಕುಗಳನ್ನು ಪ್ರತಿಬಂಧಿಸಿತು. ಒಟ್ಟಿನಲ್ಲಿ ಹೇಳುವುದಾದರೆ ಒತ್ತಡ, ಬಲಪ್ರಯೋಗ, ಆಜ್ಞೆ ಮುಂತಾದವುಗಳು ಅಧಿಕಾರ ಸಂಬಂಧಗಳ ಮೇಲೆ ಪ್ರಭುತ್ವ ಸಾಧಿಸಿ ಅದು ಕಾರ್ಯರೂಪಕ್ಕೆ ಬರುವಲ್ಲಿ ಸ್ಥಳೀಯ ಮಟ್ಟದ ಸಹಯೋಗವನ್ನು ಆಮಿಷದ ಮೂಲಕ ವಿನ್ಯಾಸಗೊಳಿಸಿ ತನ್ನ ಸ್ಥಿತಿಯನ್ನು ಭದ್ರಪಡಿಸಿಕೊಂಡಿತು. ಜೊತೆಗೆ ವಸಾಹತಿನಲ್ಲಿ ಮೇಲಾಟ ಮತ್ತು ಪ್ರತಿನಿಧಿಕರಣ ಸಹಯೋಗಗೊಂಡು ವಸಾಹತುಶಾಹಿಯ ರಾಜಕೀಯ ನಡೆ ಯಾವುದೇ ಪ್ರತಿರೋಧಗಳಿರದೇ ಮುಂದುವರೆಯಲು ಅನುವು ಮಾಡಿಕೊಟ್ಟಿತು.

ವಸಾಹತುಶಾಹಿಯ ಪ್ರಭಾವದಿಂದಾಗಿ ಆಧುನಿಕತೆಯ ಬಾಗಿಲಿಗೆ ಬಂದ ವಸಾಹತಿನ ಸಮುದಾಯಗಳು ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನ ಪಡುತ್ತಿದ್ದ ಸಂದರ್ಭವಾಗಿತ್ತಾದುದರಿಂದ ವಿವಿಧ ಜಾತಿ, ಪಂಗಡ ಮತ್ತು ಸಮುದಾಯಗಳು ಆಧುನಿಕತೆಯ ಫಲವನ್ನು ಪಡೆಯುವ ತವಕದಲ್ಲಿದ್ದವು. ಆದರೆ ಈ ಮೇಲಾಟ ಇದು ಇನ್ನೊಂದೆಡೆಯಲ್ಲಿ ಆಧುನಿಕತೆಗೆ ಕಾರಣವಾದ ವಸಾಹತುಶಾಹಿಯನ್ನು ವಿಭಿನ್ನ ನೆಲೆಯಲ್ಲಿ ಬಲಗೊಳಿಸುವ ಪ್ರಯತ್ನಗಳಾಗಿ ಮಾರ್ಪಟ್ಟವು. ಇವುಗಳ ಜೊತೆಗೆ ಇತಿಹಾಸದ ಬರವಣಿಗೆಯೆಡೆಗೆ ಗಮನಹರಿಸಿದ ವಸಾಹತುಶಾಹೀ ವಸಾಹತನ್ನು ಹೀಯಾಳಿಸಲು ಮತ್ತು ತಮ್ಮ ಇರುವಿಕೆಯನ್ನು ಸಮರ್ಥಿಸಿಕೊಳ್ಳಲು ಅನುಕೂಲವಾಗುವ ಆಕರಗಳನ್ನು ಸಿದ್ಧಪಡಿಸಿಕೊಂಡಿತು. ಈ ಸುದೀರ್ಘ ಯೋಜನೆಯ ಭಾಗವಾಗಿ ವಸಾಹತುಶಾಹಿ ಆಡಳಿತಗಾರರು, ಪಾಶ್ಚಾತ್ಯ ವಿದ್ವಾಂಸರು, ಮತಪ್ರಚಾರಕರು ಮತ್ತು ಪ್ರವಾಸೀ ಬರಹಗಾರರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಮಾಡಿದ ಅಧ್ಯಯನಗಳು, ಧರ್ಮಪ್ರಚಾರ ಹಾಗೂ

ಸಾಮಾಜಿಕ ಪರಿವರ್ತನೆಯ ಕಾರ್ಯ ಹೊಸ ವಾರಸುದಾರಿಕೆಯ ಚಿಂತನೆಗಳನ್ನು ಹುಟ್ಟುಹಾಕಿದವು. ಸಾಮಾನ್ಯಶಕೆ ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ವಸಾಹತು ಆಡಳಿತದ ತನಿಖಾತ್ಮಕ ಕಾರ್ಯನಿರ್ವಹಣ ಪದ್ಧತಿಯು ವಸಾಹತು ಮತ್ತು ಅದರ ಜನರ ವಿಷಯೀಕರಣಕ್ಕೆ ಎಡೆ ಮಾಡಿಕೊಟ್ಟಿತು. ಇದರಿಂದಾಗಿ ವಸಾಹತುಪೂರ್ವದ ವಾರಸಾ ಅಧಿಕಾರಗಳು ಮರೆಯಾಗಿ ಹೊಸ ವ್ಯವಸ್ಥೆಯೊಂದು ನಿಧಾನವಾಗಿ ತುಳುನಾಡಿನಲ್ಲಿ ಕಾಣಿಸಿಕೊಂಡಿತು. ಈ ಹಂತದಲ್ಲಿ 'ಆಧುನಿಕ ಮತ್ತು ಸಾಂಪ್ರದಾಯಿಕ'ಗಳ ನಡುವೆ ಮೇಲಾಟಗಳು ಆರಂಭಗೊಂಡವಾದರೂ ಪಾಶ್ಚಾತ್ಯರ ಕಾರ್ಯಯೋಜನೆಗಳ ಮುಂದೆ 'ದೇಶಿಯ' ಚಿಂತನೆಗಳು ಕರಗಬೇಕಾಯಿತು.

## ನ್ಯಾಯಾಂಗ-ವಸಾಹತುಶಾಹಿ

ವಸಾಹತುಪೂರ್ವದ ಪಾರಂಪರಿಕ ನ್ಯಾಯ ದಂಡದೊಂದಿಗೆ ಗುರುತಿಸಿಕೊಂಡಿದ್ದರಿಂದ ಹಾಗೂ ನ್ಯಾಯಾಂಗ ವ್ಯವಸ್ಥೆಯ ಉಪಕ್ರಮಗಳು ಅಸ್ಪಷ್ಟವಾಗಿದ್ದರಿಂದ ಪಾರಂಪರಿಕ ನ್ಯಾಯಾಂಗ ವ್ಯವಸ್ಥೆಯನ್ನು ಮರುವಿಮರ್ಶೆಗೆ ಒಳಪಡಿಸಲಾಯಿತು. ವಸಾಹತುಪೂರ್ವದಲ್ಲಿ ತುಳುನಾಡಿನ ಸಾಮಂತ ಅರಸರು ಪಾರಂಪರಿಕ ನ್ಯಾಯಾಂಗ ಮತ್ತು ಪೋಲಿಸ್ ವ್ಯವಸ್ಥೆಯನ್ನು ಆ ಕಾಲಕ್ಕೆ ಮತ್ತು ಸಂದರ್ಭಕ್ಕೆ ಅನುಕೂಲವಾಗುವಂತೆ ರೂಪಿಸಿದ್ದರು. ಇಲ್ಲಿನ ಸಾಮಾಜಿಕ ವ್ಯವಸ್ಥೆಯನ್ನು ಧಾರ್ಮಿಕ ಕಟ್ಟುಕಟ್ಟಳೆಗಳ ಆಧಾರದಲ್ಲಿ ರೂಪಿಸಿ ಬಲಪ್ರಯೋಗಕ್ಕೆ ಎಡೆಯಿಲ್ಲದೇ ಅಥವಾ ಉದ್ವೇಗ-ಗೊಂದಲಗಳಿಗೆ ಅವಕಾಶ ನೀಡದೇ ಆಡಳಿತ ನಡೆಸುವಲ್ಲಿ ಯಶಸ್ವಿಯಾಗಿದ್ದರು. ಆಯಾಯ ಪ್ರದೇಶಗಳ ಆಡಳಿತಾತ್ಮಕ ಘಟಕಗಳಿಗೆ ಅನುಗುಣವಾಗಿ ಅವುಗಳದೇ ಆದ ಪರಂಪರಾಗತ ಕ್ರಮಗಳು ವಸಾಹತುಶಾಹಿ ಕಾನೂನುಗಳಂತೆ ಹಲವು ಶತಮಾನಗಳಿಂದ ಕಾರ್ಯನಿರ್ವಹಿಸುತ್ತಿದ್ದವು. ಸ್ಥಳೀಯ ಭಿನ್ನತೆ, ಗೊಂದಲ ಹಾಗೂ ವಾದವಿವಾದಗಳಿಗೆ ಸ್ಥಳೀಯ ಆಸೆಂಬ್ಲಿಗಳು ಅಥವಾ ವ್ಯಾಪಾರಿ ಸಂಘಟನೆಗಳು ಮಧ್ಯವರ್ತಿಗಳ ರೂಪದಲ್ಲಿ ಅವುಗಳನ್ನು ಪರಾಮರ್ಶಿಸಿ ತೀರ್ಪುಗಳನ್ನು ನೀಡುತ್ತಿದ್ದವು. ಸನಾತನಧರ್ಮ, ಕಟ್ಟುಕಟ್ಟಳೆಗಳು ಸಮುದಾಯಗಳ ವೃತ್ತಿ ಹಾಗೂ ಸಂಪ್ರದಾಯಗಳಿಗೆ ಅನುಗುಣವಾಗಿ ಪೂರ್ವದ ಮರ್ಯಾದೆಯಂತೆಯೇ ಪಾರಂಪರಿಕ ನ್ಯಾಯಾಂಗ ಕಾರ್ಯನಿರ್ವಹಿಸುತ್ತಿತ್ತು. ಕುಟುಂಬದ ಮುಖ್ಯಸ್ಥರು, ಜಾತಿಸಮುದಾಯಗಳ ಪ್ರಮುಖರು, ಹಳ್ಳಿಯ ಯಜಮಾನರು, ಊರ ಹಿರಿಯರು, ಪಂಚಾಯತು, ದೈವಸ್ಥಾನದ ಪ್ರಮುಖರು, ದೇವಸ್ಥಾನದ ಪ್ರಭಾವಿಗಳು, ಪುರೋಹಿತರು, ದರ್ಶನಪಾತ್ರಿಗಳು, ವ್ಯಾಪಾರಿ ಸಂಘಟನೆಗಳ ಮಹಾಜನರು, ಕಂದಾಯದ ಅಧಿಕಾರಿಗಳನ್ನು ಒಳಗೊಂಡ ಪಾರಂಪರಿಕ ಆಡಳಿತದ ಸ್ತರಗಳಿಗನುಗುಣವಾಗಿ ನ್ಯಾಯ ತೀರ್ಮಾನಗಳಾಗುತ್ತಿದ್ದವು. ವಿಜಯನಗರ

ಕಾಲದಲ್ಲಿ ಅಧಿಕಾರಿಗಳು ನಾಡುಗಳಲ್ಲಿ, ಹೆಗ್ಗಡೆಯರು ಸ್ಥಳೀಯ ಮಟ್ಟದಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ನಿರ್ವಹಿಸಬೇಕಿತ್ತು. ನಗರ ಪ್ರದೇಶಗಳು ವ್ಯಾವಹಾರಿಕ ದೃಷ್ಟಿಯಿಂದ ಪ್ರಾಮುಖ್ಯವಾದ ಕಾರಣ ಕೊತ್ವಾಲರು ಶಾಂತಿ ಸುವ್ಯವಸ್ಥೆಗಳನ್ನು ಕಾಪಾಡುತ್ತಿದ್ದರು.[35] ಮೈಸೂರಿನ ಆಡಳಿತದ ಅವಧಿಯಲ್ಲಿ ಸ್ಥಳೀಯ ಸಾಮಂತರು ಅಧಿಕಾರ ವಂಚಿತರಾದರೂ ಪರಂಪರಾಗತ ನ್ಯಾಯವ್ಯವಸ್ಥೆ ತೊಂದರೆಗೆ ಒಳಗಾಗಲಿಲ್ಲ. ಪಂಚಾಯತದ ನಿರ್ದೇಶನದೊಂದಿಗೆ ಸ್ಥಳೀಯ ಮಟ್ಟದಲ್ಲಿ ಪಟೇಲರು, ನಗರ ಪ್ರದೇಶಗಳಲ್ಲಿ ಆಸಫ್‌ಗಳು, ಅಮೀಲರು, ಪೌಜುದಾರರು ಮುಂತಾದವರು ನ್ಯಾಯವ್ಯವಸ್ಥೆಯ ಮೇಲೆ ನಿಗಾವಹಿಸಿದ್ದರು.[36]

ತುಳುನಾಡು ಮದ್ರಾಸ್ ಪ್ರೆಸಿಡೆನ್ಸಿಯ ಆಳ್ವಿಕೆಗೆ ಒಳಪಟ್ಟ ತರುವಾಯ ವಸಾಹತುಶಾಹಿ ಆಡಳಿತದ ಆರಂಭ ದಂಡದ ಮೂಲಕವಾಯಿತಾದರೂ ಅದು ಸಾರ್ವಕಾಲಿಕವಾಗಿರಲಿಲ್ಲ. ಬದಲಿಗೆ ಹೆಚ್ಚು ಕಾನೂನುಬದ್ಧವೆನಿಸಿಕೊಂಡ ಮಾರ್ಗಗಳು ಅನ್ವೇಷಣೆಗೊಂಡವು. ಆಧುನಿಕ ನ್ಯಾಯಾಂಗ ವ್ಯವಸ್ಥೆ ವಸಾಹತಿನ ಮೇಲೆ ಅಧಿಕಾರದ ಹೇರುವಿಕೆಯ ಪ್ರಕ್ರಿಯೆ ಈ ಪ್ರಯತ್ನಗಳಲ್ಲಿ ಒಂದಾಗಿದ್ದು ದಂಡದ ಕಾರ್ಯಾಚರಣೆ ನ್ಯಾಯಬದ್ಧಗೊಳಿಸಲ್ಪಟ್ಟಿತ್ತು. 1802ರಲ್ಲಿ ಕಾರ್ನವಾಲೀಸನ ನ್ಯಾಯಾಂಗ ವ್ಯವಸ್ಥೆಯ ಸಮರ್ಥನೆ ಮತ್ತು ವಸಾಹತಿನ ನಿರ್ವಹಣೆಯಲ್ಲಿ ಅದು ನಿರ್ವಹಿಸಬೇಕಾದ ಪಾತ್ರದ ಬಗೆಗಿನ ಪ್ರತಿಪಾದನೆ ವಸಾಹತುಶಾಹಿ ನೀತಿಯಾಗಿ ಊರ್ಜಿತಗೊಂಡಿತು.[37] ಆಧುನಿಕ ಕಾನೂನು ಪದ್ಧತಿಯ ಪರಿಚಯಿಸುವಿಕೆ ತಿರುವಿನ ಕಾಲಘಟ್ಟ. ಹೊಸ ಅವಿಷ್ಕಾರಗಳು ಪ್ರಯೋಗಿಸಲ್ಪಟ್ಟಿತ್ತಲ್ಲದೇ ಮೂರು ಮುಖ್ಯ ವಿಚಾರಗಳು ಮುಂಚೂಣಿಗೆ ಬಂದವು. ಅವುಗಳಲ್ಲಿ ಸಾರ್ವತ್ರಿಕತೆ, ವೈಚಾರಿಕತೆ ಮತ್ತು ವ್ಯಕ್ತಿವಾದ ಮುಖ್ಯವಾದವುಗಳು. ಹೀಗೆ ಶಾಸನ ರಚನೆ ಆಧುನಿಕವಾದದ ಸಾಧನವಾಗಿ ಕಾರ್ಯಗತಗೊಂಡಿತು. ವಸಾಹತುಶಾಹಿಯ ಕಾನೂನು ಕೇಂದ್ರಗಳು ಪ್ರತಿ ಜಿಲ್ಲೆಗಳಲ್ಲಿ ಅಸ್ತಿತ್ವಕ್ಕೆ ಬರುವುದರೊಂದಿಗೆ ತುಳುನಾಡಿನ ಸಾಮಾಜಿಕ ರೂಢಿ ಪಶ್ಚಿಮದ ಸಂಸ್ಕೃತಿಯ ವಿಚಾರಧಾರೆಗಳು ಮುಖ್ಯಗೊಂಡು ವಸಾಹತಿನ ಸಾಂಪ್ರದಾಯಿಕ ನ್ಯಾಯವ್ಯವಸ್ಥೆಯ ಸಂಪ್ರದಾಯಗಳು, ಸಾಂಪ್ರದಾಯಿಕ ಕಂದಾಚಾರಗಳು ಮರುವ್ಯಾಖ್ಯಾನಗೊಂಡವು. ಹುಳುಕುಗಳನ್ನು ಪಟ್ಟಿಮಾಡಿತು. ಅದರ ಪ್ರಕಾರ 1804ರ ವರೆಗೆ ಜಿಲ್ಲಾಧಿಕಾರಿಗಳಿಗೆ ಕಂದಾಯ ಆಡಳಿತದ ಜೊತೆಗೆ ನ್ಯಾಯ ತೀರ್ಮಾನಿಸುವ ಅಧಿಕಾರವನ್ನು ನೀಡಲಾಯಿತು. 1806ರಲ್ಲಿ ಜಿಲ್ಲಾಕೋರ್ಟುಗಳು ಸ್ಥಾಪನೆಗೊಂಡು ವಸಾಹತುಶಾಹಿಯ ಆಜ್ಞೆಗಳನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನಗಳು ಬಲಗೊಂಡವಲ್ಲದೇ ಪಾಶ್ಚಾತ್ಯ ನ್ಯಾಯಾಂಗ ಪರಿಕಲ್ಪನೆಯಡಿ ಪರಂಪರಾಗತ ದೇಶೀಯ ನ್ಯಾಯಾಡಳಿತದ ವ್ಯವಸ್ಥೆಯನ್ನು ಅನೂರ್ಜಿತಗೊಳಿಸುವ ಕಾರ್ಯಯೋಜನೆಗಳಾಗಿ ರೂಪಿತಗೊಂಡವು.[38] ವಸಾಹತುಶಾಹಿಯ

ಪ್ರಕ್ರಿಯೆಗೆ ಒಳಪಡುವ ಸನ್ನಿವೇಶದಲ್ಲಿ ಜಿಲ್ಲಾ ಕೋರ್ಟುಗಳಲ್ಲಿ ಕೇಸುಗಳ ಸಂಖ್ಯೆಯನ್ನು ಪರಾಮರ್ಶಿಸಿದಾಗ ಜನ ಗೊಂದಲಕ್ಕೀಡಾಗಿದ್ದನ್ನು ದಾಖಲೆಗಳಿಂದ ಸಮರ್ಥಿಸಬಹುದು. ಕೋಷ್ಟಕದಲ್ಲಿ ನಮೂದಿಸಿದಂತೆ ಒಟ್ಟು ಕೇಸುಗಳ ಸಂಖ್ಯೆ ಸುಮಾರು 2336ನ್ನು ದಾಖಲಿಸಲಾಗಿದೆ.

ಇದು ವಸಾಹತುಶಾಹಿಗೆ ತ್ವರಿತ ಲಾಭ ತಂದುಕೊಡುವಲ್ಲಿ ವಿಫಲವಾದಾಗ ಜಿಲ್ಲಾ ನ್ಯಾಯಾಲಯದ ಕೆಳಗಿನ ಹಂತದಲ್ಲಿ ಜಿಲ್ಲಾ ನ್ಯಾಯಾಧೀಶನ ಉಸ್ತುವಾರಿಯಲ್ಲಿ ಮುಸ್ಲಿಮ್ ಮುಫ್ತಿ ಹಾಗೂ ಹಿಂದೂ ಪಂಡಿತರನ್ನೊಳಗೊಂಡ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತ್ತಲ್ಲದೇ ನ್ಯಾಯಾಲಯದಲ್ಲಿ ವಾದಿಸಲು ಸ್ಥಳೀಯ ವ್ಯವಹಾರಿಕರನ್ನು ನೇಮಕ ಮಾಡಲಾಯಿತು.[39] ತುಳುನಾಡಿಗೆ ಸಂಬಂಧಿಸಿದ ಈ ನ್ಯಾಯಾಲಯ 1808ರಲ್ಲಿ ಹೊನ್ನಾವರಕ್ಕೆ ವರ್ಗಾವಣೆಗೊಂಡಿತ್ತಾದರೂ ಸ್ಥಳೀಯ ರೈತರ ಹಾಗೂ ವರ್ತಕರ ಬೇಡಿಕೆಯ ಮೇರೆಗೆ 1812ರಲ್ಲಿ ಮಂಗಳೂರಿನಲ್ಲಿ ಪುನರ್‌ಸ್ಥಾಪನೆಗೊಂಡಿತು. ವಸಾಹತುಶಾಹೀ ಕಾರಣದಿಂದ ನ್ಯಾಯಾಂಗ ಕ್ಷೇತ್ರದಲ್ಲಾದ ಈ ಬೆಳವಣಿಗೆಯಿಂದ ತುಳುಸಮಾಜದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಪಾರಂಪರಿಕ ನ್ಯಾಯಾಲಯಗಳು ತಮ್ಮ ಅಧಿಕಾರದ ವಾರಸುದಾರಿಕೆ ಕಳೆದುಕೊಂಡವಲ್ಲದೇ ಆಸ್ತಿತ್ವಕ್ಕಾಗಿ ಹೋರಾಡಬೇಕಾಯಿತು.

1816ರಲ್ಲಿ ಕಾರ್ನವಾಲಿಸ್ ಪ್ರತಿಪಾದಿಸಿದ ನ್ಯಾಯವ್ಯವಸ್ಥೆಯ ಬದಲಿಗೆ ಮುನ್ರೋ ಪ್ರವರ್ತಿತ ನ್ಯಾಯಪದ್ಧತಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಜಾರಿಗೆ ಬಂದು ಈ ವ್ಯವಸ್ಥೆಯ ಪ್ರಕಾರ ಮುಖ್ಯ ನ್ಯಾಯಧೀಶನ ಜವಬ್ದಾರಿಯನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಗೆ ವರ್ಗಾಯಿಸಲಾಗಿತ್ತು. ಮುನ್ರೋ ನಿಯಮದಡಿ ಮ್ಯಾಜಸ್ಟ್ರೇಟ್‌ನಿಗೆ ಕಂದಾಯ ಅಧಿಕಾರವಿರುವುದರಿಂದ ಜನರ ಭಾವನೆಗಳನ್ನು ತಿಳಿದುಕೊಳ್ಳುವುದು ಸುಲಭ. ಮುಂದುವರೆದು ಅವನ ಹೊಸ ನ್ಯಾಯಾಂಗ ನೀತಿಯಂತೆ ಗ್ರಾಮಮುಖ್ಯರನ್ನು ನ್ಯಾಯಾಲಯದ ಮುನ್ಸೀಫರನ್ನಾಗಿ ನಿಯುಕ್ತಿಗೊಳಿಸುವ ಆದೇಶಗಳು ಹೊರಬಿದ್ದವು.[40] ತುಳುನಾಡಿನಲ್ಲಿ ಜಾರಿಯಲ್ಲಿದ್ದ ಪರಂಪರಾಗತ ಅಧಿಕಾರಿ ವ್ಯವಸ್ಥೆ ವಸಾಹತುಶಾಹಿಯೊಂದಿಗೆ ಸಹಯೋಗಗೊಳ್ಳಲು ಹಾಗೂ ಭೂಮಿಯ ಒಡೆತನಕ್ಕಿರುವ ಗೊಂದಲಗಳನ್ನು ನಿವಾರಣೆ ಮಾಡುವಲ್ಲಿ ಮುನ್ರೊ ಪ್ರತಿಪಾದಿಸಿದ್ದ ರೈತವಾರಿ ಪದ್ಧತಿ ಬಹಳಷ್ಟು ಕೊಡುಗೆ ನೀಡಿತ್ತು.[41] ತುಳುನಾಡಿನ ಭೂಮಿಯ ಒಡೆತನ ಜೈನ, ಬ್ರಾಹ್ಮಣ, ಒಕ್ಕಲುಗಳ ಒಡೆತನದಲ್ಲಿತ್ತು. ಖಾಯಂ, ಮೂಲ, ಚಾಲ, ವಾಯದೆ ಎಂಬ ನಾಲ್ಕು ಬಗೆಯ ಕಂದಾಯ ಮಾದರಿಗಳಿದ್ದವು. ಭೂಮಿಯ ಒಡೆತನ ಮತ್ತು ಉಳುಮೆಯ ಹಕ್ಕನ್ನು ಮೊದಲ ಎರಡು ವರ್ಗಗಳು ಪಡೆದಿದ್ದು ಅವರ ಕೈಕೆಳಗೆ ಚಾಲ ಮತ್ತು ವಾಯಿದೆ ಗೇಣಿ ಆಧಾರದಲ್ಲಿ ತುಳುನಾಡಿನ ಸುಮಾರು ಶೇ 75ಕ್ಕೂ ಮಿಕ್ಕಿ ಕೃಷಿ ಕಾರ್ಮಿಕರು ಉಳುಮೆಯನ್ನು

ಮಾಡಬೇಕಿತ್ತು. 1800ರಲ್ಲಿ ಕ್ರೈಸ್ತರು ವಸಾಹತುಶಾಹಿ ಆಡಳಿತದ ನೆರವಿನೊಂದಿಗೆ ಭೂಮಿಯ ಒಡೆತನ ಪಡೆದುಕೊಂಡರಲ್ಲದೇ ಬುಖಾನನ ಪ್ರಕಾರ ತುಳುನಾಡಿನಲ್ಲಿ ಸುಮಾರು 140 ಜನ ಭೂಮಾಲಕರು ಭೂಮಿಯ ಮೇಲೆ ಅಧಿಕಾರ ಪಡೆದುಕೊಂಡಿದ್ದರು. ಭೂಕಂದಾಯವನ್ನು ಪಾವತಿಸುವುದರ ಆಧಾರದ ಮೇಲೆ, ಉಳುಮೆದಾರನನ್ನು, ಅವನು ಹೊಂದಿದ್ದ ಭೂಮಿಯ ಮಾಲೀಕನನ್ನಾಗಿ ಗುರುತಿಸಲಾಗುತ್ತಿತ್ತು. ರೈತವಾರಿ ವ್ಯವಸ್ಥೆಯ ಬೆಂಬಲಿಗರು, ಅದು ಹಿಂದೆ ಆಸ್ತಿತ್ವದಲ್ಲಿದ್ದ ವ್ಯವಸ್ಥೆಯ ಮುಂದುವರಿಕೆ ಎಂಬ ಮಾತು ಪ್ರಚಲಿತದಲ್ಲಿತ್ತು. ಈ ಸಹಯೋಗದ ಕಲ್ಪನೆ ತುಳುನಾಡಿನ ಸಾಂಪ್ರದಾಯಿಕ ಅಧಿಕಾರದ ಹಿತ ಕಾಪಾಡುವುದರ ಜೊತೆಗೆ ವಸಾಹತುಶಾಹಿಯ ದೀರ್ಘಾಯುಷ್ಯವನ್ನು ಬಯಸುವುದಾಗಿತ್ತು.[42] ವಸಾಹತುಶಾಹಿಯ ಆಡಳಿತವು ನಿಸ್ಸಂದೇಹವಾಗಿ ಖಚಿತವಾಗಿ ಸ್ಥಾಪಿಸಲ್ಪಟ್ಟಾಗ ಅದು ಗ್ರಾಮೀಣ ನಾಯಕತ್ವವನ್ನು ಷರತ್ತುಗಳಿಗುಣವಾಗಿ ತನ್ನ ಸೇವೆಗೆ ಸೇರಿಸಿಕೊಳ್ಳುತ್ತದೆ. ವಸಾಹತುಪೂರ್ವದ ಸಂಬಂಧಗಳನ್ನು ಕಾಯ್ದುಕೊಂಡು ಹೋಗುವಲ್ಲಿ ಎಚ್ಚರದ ಹೆಜ್ಜೆಗಳನ್ನು ಇಡುತ್ತದೆ. ಉದಾಹರಣೆ: ಜುಡಿಷಿಯರಿ ವ್ಯವಸ್ಥೆಯಲ್ಲಿ 1816ರಲ್ಲಿ ಗ್ರಾಮಮುಖ್ಯರನ್ನು ಮುನ್ಸೀಫಗಳಾಗಿ ಆಯ್ಕೆ ಮಾಡಿಕೊಂಡ ಬ್ರಿಟಿಷರ ನಿಲುವುಗಳು ಮುಖ್ಯವಾಗುತ್ತದೆ.

1816ರಲ್ಲಿ ಮುನ್ರೋನ ಅಭಿಪ್ರಾಯದಂತೆ ಜಿಲ್ಲಾ ಮ್ಯಾಜಿಸ್ಟ್ರೇಟ್‌ರ ಅಧಿಕಾರದ ಜೊತೆಗೆ ಪೋಲಿಸ್ ಅಧಿಕಾರಗಳು ಜಿಲ್ಲಾಧಿಕಾರಿಗಳಿಗೆ ವರ್ಗಾವಣೆಗೊಂಡು ಜಿಲ್ಲೆಗಳಲ್ಲಿ ಕ್ರಿಮಿನಲ್ ಕೋರ್ಟುಗಳು ಸ್ಥಾಪನೆಗೊಂಡವು. ಈ ಮೂಲಕ ವಸಾಹತುಶಾಹಿ ತನ್ನ ಸಾಮ್ರಾಜ್ಯ ವಿಸ್ತರಿಸುವಾಗ ಅಲ್ಲಲ್ಲಿ ವಿರಳವಾಗಿ ಪ್ರಕಟಗೊಂಡ ಪ್ರತಿಭಟನೆಗಳಿಗೆ ರೈತವಾರಿ ಪದ್ಧತಿಯನ್ನು ಆಯುಧವನ್ನಾಗಿಸಿ ಅದರ ಮೂಲಕ ಪ್ರತಿಭಟನೆಗಳನ್ನು ನಿಗ್ರಹಿಸುವ ಇಲ್ಲವೇ ನಿಭಾಯಿಸುವ ಹಾಗೂ ನಿರ್ಣಾಯಕ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿತು.[43] ಹೀಗೆ ವಸಾಹತುಶಾಹಿಯ ಈ ನ್ಯಾಯಿಕ ವ್ಯವಸ್ಥೆ ವಿನ್ಯಾಸಗೊಳ್ಳುವಲ್ಲಿ ಮುನ್ರೊ ಪ್ರಮುಖ ಕಾರಣಕರ್ತನಾದನು. ಅದಾಗ್ಯೂ ನೂತನ ವ್ಯವಸ್ಥೆಯಲ್ಲಿ ವಸಾಹತಿನ ಪರಂಪರಾಗತ ನ್ಯಾಯವ್ಯವಸ್ಥೆಯನ್ನು ಬದಲಾಯಿಸಿ ಉಳಿಸಿಕೊಳ್ಳುವ ಅಥವಾ ಸಹಯೋಗದ ವ್ಯವಸ್ಥೆಯೊಂದನ್ನು ರೂಪಿಸುವ ಪ್ರಯತ್ನ ಇದಾಗಿತ್ತೆಂಬುವುದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಮುಂದುವರೆದು ಹಳೆಯ ಕಾನೂನುಗಳನ್ನು ವಿಧಿಬದ್ಧಗೊಳಿಸುವ ಮತ್ತು ಪ್ರಯೋಗ ಮಾಡುವುದರ ಮೂಲಕ ಬ್ರಿಟಿಷರು ಹೊಸದೊಂದು ಕಾನೂನು ವ್ಯವಸ್ಥೆಯನ್ನು ಸ್ಥಾಪಿಸಿದರು. ಸಾಂಪ್ರದಾಯಿಕ ಕಾನೂನುಗಳ ಅನುಸರಣೆಯನ್ನು ಮುಂದುವರೆಸಿದ್ದರೂ ಹೊಸ ಕಾನೂನು ವ್ಯವಸ್ಥೆ ರೂಪುಗೊಂಡು ನಿಬಂಧನೆಗಳು ಜಾರಿಗೊಂಡವಲ್ಲದೇ ಕಾನೂನುಗಳು ಶಾಸನಬದ್ಧಗೊಂಡು ಆಧುನೀಕರಣಗೊಂಡಿತು.

1834ರಲ್ಲಿ ವಸಾಹತುಶಾಹಿ, ಮೆಕಾಲೆಯ ನೇತೃತ್ವದಲ್ಲಿ ಭಾರತೀಯ ಕಾನೂನುಗಳನ್ನು ಶಾಸನಬದ್ಧ ಮಾಡುವ ಸಲುವಾಗಿ ಕಾನೂನು ಆಯೋಗವನ್ನು ನೇಮಕ ಮಾಡಿತು. ಇಂಡಿಯನ್ ಪೀನಲ್ ಕೋಡ್ ವ್ಯವಸ್ಥೆಗೊಳಿಸಿದರೂ 1860ರ ತನಕ ಕಾನೂನು ಆಗಿ ರೂಪುಗೊಂಡಿರಲಿಲ್ಲ. 1853ರಿಂದ 1870ರ ವರೆಗೆ ಲಾ ಕಮಿಷನ್ನಿನ ನಿರಂತರ ಪ್ರಯತ್ನಗಳಿಂದ ಆಧುನಿಕ ಕಾನೂನಿನ ವ್ಯವಸ್ಥೆ ರೂಪುಗೊಂಡಿತು. ಈ ಶ್ರಮದ ಫಲವಾಗಿ ಭಾರತೀಯ ದಂಡಸಂಹಿತೆ, ಪಶ್ಚಿಮದ ಪ್ರಭಾವದಿಂದ ರೂಪುಗೊಂಡ ಸಿವಿಲ್ ಮತ್ತು ಕ್ರಿಮಿನಲ್ ಕಾನೂನುಗಳು ಮತ್ತು ಇತರ ಕಾನೂನು ವಿಧಿಗಳು ರೂಪುಗೊಂಡವು. ಇವೇ ಕಾನೂನುಗಳು ಇಡೀ ದೇಶದಲ್ಲಿ ಆಸ್ತಿತ್ವಕ್ಕೆ ಬಂದವು ಮತ್ತು ಅವುಗಳನ್ನು ಏಕರೂಪದ ನ್ಯಾಯಾಲಯಗಳ ಮೂಲಕ ಜಾರಿಗೆ ತರಲಾಯಿತು. ಹೀಗೆ ಭಾರತದ ನ್ಯಾಯಾಂಗವು ಏಕರೂಪವನ್ನು ಪಡೆಯಿತು.[44]

ಸಾಮಾನ್ಯಶಕೆ 1843ರಲ್ಲಿ ತುಳುನಾಡಿನಲ್ಲಿಯೂ ನ್ಯಾಯಾಧಿಕರಣ ವ್ಯವಸ್ಥೆ ಬದಲಾವಣೆಗೆ ಒಳಪಟ್ಟು 1853ರಲ್ಲಿ ಹೊಸ ಕಾನೂನು-ನ್ಯಾಯಾಂಗ ವ್ಯವಸ್ಥೆಗೆ ಅಡಿಪಾಯ ಹಾಕಿತು. ವಸಾಹತುಶಾಹಿಯ ಅಧುನಿಕ ಕಾನೂನು ವ್ಯವಸ್ಥೆ ಹೊಸ ರಾಷ್ಟ್ರೀಯ ಅನನ್ಯತೆಗೆ ಸಾಂಸ್ಥಿಕ ತಳಹದಿಯನ್ನು ಒದಗಿಸಿತಲ್ಲದೇ ಸಾಂಸ್ಕೃತಿಕ ಅಧುನಿಕತೆ ಸಾಮಾಜಿಕ ರಚನೆಯ ಮೂಲಕ ಲಿಖಿತವಾಗಿ ಕೆಲವೊಂದು ಹಕ್ಕುಗಳನ್ನು ನೀಡಲಾಯಿತು.[45] ಹೀಗೆ ವಸಾಹತುಶಾಹಿಯ ನ್ಯಾಯಾಂಗ ನೌಕರಶಾಹಿ ವ್ಯವಸ್ಥೆಯ ರೂಪದಲ್ಲಿ ತಳಮಟ್ಟದ ಆಳ್ವಿಕೆಯ ಉಪಕರಣಗಳಾಗಿ ವಸಾಹತಿನ ಮೇಲೆ ಹಿಡಿತ ಸಾಧಿಸಲು ಪ್ರಯತ್ನಿಸಿತು. ಇದರೊಂದಿಗೆ ವಸಾಹತುಪೂರ್ವದ ತುಳುನಾಡಿನಲ್ಲಿ ನ್ಯಾಯವಿತರಣೆ ಮಾಡುತ್ತಿದ್ದ ಸೀಮೆ, ಮಾಗಣೆ, ಗ್ರಾಮ ದೇವಸ್ಥಾನಗಳು, ಕುಟುಂಬದ ತರವಾಡು ಮನೆಗಳು, ದೈವದ ಗರಡಿಗಳು, ಆಲಡೆಗಳು, ದೈವಸ್ಥಾನ ಮುಂತಾದ ಸಾಂಸ್ಥಿಕ ಸಂಸ್ಥೆಗಳು ಪ್ರಾಮುಖ್ಯತೆಯನ್ನು ಕಳೆದುಕೊಂಡವಲ್ಲದೇ, ಪಾಶ್ಚಾತ್ಯರ ಆಧುನೀಕರಣದ ದಾಳಿಯಿಂದ ಕೊಚ್ಚಿಹೋಗಲ್ಪಟ್ಟು ಕೇವಲ ನಾಮಾಕಾವಸ್ತೆಯ ಆಚರಣಾತ್ಮಕ ನ್ಯಾಯವಿತರಣ ಕೇಂದ್ರಗಳಾಗಿ ಆಸ್ತಿತ್ವ ಮುಂದುವರೆಸಿದವು.[46] ತುಳುನಾಡಿನ ಹೆಚ್ಚಿನ ದೇವಸ್ಥಾನಗಳು ಹಾಗೂ ದೈವಸ್ಥಾನಗಳು ವಸಾಹತುಶಾಹಿಯ ಪ್ರಭಾವದಿಂದಾಗಿ ಅವುಗಳ ಪಾರಂಪರಿಕ ನ್ಯಾಯವಿತರಣೆ ಮಸುಕುಗೊಂಡಿತ್ತಲ್ಲದೇ ತೋರಿಕೆಗೆ ಕೇವಲ ಆಚರಣಾತ್ಮಕ ನ್ಯಾಯವಿತರಣೆಯನ್ನು ಮುಂದುವರೆಸಿ ಪಾರಂಪರಿಕ ನ್ಯಾಯವ್ಯವಸ್ಥೆಯ ಪಳಿಯುಳಿಕೆಗಳಾಗಿ ಉಳಿದಿವೆ. ಅವುಗಳಲ್ಲಿ ಧರ್ಮಸ್ಥಳ, ಮಾರಣಕಟ್ಟೆ, ಕಾನತ್ತೂರು ಮುಂತಾದ ದೈವ, ದೇವಸ್ಥಾನಗಳು ನ್ಯಾಯಾಧಿಕರಣದ ಕೇಂದ್ರಗಳಾಗಿ ತುಳುವರ ನ್ಯಾಯಾಡಳಿತದಲ್ಲಿ ಆಸ್ತಿತ್ವವನ್ನು

ಉಳಿಸಿಕೊಂಡಿದೆ. ಕಾನೂನಿನ ಮುಂದೆ ಸಮಾನರು ಎಂಬ ಮಹತ್ವದ ಸಿದ್ದಾಂತ ಇಂಗ್ಲೀಷ್ ಅಧಿಕಾರಿಗಳು, ಸೈನ್ಯದ ಅಧಿಕಾರಿಗಳು, ಉನ್ನತ ದರ್ಜೆಯ ತೋಟದ ಮಾಲೀಕರು, ವ್ಯಾಪಾರಿಗಳು ಭಾರತೀಯರ ಜತೆ ಒರಟಾಗಿ ಮತ್ತು ಮೊಂಡುತನದಿಂದ ಕ್ರೂರವಾಗಿ ವರ್ತಿಸಿದರೂ ಯುರೋಪಿನ ನ್ಯಾಯಧೀಶರು ಅವರಿಗೆ ಬಹಳ ಕಡಿಮೆ ಪ್ರಮಾಣದಲ್ಲಿ ಶಿಕ್ಷೆ ವಿಧಿಸುತ್ತಿದ್ದರು. ಕಾನೂನಿನ ಅಸಮಾನತೆ ಈ ರೀತಿ ಹಲವು ಸಂಧರ್ಭಗಳಲ್ಲಿ ಕಾರ್ಯಾಚರಿಸುತ್ತಿತ್ತು. ವಸಾಹತುಶಾಹಿ ಕಾನೂನು ಏಕಪಕ್ಷೀಯವಾಗಿದ್ದು, ಅದರ ಕಾರ್ಯವಿಧಾನವು ಹೆಚ್ಚಾಗಿ ಆಡಳಿತಾಧಿಕಾರಿಗಳು ಮತ್ತು ಪೋಲಿಸರ ಕೈಯಲ್ಲಿದ್ದವು. ಅದು ಪ್ರಜೆಗಳ ಪರವಾಗಿಯಾಗಲೀ, ಸ್ವತಂತ್ರವಾಗಿರದೇ ದೋಷಪೂರಿತವಾಗಿದ್ದವು.[47] 1.ಕಾನೂನಿನ ಮುಂದೆ ಸಮಾನರು ಎಂಬ ಮಹತ್ವದ ಸಿದ್ದಾಂತ ಇಂಗ್ಲೀಷ್ ಅಧಿಕಾರಿಗಳು, ಸೈನ್ಯದ ಅಧಿಕಾರಿಗಳು, ಉನ್ನತ ದರ್ಜೆಯ ತೋಟದ ಮಾಲೀಕರು, ವ್ಯಾಪಾರಿಗಳು ಭಾರತೀಯರ ಜತೆ ಒರಟಾಗಿ ಮತ್ತು ಮೊಂಡುತನದಿಂದ ಕ್ರೂರವಾಗಿ ವರ್ತಿಸಿದರೂ ಯುರೋಪಿನ ನ್ಯಾಯಧೀಶರು ಅವರಿಗೆ ಬಹಳ ಕಡಿಮೆ ಪ್ರಮಾಣದಲ್ಲಿ ಶಿಕ್ಷೆ ವಿಧಿಸುತ್ತಿದ್ದರು. ಕಾನೂನಿನ ಅಸಮಾನತೆ ಈ ರೀತಿ ಹಲವು ಸಂಧರ್ಭಗಳಲ್ಲಿ ಕಾರ್ಯಾಚರಿಸುತ್ತಿತ್ತು. 2. ನ್ಯಾಯಾಲಯದ ಶುಲ್ಕ ಪಾವತಿ, ನ್ಯಾಯವಾದಿಗಳನ್ನು ಗೊತ್ತುಪಡಿಸುವುದು ಮತ್ತು ಸಾಕ್ಷಿಗಳಿಗಾಗಿ ಖರ್ಚು ಮಾಡುವ ಹಣ ಇತ್ಯಾದಿಗಳು ಹೆಚ್ಚಿದ ಕಾರಣ ನ್ಯಾಯವು ದುಭಾರಿಯಾಗಿತ್ತು. ನ್ಯಾಯಕ್ಕೆ ಸಂಬಂಧಿಸಿದ ವಾದ-ವಿವಾದಗಳು ಸುದೀರ್ಘ ವಿಚಾರಣೆಯಿಂದ ವಿಳಂಬವಾಗುವುದು, ಅನಕ್ಷರಸ್ಥರು, ತಿಳುವಳಿಕೆ ಇಲ್ಲದ ರೈತರಿಗೆ ಅರ್ಥವಾಗದ ಭಾಷೆ, ಕಾನೂನುಗಳಲ್ಲಿನ ಸಂಕೀರ್ಣತೆ, ಆಡಳಿತ ವ್ಯವಸ್ಥೆಯ ಭ್ರಷ್ಟಚಾರ ಇವೇ ಮೊದಲಾದವುಗಳು. ವಸಾಹತುಪೂರ್ವದ ನ್ಯಾಯವ್ಯವಸ್ಥೆ ಯಾವ ನಿರ್ಬಂಧಕ್ಕೂ ಒಳಗಾಗಿರಲಿಲ್ಲ. ಶೀಘ್ರವಾಗಿ ತೀರ್ಮಾನವಾಗುತ್ತಿತ್ತು ಮತ್ತು ಹೆಚ್ಚು ಖರ್ಚಾಗುತ್ತಿರಲಿಲ್ಲ. ವಸಾಹತುಪೂರ್ವದ ನ್ಯಾಯವ್ಯವಸ್ಥೆಯ ಒಂದೇ ಒಂದು ಲೋಪವೆಂದರೆ ವರ್ಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿ ಮೇಲುವರ್ಣ, ಕೆಳವರ್ಣವೆಂದು ಭೇದ ಮಾಡುತ್ತಿದ್ದು, ಒಂದೇ ಅಪರಾಧಕ್ಕೆ ಬ್ರಾಹ್ಮಣರಿಗೆ, ಮೇಲುವರ್ಣಕ್ಕೆ ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಿದರೆ, ಕೆಳವರ್ಗಕ್ಕೆ ಕಠಿನ ಶಿಕ್ಷೆಯನ್ನು ವಿಧಿಸುತ್ತಿದ್ದುದು. ಹಾಗೆಯೇ ಜಮೀನುದಾರರನ್ನು, ಶ್ರೀಮಂತರನ್ನು ಸಾಮಾನ್ಯರನ್ನು ನಡೆಸಿಕೊಳ್ಳುವಂತೆ ಕಠಿನವಾಗಿ ನಡೆಸಿಕೊಳ್ಳುತ್ತಿರಲಿಲ್ಲ. ವಾಸ್ತವವಾಗಿ ಅವರನ್ನು ಹೆಚ್ಚಾಗಿ ಪರಂಪರಾಗತ ನ್ಯಾಯಾಲಯದ ಮುಂದೆ ತರುತ್ತಿರಲಿಲ್ಲ.[48]

**ಪೋಲಿಸ್ ವ್ಯವಸ್ಥೆ-ವಸಾಹತುಶಾಹಿ**

ತುಳುನಾಡಿನಲ್ಲಿ ತಳವೂರಿದ ವಸಾಹತುಶಾಹಿ ಸಾಮಾನ್ಯಶಕೆ 1799ರ ಸುಮಾರಿಗೆ ತುಳುನಾಡಿನಲ್ಲಿ ಆಳ್ವಿಕೆ, ಅಧಿಕಾರಗಳನ್ನು ಪ್ರಾಪ್ತಿ ಮಾಡಿಕೊಂಡಿತು. ನ್ಯಾಯಾಂಗ

ವ್ಯವಸ್ಥೆಯಂತೆ ವಸಾಹತುಶಾಹಿ ತನ್ನ ಲಾಭಕ್ಕಾಗಿ ಬಳಸಿಕೊಂಡ ಮತ್ತೊಂದು ವ್ಯವಸ್ಥೆಯೆಂದರೆ ಪೋಲಿಸ್ ಇಲಾಖೆ.[49] ಭಾರತದ ಆಧುನಿಕ ಪೋಲಿಸ್ ವ್ಯವಸ್ಥೆಯ ಸೃಷ್ಟಿಕರ್ತ ಲಾರ್ಡ್ ಕಾರ್ನವಾಲೀಸ್. ತುಳುನಾಡಿನಲ್ಲಿ ಜಮೀನುದಾರರನ್ನು ಅವರ ಪೋಲಿಸ್ ಕೆಲಸದಿಂದ ನಿವೃತ್ತಿಗೊಳಿಸಿ, ಕಾನೂನು ವ್ಯವಸ್ಥೆಯನ್ನು ವಿಧಿಬದ್ಧ ಪೋಲಿಸ್ ವ್ಯವಸ್ಥೆಯನ್ನು ಸ್ಥಾಪಿಸಿದವು. ತನ್ನ ಅಧಿಕಾರ ಮುಂದುವರೆಯುವಿಕೆಗೆ ಸುಧಾರಿತ ಪೋಲಿಸ್ ವ್ಯವಸ್ಥೆ ಅನಿವಾರ್ಯವೆಂದು ಮನಗಂಡು ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಯಿತು. ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ 1802 ಮದ್ರಾಸ್ ರೆಗ್ಯುಲೇಷನ್ ಕಾಯಿದೆ 35ರ ಪ್ರಕಾರ ವಸಾಹತುಶಾಹಿ ಪೋಲಿಸ್‌ವ್ಯವಸ್ಥೆ ಜಾರಿಗೆ ಬಂತು. ಈ ಪ್ರಕಾರ ತುಳುನಾಡಿನಲ್ಲಿಯೂ 1802ರಲ್ಲಿ ಸಾಮಾನ್ಯಶಕೆ ಸುಮಾರು 1802ರಲ್ಲಿ ಪ್ರತಿ ಇಪ್ಪತ್ತು ಚದರ ಮೈಲಿಗೊಂದರಂತೆ ವೃತ್ತ, ಠಾಣೆ, ಠಾಣಾಧಿಕಾರಿ ಮತ್ತು ದಾರೋಘಗಳನ್ನು ನೇಮಕಗೊಳಿಸಿ ಶಾಂತಿ ಭದ್ರತೆಯನ್ನು ಕಾಪಾಡುವಲ್ಲಿ ಜಿಲ್ಲಾಧಿಕಾರಿಗಳೊಂದಿಗೆ ಕೈಜೋಡಿಸುವಂತೆ ಮಾಡಲಾಯಿತು.[50]

ವಸಾಹತುಶಾಹಿ ಆರಂಭಿಸಿದ ನೂತನ ಪೋಲಿಸ್ ವ್ಯವಸ್ಥೆಯಿಂದಾಗಿ ಇಡೀ ತುಳುನಾಡು ವಸಾಹತುಪೂರ್ವದ ಔಪಚಾರಿಕ ಅಧಿಕಾರ ಸ್ತರಗಳಿಂದ ಬೇರ್ಪಟ್ಟು ಅಧುನಿಕ ಕಾನೂನುಪಾಲನೆಯಡಿ ಪುನರ್‌ರಚನೆಗೊಳ್ಳಬೇಕಾದ ಅನಿವಾರ್ಯತೆ ಏರ್ಪಟ್ಟಿತ್ತು. ಪ್ರತಿ ಪೋಲಿಸ್ ಸಿಬ್ಬಂದಿಗಳು ಶಸ್ತ್ರಸಜ್ಜಿತರಾಗಿ ನಿರ್ದಿಷ್ಟ ಅಧಿಕಾರದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದರಿಂದ ಪರಂಪರಾಗತವಾಗಿ ಕಾನೂನು ಪಾಲನೆ ಮಾಡುತ್ತಿದ್ದ ವ್ಯವಸ್ಥೆಗಳು ನಿಧಾನವಾಗಿ ನಿರ್ಲಕ್ಷ್ಯಕ್ಕೆ ಒಳಗಾದವು.[51] ಸಾಮಾನ್ಯಶಕೆ 1808ರಲ್ಲಿ ಮ್ಯಾಜಿಸ್ಟ್ರೇಟನ ಹೊಣೆಗಾರಿಕೆಯಡಿಯಲ್ಲಿ ಪೋಲಿಸ್ ವ್ಯವಸ್ಥೆ ಪುನರಾಚಿತಗೊಂಡು ಕಾರ್ಯತತ್ಪರವಾಯಿತು. ಅಷ್ಟಕ್ಕೂ ತೃಪ್ತಿಪಡದ ವಸಾಹತುಶಾಹೀ ಆಡಳಿತಗಾರರಲ್ಲಿ ಪ್ರಮುಖನಾಗಿದ್ದ ಥಾಮಸ್ ಮುನ್ರೋ ಸಾಮಾನ್ಯಶಕೆ 1816ರಲ್ಲಿ ಕಂದಾಯ ವ್ಯವಸ್ಥೆಯನ್ನು ಬದಲಾವಣೆಗೆ ಒಳಪಡಿಸಿದಂತೆ ಪೋಲಿಸ್ ವ್ಯವಸ್ಥೆಯನ್ನು ಕೂಡಾ ಬದಲಾವಣೆಗೆ ಒಳಪಡಿಸಿದನು. ಈ ಉಪಕ್ರಮದಿಂದಾಗಿ ಪೋಲಿಸ್ ಹೊಣೆಗಾರಿಕೆ ಮ್ಯಾಜಿಸ್ಟ್ರೇಟನಿಂದ ಜಿಲ್ಲಾಧಿಕಾರಿಗಳಿಗೆ ಹಸ್ತಾಂತರಗೊಂಡು ಈ ವರೆಗೆ ಅಸ್ತಿತ್ವದಲ್ಲಿದ್ದ ಕಾರ್ನವಾಲೀಸನ ದಾರೋಘ ಪದ್ಧತಿ ರದ್ದಾಯಿತು. ಮುನ್ರೋ ಜಾರಿಗೆ ತಂದ ನೂತನ ಪೋಲಿಸ್ ನೀತಿಯಂತೆ ಜಿಲ್ಲಾಧಿಕಾರಿ ಒಳಗೊಂಡಂತೆ ಗ್ರಾಮದ ಮುಖಂಡರು, ಗಣ್ಯರು, ತಹಶೀಲ್ದಾರರು, ಮ್ಯಾಜಿಸ್ಟ್ರೇಟರು ಮತ್ತು ಅವರ ಸಹಾಯಕರು ವಸಾಹತುಶಾಹಿಯ ನೂತನ ಪೋಲಿಸ್ ವ್ಯವಸ್ಥೆಯಲ್ಲಿ ಕಾರ್ಯಾಭಾಗವನ್ನು ಪಡೆದುಕೊಂಡರು.[52] ಗ್ರಾಮಗಳಲ್ಲಿ, ಗ್ರಾಮಸ್ಥರ ಪರವಾಗಿ ಗ್ರಾಮರಕ್ಷಕನೇ ಮೊದಲಿನಂತೆ ಪೋಲಿಸ್ ವ್ಯವಸ್ಥೆಯನ್ನು ನೋಡಿಕೊಳ್ಳುವ ಅಧಿಕಾರ ನೀಡಲಾಯಿತು. ಈ ವ್ಯವಸ್ಥೆಯ ಮೂಲ ಉದ್ದೇಶ

ವಸಾಹತುಪೂರ್ವದ ಶಾಂತಿ ಸುವ್ಯವಸ್ಥೆಯಲ್ಲಿ ಪಾಲುಪಡೆದುಕೊಂಡಿದ್ದ ಕೆಳಹಂತದ ವ್ಯವಸ್ಥೆಗಳ ಸಹಯೋಗವನ್ನು ಪಡೆಯುವುದಾಗಿತ್ತು. ಆದ್ದರಿಂದ ವಸಾಹತುಶಾಹೀ ತನ್ನ ನೂತನ ಪೋಲಿಸ್ ವ್ಯವಸ್ಥೆಯನ್ನು ವಸಾಹತಿಗೆ ಸರಿಹೊಂದುವಂತೆ ರೂಪಿಸಲು ಪ್ರಯತ್ನಿಸಿತು. ಪರಂಪರಾಗತ ಪೋಲಿಸ್ ವ್ಯವಸ್ಥೆಯ ಕಾರ್ಯಚಟುವಟಿಕೆಗಳನ್ನು ಅರಿತಿದ್ದ ಮುನ್ರೋ ತನ್ನ ಪೋಲಿಸ್ ನೀತಿಯನ್ನು ವಸಾಹತುಪೂರ್ವದ ಪೋಲಿಸ್ ವ್ಯವಸ್ಥೆಯ ಪ್ರತಿರೂಪವಾಗಿ ರೂಪಿಸಿ ಕಾರ್ಯನಿರ್ವಹಿಸಲು ಅನುವು ಮಾಡಿಕೊಟ್ಟನು. ವಸಾಹತುಪೂರ್ವದ ಕಂದಾಯ ಮತ್ತು ಪೋಲಿಸ್ ವ್ಯವಸ್ಥೆ ಹಿಂದುಧರ್ಮ ಶಾಸ್ತ್ರದ ಸಾಂಸ್ಥಿಕ ರೂಪದಂತೆ ಕಾರ್ಯನಿರ್ವಹಿಸಿದ್ದರಿಂದ ಅದು ವಸಾಹತಿನಲ್ಲಿ ಒಂದು ತೆರನಾದ ಸಂಬಂಧ ಇಲ್ಲವೇ ಬಾಂಧವ್ಯ ಬೆಳೆಯಲು ಸಹಾಯಕವಾಗಿತ್ತು. ಆದರೆ ವಸಾಹತುಶಾಹಿಯ ಕಾನೂನು ಹಾಗೂ ಪೋಲಿಸ್ ವ್ಯವಸ್ಥೆಗಳು ಯುರೋಪು ಮಾದರಿಗೆ ಒತ್ತು ನೀಡಿದ್ದರಿಂದ ಅದರ ಸ್ಥಾಪನೆಗೆ ವಸಾಹತುಪೂರ್ವದ ವಾರಸುದಾರಿಕೆಯನ್ನು ಪಲ್ಲಟಗೊಳಿಸುವುದು ಅನಿವಾರ್ಯವಾಗಿತ್ತು. ಅದಾಗ್ಯೂ ವಸಾಹತುಶಾಹಿ ಕಾಲದ ಪೋಲಿಸ್ ವ್ಯವಸ್ಥೆಯ ಬಗ್ಗೆ ಮಿಷನರಿಗಳು ಆಸಮಾಧಾನ ಹೊಂದಿದ್ದವು.[53] ಪೋಲಿಸ್ ವ್ಯವಸ್ಥೆಯ ಒರಟತನ, ಕೆಡುಕ, ವಿನಾಶಕಾರಿ ಪ್ರವೃತ್ತಿ, ಸಮುದಾಯಗಳು ಪಡುತ್ತಿರುವ ಬವಣೆ, ಭ್ರಷ್ಟಾಚಾರ, ಲಂಚಗುಳಿತನ, ಅವಮಾನವೀಯ ಶಿಕ್ಷೆಗಳು, ನರಕಸದೃಶ್ಯ ಬಂದೀಖಾನೆಗಳು, ಒಟ್ಟಾರೆಯಾಗಿ ವಸಾಹತುಶಾಹಿಯ ಯಂತ್ರದಂತಹ ಕಾರ್ಯವೈಖರಿ, ಬಾಂಧವ್ಯ ಕೊರತೆ, ವಸಾಹತಿನ ಜನರನ್ನು ಸರಕುಗಳಂತೆ ಇಲ್ಲವೇ ಪ್ರಾಣಿಗಳಂತೆ ನಿರ್ವಹಿಸಿರುವುದು ಪೋಲಿಸ್ ವ್ಯವಸ್ಥೆಯ ವೈಫಲ್ಯಗಳಾಗಿ ವಸಾಹತುಷಾಹಿಯ ಬಲಪ್ರಯೋಗದ ನಮೂನೆಯಾಯಿತು. ಪರಿಣಾಮವಾಗಿ ಪೋಲಿಸ್ ವ್ಯವಸ್ಥೆಯನ್ನು ಪುನರ್‌ರಚನೆ ಮಾಡಬೇಕೆಂಬ ಒತ್ತಡಗಳು ಹೆಚ್ಚಾಗಿ ಅದಕ್ಕನುಗುಣವಾಗಿ ಸಾಮಾನ್ಯಶಕೆ 1855ರಲ್ಲಿ ನೂತನ ಪೋಲಿಸ್ ಆಯೋಗ ರಚನೆಗೊಂಡಿತು. ಈ ಆಯೋಗದ ಸಲಹೆಯಂತೆ ಸಾಮಾನ್ಯಶಕೆ 1860ರಲ್ಲಿ ಹೊಸ ಪೋಲೀಸ್ ವ್ಯವಸ್ಥೆಯೊಂದು ರೂಪಿಸಲ್ಪಟ್ಟು ಅದನ್ನು ಮದ್ರಾಸ್ ಪ್ರೆಸಿಡೆನ್ಸಿಗೆ ಅನ್ವಯಿಸಿ ಕಾರ್ಯಾಚರಿಸುವಂತೆ ನಿರ್ದೇಶನ ನೀಡಲಾಯಿತು. ಹೀಗೆ ಸಾಮಾನ್ಯಶಕೆ 1860ರ ಹೊತ್ತಿಗೆ ಜಾರಿಗೆ ಬಂದ ಪೋಲಿಸ್ ವ್ಯವಸ್ಥೆ ತುಳುನಾಡಿನ ಮೇಲೆ ಸಂಪೂರ್ಣ ಹತೋಟಿ ಸಾಧಿಸಿ, ವಸಾಹತುಶಾಹಿಗೆ ಎದುರಾದ ಎಲ್ಲಾ ದಂದ್ವ, ವಿರೋಧ, ಗೊಂದಲ ಮತ್ತು ಆಕ್ಷೇಪಣೆಗಳನ್ನು ನಿವಾರಿಸಿ ನಿಯಂತ್ರಿಸಿತು. ಹೀಗೆ ವಸಾಹತುಶಾಹಿಯ ನೂತನ ನ್ಯಾಯಾಂಗ ಹಾಗೂ ಪೋಲಿಸ್ ನೀತಿಯಿಂದಾಗಿ ವಸಾಹತುಪೂರ್ವದ ನ್ಯಾಯ ವ್ಯವಸ್ಥೆಯಲ್ಲಿದ್ದ ಮಧ್ಯಸ್ಥಿಕೆ ತತ್ವ ಮತ್ತು ಭದ್ರತಾ ವ್ಯವಸ್ಥೆಗಳು ಪ್ರಾಮುಖ್ಯತೆಯನ್ನು ಕಳೆದುಕೊಂಡು ನೇಪಥ್ಯಕ್ಕೆ ಸರಿದವು.

ವಸಾಹತುಪೂರ್ವದ ನ್ಯಾಯ ಚಿಂತಕರಾದ ಮಧ್ಯಸ್ಥ, ದೈವಮಾಧ್ಯಮ, ಪುರೋಹಿತ, ಜಮೀನುದಾರ, ಗ್ರಾಮ ಮುಖ್ಯ ಅಥವಾ ಗುತ್ತಿನ ಯಜಮಾನ, ಹೆಗ್ಗಡೆ, ಬಲ್ಲಾಳ ಮುಂತಾದವರು ನ್ಯಾಯಿಕ ಮತ್ತು ರಕ್ಷಣಾ ಅಧಿಕಾರಗಳನ್ನು ಕಳೆದುಕೊಂಡರು.[54] ಹಿಂದೂ, ಮುಸಲ್ಮಾನರಿಗೆ ಪ್ರತ್ಯೇಕ ಸಿವಿಲ್ ಕಾಯಿದೆಗಳನ್ನು ರೂಪಿಸಲಾಗಿತ್ತಾದರೂ ಕ್ರಿಮಿನಲ್ ಕಾಯಿದೆಗಳಿಗೆ ಸಂಬಂಧಿಸಿದಂತೆ ಅಂತಹ ಯಾವುದೇ ಪ್ರತ್ಯೇಕ ಕಾಯ್ದೆಗಳಿರದೇ ಏಕರೂಪದ ಕಾಯ್ದೆಗಳು ಕಾರ್ಯಾಚರಿಸುತ್ತಿದ್ದವು. ಕೋರ್ಟುಗಳಲ್ಲಿ ಅನುಕ್ರಮಣಿಕೆಗಳಿದ್ದು ಅಧಿಕಾರ ಮತ್ತು ಗೌರವಾಧರಗಳಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆಯಲ್ಲದೇ ಪೋಲಿಸ್ ಇಲಾಖೆಯ ಉನ್ನತ ಹುದ್ದೆಗಳು ಇಂಗ್ಲಿಷರಿಗೆ ಮೀಸಲಾಗಿದ್ದವು. ಪಾರಂಪರಿಕ ನ್ಯಾಯವ್ಯವಸ್ಥೆಗೆ ಹೊಂದಿಕೊಂಡಿದ್ದ ವಸಾಹತಿನ ಜನರು ವಸಾಹತುಶಾಹಿಯ ಹೊಸ ವ್ಯವಸ್ಥೆಯಿಂದ ಅನಾನುಕೂಲಗಳನ್ನು ಎದುರಿಸಬೇಕಾಯಿತ್ತಲ್ಲದೇ ಕೆಲವೊಂದು ಸಂದರ್ಭಗಳಲ್ಲಿ ಇದು ಪ್ರತಿಭಟನೆಯಾಗಿ ಪರಿವರ್ತಿತಗೊಂಡಿತು. ವಸಾಹತುಶಾಹಿಯ ನ್ಯಾಯ ವ್ಯವಸ್ಥೆ ದುಭಾರಿ, ಕಾಠಿಣ್ಯ, ಸ್ಥಳೀಯವಾಗಿ ವಿರೋಧ ಕಂಡು ಬಂದರೆ ವಸಾಹತುಶಾಹಿ ಬಲಪ್ರಯೋಗದ ಮೂಲಕ ಉತ್ತರಿಸುವ ದೌರ್ಜನ್ಯ ಕೈಗೊಳ್ಳುತ್ತಿತ್ತು. ಅನ್ಯಾಯ ಭ್ರಷ್ಟಚಾರ, ಕೆಂಪು ಪಟ್ಟಿಯಂತಹ ಸಮಸ್ಯೆಗಳು ನ್ಯಾಯಾಂಗ ಆಡಳಿತದಲ್ಲಿ ಸಾಮಾನ್ಯವಾಗಿತ್ತು. ಕೋರ್ಟು ಫೀ, ಸ್ಟಾಂಪುಗಳು, ಅರ್ಜಿಗಳು, ಕೋರ್ಟು ಕಚೇರಿಗಳು, ನ್ಯಾಯಧೀಶರು ವಸಾಹತಿನಲ್ಲಿರುವ ಬಹುಸಂಖ್ಯಾಕರಿಗೆ ವಿಚಿತ್ರವಾಗಿ ಕಂಡುಬಂದವು.

**ಶಿಕ್ಷಣ-ವಸಾಹತುಶಾಹಿ**

ವಸಾಹತುಪೂರ್ವದ ತುಳುನಾಡಿನಲ್ಲಿ ಶಿಕ್ಷಣವು ಪ್ರಮುಖವಾಗಿ ದೇವಸ್ಥಾನ, ಮಠಗಳಂತಹ ಧಾರ್ಮಿಕ ಸಂಸ್ಥೆಗಳಿಂದ ಪ್ರಾರಂಭಗೊಂಡು ನಿಯಂತ್ರಿಸಲ್ಪಡುತ್ತಿದ್ದವು. ಅವುಗಳೇ ಅದರ ರೂಪುರೇಷೆ ಮತ್ತು ತಿರುಳನ್ನು ನಿರ್ಧರಿಸುತ್ತಿದ್ದವು. ಶಿಕ್ಷಣಾರ್ಥಿಗಳನ್ನು ತಮ್ಮದೇ ರೀತಿಯಲ್ಲಿ ಆಯ್ಕೆ ಮಾಡಿಕೊಳ್ಳುತ್ತಿದ್ದ ಈ ಸಂಸ್ಥೆಗಳು ಕೆಲವೊಂದು ಬಾರಿ ಸಾಮಾಜಿಕ ಅಂಶಗಳಿಗೆ, ಅದರಲ್ಲೂ ಮುಖ್ಯವಾಗಿ ಜಾತಿಯಂತಹ ಅಂಶಗಳಿಗೆ ಮಹತ್ವ ನೀಡುತ್ತಿದ್ದವು. ಶಿಕ್ಷಕಕೇಂದ್ರಿತ ಈ ವ್ಯವಸ್ಥೆಯಲ್ಲಿ ಪ್ರಾಥಮಿಕ ಲೌಕಿಕ ಶಿಕ್ಷಣದ ಜೊತೆಗೆ ಪಾರಮಾರ್ಥಿಕ ಕಲಿಕೆಗೆ ಅವಕಾಶವಿತ್ತಾದರೂ ಕೆಲವು ಜಮೀನುದಾರ ಕುಟುಂಬಗಳು ತಮ್ಮ ಅನುಕೂಲತೆ ಹಾಗೂ ಅಂತಸ್ತಿಗೆ ಅನುಗುಣವಾಗಿ ಖಾಸಗಿ ಶಿಕ್ಷಕರನ್ನು ನೇಮಿಸಿಕೊಂಡು ತಮ್ಮ ಮಕ್ಕಳಿಗೆ ವಿದ್ಯೆ ನೀಡಲು ಅವಕಾಶವಿತ್ತು. ಶಿಕ್ಷಕರಿಗೆ ವೈಯುಕ್ತಿಕ ನಿರ್ಧಾರದಡಿಯಲ್ಲಿ ವಸ್ತು ಅಥವಾ ನಗದು ರೂಪದಲ್ಲಿ ವೇತನ ಕೊಡಲಾಗುತ್ತಿತ್ತು. ಶಿಕ್ಷಣದ ಆಯ್ಕೆ ವೈಯುಕ್ತಿಕವಾಗಿದ್ದು ಸಾಂಸ್ಕೃತಿಕ, ಲೌಕಿಕ ಸ್ವಭಾವಕ್ಕೆ ಸರಿಹೊಂದುವ ಅಥವಾ

ಅನಿವಾರ್ಯತೆಗೆ ಅನುಗುಣವಾಗಿ ತನ್ನ ಕಲಿಕೆಯನ್ನು ನಿರ್ಧರಿಸುವ ಅವಕಾಶ ಎಲ್ಲರಿಗೂ ಇತ್ತಾದರೂ[55] ಪಾರಂಪರಿಕ ವಸಾಹತುಪೂರ್ವ ಸಮಾಜದ ಶಿಕ್ಷಿತ ಶ್ರೇಷ್ಠರು ಹೆಚ್ಚಾಗಿ ಬ್ರಾಹ್ಮಣರಾಗಿದ್ದರು. ಇದಕ್ಕೆ ಪ್ರಮುಖ ಕಾರಣ ಸಂಸ್ಕೃತ ಶಿಕ್ಷಣದ ಪ್ರವೇಶಾಧಿಕಾರ ಮತ್ತು ಏಕಸ್ವಾಮ್ಯಗಳು ಅವರನ್ನು ಸಮರ್ಥರನ್ನಾಗಿ ಮಾಡಿದ್ದವು. ಮೇಲ್ಮಟ್ಟದ ಸಂಸ್ಕೃತ ಶಿಕ್ಷಣ ಬ್ರಾಹ್ಮಣರಿಗೆ ಮಾತ್ರ ಹೊಂದಾಣಿಕೆಯಾಗುತ್ತದೆ ಎಂಬ ನಂಬಿಕೆಯು ಬಲವಾಗಿತ್ತು. ಮಾತ್ರವಲ್ಲ ಇದು ಅವರನ್ನು ಸಮಾಜದ ಏಕಮಾತ್ರ ಶಿಕ್ಷಿತ ಜಾತಿಯಾಗಿ ಮಾರ್ಪಡಿಸಿತು. ಆದರೂ ಉದಾಹರಣೆಗೆ 1822–1825ರ ಅವಧಿಯಲ್ಲಿ ವಸಾಹತುಶಾಹಿ ಸರ್ವೇಕ್ಷಣೆ ಮಾಡಿದ ಪ್ರಕಾರ ಅಂದು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ 11,575 ಶಾಲೆಗಳು, 1,52,195 ವಿದ್ಯಾರ್ಥಿಗಳು, 1094 ಕಾಲೇಜುಗಳಲ್ಲಿ 5431 ವಿದ್ಯಾರ್ಥಿಗಳ ಹಾಜರಾತಿ ಬಗ್ಗೆ ಮಾಹಿತಿ ನೀಡುತ್ತದೆ. ಈ ವಿದ್ಯಾರ್ಥಿಗಳು ಅವರ ಪ್ರಕಾರ ಪಾರಂಪರಿಕ ಜ್ಞಾನ ಪಡೆದವರು ಎಂದು ಮದ್ರಾಸ್ ಪ್ರೆಸಿಡೆನ್ಸಿಗೆ ಸಂಬಂಧಪಟ್ಟ ವಸಾಹತುಶಾಹಿ ದಾಖಲೆಗಳ ವರದಿಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಭಾರತದಲ್ಲಿ ಪಾಶ್ಚಿಮಾತ್ಯ ಜ್ಞಾನ ಪಸರಿಸುವ ಬಗ್ಗೆ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಚರ್ಚೆ ನಡೆದಾಗ ಅಮೇರಿಕಾದ ವಸಾಹತಿನಲ್ಲಿ ದೇಶೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದರಿಂದ ಉಂಟಾದ ತೊಂದರೆಗಳನ್ನು ಮತ್ತು ತದನಂತರ ಅವುಗಳ ಮೇಲೆ ನಿಯಂತ್ರಣ ಕಳೆದುಕೊಳ್ಳಬೇಕಾಯಿತೆಂಬ ವಾಸ್ತವವನ್ನು ವಿಮರ್ಶಿಸಿ ಅಂತಹ ತಪ್ಪು ಭಾರತದಂತಹ ವಸಾಹತಿನಲ್ಲಿ ಪುನರಾವರ್ತನೆಯಾಗಬಾರದೆಂದು ತೀರ್ಮಾನಿಸಿದ ವಸಾಹತುಶಾಹಿ ಭಾರತೀಯ ಜ್ಞಾನ ಪಸರಿಸುವ ಶಿಕ್ಷಣದ ಬಗ್ಗೆ ಹೆಚ್ಚು ಒತ್ತು ನೀಡಲು ಹಿಂದೇಟು ಹಾಕಿತು.[56] ಲಾಭ ಮಾಡುವ ಉದ್ದೇಶದ ವ್ಯಾಪಾರಿ ಸಂಸ್ಥೆಯಾದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು, ತನ್ನ ಆಳ್ವಿಕೆಯ ಮೊದಲ ಅರವತ್ತು ವರ್ಷಗಳು ತನ್ನ ಪ್ರಜೆಗಳ ಶಿಕ್ಷಣ ವಿಷಯದಲ್ಲಿ ಯಾವುದೇ ಆಸಕ್ತಿ ವಹಿಸಿರಲಿಲ್ಲ. 1781ರಲ್ಲಿ ವಾರನ್ ಹೇಸ್ಟಿಂಗ್ಸ್ ಕಲ್ಕತ್ತಾದಲ್ಲಿ ಮುಸಲ್ಮಾನ ಕಾನೂನು ಮತ್ತು ಸಂಬಂಧಿತ ವಿಷಯಗಳ ಅಧ್ಯಯನ ಮತ್ತು ಭೋದನೆಗೆಂದು ಉಚಿತ ಮದ್ರಸಾವನ್ನು ಸ್ಥಾಪಿಸಿದ್ದ. 1791ರಲ್ಲಿ ಜೋನಾಥನ್ ಡಂಕನ್ ಹಿಂದು ಕಾನೂನು ಮತ್ತು ತತ್ವಶಾಸ್ತ್ರದ ಅಧ್ಯಯನಕ್ಕೆಂದು ವಾರಣಾಸಿಯಲ್ಲಿ ಒಂದು ಸಂಸ್ಕೃತ ಕಾಲೇಜನ್ನು ಸ್ಥಾಪಿಸಿದ್ದ. ಈ ಎರಡು ಶಿಕ್ಷಣಸಂಸ್ಥೆಗಳು ಕಂಪನಿಯ ನ್ಯಾಯಾಲಯಗಳಲ್ಲಿ ಆಡಳಿತದಲ್ಲಿ ಕಾನೂನಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ನಿರಂತರ ಸಹಾಯ ಮಾಡುವ ಸಲುವಾಗಿಯೇ ಸ್ಥಾಪಿತವಾಗಿದ್ದವು. ಅದಾಗ್ಯೂ ಭಾರತೀಯರಿಗೆ ಶಿಕ್ಷಣ ನೀಡುವ ಸಂಗತಿ ಸುಲಭವಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದ ವಸಾಹತುಶಾಹೀ ಆರಂಭದಲ್ಲಿ ಕೆಲವೊಂದು ಗೊಂದಲಗಳಿಗೆ ಒಳಗಾಯಿತ್ತಲ್ಲದೇ ವಸಾಹತಿನ ಜನರಿಗೆ ಶಿಕ್ಷಣ ನೀಡಲು ಅವಸರಿಸಲಿಲ್ಲ.

ಆದರೆ ವಸಾಹತಿನಲ್ಲಿ ತನ್ನ ಅಧಿಕಾರ ಉಳಿಸಿಕೊಳ್ಳಬೇಕಾದರೇ ಶಿಕ್ಷಣದಂತಹ ಪ್ರಮುಖ ಅಂಶವನ್ನು ನೇಪಥ್ಯಕ್ಕೆ ಸರಿಸುವಂತಿಲ್ಲ ಎಂಬ ಸತ್ಯವನ್ನು ಅರಿತ ವಸಾಹತುಶಾಹಿ ಆ ದೃಷ್ಟಿಯಿಂದ ಕೆಲವೊಂದು ಅನಿವಾರ್ಯ ತೀರ್ಮಾನಗಳನ್ನು ತೆಗೆದುಕೊಳ್ಳಬೇಕಾಯಿತು. ಜೊತೆಗೆ ವ್ಯಾವಹಾರಿಕ ದೃಷ್ಟಿಯಿಂದಲೂ ಭಾರತದಲ್ಲಿ ಶಿಕ್ಷಣ ನೀಡಬೇಕಾದ ಅಗತ್ಯಗಳು ಬ್ರಿಟಿಷರಿಗೆ ಮನದಟ್ಟಾದವು.[57] ಸರ್ವೇ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಯುವಕರ ಸಹಾಯ ಅಗತ್ಯವಾಗಿತ್ತು. 1780ರಲ್ಲಿ ಭೂಮಾಪನಾ ಕಾರ್ಯಕ್ಕೆ ಅನುಕೂಲವಾಗುವಂತೆ ಬಂಗಾಳದಲ್ಲಿ ಗಣಿತ ಶಾಲೆಯನ್ನು ತೆರೆಯಲಾಯಿತು. 1781ರಲ್ಲಿ ಮದ್ರಸ, 1791ರಲ್ಲಿ ಸಂಸ್ಕೃತ ಶಾಲೆ, 1794ರಲ್ಲಿ ಮದರಾಸಿನ ಗಿಂಡಿಯಲ್ಲಿ ಮೊದಲ ಸರ್ವೇ ಸ್ಕೂಲ್ ಸ್ಥಾಪನೆಯಾಯಿತು. ಭೂಮಾಪನಕ್ಕೆ ಬೇಕಾದ ಗಣಿತ ಜ್ಞಾನ ಒರಿಯಂಟಲ್ಲಿತ್ತು. ಮದ್ರಸ ಮತ್ತು ಸಂಸ್ಕೃತ ಶಾಲೆಗಳು ಆಡಳಿತದ ಅನುಕೂಲಕ್ಕಾಗಿ, ನ್ಯಾಯಾಡಳಿತ ವ್ಯವಸ್ಥೆಗೆ ಅರ್ಹ ಹಿಂದು-ಮುಸ್ಲಿಂ ಕಾನೂನು ತಜ್ಞರನ್ನು ಒದಗಿಸುವುದಾಗಿತ್ತು. 1813 ಮತ್ತು 1833ರ ಚಾರ್ಟರ್ ಕಾಯಿದೆಯಲ್ಲಿ ಬಿಂಬಿತವಾಗಿರುವಂತೆ ಅಧುನಿಕ ಶಿಕ್ಷಣವು ದೇಶದ ಅನೇಕ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಲೋಪಗಳಿಗೆ ಉತ್ತಮ ಮದ್ದಾಗುತ್ತದೆ ಎಂದು ನಂಬಿದ್ದರೆ, ಮಿಷನರಿಗಳು ಅಧುನಿಕ ಶಿಕ್ಷಣವು ಜನರಲ್ಲಿ ಅವರ ಧರ್ಮದ ಬಗೆಗಿರುವ ಶ್ರದ್ಧೆಯನ್ನು ನಾಶಗೊಳಿಸಿ, ಅವರನ್ನು ಕ್ರೈಸ್ತ ಧರ್ಮದತ್ತ ಆಕರ್ಷಿಸುತ್ತದೆ ಎಂದು ನಂಬಿದ್ದರು. ಸನ್ನದು ಅಧಿನಿಯಮದಲ್ಲಿ ಭಾರತೀಯ ವಿದ್ಯಾವಂತರನ್ನು ಪ್ರೋತ್ಸಾಹಿಸುವ ನೀತಿ ಮತ್ತು ದೇಶದಲ್ಲಿ ಅಧುನಿಕ ವಿಜ್ಞಾನದ ಜ್ಞಾನವನ್ನು ಪ್ರೊತ್ಸಾಹಿಸುವ ವಿಚಾರವನ್ನು ಸೇರಿಸಿದಾಗ 1813ರಲ್ಲಿ ಇದಕ್ಕೆ ಸಣ್ಣ ಪ್ರಮಾಣದ ಚಾಲನೆ ದೊರೆಯಿತು. ಈ ಉದ್ದೇಶಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲು ಕಂಪನಿಗೆ ಕಾನೂನು ನಿರ್ದೇಶನ ನೀಡಿತು. ಇದನ್ನು ಅರಿತಿದ್ದ ಬ್ರಿಟಿಷ್ ಶಿಕ್ಷಣ ತಜ್ಞ ಮೆಕಾಲೆ ಭಾರತದಲ್ಲಿ ಇಂಗ್ಲೀಷ್ ಶಿಕ್ಷಣವನ್ನು ಆರಂಭಿಸಿ ತನ್ಮೂಲಕ ವಸಾಹತುಶಾಹೀಯ ಸ್ಥಿತಿಯನ್ನು ಭದ್ರಪಡಿಸುವ ಮತ್ತು ವಸಾಹತಿನ ಜನರ ಮಾನಸಿಕ ಸ್ಥಿತಿಯನ್ನು ರೂಪಿಸುವ ತಂತ್ರಗಾರಿಕೆಯನ್ನು ಹೆಣೆದನು. ಈ ತಂತ್ರಗಾರಿಕೆಗೆ ಅನುಗುಣವಾಗಿ ವಸಾಹತುಶಾಹಿ ವಸಾಹತಿನಲ್ಲಿ ಜ್ಞಾನವನ್ನು ಪಸರಿಸುವ ಶಿಕ್ಷಣ ಸಂಸ್ಥೆಗಳನ್ನು ತೆರೆಯಿತಾದರೂ ಆರಂಭದಲ್ಲಿ ಅವುಗಳ ಉದ್ದೇಶ ಶಿಕ್ಷಣ ನೀಡುವುದಕ್ಕಿಂತ ಹೆಚ್ಚಾಗಿ ವಸಾಹತುಶಾಹಿಯ ಅಧಿಕಾರಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳುವುದಾಗಿತ್ತು.[58] ಜೊತೆಗೆ ಪಾರಂಪರಿಕ ವ್ಯವಸ್ಥೆಗಳನ್ನು ನಾಶಗೊಳಿಸಿ, ಅವುಗಳ ಜಾಗದಲ್ಲಿ ವಸಾಹತುಶಾಹಿಯ ನೆಲೆಗಳನ್ನು ಭದ್ರಪಡಿಸುವುದಾಗಿತ್ತು. ಉನ್ನತ ಶಿಕ್ಷಣವನ್ನು ವಿಸ್ತರಿಸುವ ಸಂದರ್ಭದಲ್ಲಿ, ಜನಸಮೂಹದ ವಿದ್ಯಾಭ್ಯಾಸವನ್ನು ಕೈಗೆತ್ತಿಕೊಳ್ಳಬೇಕಾಗಿತ್ತು. ಆದರೆ ಸರ್ಕಾರವು, ಶಿಕ್ಷಣಕ್ಕಾಗಿ

ಹೆಚ್ಚು ಹಣವನ್ನು ವಿನಿಯೋಗಿಸಲು ಸಿದ್ಧವಿರಲಿಲ್ಲ. ಶಿಕ್ಷಣ ವೆಚ್ಚದ ಕೊರತೆಯನ್ನು ತುಂಬಲು, ಅಧಿಕಾರಿಗಳು ಇಳಿಮುಖ ಸೋಸುವಿಕೆಯ ಸಿದ್ಧಾಂತವನ್ನು ಅನುಸರಿಸಿದರು. 1854ರ ವುಡ್‌ನ ನಮೂದು ಶಿಕ್ಷಣದ ಅಭಿವೃದ್ಧಿಗೆ ತೆಗೆದುಕೊಂಡ ಮತ್ತೊಂದು ಮಹತ್ವದ ಹೆಜ್ಜೆ. ಇದು ಜನಸಮೂಹದ ವಿದ್ಯಾಭ್ಯಾಸ ಜವಬ್ದಾರಿಯನ್ನು ಸರಕಾರವೇ ವಹಿಸಿಕೊಳ್ಳಬೇಕು ಎಂಬುವುದಾಗಿತ್ತು. ಇದರ ಮುಖ್ಯ ಉದ್ದೇಶವೆಂದರೆ ಕಂಪನಿಯ ಪಾಶ್ಚಿಮಾತ್ಯ ಮಾದರಿಯ ಆಡಳಿತಕ್ಕೆ ಬೇಕಾದ ಗುಮಾಸ್ತರನ್ನು ಸುಲಭ ವೇತನಕ್ಕೆ ಒದಗಿಸುವ ಸಲುವಾಗಿ, ಕ್ರೈಸ್ತನ ಚಿಂತನೆಗಳನ್ನು ಒಪ್ಪಿಕೊಳ್ಳುವಲ್ಲಿ, ವಿದ್ಯಾವಂತ ತುಳುವರು (ಭಾರತೀಯರು) ವಸಾಹತುಶಾಹಿಯ ಮಾರುಕಟ್ಟೆಯು ವಿಸ್ತಾರಗೊಳ್ಳಲು ನೆರವಾಗುತ್ತಾರೆ ಎಂಬ ನಂಬಿಕೆಯನ್ನು ಇಟ್ಟುಕೊಂಡಿದ್ದರು.[59] ಆದ್ದರಿಂದ ಪಾಶ್ಚೀಮಾತ್ಯ ಅಥವಾ ಇಂಗ್ಲಿಷ್ ಶಿಕ್ಷಣದ ಅಗತ್ಯತೆಯನ್ನು ಸಮರ್ಥಿಸಿದ ಮೆಕಾಲೆ, ಈ ಬಗೆಯ ಶಿಕ್ಷಣದ ಮೂಲಕ 'ಐರೋಪ್ಯ ಭಾರತೀಯರ' ವರ್ಗವೊಂದನ್ನು ರೂಪಿಸಿ ಆ ವರ್ಗದ ಮೂಲಕ ವಸಾಹತಿನಲ್ಲಿರುವ ಇಂಗ್ಲಿಷ್ ಶಿಕ್ಷಣೇತ್ತರ ಪ್ರಜೆಗಳನ್ನು ಹತೋಟಿಯಲ್ಲಿಡುವ ಅಲೋಚನೆಯನ್ನು ಪ್ರತಿಪಾದಿಸಿದನು. ಅವರ ಪ್ರಕಾರ ನಾವು ಈಗ ಮಾಡಲೇಬೇಕಾದ ಮುಖ್ಯ ಕೆಲಸವೆಂದರೆ, ನಾವು ಮತ್ತು ನಾವು ಆಳುವ ಕೋಟಿಗಟ್ಟಲೇ ಜನರ ನಡುವೆ, ರಕ್ತ ಮಾಂಸಗಳಲ್ಲಿ ಭಾರತೀಯರಾಗಿಯೂ, ಅಭಿರುಚಿ, ಅಭಿಪ್ರಾಯ, ನೀತಿ ಮತ್ತು ಬುದ್ಧಿವಂತಿಕೆಯಲ್ಲಿ ಇಂಗ್ಲೀಷರಾಗಿ ಇರುವ ದುಭಾಸಿ ಎಂಬ ವರ್ಗವನ್ನು ನಿರ್ಮಾಣ ಮಾಡುವುದು.

ಹೀಗೆ ವಸಾಹತುಶಾಹಿಗಳು ಅಧುನಿಕ ಶಿಕ್ಷಣವನ್ನು ಉಪಯೋಗಿಸಿಕೊಂಡು, ದೇಶದಲ್ಲಿ ತಮ್ಮ ರಾಜಕೀಯ ಪ್ರಭುತ್ವದ ಅಡಿಪಾಯವನ್ನು ಬಲಗೊಳಿಸಲು ಇಚ್ಛಿಸಿದರು. ಮಾತ್ರವಲ್ಲ ಶಿಕ್ಷಣದ ಸ್ವರೂಪ, ಅದರ ಮಾಧ್ಯಮ, ಅದು ಹರಡುವ ಜ್ಞಾನ ಮತ್ತು ಆ ಜ್ಞಾನದ ಮೂಲಕ ವಸಾಹತಿನ ಮುಂದುವರಿಕೆಯನ್ನು ಬೆಂಬಲಿಸುವ ನಿಲುವುಗಳೇ ವಸಾಹತಿನಲ್ಲಿ ಅಧುನಿಕತೆ ಮತ್ತು ವೈಚಾರಿಕತೆಗಳ ಚೌಕಟ್ಟನ್ನು ರೂಪಿಸಿದವು. ಹೀಗೆ ದೇಶವನ್ನೊಳಗೊಂಡಂತೆ ತುಳುನಾಡಿನಲ್ಲಿ ವಸಾಹತುಶಾಹಿ ಹುಟ್ಟು ಹಾಕಿದ ಶಿಕ್ಷಣ ನೀತಿ ಅದರ ಅಧಿಕಾರಕ್ಕೆ ಪೋಷಕವಾಗುವ ರೀತಿಯಲ್ಲಿ ಕಾರ್ಯನಿರ್ವಹಿಸಿತು.

ಇಂಗ್ಲೀಷ್ ಭಾಷಾ ಶಿಕ್ಷಣ ವಸಾಹತುಶಾಹಿಗೆ ವಸಾಹತಿನ ಮೇಲೆ ಆರ್ಥಿಕವಾಗಿಯೂ ಸವಾರಿ ಮಾಡಲು ಅವಕಾಶ ನೀಡಿತ್ತಲ್ಲದೇ ವಸಾಹತಿನ ಸಂಪತ್ತನ್ನು ವಶಪಡಿಸಿಕೊಳ್ಳಲು ದಾರಿ ಮಾಡಿಕೊಟ್ಟಿತು. ಉತ್ಪಾದನೆ, ಉತ್ಪಾದನಾ ವಿಧಾನ ಮತ್ತು ಹಂಚಿಕೆಯ ಬಗೆಗೆ ತಿಳಿದುಕೊಂಡು ಕಾರ್ಯಪ್ರವೃತ್ತವಾಗಲು ಇಂಗ್ಲೀಷ್ ಶಿಕ್ಷಣ ವಸಾಹತುಶಾಹಿಗೆ ದೊಡ್ಡ ಕೊಡುಗೆಯನ್ನೇ ನೀಡಿತು. ಇಂಗ್ಲೀಷ್ ಭಾಷೆಯೇ ಶ್ರೇಷ್ಠ ಎಂದು ಪ್ರತಿಪಾದಿಸಿದ ಇಂಗ್ಲೆಂಡ್

ವಸಾಹತಿನ ಭಾಷೆಯ ಮೇಲೆ ಯಜಮಾನಿಕೆಯನ್ನು ಹೇರುವ ಪ್ರಯತ್ನಗಳನ್ನು ನಿರಂತರವಾಗಿ ಮಾಡಿತು.[60] ವಸಾಹತುಶಾಹೀ ಸಾಮ್ರಾಜ್ಯ ಸ್ಥಾಪಿಸಬೇಕಾದರೆ ಏಕರೂಪದ ಧರ್ಮ, ಪಾಶ್ಚಾತ್ಯ ನ್ಯಾಯಾಂಗ ಮತ್ತು ಪೋಲಿಸ್ ವ್ಯವಸ್ಥೆಗಳ ಸ್ಥಾಪನೆಯ ಜೊತೆಗೆ ಪ್ರಧಾನವಾಗಿ ಅಧುನಿಕ ಇಂಗ್ಲೀಷ್ ಶಿಕ್ಷಣಗಳಿಗೆ ಮಹತ್ವ ನೀಡಬೇಕೆಂಬುವುದನ್ನು ಅರಿತ್ತಿದ್ದ ಆಂಗ್ಲರು ಆ ದಿಕ್ಕಿನಲ್ಲಿ ತ್ವರಿತ ಹೆಜ್ಜೆಗಳನ್ನಿಟ್ಟರು. ಹೀಗೆ ವಸಾಹತುಶಾಹಿಯ ಸುಧಾರಣೆಯ ಕಲ್ಪನೆ, ಆಧುನಿಕೀಕರಣ ಮತ್ತು ಶಿಕ್ಷಣದ ನೀತಿಗಳೊಂದಿಗೆ ಸಮೀಕರಣಗೊಂಡು, ಅದರ ಮೂಲಕ ತನ್ನ ನೆಲೆಯನ್ನು ವಿಸ್ತರಿಸುವ ಉದ್ದೇಶದೊಂದಿಗೆ ಸಾರ್ವಕಾಲಿಕವಾಗಿ ಬೆಂಬಲಕ್ಕೆ ನಿಲ್ಲಬಲ್ಲ ಭಾರತೀಯರ 'ಇಂಗ್ಲೀಷ್ ಗುಂಪೊಂದನ್ನು' ಸೃಷ್ಟಿಸಿಕೊಂಡಿತು.[61] ಇಂಗ್ಲೀಷ್ ಭಾಷೆಯನ್ನು ಜನಪ್ರಿಯಗೊಳಿಸುವ ಗುರಿಯನ್ನಿಟ್ಟುಕೊಂಡು ಕ್ರೈಸ್ತ ಮತಪ್ರಚಾರಕರು, ತುಳುನಾಡಿನಲ್ಲಿ ಬ್ರಿಟಿಷ್ ಸರಕಾರ ಮತ್ತು ಪಾಶ್ಚೀಮಾತ್ಯ ವಿದ್ವಾಂಸರು ಸಹಯೋಗಗೊಂಡು ಕಾರ್ಯಪ್ರವೃತ್ತರಾದರಲ್ಲದೇ ಇಂಗ್ಲೀಷನ್ನು ಲೋಕಗ್ರಹಿಕೆಯ ಭಾಷೆಯನ್ನಾಗಿ ಪರಿವರ್ತಿಸಿದರು. ವಸಾಹತುಶಾಹಿಯು ಶೈಕ್ಷಣಿಕ ರಂಗದಲ್ಲಿ ರೂಪಿಸಿಕೊಂಡ ಈ ವ್ಯವಸ್ಥಿತ ನಿಲುವಿನಿಂದಾಗಿ ವಸಾಹತಿನಲ್ಲಿ ಪಾರಂಪರಿಕವಾಗಿ ವಿನ್ಯಾಸಗೊಂಡಿದ್ದ ಶಿಕ್ಷಣದ ವ್ಯವಸ್ಥೆ ಪಲ್ಲಟಗೊಂಡಿತ್ತಲ್ಲದೇ ಪಾಶ್ಚಾತೀಕರಣ ಮತ್ತು ಅಧುನಿಕೀಕರಣಗಳ ಆಕ್ರಮಣಗಳಿಂದ ನಲುಗಿ ಆಸ್ತಿತ್ವಕ್ಕಾಗಿ ಹೋರಾಡಬೇಕಾಯಿತು.[62] ಜೊತೆಗೆ ಉದ್ಯೋಗ ಮತ್ತು ಶಿಕ್ಷಣಗಳ ನಡುವೆ ಸಂಬಂಧ ಕಲ್ಪಿಸಿ ನೌಕರಿಶಾಹಿಯ ಕೆಳಗಿನ ಹುದ್ದೆಗಳಲ್ಲಿ ಕೆಲಸ ಮಾಡಬಯಸುವವರು ಇಂಗ್ಲೀಷ್ ಶಿಕ್ಷಿತರಾಗಿರಬೇಕೆಂದು ಅರ್ಹತೆಯನ್ನು ನಿಗದಿಪಡಿಸಿ ಘೋಷಣೆ ಹೊರಡಿಸಿತು. ಇದು ಇಂಗ್ಲೀಷ್ ಪದ್ಧತಿಯನ್ನು ಆಕರ್ಷಣೀಯಗೊಳಿಸಿತು. ತುಳುಸಮಾಜವನ್ನು ಬದಲಾಯಿಸಿಕೊಳ್ಳಲು ವೇದಿಕೆಯಾಯಿತು. ಒಟ್ಟಿನಲ್ಲಿ ಹೇಳುವುದಾದರೆ ವಸಾಹತಿನಲ್ಲಿ ರೂಪಿತಗೊಂಡ ಆಧುನಿಕ ಶಿಕ್ಷಣ ಪದ್ಧತಿ ವಸಾಹತುಶಾಹಿಯ ದೀರ್ಘಾಯುಷ್ಯದ ನೆಲೆ ವಿಸ್ತರಣೆಯಲ್ಲಿ ಪರ್ಯಾಪ್ತವಾಯಿತ್ತಲ್ಲದೇ ಕ್ರೈಸ್ತಮಿಷನರಿಗಳ ಚಟುಟವಟಿಕೆಗಳಿಗೆ ಬಾಗಿಲು ತೆರೆಯಿತು.[63] ವೈಯುಕ್ತಿಕ ಕುತೂಹಲವನ್ನು ಹೊರತುಪಡಿಸಿದರೆ ಹೊಸ ಆಡಳಿತಗಾರರಿಗೆ ಗೋಪ್ಯ ಶಿಕ್ಷಣದ (ಸೀಮಿತವಾಗಿದ್ದ ದೇಶಿಯ ಶಿಕ್ಷಣ ವ್ಯವಸ್ಥೆ) ಯಾವ ಉಪಯೋಗವು ಇರಲಿಲ್ಲವಾದುದರಿಂದ ವಸಾಹತಿನ ಪ್ರಜೆಗಳಿಗೆ ಲೌಕಿಕ ಶಿಕ್ಷಣವನ್ನು ನೀಡಿ ವಸಾಹತುಶಾಹಿಯ ಅಧೀನ ಹಂತಗಳಲ್ಲಿ ಆಡಳಿತ ನಡೆಸುವಲ್ಲಿ ತರಬೇತಿ ನೀಡುವುದಾಗಿತ್ತು.[64] ಇದು ವಸಾಹತುಶಾಹಿಯ ಎರಡು ಉದ್ದೇಶಗಳ ಈಡೇರಿಕೆಗೆ ಅನುವು ಮಾಡಿಸಿಕೊಟ್ಟಿತ್ತು. ಒಂದು, ಶಿಕ್ಷಣ ಪಡೆದ ವರ್ಗ ಕೃತಜ್ಞತಾಪೂರ್ವಕವಾಗಿ ಬ್ರಿಟಿಷ್ ಆಳ್ವಿಕೆಯ ಕೆಳಹಂತದಲ್ಲಿ ಉದ್ಯೋಗ ಪಡೆದು ವಸಾಹತುಶಾಹಿಯ ಹಿಂಬಾಲಕರಾಗಿರುವುದು. ಎರಡು, ಶಿಕ್ಷಿತ ವರ್ಗದ

ಮೂಲಕ ಅಶಿಕ್ಷಿತ ಇತರ ಭಾರತೀಯರಿಗೆ ವಿದ್ಯೆ ನೀಡುವುದು.[65] ವಸಾಹತುಶಾಹಿ ವಸಾಹತಿನಲ್ಲಿ ತನ್ನ ಮುಂದುವರಿಯುವಿಕೆಗೆ ಅನುಸರಿಸಿದ ಮತ್ತೊಂದು ಪ್ರಮುಖ ಮಾರ್ಗವೆಂದರೆ ಪರಂಪರಾಗತ ಮೇಲು ಜಾತಿಯವರ ಒಲೈಕೆ. ಅಂತೆಯೇ ಬದಲಾದ ಪರಿಸ್ಥಿತಿಯಲ್ಲಿ ಪರಿಣಾಮಕಾರಿಯಾಗಿ ಕಾಣಿಸಿಕೊಳ್ಳುವ ಅವಕಾಶಗಳನ್ನು ಕಳೆದುಕೊಳ್ಳಲು ಮೇಲ್ವರ್ಗದವರೂ ತಯಾರಿರಲಿಲ್ಲ. ಅವಕಾಶ ಸಿಗಬೇಕಾದಲ್ಲಿ, ಅದರಲ್ಲೂ ಮುಖ್ಯವಾಗಿ ರಾಜಕೀಯ ಅವಕಾಶ ಪಡೆದುಕೊಳ್ಳಬೇಕಾದರೆ ಇಂಗ್ಲೀಷ್ ಶಿಕ್ಷಣಕ್ಕೆ ಒಳಗಾಗಬೇಕು ಮತ್ತು ವಸಾಹತುಶಾಹಿ ವ್ಯವಸ್ಥೆಯಲ್ಲಿ ಭಾಗಿಗಳಾಗಬೇಕೆಂಬ ವಸಾಹತುಶಾಹಿಯ ನಿಲುಮೆ ಅವರಿಗೆ ವರದಾನವಾಯಿತು. ಹೊಸ ಶಿಕ್ಷಣ ಪಡೆಯುವಲ್ಲಿ ಕ್ರೈಸ್ತ, ಬ್ರಾಹ್ಮಣರೇ ಮೊದಲಿಗರಾಗಿದ್ದರೂ ಇತರ ಮೇಲ್ವರ್ಗದವರು ಕೂಡಾ ಬ್ರಾಹ್ಮಣೀಯ ಶಾಸ್ತ್ರಗಳ ನಿಷೇಧಗಳಿಲ್ಲದೇ ವಸಾಹತುಶಾಹಿ ಶಿಕ್ಷಣವನ್ನು ಪಡೆದುಕೊಳ್ಳಬಹುದಾಗಿತ್ತು. ಆದರೆ ಕೆಳವರ್ಗದವರೆಂದು ಪರಿಗಣಿಸಲ್ಪಟ್ಟವರು ಮಾತ್ರ ಈ ಸ್ಪರ್ಧೆಯಲ್ಲಿ ಹಿಂದುಳಿದಿದ್ದು, ಅವರು ಹೋರಾಟದ ಹಾದಿ ತುಳಿಯಬೇಕಾದ ಅನಿವಾರ್ಯತೆ ರೂಪಿಸಲ್ಪಟ್ಟಿತ್ತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ವರ್ಗಗಳು ಈ ಹೊಸ ಅವಕಾಶಗಳನ್ನು ಬಾಚಿಕೊಳ್ಳಲು ತವಕಿಸಿದ್ದು ಎರಡು ಪರಿಣಾಮಗಳಿಗೆ ಎಡೆ ಮಾಡಿಕೊಟ್ಟಿತು. ಅವುಗಳೆಂದರೆ ಕೆಳವರ್ಗದ ಶೋಷಣೆ ಮತ್ತು ಪರಂಪರಾಗತ ದೇಶಿಯ ವ್ಯವಸ್ಥೆಗಳ ಅವಸಾನ.

ವಸಾಹತುಶಾಹಿಗಳು ತುಳುನಾಡಿನಲ್ಲಿ ಆರಂಭಿಸಿದ ಹೊಸ ಶಿಕ್ಷಣ ವ್ಯವಸ್ಥೆಯು ಪ್ರಗತಿಯ ಸಂಕೇತವೆಂದು ಬಿಂಬಿಸಲ್ಪಟ್ಟದ್ದರಿಂದ ಅದನ್ನು ಧಿಕ್ಕರಿಸಲು ಸಾಧ್ಯವಿರಲಿಲ್ಲ.[66] ಹತ್ತೊಂಬತ್ತನೇ ಶತಮಾನದಲ್ಲಿ ಬ್ರಿಟಿಷರ ಭೌತಿಕ ಸಂಸ್ಕೃತಿ ಮತ್ತು ಸವಲತ್ತುಗಳ ಜೊತೆಗೆ ಅವರು ಇಂಗ್ಲೆಂಡಿನಿಂದ ತಂದ ಮತ್ತು ಇಲ್ಲಿ ಸೃಷ್ಟಿಸಿದ ಸಾಹಿತ್ಯ ಮತ್ತು ಇತಿಹಾಸದ ಬರವಣಿಗೆಗಳು ಭಾರತೀಯರ ಮನಸ್ಸಿನಲ್ಲಿ ಇಂಗ್ಲಂಡಿನ ಬಗ್ಗೆ ಹಾಗೂ ಒಟ್ಟಾಗಿ ಪಶ್ಚಿಮದ ಬಗ್ಗೆ ಒಂದು ಬಗೆಯ ಸಕರಾತ್ಮಕ ಮನೋಭಾವನೆ ತಳೆಯುವಂತೆ ಮಾಡಿತು. ಇನ್ನೊಂದೆಡೆ ಅವರ ಬರವಣಿಗೆಗಳು ಪಾಶ್ಚಾತ್ಯ ಶಿಕ್ಷಣ ಪಡೆದ ವಸಾಹತಿನ ಮೇಲ್ವರ್ಗದ ಜನರಲ್ಲಿ ತಮ್ಮದೇ ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ಜಿಜ್ಞಾಸೆ ಮೂಡಿಸಿದವು. ಇದರ ಜೊತೆಗೆ ಶಿಕ್ಷಣ ವ್ಯವಸ್ಥೆ, ವಸಾಹತುಶಾಹಿ ಸಿದ್ಧಾಂತದ ಪ್ರತಿಪಾದನೆ, ಪರಿಣಾಮಕಾರಿತ್ವಗಳ ಹೇಳಿಕೆ ಮತ್ತು ವಸಾಹತುಶಾಹಿಯ ಆಸ್ತಿತ್ವದ ತಳಪಾಯವಾಗಿ ಜವಬ್ದಾರಿ ನಿರ್ವಹಿಸಬೇಕಾಗಿತ್ತು. 1857ರ ಭಾರತದ ಸಿಪಾಯಿ ದಂಗೆಯಿಂದ ಕೇವಲ ಬಲಪ್ರಯೋಗದಿಂದ ಮಾತ್ರ ವಸಾಹತಿನಲ್ಲಿ ತನ್ನ ಉದ್ಧೇಶ ಈಡೇರಿಕೆಗೆ ಆಸಾಧ್ಯವೆಂದರಿತ ವಸಾಹತುಶಾಹಿ ಒಲಿಸಿಕೊಳ್ಳುವಿಕೆಯ ಅನಿವಾರ್ಯತೆಯನ್ನು ಮನಗಂಡಿತು. ಆದ್ದರಿಂದ ತನ್ನ ಶಿಕ್ಷಣ ನೀತಿಯನ್ನು ಈ ಗುರಿ

ಸಾಧನೆಗಾಗಿ ಬದಲಾಯಿಸುವ ಪ್ರಯತ್ನ ಮಾಡಿತು.[67] 'ಶೀ ಡಸ್ ನಾಟ್ ಕಾಲ್ ನೆಟಿವ್ಸ್ ಟು ಗಾಡ್ಸ್ ವೇಯ್ಸ್ ಬಟ್ ಟು ದ ವೇಯ್ಸ್ ಒಫ್ ದ ವೈಟ್‌ಮೆನ್ ಒಫ್ ದ ಮಾಸ್ಟರ್ ಒಫ್ ದ ಒಪ್ರೆಸರ್'.

ವಸಾಹತುಶಾಹಿ ಇತಿಹಾಸತಜ್ಞರ ಅಭಿಪ್ರಾಯದಲ್ಲಿ ಸಿಪಾಯಿ ದಂಗೆಯಲ್ಲಿ ಬ್ರಿಟಿಷರ ಬೆನ್ನಿಗೆ ನಿಂತಿದ್ದು ಕೇವಲ ಪಾಶ್ಚಾತ್ಯ ಶಿಕ್ಷಣ ಪಡೆದ ವಸಾಹತಿನ ಒಂದು ವರ್ಗ ಮತ್ತು ವಸಾಹತುಶಾಹಿ ಆಡಳಿತದಿಂದ ಪ್ರಭಾವಿತಗೊಂಡ ಗುಂಪುಗಳು ಮಾತ್ರ.[68] ಹೀಗೆ ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ ನೀಡಿ ಅಂತಹ ಶಿಕ್ಷಣದ ಮೂಲಕ ಒಂದು ವರ್ಗವನ್ನು ಸೃಷ್ಟಿಸಿ ಅದರ ಮೂಲಕ ಜ್ಞಾನಪರ್ವದ ಚಿಂತನೆಗಳನ್ನು ಆಧುನಿಕತೆಯ ಮಾನದಂಡದೊಂದಿಗೆ ತುಳುನಾಡಿನಲ್ಲಿ ಕಾರ್ಯರೂಪಕ್ಕೆ ತರುವುದು ವಸಾಹತುಶಾಹಿ ಶಿಕ್ಷಣದ ಒಂದು ಪ್ರಮುಖ ಉದ್ಧೇಶವಾಗಿತ್ತು. ವಸಾಹತುಶಾಹೀ ಮತ್ತು ಮಿಷನರಿಗಳೊಂದಿಗೆ ದೇಶಿಯ ಶಿಕ್ಷಿತ ವರ್ಗವೂ ಕಾರ್ಯಪ್ರವೃತ್ತವಾದಾಗ ತುಳುನಾಡಿನ ರಾಜಕೀಯ, ಸಾಮಾಜಿಕ, ನ್ಯಾಯಿಕ ಧಾರ್ಮಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಗಳೆಲ್ಲವೂ ಮರುವ್ಯಾಖ್ಯಾನಕ್ಕೆ ಒಳಗಾದವು.

ತುಳು ಸಂಸ್ಕೃತಿಯಲ್ಲಿ ಇಂಗ್ಲೀಷ್ ಶಿಕ್ಷಣದ ಪ್ರವೇಶವು ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಯ ವೇಗವನ್ನು ಹೆಚ್ಚಿಸಿತ್ತಲ್ಲದೇ ಇದರಿಂದ ತುಳುನಾಡನ್ನು ನಾಗರೀಕವನ್ನಾಗಿಸಲು ಮತ್ತು ಅಭಿವೃದ್ಧಿಪಡಿಸಲು ಸಾಧ್ಯ ಎಂಬ ಮತಪ್ರಚಾರಕರ ಅಭಿಪ್ರಾಯಗಳು ಇದಕ್ಕೆ ಮತ್ತಷ್ಟು ಇಂಬು ನೀಡಿದವು.[69] 1897ರಲ್ಲಿ ಅಲೋಷಿಯಸ್ ಕಾಲೇಜಿನ ಸಹಾಯಕ ಪ್ರಾಧ್ಯಾಪಕರಾದ ವೆಂಕಟರಾವ್ ಎಂಬವರು ಕಾಲೇಜಿನ ರೆಕ್ಟರ್‌ನ ಪ್ರಭಾವಕ್ಕೆ ಒಳಗಾಗಿ ಮತಪರಿವರ್ತನೆಗೊಳ್ಳಬೇಕಾಯಿತು. ಮಂಜೇಶ್ವರದ ಪಾವೂರಿನಲ್ಲಿ ಜೆಸೂಯಿಟರು ಸುಮಾರು 5000 ಕೊರಗರನ್ನು ಸಾಮೂಹಿಕವಾಗಿ ಮತಪರಿವರ್ತಿಸಿದರೆ, ಕೊಕ್ಕಡ, ಅರುವ, ನಾರವಿಗಳಲ್ಲಿ ಫಾದರ್ ಕಮ್ಮಿಸಾ, ಗವರಗಿ, ಸೆಬಾಸ್ಟಿಯನ್ ನರೋನ್ಹಾ, ಆರ್.ಡಿ ಸಿಕ್ವೇರಾ, ಕೊರ್ಟಿ, ಪೆರಿನಿ ಮುಂತಾದವರು ಮತಪರಿವರ್ತನೆಯ ಕಾರ್ಯ ಮುಂದುವರೆಸಿದರು. ಮತಪರಿವರ್ತನೆಯಲ್ಲಿ ಯಶಸ್ಸನ್ನು ಪಡೆದ ಬಿಷಪ್ ಪೆರಿನಿಗೆ 1918ರಲ್ಲಿ ವಸಾಹತುಶಾಹಿ ಕೈಸರ್-ಇ-ಹಿಂದ್ ಬಿರುದನ್ನು ಕೊಟ್ಟು ಗೌರವಿಸಿದ್ದು ಸರಕಾರವು ಈ ಕಾರ್ಯದಲ್ಲಿ ಪ್ರೋತ್ಸಾಹ ನೀಡಿದ್ದನ್ನು ಸ್ಪಷ್ಟಪಡಿಸಬಹುದು. ಮತಪ್ರಚಾರಕರ ಪ್ರಕಾರ ವಸಾಹತಿನ ಮಕ್ಕಳಿಗೆ ಬಾಲ್ಯವಸ್ಥೆಯಲ್ಲೇ ಕ್ರಿಸ್ತನ ಚಿಂತನೆಯನ್ನು ಪರಿಚಯಿಸಿದರೆ ಅವರು ಪ್ರೌಢರಾದಾಗ ಸುಲಭವಾಗಿ ಕ್ರೈಸ್ತರಾಗುತ್ತಾರೆ. ಈ ಉದ್ದೇಶದಿಂದಲೇ ವಸಾಹತುಶಾಹಿ ವಸಾಹತೀಕರಣ, ನಾಗರೀಕರಣ, ಕ್ರೈಸ್ತೀಕರಣ ಮುಂತಾದ ಮತಪ್ರಚಾರಕರ ಅಂತಿಮ ತೀರ್ಮಾನಕ್ಕೆ ಬೆಂಬಲ ನೀಡಿತು.[70] ಶಿಕ್ಷಣ ಪ್ರಸರಿಸುವ

ಶಾಲೆಗಳು ಮಿಷನರಿಗಳ ಏಜೆನ್ಸಿಗಳಾಗಿ, ಅವುಗಳ ಸ್ಥಾಪನೆಯ ಉದ್ದೇಶವೇ ಮತಪರಿವರ್ತನೆ ಮಾಡುವುದಾಗಿತ್ತು.

ವಸಾಹತುಶಾಹಿಯ ಆಡಳಿತದ ಸಂದರ್ಭದಲ್ಲಿ ವಸಾಹತಿನ ಸಮುದಾಯಗಳ ಬೇಡಿಕೆಗಳು, ಲಭ್ಯವಿದ್ದ ಹೊಸ ಆಯ್ಕೆಗಳು, ಬಾಸೆಲ್ ಮಿಷನು ಮತ್ತು ವಸಾಹತುಶಾಹಿ ಸರಕಾರ ಅದಕ್ಕೆ ಸ್ಪಂದಿಸಿದ ರೀತಿ ಮುಂತಾದವುಗಳು ಇಲ್ಲಿನ ಸಮಾಜವನ್ನು ಏಕಸ್ವರೂಪದ ಸಮಾಜವಾಗಿ ಮಾತ್ರ ವ್ಯಾಖ್ಯಾನಿಸದೆ, ಪರಸ್ಪರ ವಿರೋಧಾಭಾಸಗಳಿಂದ ಹಾಗೂ ವಿವಿಧ ಸಮುದಾಯಗಳಿಂದ ರೂಪಿತವಾದ ಸಮಾಜ ಎಂದು ತೀರ್ಮಾನಿಸಲು ಅವಕಾಶ ನೀಡಿತು.[71] ಹೀಗೆ ಅಧುನಿಕ ವಿಜ್ಞಾನ, ತಂತ್ರಜ್ಞಾನದ ಬೆಳವಣಿಗೆ, ತೀವ್ರಗತಿಯ ಕೈಗಾರಿಕೀಕರಣ, ಧರ್ಮದ ಬಗೆಗಿನ ನಂಬಿಕೆ, ಅಪನಂಬಿಕೆ ಮುಂತಾದವುಗಳು ಆಧುನಿಕ ಶಿಕ್ಷಣದೊಂದಿಗೆ ವಸಾಹತುಶಾಹಿಯ ಚಿಂತನೆ ವಿನ್ಯಾಸಗೊಳ್ಳುವಲ್ಲಿ ಪ್ರಮುಖ ಪಾತ್ರವಹಿಸಿತು. ಮೈಕಲ್ ಫುಕೋ ಎಂಬ ವಿದ್ವಾಂಸನ ಪ್ರಕಾರ ಜ್ಞಾನ ಮತ್ತು ಅಧಿಕಾರಗಳ ಮಧ್ಯೆ ಅನಾನ್ಯ ಸಂಬಂಧಗಳಿವೆ. ವಸಾಹತುಶಾಹಿ ಸಂದರ್ಭದ ಜ್ಞಾನ ಆಳುವವರ ಸೊತ್ತಾಗಿದ್ದರಿಂದ ವಸಾಹತಿನ ಪ್ರಜೆಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧಗಳಲ್ಲಿ ಈ ಜ್ಞಾನ ಅಧಿಕಾರದ ಮೂಲಕ ಪ್ರವೇಶಗೈಯಿತು. ಇದೇ ಜ್ಞಾನ ಮತ್ತೆ ಅಧಿಕಾರದ ಬೆಸೆಯುವಿಕೆಯಿಂದ ವಸಾಹತುಶಾಹೀ ತುಳುನಾಡಿನಲ್ಲಿ ತನ್ನ ಆಶಯಗಳನ್ನು ಈಡೇರಿಸಿಕೊಂಡಿತು. ಒಟ್ಟಿನಲ್ಲಿ ವಸಾಹತುಶಾಹೀ ಜ್ಞಾನ ಅವರ ಅಧಿಕಾರದ ಮುಂದುವರಿಯುವಿಕೆಗೆ ಪೂರಕವಾದ ರೀತಿಯಲ್ಲಿ ವಿನ್ಯಾಸಗೊಂಡಿತು.[72]

ಹತ್ತೊಂಬತ್ತನೇ ಶತಮಾನದ ಅಧುನಿಕ ವಿದ್ಯಾಭ್ಯಾಸದ ಗುರಿ ಪ್ರಮುಖವಾಗಿ ಬ್ರಿಟಿಷರ ವಿರುದ್ಧ ಇರುವ ಕ್ರೋಧವನ್ನು ಶಮನಗೊಳಿಸುವುದು ಮಾತ್ರವಲ್ಲ ಉಪಯುಕ್ತವಾದದ ಉದ್ದೇಶಿತ ಗುರಿಗಳನ್ನು ಹಾಗೂ ಸಾಮಾಜಿಕ ಪರಿವರ್ತನಕಾರರ ಅಜೆಂಡಾಗಳನ್ನು ವಸಾಹತಿನಲ್ಲಿ ಪೂರ್ಣಗೊಳಿಸುವುದಾಗಿತ್ತು. ಮೆಕಾಲೆಯ ದೂರದೃಷ್ಟಿಯಂತೆ ಭಾರತೀಯ ಮನಸ್ಸುಗಳನ್ನು ಪಾಶ್ಚಾತ್ಯೀಕರಿಸಿ ವಸಾಹತನ್ನು ಶಾಶ್ವತವಾಗಿ ಪರಿವರ್ತಿಸುವುದಾಗಿತ್ತು. ಭಾರತವನ್ನು, ಅದರಲ್ಲೂ ನಿರ್ದಿಷ್ಟವಾಗಿ ತುಳುನಾಡನ್ನು ಹಾಗೇ ಮಾಡುವುದು ವಸಾಹತುಶಾಹೀಯ ದೃಷ್ಟಿಯಿಂದ ಅವಶ್ಯಕವಾದರೂ ಅದು ಪ್ರಾರಂಭದ ದಿನಗಳಲ್ಲಿ ತನ್ನ ಏಕರೂಪತೆಯ ಚಿಂತನೆಗಳನ್ನು ಕಾರ್ಯಗತಗೊಳಿಸುವುದು ಸುಲಭವಾಗಿರಲಿಲ್ಲ. ತುಳುನಾಡಿನಲ್ಲಿ ಜೆಸೂಯಿಟರು, ಕಾರ್ಮಲೈಟರು, ಬೆಥನಿ ಮುಂತಾದ ಕೆಥೋಲಿಕ್ ಮತಪ್ರಚಾರಕರು, ಬಾಸೆಲ್ ಮಿಷನರಿಗಳು ಹಾಗೂ ವಸಾಹತುಶಾಹಿ ಸರಕಾರ ಒಟ್ಟಾಗಿ ಈ ಗುರಿಯನ್ನಿಟ್ಟುಕೊಂಡು ಶಿಕ್ಷಣ ಸಂಸ್ಥೆಗಳನ್ನು ತೆರೆದು ವಾಸ್ತವಗೊಳಿಸಲು

ಪ್ರಯತ್ನಿಸಿದವು.[73] 1844 ರಿಂದ ಕ್ಯಾಥೋಲಿಕ್ಕರು ಚರ್ಚ್ ಶಾಲೆಗಳನ್ನು ಪ್ರಾರಂಭಿಸಿದರಲ್ಲದೇ, ವಸಾಹತುಶಾಹಿ ಸರಕಾರದಿಂದ ಸಿಗುವ ಎಲ್ಲಾ ರೀತಿಯ ಅನುದಾನಗಳನ್ನು ಶಾಲೆಯ ನಿರ್ವಹಣೆಗೆ ಬಳಸಿಕೊಂಡರು. 1886ರಲ್ಲಿ ಮಂಗಳೂರಿನಲ್ಲಿ ಪೂರ್ಣಪ್ರಮಾಣದ ಡಯೋಸಿಸ್ ಪ್ರಾರಂಭಗೊಂಡ ನಂತರ ಗ್ರಾಮೀಣ ಸ್ತರದಲ್ಲೂ ಕ್ಯಾಥೋಲಿಕ್ಕರಿಗಾಗಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಲಾಯಿತು.

ವಸಾಹತಿನಲ್ಲಿ ವಸಾಹತುಶಾಹಿ ನಿರ್ದೇಶಿತ ಶಿಕ್ಷಣವನ್ನು ಪಡೆದುಕೊಳ್ಳಲು ಆರಂಭದಲ್ಲಿ ಹಿಂಜರಿಕೆ ವ್ಯಕ್ತವಾದರೂ ಕ್ರಮೇಣ ಅದು ಸಮಾಜದ ಕೆಲವು ವರ್ಗಗಳಿಗೆ ಸ್ವೀಕೃತವಾಯಿತು. ಲಾಭ ಹಾಗೂ ಅನುಕೂಲತೆಗಳಿಗನುಗುಣವಾಗಿ ಕ್ರೈಸ್ತರಿಗೆ ಆಶ್ರಯ ಸ್ಥಾನನೀಡುವ, ಅವರು ನೀಡುವ ಹೊಸ ಉದ್ಯೋಗವನ್ನು ಪಡೆದುಕೊಳ್ಳುವ ಮುಂತಾದವುಗಳ ಬಗ್ಗೆ ತೀರ್ಮಾನಿಸುತ್ತಿದ್ದರು. ಈ ಪ್ರಕ್ರಿಯೆಯಲ್ಲಿ ಕೆಳವರ್ಗದವರಿಗೆ ಬಡತನ ಅಡ್ಡಿಯಾಗಿ ಪರಿಣಮಿಸಿತು.[74] ಸಾಮಾನ್ಯಶಕೆ 1830ರಲ್ಲಿ ತುಳುನಾಡಿನಲ್ಲಿ ತಳವೂರಿದ ಬಾಸೆಲ್‌ಮಿಷನ್ ಸಾಮಾನ್ಯಶಕೆ 1836ರಲ್ಲಿ ರೆವರೆಂಡ್ ಸಾಮ್ಯುವೆಲ್ ಹೆಬಿಕ್‌ನ ಮುತುವರ್ಜಿಯೊಂದಿಗೆ ಮಂಗಳೂನಲ್ಲಿ ಮೊದಲ ಶಾಲೆಯನ್ನು ಪ್ರಾರಂಭಿಸಿ, ಕ್ರಿಸ್ತನ ಬೋಧನೆಯೊಂದಿಗೆ ಪಾಶ್ಚಾತ್ಯ ಚಿಂತನೆಯನ್ನು ಹರಡುವ ಕೆಲಸವನ್ನು ಮಾಡಿತು. ಮಂಗಳೂರಿನ ನೀರೆಶ್ವಾಲ್ಯದಲ್ಲಿ 4 ವಿದ್ಯಾರ್ಥಿಗಳ ದಾಖಲಾತಿಯೊಂದಿಗೆ ಮಂಗಳೂರಿನ ಮೊದಲ ಪಾಶ್ಚಾತ್ಯ ಮಾದರಿಯ ಶಾಲೆ ಪ್ರಾರಂಭವಾಯಿತು. ರೆವೆರೆಂಡ್ ಸಾಮುವಲ್ ಹೆಬಿಕನ ಜತೆ ಸಿ.ಎಲ್ ಗ್ರೇನರ್, ಜೆ.ಸಿ ಲೆಹ್ನರ್ ಕ್ರಮವಾಗಿ 1834ರಲ್ಲಿ ಮಂಗಳೂರು, 1845ರಲ್ಲಿ ಮೂಲ್ಕಿ, 1855ರಲ್ಲಿ ಉಡುಪಿ, 1871ರಲ್ಲಿ ಕಾರ್ಕಳದಲ್ಲಿ ಮಿಷನರಿ ಕೇಂದ್ರ ಹಾಗೂ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರು. ಸಾಮಾನ್ಯಶಕೆ 1837ರಲ್ಲಿ ಆಂಗ್ಲೋ ವರ್ನಾಕುಲರ್ ಶಾಲೆ ಸ್ಥಾಪನೆಯಾದರೆ, 1844ರಲ್ಲಿ ಕ್ಯಾಥೋಲಿಕರು ಚರ್ಚುಶಾಲೆಗಳನ್ನು ಪ್ರಾರಂಭಿಸಿದರು. ಸಾಮಾನ್ಯಶಕೆ 1857ರಲ್ಲಿ ಉಡುಪಿಯ ಹೀದನ್‌ಗಳನ್ನು ಸರಿ ದಾರಿಗೆ ತರುವ ಉದ್ದೇಶದಿಂದ ಹಾಗೂ ಕ್ರೈಸ್ತನ ಸಂದೇಶಗಳನ್ನು ಬಿತ್ತರಿಸಲು ಹಾಗೂ ಸಾಮಾಜಿಕವಾಗಿ ಪರಿವರ್ತಿತರನ್ನು ಸಬಲೀಕರಿಸಲು ಶೈಕ್ಷಣಿಕ ಸಂಸ್ಥೆಗಳು ಹುಟ್ಟಿಕೊಂಡವು.[75] ನಿರ್ದಿಷ್ಟವಾಗಿ ಕ್ರೈಸ್ತೇತರರಿಗಾಗಿಯೇ ಶಾಲೆಗಳನ್ನು ಪ್ರಾರಂಭಿಸುವುದರಿಂದ ವಸಾಹತಿನಲ್ಲಿ ಕ್ರಿಸ್ತನ ಸಂದೇಶಗಳನ್ನು ಹರಡುವ ಕೆಲಸ ಸುಲಭವಾಯಿತು. 1865ರಲ್ಲಿ ಸರಕಾರವೇ ಪ್ರಾಂತೀಯ ಶಾಲೆಗಳನ್ನು ಪ್ರಾರಂಭಿಸಿತ್ತಲ್ಲದೇ 'ಗ್ರಾಂಟ್ ಇನ್ ಏಯ್ಡ್' ವ್ಯವಸ್ಥೆಯನ್ನು ಜಾರಿಗೆ ತಂದಿತು. 1863ರಲ್ಲಿ ಎಲಿಮೆಂಟರಿ ಎಜುಕೇಷನ್ ಆಕ್ಟ್, 1871ರಲ್ಲಿ ಲೋಕಲ್ ಫಂಡ್ ಆಕ್ಟ್ ಜಾರಿಗೆ ತರುವುದರ ಮೂಲಕ ಸರಕಾರವೇ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿತ್ತು.

ಸಾಮಾನ್ಯಶಕೆ 1844ರಲ್ಲಿ ಕ್ರಿಸ್ತನ ಸಂದೇಶದ ಫಲವಾಗಿ ಮೂರು ಬ್ರಾಹ್ಮಣ ಬಾಲಕರನ್ನು ಸಾಮಾಜಿಕವಾಗಿ ಬದಲಾವಣೆಗೊಳಪಡಿಸಿ ಕ್ರೈಸ್ತದೀಕ್ಷಾ ಸ್ನಾನ ನೀಡುವುದರೊಂದಿಗೆ ತನ್ನ ಬಹುಕಾಲದ ಕನಸನ್ನು ನನಸು ಮಾಡಿಕೊಂಡಿತು. ಬ್ರಾಹ್ಮಣ ಹುಡುಗಿಯರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯುವುದರೊಂದಿಗೆ ಹೀದನ್ ಮಹಿಳೆಯರನ್ನು ಹಿಂದುಸಮಾಜದಲ್ಲಿ ಹಾಸುಹೊಕ್ಕಾದ ಮೂಢನಂಬಿಕೆಯ ಸರಪಳಿಗಳಿಂದ ಬಿಡುಗಡೆಗೊಳಿಸಲು ಪ್ರಯತ್ನಗಳಾಗುವುದರ ಜೊತೆಗೆ ಹಾಗೂ ಅಧ್ಯಾತ್ಮಿಕ ಶೋಷಣೆಗಳಿಂದ ಹಿಂದೂ ಸ್ತ್ರೀಯರನ್ನು ಪಾರುಗೊಳಿಸಲಾಯಿತು ಎಂಬ ವಾದವನ್ನು ಮುಂದಿಟ್ಟಿತು. ಸಾಮಾನ್ಯಶಕೆ 1862ರಲ್ಲಿ ಬಾಸೆಲ್‌ಮಿಷನ್‌ನ ಶಾಲೆಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ, ಅದರಲ್ಲೂ ಮುಖ್ಯವಾಗಿ ಕ್ರೈಸ್ತೇತರ ವಿದ್ಯಾರ್ಥಿಗಳ ದಾಖಲಾತಿಯು ಸರಾಸರಿ ಶೇಕಡಾ 56.1%ರಷ್ಟನ್ನು ತಲುಪಿ ಮತಪ್ರಚಾರಕರ ಸಾಮಾಜಿಕ ಬದಲಾವಣೆಯ ಧ್ವನಿಗೆ ವೇದಿಕೆಯನ್ನು ನಿರ್ಮಿಸುವಲ್ಲಿ ಯಶಸ್ಸನ್ನು ಸಾರಿದವು. ಉಡುಪಿ, ಮಂಗಳೂರು, ಕಾಸರಗೋಡುಗಳಲ್ಲಿ ಸ್ಥಾಪಿತವಾದ ಬಾಸೆಲ್ ಶಾಲೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಲಾಗಿತ್ತು. 1863ರಲ್ಲಿ ಎಲಿಮೆಂಟರಿ ಎಜುಕೇಷನ್ ಆಕ್ಟ್, 1871ರಲ್ಲಿ ಲೋಕಲ್ ಫಂಡ್ ಆಕ್ಟ್ ಜಾರಿಗೆ ತರುವುದರ ಮೂಲಕ ಸರಕಾರವೇ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿತ್ತು.

ಮತಪ್ರಚಾರಕರ ಈ ಪ್ರಯತ್ನಗಳು ವಸಾಹತಿನಲ್ಲಿ ಕ್ರಿಸ್ತನ ಸಂದೇಶಗಳನ್ನು ಹರಡುವಿಕೆಯ ಜಾಲವನ್ನು ವಿಸ್ತರಿಸಿತ್ತಲ್ಲದೇ, ವಸಾಹತುಶಾಹಿ ಶಿಕ್ಷಣದ ಪ್ರಭಾವಕ್ಕೊಳಗಾದ ತುಳುನಾಡಿನ ಪರಂಪರೆಯಲ್ಲಿ ಒಡಕುಂಟಾಗಿ ವಸಾಹತಿನ ಜನರ ಅರಿವಿಗೆ ಬಾರದಂತೆ ದ್ವಂದ್ವತೆಗಳು ಸೃಷ್ಟಿಯಾದವು. ಬಾಸೆಲ್‌ಮಿಷನ್ ತುಳುನಾಡಿನ ಆಯಕಟ್ಟಿನ ಪ್ರದೇಶಗಳಾದ ಮಂಗಳೂರು, ಉಡುಪಿ ಮತ್ತು ಕಾಸರಗೋಡುಗಳಲ್ಲಿ ಪ್ರಾರಂಭಿಸಿದ ಪ್ರೌಢಶಾಲೆಗಳು ಕ್ರೈಸ್ತೀಕರಣ ಮತ್ತು ಸಾಮಾಜಿಕ ಬದಲಾವಣೆಯ ಕೇಂದ್ರಗಳಾಗಿ ಕಾರ್ಯನಿರ್ವಹಿಸಿದವಲ್ಲದೆ, ವಸಾಹತಿನಲ್ಲಿರುವ ಹೀದನ್‌ಗಳ ಮನಸ್ಸು ಮತ್ತು ಹೃದಯಗಳನ್ನು ನೇರವಾಗಿ ತಲಪುವ ಪ್ರಯತ್ನ ಮಾಡಿದವು. ಮತಪ್ರಚಾರಕರ ಶಾಲಾ ಪಠ್ಯಗಳ ಕ್ರಮಗಳು ಒಂದೆಡೆ ಪಾಶ್ಚಾತ್ಯ ಚಿಂತನೆಯ ಜ್ಞಾನ ನೀಡಿದರೆ ಇನ್ನೊಂದೆಡೆ ಸಾಮಾಜಿಕ ಪರಿವರ್ತನೆಗೆ ಭೂಮಿಕೆಯನ್ನು ಒದಗಿಸುವಲ್ಲಿ ಶ್ರಮಿಸಿತು.[76] ಬಾಸೆಲ್ ಮಿಷನ್ ಧಾರ್ಮಿಕ ಶಿಕ್ಷಣ ಶಾಲೆ, ಮಿಡ್ಲ್ ಸ್ಕೂಲ್, ನಾರ್ಮಲ್ ಸ್ಕೂಲ್, ಪಂಚಮರ ಶಾಲೆ, ಪಾರೋಕಿಯಲ್ ಸ್ಕೂಲ್, ತಾಂತ್ರಿಕ ಶಾಲೆ, ಅನಾಥಶ್ರಮ, ನರ್ಸರಿ, ಶಿಶು ಪಾಠಶಾಲೆ, ವೊಕೆಷನಲ್ ಶಾಲೆ ಹಾಗೂ ಸಂಡೇಸ್ಕೂಲು, ರಾತ್ರಿಶಾಲೆ, ವರ್ನಾಕುಲರ್, ಆಂಗ್ಲೋ-ವರ್ನಾಕುಲರ್ ಮುಂತಾದ ಸಂಸ್ಥೆಗಳನ್ನು ಶೈಕ್ಷಣಿಕ ಉದ್ದೇಶ ಹಾಗೂ ಸಾಮಾಜಿಕ ಬದಲವಣೆಯ ಗುರಿಯನ್ನು ಇಟ್ಟುಕೊಂಡು

ಹುಟ್ಟುಹಾಕಿದರಲ್ಲದೇ, ಇನ್ನೊಂದೆಡೆ ಕ್ಯಾಥೊಲಿಕರು ಚರ್ಚು, ಡಿಸ್ಪೆನ್ಸರಿ, ಅನಾಥಶ್ರಮ ಮುಂತಾದ ಧಾರ್ಮಿಕ, ಸೇವಾಸಂಸ್ಥೆಗಳ ಆಶ್ರಯದಲ್ಲಿ ಸಾಮಾಜಿಕ ಪರಿವರ್ತನೆಯ ಆಶಯವನ್ನು ಮುಂದಿಟ್ಟುಕೊಂಡು ಊರಿನ ಹೊರವಲಯಗಳಲ್ಲಿ ಕಾರ್ಯಪ್ರವೃತ್ತರಾದರು.[77] ಉದಾಹರಣೆಗೆ ಕ್ಯಾಥೊಲಿಕ್ಕರು 1923ರಲ್ಲಿ 52 ಚರ್ಚುಗಳ ಮೂಲಕ 85 ಶಾಲೆಗಳ ಮೇಲ್ವಿಚಾರಣೆಯನ್ನು ವಹಿಸಿಕೊಂಡರೆ, 1940ರಲ್ಲಿ 69 ಚರ್ಚುಗಳ ಸುಪರ್ಧಿಯಲ್ಲಿ 146 ಶಾಲೆಗಳು, 2 ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದವು. 1928ರ ಹೊತ್ತಿಗೆ ಬಾಸೆಲ್ ಮಿಷನ್ ವತಿಯಿಂದ 50 ಎಲಿಮೆಂಟರಿ ಶಾಲೆಗಳು ಕಾರ್ಯಾಚರಿಸುತ್ತಿದ್ದವು. ಶತಮಾನ ದಾಟಿದ ಹೆಚ್ಚಿನ ಪ್ರಾಥಮಿಕ, ಪ್ರೌಢಶಿಕ್ಷಣ ಸಂಸ್ಥೆಗಳು ರೋಮನ್ ಕ್ಯಾಥೊಲಿಕ್ ಹಾಗೂ ಬಾಸೆಲ್ ಚರ್ಚ್‌ಗಳ ಅವರಣಗಳಲ್ಲೇ ಇರುವುದು ಈ ಬಗ್ಗೆ ಅಧ್ಯಯನಿಸಬೇಕಾದ ವಿಚಾರ. ಹೀಗೆ 19ನೇ ಶತಮಾನದ ಮಧ್ಯಭಾಗದಿಂದ ತುಳುನಾಡನ್ನು ಕೇಂದ್ರವಾಗಿಟ್ಟುಕೊಂಡ ಕ್ಯಾಥೊಲಿಕ್ ಮತ್ತು ಬಾಸೆಲ್ ಕ್ರೈಸ್ತ ಮತಪ್ರಚಾರಕರು ಸಾಮಾಜಿಕ ಪರಿವರ್ತನೆಯ ಕಾರ್ಯಯೋಜನೆಗಳನ್ನು ಕಾರ್ಯಗತಗೊಳಿಸುವ ನೆಲೆಯನ್ನಾಗಿಸಿದರು.[78] ಮುಖ್ಯವಾಗಿ ಜೆಸೂಯಿಟ್ ಧರ್ಮಗುರುಗಳು ತುಳುನಾಡನ್ನು ಸಾಮಾಜಿಕ ಬದಲಾವಣೆಯ ಕಾರ್ಯಕ್ಷೇತ್ರವಾಗಿಸಿ ಮತಪ್ರಚಾರಕ ಚಟುವಟಿಕೆಗಳ ಭರ್ತಿ ಕೇಂದ್ರವನ್ನಾಗಿಸಿದರು. ಹೀಗೆ ತುಳುವರ ಸಾಮಾಜಿಕ ಪರಿವರ್ತನೆಯ ಕನಸನ್ನು ನನಸಾಗಿಸಿದರಲ್ಲದೇ ಚರ್ಚು ಮುಂತಾದ ಧಾರ್ಮಿಕ ಸಂಸ್ಥೆಗಳನ್ನು ಹುಟ್ಟುಹಾಕಿ ಸಾಮಾಜಿಕವಾಗಿ ಪರಿವರ್ತನೆಗೊಂಡವರ ಮನಸ್ಸುಗಳಿಗೆ ದೇವರ ಸಂದೇಶಗಳನ್ನು ಬಿತ್ತುವ ನರ್ಸರಿಗಳನ್ನಾಗಿಸಿದರು.[79] ಶಿಕ್ಷಣದ ನೆಪದಲ್ಲಿ ವಸಾಹತಿನ ಮಕ್ಕಳಿಗೆ ಹಾಗೂ ಸಾಮಾಜಿಕವಾಗಿ ಪರಿವರ್ತಿತರಿಗೆ ಕ್ರೈಸ್ತನ ವಿಚಾರಧಾರೆಗಳನ್ನು ತುಂಬುವುದರೊಂದಿಗೆ ವಸಾಹತಿನ ಭವಿಷ್ಯದ ಪ್ರಜೆಗಳ ಮಾನಸಿಕತೆಯನ್ನು ಬದಲಾಯಿಸುವಲ್ಲಿ ತಮ್ಮದೇ ಕೊಡುಗೆಗಳನ್ನು ನೀಡುವಲ್ಲಿ ಸಫಲತೆಯನ್ನು ಪಡೆದರು. ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಸಾಮಾಜಿಕವಾಗಿ ಪರಿವರ್ತನೆಗೊಳಿಸುವ ಕರ್ತವ್ಯ ಪ್ರತಿಯೊಂದು ಚರ್ಚಿನ ಆಧ್ಯ ಕರ್ತವ್ಯವಾಯಿತ್ತಲ್ಲದೇ ಇದನ್ನು ಒಪ್ಪದ ವಸಾಹತಿನ ಪ್ರಜೆಗಳನ್ನು ಸಾಮಾಜಿಕ ಸೇವೆಯ ಮೂಲಕ ನಂಬಿಸುವುದರೊಂದಿಗೆ ವಂಚಿಸುವ ಕೆಲಸಗಳನ್ನು ಮಾಡಿತು. ಶಿಕ್ಷಣದ ಸಬಲೀಕರಣ ಕೇಂದ್ರಗಳಾಗಿ ಚರ್ಚುಗಳು, ಮತಪ್ರಚಾರಕರ ಶೈಕ್ಷಣಿಕ ಸಂಸ್ಥೆಗಳು, ಪಾಶ್ಚಾತ್ಯ ಕೈಗಾರಿಕ ಕೇಂದ್ರಗಳು, ಮತಪ್ರಚಾರಕರ ಪೋಷಿತ ಸಮಾಜಸೇವಾ ಸಂಸ್ಥೆಗಳು ಹಾಗೂ ಅವರ ವ್ಯಾಪ್ತಿಗೊಳಪಟ್ಟ ಮುದ್ರಣ ಮಾಧ್ಯಮಗಳು ವಸಾಹತುಶಾಹಿಯ ನೈಜ ಏಜೆಂಡಾಗಳನ್ನು ಕಾರ್ಯರೂಪಕ್ಕಿಳಿಸುವ ಹೊಣೆಗಾರಿಕೆಯಲ್ಲಿ ಸಕ್ರಿಯಗೊಂಡವು.[80] 1841ರಲ್ಲಿ ಮಿಷನ್ ಪ್ರೆಸ್

ಪ್ರಾರಂಭಗೊಂಡು ತುಳು ಸಾಹಿತ್ಯ ಗ್ರಂಥಗಳು ಮುದ್ರಣಗೊಳ್ಳಲ್ಪಟ್ಟವು. ಇದರ ವ್ಯಾಪ್ತಿಯನು ವಿಸ್ತರಿಸುವ ನೆಲೆಯಲ್ಲಿ ವಸಾಹತುಶಾಹೀ ಅದರ ಉದಾರವಾದಿ ಚಿಂತನೆ ಮತ್ತು ಪಾಶ್ಚಾತ್ಯ ಮೌಲ್ಯಗಳ ಹರಡುವಿಕೆಯ ಪರಿಕಲ್ಪನೆಗಳು ಸಾಕಾರಗೊಳಿಸಿ ತುಳುನಾಡಿನ ಜೀವನ ವೈವಿಧ್ಯಗಳನ್ನು ಮೂಢನಂಬಿಕೆಯೆಂದು ಬಿಂಬಿಸಿ ಅದನ್ನು ನಿರ್ಮೂಲನೆ ಮಾಡಲು ಹಲವಾರು ಯೋಜನೆ, ಕಾನೂನುಗಳ ನೆರವಿನೊಂದಿಗೆ ಕಾರ್ಯಪ್ರವೃತ್ತವಾಯಿತು.[81] ವಿಲಿಯಂ ಬೆಂಟಿಂಕ್‌ನ ಕಾಲದಲ್ಲಿ ಸಾಮಾಜಿಕ ಸುಧಾರಣೆಯ ಆಶಯದಂತೆ ಸತಿಪದ್ಧತಿಯ ರದ್ಧತಿ, ವಿಧವಾ ಪುನರ್-ವಿವಾಹ, ಬಾಲ್ಯ ವಿವಾಹ ನಿಷೇಧ, ಇಂಗ್ಲೀಷ್ ವಿದ್ಯಾಭ್ಯಾಸ ಮುಂತಾದವುಗಳನ್ನು ಕಾರ್ಯರೂಪಕ್ಕೆ ತರಲಾಯಿತು. ಈ ಅಜೆಂಡಾಗಳು ವಸಾಹತಿನ ಸಾಮಾಜಿಕ ಸುಧಾರಣೆಗೆ ಅವಿರತವಾಗಿ ಶ್ರಮಿಸುತ್ತಿವೆಯೆಂಬ ಭ್ರಮೆಯನ್ನು ಸೃಷ್ಟಿಸಿತು.[82] ವಾಸ್ತವವಾಗಿ ಬಾಸೆಲ್ ಮಿಷನ್ ಹೊಸತಾಗಿ ಮತಪರಿವರ್ತನೆಗೊಂಡವರಿಗೆ ಪಾಶ್ಚಾತ್ಯರ ಶ್ರಮ ಮತ್ತು ವ್ಯಾಪಾರದ ಮೌಲ್ಯಗಳನ್ನು ಪರಿಚಯಿಸಲು, ಆ ಮೂಲಕ ಮತಪರಿವರ್ತಿತರಿಗೆ ಪುನರ್‌ವಸತಿ ಕಲ್ಪಿಸಿ, ಉದ್ಯೋಗ ಅವಕಾಶಗಳನ್ನು ನೀಡಿ ಜೀವನದಲ್ಲಿ ಮುಂದುವರೆಯಲು ಅವಕಾಶ ಕಲ್ಪಿಸಿದರು. ಆದರೆ ಇಂದು ವಸಾಹತಿನ ಸುಧಾರಣೆಯಾಗಿ ಬಿಂಬಿತವಾಗಿರುವುದು ಯೋಚಿಸಬೇಕಾದ ವಿಚಾರಗಳಾಗಿವೆ. ವಸಾಹತನ್ನು ಪಾಶ್ಚಾತ್ಯ ಚಿಂತನೆಯ ಅಡಿಯಾಳನ್ನಾಗಿಸಿ ವಸಾಹತುಶಾಹೀ ಪಾರಂಪರಿಕ ವ್ಯವಸ್ಥೆಗಳ ಜೊತೆಗೆ ಇಲ್ಲಿನ ಪ್ರಜೆಗಳ ಮನೋಸ್ಥಿತಿಯನ್ನು ಪಲ್ಲಟಗೊಳಿಸಲಾ ವಸಾಹತು ತನ್ನ ಸ್ವಂತಿಕೆಯನ್ನು ಮರೆಯುವಂತೆ ಮಾಡಿತು. ಮೆಕಾಲೆ ಪ್ರವರ್ತಿತ ಅಧುನಿಕ ಶಿಕ್ಷಣ ವ್ಯವಸ್ಥೆ ತುಳುನಾಡಿನಲ್ಲಿ ಒಂದು ಹೊಸ ಸಾಮಾಜಿಕ ವಿದ್ಯಾವರ್ಗದ ಉದಯಕ್ಕೆ ಕಾರಣವಾಯಿತು. ತುಳುನಾಡಿನ ಸತ್ವಶಾಲಿ ಪರಂಪರೆಗಳನ್ನು ಇಂಗ್ಲಿಷ್ ವಿದ್ಯಾವಂತವರ್ಗ ಏಕರೂಪಿ ಅಚ್ಚಿನಲ್ಲಿ ಕ್ರೋಢಿಕರಿಸುವ ಪ್ರಯತ್ನ ಮಾಡಿತ್ತಾದರೂ ಕೆಲವೊಂದು ಬಾರಿ ತನ್ನ ಉದ್ದೇಶ ಸಾಧನೆಯಲ್ಲಿ ಈ ವಿದ್ಯಾವಂತ ವರ್ಗ ವಿಫಲವಾಗಿ ತ್ರಿಶಂಕು ಸ್ಥಿತಿಗೆ ತಳ್ಳಲ್ಪಟ್ಟವು.[83] ಮಾತ್ರವಲ್ಲ ಸಾಂಪ್ರದಾಯಿಕವಾಗಿ ಉದ್ಯೋಗ ನಿರತವಾಗಿದ್ದ ಸಮುದಾಯಗಳ ಜನರು ವಸಾಹತುಶಾಹಿ ಶಿಕ್ಷಣ ವ್ಯವಸ್ಥೆಯಿಂದ ಹೆಚ್ಚು ಜನ ಅತ್ಯಂತ ಕಡಿಮೆ ವೇತನದ ಮೇಲೆ ಆಡಳಿತ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದರೆ, ಉಳಿದ ಅನೇಕರು ಅಧಿಕ ಸಂಖ್ಯೆಯಲ್ಲಿ ನಿರುದ್ಯೋಗವನ್ನು ಎದುರಿಸಬೇಕಾಯಿತು.[84]

ತುಳುನಾಡಿನಲ್ಲಿ ವಸಾಹತುಶಾಹಿ ಪರಿಚಯಿಸಿದ ಆಧುನಿಕ ಶಿಕ್ಷಣ ಮತ್ತು ವಸಾಹತುಶಾಹಿ ನೀತಿಗಳಿಂದ ಗರಿಷ್ಠ ಲಾಭ ಪಡೆದುಕೊಂಡವರು ಬ್ರಾಹ್ಮಣ ವರ್ಗ. ತದನಂತರದ ಕಾಲಘಟ್ಟದಲ್ಲಿ ಬ್ರಾಹ್ಮಣರ ನಂತರದ ಸಾಮಾಜಿಕ ಶ್ರೇಣಿಕೃತರು ಆಧುನಿಕತೆಯ ಇಲ್ಲವೇ ಶಿಕ್ಷಣದ ಮಹತ್ವವನ್ನು ಅರಿತುಕೊಂಡರು. ಇದಲ್ಲದೇ ಇಂಗ್ಲಿಷ್ ವಿದ್ಯಾಭ್ಯಾಸದ

ಅಜೆಂಡಾ ತುಳುನಾಡಿಗೆ ಹೊಸ ರಾಜಕೀಯ ಪಟ್ಟುಗಳನ್ನು ಕರಗತ ಮಾಡಿಕೊಳ್ಳಲು ಸಹಾಯ ಮಾಡಿತು. ತುಳುನಾಡಿನಲ್ಲಿ ಕಾರ್ಯಗತಗೊಂಡ ಇಂಗ್ಲಿಷ್ ಶಿಕ್ಷಣ ಕ್ರಮದಿಂದಾಗಿ ಕ್ರಾಂತಿಯಾಗದಿದ್ದರೂ ಸಾಕಷ್ಟು ಮೂಲಭೂತ ಪರಿವರ್ತನೆಗೆ ಅವಕಾಶ ನೀಡಿತ್ತು. ಈ ಪರಿವರ್ತನೆ ತುಳುನಾಡಿನ ಊಳಿಗಮಾನ್ಯ ವ್ಯವಸ್ಥೆಯಲ್ಲೂ ಅನ್ವಯಿಸಿ ಶ್ರೇಣಿಕೃತ ರಚನೆಯಲ್ಲಿ ಬದಲಾವಣೆಯನ್ನುಂಟು ಮಾಡಿತು.[85] ವಸಾಹತುಶಾಹಿ ಶಿಕ್ಷಣ ಪಡೆದ ತುಳುನಾಡಿನ ಪ್ರಜೆ ಅಂಗ್ಲೀಕೃತನಾದರೂ ತನ್ನ ಮಾತೃಭಾಷೆಯಲ್ಲಿಯೇ ವ್ಯವಹರಿಸಬೇಕಾದ ಅನಿವಾರ್ಯತೆಯಿತ್ತು. ಆದರೆ ತನ್ನ ಗತಕಾಲದ ಬಗ್ಗೆ ತಿಳುವಳಿಕೆಯನ್ನು ಸಂಗ್ರಹಿಸುವಾಗ ಇಂಗ್ಲಿಷ್ ಕೃತಿಗಳ ಆಶ್ರಯ ಪಡೆಯುವಷ್ಟರ ಮಟ್ಟಿಗೆ ಇಂಗ್ಲಿಷ್ ಭಾಷೆ ಜನಪ್ರಿಯಗೊಂಡಿತು. ಇಂತಹ ಅನಿವಾರ್ಯ ಸಂದರ್ಭಗಳಲ್ಲಿ ವಸಾಹತಿನ ಪ್ರಜೆ 'ತನಗೆ ಇಂಗ್ಲಿಷ್ ಶಿಕ್ಷಣ ಬೇಕು ಎಂದು ಕೇಳುವುದು' ಕೇವಲ ತಮ್ಮ ಹಿಂದುಳಿಯುವಿಕೆಗೆ ಪರಿಹಾರ ಕಂಡುಕೊಳ್ಳುವ ದೃಷ್ಟಿಯಿಂದ ಅಥವಾ ಉನ್ನತಿಯನ್ನು ಪಡೆದುಕೊಳ್ಳುವ ಉದ್ದೇಶದಿಂದ ಮಾತ್ರವಾಗಿರದೆ ಅದು ಚಾರಿತ್ರಿಕ ಸಂಗತಿಗಳ ಪರಸ್ಪರ ಹೆಣಿಗೆಯ ಮೂಲಕ ಮೂಡಿಬಂದ ಸಂಕೀರ್ಣಸ್ಥಿತಿಯಾಗಿರುವುದು ವಾರಸುದಾರಿಕೆಯ ಪಲ್ಲಟವೆಂದು ತಿಳಿಯಬಹುದು.[86] ಹೀಗೆ ತುಳುನಾಡಿನಲ್ಲಿ ವಸಾಹತುಶಾಹಿಯ ಧರ್ಮವನ್ನು ರಕ್ಷಿಸಿ ಮುಂದುವರೆಸಿಕೊಂಡು ಬರುವಲ್ಲಿ ದಂಡ ಹಾಗೂ ಬಲಪ್ರಯೋಗದ ಪ್ರತಿರೂಪವಾಗಿ ಹೊಸ ಆಯಾಮಗಳು ಸೇರ್ಪಡೆಗೊಂಡವು. ಅವುಗಳಲ್ಲಿ ಮುಖ್ಯವಾದುದು ಬ್ರಿಟಿಷ್ ಪ್ರತಿಪಾದಿಸಿದ ಆಧುನಿಕ ಶಿಕ್ಷಣ. ಅಭಿವೃದ್ಧಿಯ ನೆಪದಲ್ಲಿ ವಸಾಹತಿನ ಸಾಂಸ್ಕೃತಿಕ ಮೂಲಚೌಕಟ್ಟನ್ನು ಬದಲಾಯಿಸುವ ಪ್ರಯತ್ನಗಳು ಈ ಶಿಕ್ಷಣ ವ್ಯವಸ್ಥೆಗಳ ಮೂಲಕ ಮಾಡಲ್ಪಟ್ಟಿರುವುದು ಮಿಷನರಿಗಳ ಕಾರ್ಯವೈಖರಿಯಲ್ಲಿ ಪ್ರತಿಬಿಂಬಿತವಾಗಿದೆ.[87] 1. ಆಧುನಿಕ ವಿದ್ಯಾಭ್ಯಾಸ. 2. ಅಭಿವೃದ್ಧಿ. ವಸಾಹತುಶಾಹಿಯ ನಡೆಗಳಲ್ಲಿ ಸ್ವದೇಶಿಯರ ಸ್ವಾಭಿಮಾನಕ್ಕೆ ದಕ್ಕೆ ಬಂದಾಗ ಕೆಳವರ್ಗಗಳು ಶೋಷಣೆಯಿಂದ ಬಗ್ಗೆ ಎಚ್ಚೆತ್ತುಕೊಂಡು ವಸಾಹತುಶಾಹಿಯ ನಡೆಗಳನ್ನು ವಿರೋಧಿಸಿದವಲ್ಲದೇ ಜನರಲ್ಲಿ ಜಾಗೃತಿಯನ್ನು ಮೂಡಿಸಿದರು. ಒಂದೆಡೆ ರಾಷ್ಟ್ರಿಯ ದ್ಯೋತಕವಾಗಿ ಅರಿವು ಮೂಡಿಕೊಂಡರೆ ಇನ್ನೊಂದೆಡೆ ಪಾಶ್ಚಾತ್ಯ ಮೇಲ್ಮೆಯನ್ನು ಒಪ್ಪಿಕೊಳ್ಳುವಲ್ಲಿ ಸಂದೇಹಗಳನ್ನು ಮೂಡಿಸಿತು; ಗೌರಿವಿಶ್ವನಾಥನ್ ಅವರು ಭಾರತದಲ್ಲಿ ಮಿಷನರಿಗಳ ಕಾರ್ಯವೈಖರಿಯನ್ನು ವಿಮರ್ಶಿಸುತ್ತಾ ಹಿಂದೂಯಿಸಮ್ ಅನ್ನುವುದು ತನ್ನ ಪಂಚಾಂಗದಿಂದ ಒಂದಲ್ಲ ಒಂದು ದಿನ ಬೀಳುತ್ತದೆ ಮತ್ತು ಸುವಾರ್ತೆಯು ಅದರ ಅವಶೇಷಗಳ ಮೇಲೆ ಕಟ್ಟಲ್ಪಡುತ್ತದೆ ಎಂಬ ನಂಬಿಕೆಯನ್ನು ಹೊಂದಿದ್ದವು ಎಂದಿದ್ದಾರೆ. ಮ್ಯಾಕ್ಸಮುಲ್ಲರ್ ತನ್ನ ವೈಯುಕ್ತಿಕ ಪತ್ರಗಳಲ್ಲಿ ಭಾರತದಲ್ಲಿ ತನ್ನ ಕಾರ್ಯಚಟುವಟಿಕೆಗಳ ಬಗ್ಗೆ ಬರೆಯುತ್ತಾ ಈ ಬಗೆಯ ವಿಚಾರಗಳನ್ನು ವಿಶ್ಲೇಷಿಸಿದ್ದಾನೆ.[88]

ವಸಾಹತುಶಾಹಿ ಜ್ಞಾನವನ್ನು ಪಸರಿಸುವ ಉದ್ದೇಶದಿಂದ ಪತ್ರಿಕೆಗಳನ್ನು ಹೊರತರುವ ಪ್ರಯತ್ನಗಳು ತುಳುನಾಡಿನಲ್ಲಿ ಮಾಡಲ್ಪಟ್ಟವು. ಇದರ ಭಾಗವಾಗಿ ಬಾಸೆಲ್ ಮಿಶನರಿಗಳು ತುಳುನಾಡಿನ ಮೊದಲ ವೃತ್ತಪತ್ರಿಕೆ ಮಂಗಳೂರು ಸಮಾಚಾರವನ್ನು ಹೊರತಂದಿತು. ಇದು ತುಳು ಪ್ರಜೆಗಳಿಗೆ ಜಾಗತಿಕ ಮಾಹಿತಿ ನೀಡುವ ವೇದಿಕೆಯಾದರೂ ಅದರ ಮೂಲ ಉದ್ದೇಶ ಧರ್ಮಪ್ರಚಾರ ಮತ್ತು ಮತಪರಿವರ್ತನೆಯಾಗಿತ್ತು. ಕೆಲವೊಂದು ಬಾರಿ ಈ ವೃತ್ತಪತ್ರಿಕೆಗಳ ಮೂಲಕ ತುಳುನಾಡನ್ನು ಹೀಯಾಳಿಸುವ ಚಟುವಟಿಕೆಗಳು ಮಾಡಲ್ಪಟ್ಟವು. ಜೊತೆಗೆ ಈ ಪತ್ರಿಕೆಗಳು ಪಾಶ್ಚಾತ್ಯ ಚಿಂತನೆ ಹಾಗೂ ಶಿಕ್ಷಣ ವ್ಯವಸ್ಥೆಗಳ ಬಗ್ಗೆ ಪ್ರಚಾರ ಮಾಡುವ ಪ್ರಮುಖ ಸಾಧನಗಳಾದವು. ಪತ್ರಿಕೆಗಳ ಈ ಬಗೆಯ ಪ್ರವೃತ್ತಿಯೂ ತುಳುನಾಡಿನ ಸಮಾಜದಲ್ಲಿ ಕೆಲವೊಂದು ಬಾರಿ ಸಾಂಸ್ಕೃತಿಕ ಸಂಘರ್ಷಕ್ಕೆ ನಾಂದಿ ಹಾಡಿದವು.[89] ಅಂತೆಯೇ ಇಂಗ್ಲೀಷ್ ಭಾಷೆಯ ಶ್ರೇಷ್ಠತೆಯನ್ನು ಸಾರುವ ವಸಾಹತುಶಾಹೀಯ ಧೋರಣೆಗಳು ದೇಶಿಯ ಭಾಷೆಗಳನ್ನು ಅನಾಗರೀಕವೆಂದು ಅನಾದರ ಮಾಡಿದುದರಿಂದ ಇಂಗ್ಲಿಷ್ ಜನಪ್ರಿಯಗೊಂಡಿತ್ತಾದರೂ, ದೇಶಿಯ ಭಾಷೆಗಳು ತತ್ತರಗೊಂಡವು. 'ದೇಶಿಯ'ವಾದುದನ್ನು 'ಪಾಶ್ಚಾತ್ಯ' ಮಾದರಿಯಲ್ಲಿ ವ್ಯಾಖ್ಯಾನಿಸಿ ಅರ್ಥ ಮಾಡಿಕೊಳ್ಳುವ ಪ್ರಯತ್ನಗಳಾದುದರಿಂದ 'ಪಾಶ್ಚಾತ್ಯ' ಆಕರ್ಷಣೆಗೆ ಒಳಗಾಯಿತು. ದೇಶಿಯವಾದುದೆಲ್ಲವೂ ನಿಧಾನವಾಗಿ ಮರೆಯಾಗಿ ಅಥವಾ ಹೊಸ ಚಿಂತನೆ ಹಾಗೂ ವ್ಯವಸ್ಥೆಗಳ ಜೊತೆ ಹೊಂದಾಣಿಕೆಯಲ್ಲಿ ತೊಡಗಿಕೊಂಡು ಮೂಲ ವಾರಸುದಾರಿಕೆಯ ಮೇಲೆ ದಾಳಿಯಿಟ್ಟು ಅದನ್ನು ನಾಶ ಮಾಡಿದವು.

ತುಳು ಭಾಷೆಗೆ ರಾಜಾಶ್ರಯವಿಲ್ಲದಿದ್ದರೂ, ಚಾರಿತ್ರಿಕವಾಗಿ ತನ್ನ ಆಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಅದಾಗ್ಯೂ ತುಳುನಾಡು ಹಲವಾರು ಭಾಷೆಗಳಿಗೆ ಹಾಗೂ ಭಾಷಿಕರಿಗೆ ಭದ್ರ ನೆಲೆಯನ್ನು ಒದಗಿಸಿಕೊಟ್ಟಿದೆ. ತುಳುನಾಡಿನಲ್ಲಿ ಬಹುಭಾಷಿಕತೆ ಒಂದು ಜೀವನಕ್ರಮವಾಗಿ ರೂಪಿತವಾಗಿದ್ದು ಅದರೊಳಗೆ ಸಾಮರಸ್ಯ, ಸಹಬಾಳ್ವೆ, ಹೊಂದಾಣಿಕೆ, ಸಂಘರ್ಷ ಎಲ್ಲವೂ ಮನೆ ಮಾಡಿತ್ತು. ಆದರೆ ವಸಾಹತುಶಾಹಿ ಕಾಲದಲ್ಲಿ ಬಹು ಭಾಷಿಕತೆ ಅದರದೇ ಕಾರ್ಯಯೋಜನೆಗಳಿಂದ ಸ್ವಾರ್ಥ ರಾಜಕಾರಣಕ್ಕೆ ಕಾರಣವಾಗಿ ತನ್ನ ಅನನ್ಯತೆಯನ್ನು ನಿಧಾನವಾಗಿ ಕಳೆದುಕೊಂಡಿರುವುದು ವಸಾಹತುಶಾಹಿಯ ಅಭಿವೃದ್ಧಿ ಕಲ್ಪನೆಯ ಫಲ. ಮುಂದುವರೆದು ವಸಾಹತುಶಾಹಿ ಆಳ್ವಿಕೆಯ ಕಾಲದಲ್ಲಿ ಭಾಷೆ ವಿಭಜಿಸಿ ಆಳುವ ನೀತಿಗೆ ಬಳಕೆಯಾಯಿತು. ಆ ಸಂದರ್ಭದಲ್ಲಿ ಮೂಡಿಸಲಾದ ವಸಾಹತುಪ್ರಜ್ಞೆ ಸ್ವಾತಂತ್ರ ಪಡೆದ ನಂತರವೂ ಆಳವಾಗಿ ಬೇರೂರಿದೆ. ಆದರೂ ತುಳುನಾಡಿನ ಆಸ್ತಿತ್ವದ ವಾರಸುದಾರಿಕೆಯನ್ನು ನೋಡುವಾಗ ತುಳುವೇ ಪ್ರಧಾನ ಭಾಷೆಯಾಗಿ ಕಂಡುಬರುತ್ತದೆ. ವಸಾಹತುಪೂರ್ವದ ತುಳುನಾಡಿನ ಸೀಮೆ, ಮಾಗಣೆ, ಗುತ್ತುಗಳಲ್ಲಿ ತುಳು ಭಾಷೆಯೇ ಪ್ರಧಾನವಾಗಿತ್ತು. ಭೂಮಿಗೆ

ಸಂಬಂಧಿ ವಿಚಾರಗಳು, ಕುಟುಂಬದೊಳಗಿನ ಕಲಹ, ಧಾರ್ಮಿಕ ಆಚರಣೆ, ನ್ಯಾಯವ್ಯವಸ್ಥೆ, ಉತ್ತಾರಾಧಿಕಾರದ ಪ್ರಶ್ನೆ ಮುಂತಾದವುಗಳು ತುಳುಭಾಷೆಯಲ್ಲಿ ಪರಿಹಾರ ಕಾಣುತ್ತಿದ್ದವು.[90] ವಸಾಹತುಶಾಹಿ ಅಭಿವೃದ್ಧಿ ಕಲ್ಪನೆಯಲ್ಲಿ ಜನಸಾಮಾನ್ಯರಿಗೆ ಅರ್ಥವಾಗದ ಭಾಷೆ ಅಣಿಗೊಂಡು ಗೋಜಲುಗಳನ್ನು ಸೃಷ್ಟಿಸಿತು. ಇಂಗ್ಲಿಷ್ ಮಾಧ್ಯಮವನ್ನು ವಸಾಹತಿನ ಬೋಧನೆಯ ಭಾಷೆಯನ್ನಾಗಿ ಮಾನ್ಯಗೊಳಿಸುವ ಮೂಲಕ ಅದು ಯುರೋಪು ಮಾದರಿಯಾಗಿ ಪರಿಚಯಿಸಲ್ಪಟ್ಟರೇ ಇಂಗ್ಲಿಷ್ ಭಾಷಾಮಾಧ್ಯಮ ಆಡಳಿತದ ಕಚೇರಿ ಭಾಷೆಯಾಗಿ ಯಶಸ್ಸು ಪಡೆಯಿತು. ಇದರಿಂದಾಗಿ ದೇಶೀಯ ಭಾಷೆಗಳು ಅಧಃಪತನದತ್ತ ಮುಖ ಮಾಡಿದವು.

ಭಾಷೆಯ ಯಜಮಾನಿಕೆಯ ಸಂದರ್ಭದಲ್ಲಿ ವಸಾಹತುಶಾಹಿಯ ಏಕರೂಪತೆ, ಏಕಸ್ವಾಮ್ಯ ಸ್ಥಾಪಿಸುವಲ್ಲಿ ಪ್ರಯತ್ನಿಸಿ ಯಶಸ್ಸನ್ನು ಪಡೆಯಿತು. ವಸಾಹತುಶಾಹಿ ತುಳುನಾಡಿನಲ್ಲಿ ಯಜಮಾನಿಕೆ ಸ್ಥಾಪಿಸುವ ಭರದಲ್ಲಿ ಭಾಷೆಯ ವಾರಸುದಾರಿಕೆಯ ಮೇಲೆ ಬಲಪ್ರಯೋಗ ಮಾಡಲಿಲ್ಲ. ಬದಲಾಗಿ ತನ್ನ ಅಧುನಿಕ ಶಿಕ್ಷಣದ ಮೂಲಕ ಜನರನ್ನು ನಂಬಿಸುವ, ಒಪ್ಪಿಸುವ ಹಾಗೂ ಮನವೊಲಿಸಿ ಅನಿವಾರ್ಯತೆಯನ್ನು ಸೃಷ್ಟಿಸಿತು. ಭಾಷೆಗೆ ಸಂಬಂಧಿಸಿ ಹೇಳುವುದಾದರೆ ತುಳುನಾಡು ಭೌಗೋಳಿಕ ಮತ್ತು ಐತಿಹಾಸಿಕ ಕಾರಣಗಳಿಂದಾಗಿ ವಿಭಿನ್ನ ಭಾಷಾವಲಯವಾಗಿ ಪರಿವರ್ತಿತವಾಯಿತು. ಆದರೆ ಅದರ ಮುಖ್ಯ ಭಾಷೆಯು ದಕ್ಷಿಣಭಾರತದ ಪಂಚದ್ರಾವಿಡ ಭಾಷೆಗಳಲ್ಲಿ ಒಂದೆಂದು ಸ್ಥಾನ ಪಡೆದರೂ ವಿಷಾದನೀಯವಾಗಿ ಒಂದು ಉಪಭಾಷೆಯ ಹಂತಕ್ಕೆ ಇಳಿಯಿತು. ತುಳುನಾಡಿನಲ್ಲಿ ತುಳುವು ಕಳೆದುಕೊಂಡ ಸ್ಥಾನಮಾನವನ್ನು ಪುನಃ ಪಡೆಯಬೇಕೆಂಬ ಜಾಗೃತಿಯು ವಿಶಾಲವಾದ ರಾಷ್ಟ್ರೀಯ ಜಾಗೃತಿಯ ಒಂದು ಭಾಗವಾಗಿತ್ತು. ತುಳು ಭಾಷೆಯ ಬಳಕೆ ವಸಾಹತುಶಾಹಿಗಳಿಗೆ ಅಗತ್ಯವಾಗಿದ್ದರಿಂದ ಆ ಭಾಷೆಗೆ ತುಳುವರಿಗೆ ಅರಿವಿಲ್ಲದಂತೆ ವಸಾಹತುಶಾಹಿಯಿಂದ ಕಾಯಕಲ್ಪಗಳು ನಡೆದವು. ಮತಪರಿವರ್ತಿತರ ಮನ ಗೆಲ್ಲಲು ತುಳುವಿನ ಅಗತ್ಯತೆ ಕಂಡುಕೊಂಡಿದ್ದ ಮಿಷನರಿಗಳು ಅದಕ್ಕನುಗುಣವಾಗಿ ತುಳು ಭಾಷೆಗೆ ಅಗತ್ಯ ನೆರವು ನೀಡಿದರು.[91] ತುಳುವನ್ನು ಉದ್ಧರಿಸಲು ಮತಪ್ರಚಾರಕರು ಮಂಚೂಣಿ ವಹಿಸಿದ ಕಾರಣ ಪ್ರಾಂತೀಯ ಭಾಷೆಯ ಮೂಲಕ ಸಾಮಾಜಿಕ ಪರಿವರ್ತನೆಯನ್ನು ತ್ವರಿತಗೊಳಿಸುವುದಾಗಿತ್ತು. ತುಳುನಾಡಿನಲ್ಲಿ ಬಾಸೆಲ್ ಮಿಷನರಿಗಳು ತುಳು ಅಧ್ಯಯನದ ಮೂಲಕ ಟ್ರೆಂಡ್ ಸೆಟ್ಟರ್‌ಗಳಾದರು.

ತುಳುವಿಗೆ ಮಿಷನರಿಗಳು ಆದ್ಯತೆ ನೀಡಿದಾಗ ಪ್ರೇರಿತಗೊಂಡ ತುಳುವರು ಈ ಭಾಷೆಯ ಬಗ್ಗೆ ಅಭಿಮಾನ ತಳೆದರಲ್ಲದೇ ಈ ಭಾಷೆಯನ್ನು ಚಳುವಳಿಯ ರೂಪದಲ್ಲಿ

ಒಂದು ಉನ್ನತ ಸ್ಥಾನಮಾನ ಕಲ್ಪಿಸುವ ಪ್ರಯತ್ನಗಳು ನಡೆದವು. ತುಳು ಚಳುವಳಿಯ ನಾಯಕರಾಗಿ ಕೆಲಸ ಮಾಡಿದ ಎಸ್.ಯು ಪಣಿಯಾಡಿಯವರು ತುಳುವಿಗೆ ಈ ಪ್ರದೇಶದಲ್ಲಿ ಗೌರವಾರ್ಹ ಭಾಷೆಯ ಮನ್ನಣೆ ದೊರಕಿಸಿ ಅದನ್ನು ಇಲ್ಲಿಯ ಸಾಂಸ್ಕೃತಿಕ ಅನನ್ಯತೆಯ ಪ್ರತೀಕವಾಗಿ ಪರಿವರ್ತಿಸಲು ಶ್ರಮಿಸಿದರು. ಮತಬೋಧಕರು ತುಳುಭಾಷೆಯೆಡೆಗೆ ಕುತೂಹಲದ ದೃಷ್ಟಿ ವ್ಯಕ್ತಪಡಿಸಿದರೆ ತುಳು ಚಳುವಳಿಯ ಸಮರ್ಥಕರು ತುಳುಭಾಷೆ ಮತ್ತು ಸಂಸ್ಕೃತಿಗಳಲ್ಲಿ ತಮ್ಮನ್ನು ತಾವೇ ಗುರುತಿಸಿಕೊಳ್ಳುವ ಹುಮ್ಮಸ್ಸಿನಿಂದ ಪ್ರೇರಿತರಾದರು.[92] ಆಧುನಿಕ ವ್ಯವಸ್ಥೆಯಲ್ಲಿ ತುಳುಭಾಷೆ ತನ್ನ ಸಂಯುಕ್ತ ಅನನ್ಯತೆಯನ್ನು ಉಳಿಸಿಕೊಂಡಿರುವ ಕಾರಣ ದೇಶದೆದುರು ತನಗೆ ಪ್ರತ್ಯೇಕತೆಯ ಉದ್ದೇಶವಿಲ್ಲವೆಂದು ತೋರಿಸಲು ತುಳುವನ್ನು ಸಂವಿಧಾನದ 8ನೇ ಪರಿಛೇದದಲ್ಲಿ ಸೇರಿಸಲು ಹೋರಾಟಗಳು ಮಾಡಲ್ಪಟ್ಟಿವೆ.

ಅಂಟೆನಿಯೋ ಗ್ರಾಮ್‌ಸ್ಕಿ ಪ್ರಕಾರ ಒಂದು ಅಧಿಕಾರಯುತವಾದ ವ್ಯವಸ್ಥೆ ಯಜನಮಾನಿಕೆಯನ್ನು ಸ್ಥಾಪಿಸುವಾಗ ಬಲಪ್ರಯೋಗದೊಂದಿಗೆ ಮನವೊಲಿಕೆಯ ತಂತ್ರವನ್ನು ಅನುಸರಿಸಿ ತನ್ನ ಆಳ್ವಿಕೆಗೊಳಪಡುವ ಪ್ರದೇಶದ ಕೆಳವರ್ಗಗಳಿಗೆ ನೈತಿಕ ಮುಂದಾಳತ್ವ ಮತ್ತು ಮಾರ್ಗದರ್ಶನವನ್ನು ನೀಡುವ ಮೂಲಕ ತನ್ನ ಆಧೀನಗಳಿಗೆ ಹತ್ತಿರವಾಗುತ್ತಾ ಹೋಗುತ್ತದೆ. ಅವರ ಪ್ರಕಾರ ಯಜಮಾನಿಕೆ ಸಾಧಿತ ಸಾಂಸ್ಕೃತಿಕ ರಾಜಕೀಯ. ತುಳುನಾಡಿನಲ್ಲಿ ವಸಾಹತುಶಾಹಿ ಇಂಗ್ಲೀಷ್ ಭಾಷೆಯನ್ನು ಅಧುನಿಕ ಶಿಕ್ಷಣದ ಸಂವಹನ ಮಾಧ್ಯಮವಾಗಿ ನಿರ್ಣಾಯಕವಾಯಿತು. ವಸಾಹತಿನಲ್ಲಿ ಅಧುನಿಕ ನೆಲೆಗಟ್ಟಿನಲ್ಲಿ ಇಂಗ್ಲೀಷ್ ಶಿಕ್ಷಣ ಪಡೆಯುವುದು ಪ್ರತಿಷ್ಠೆಯ ವಿಷಯವಾಯಿತು. ತುಳುನಾಡು ಎಲ್ಲ ರಂಗದಲ್ಲಿ ಪುನರ್‌ರಚನೆಗೊಳ್ಳಬೇಕಾದರೆ ವಸಾಹತುಶಾಹೀ ಆಳ್ವಿಕೆ, ಸಂವಹನ ಮಾಧ್ಯಮವಾದ ಇಂಗ್ಲೀಷ್ ಅಗತ್ಯ ಎಂದು ಬಿಂಬಿತವಾಯಿತು. ಈ ಪರಿಕಲ್ಪನೆ ಅಧುನಿಕ ಶಿಕ್ಷಣದಿಂದ ಪ್ರಭಾವಿಸಿರುವುದರಿಂದ ತುಳುಭಾಷೆ ಮತ್ತು ಸಂಸ್ಕೃತಿ ತನ್ನ ಅನನ್ಯತೆಯನ್ನು ಕಳೆದುಕೊಂಡು ಮೂಲೆಗುಂಪಾಗುವ ಅಪಾಯವನ್ನು ತಂದೊಡ್ಡಿದೆ. ಜೊತೆಗೆ ವಸಾಹತುಶಾಹಿಯ ಆಡಳಿತದ ನಂತರದ ತುಳುನಾಡಿನ ಶೈಕ್ಷಣಿಕ ನೆಲೆಗಳಲ್ಲಿ 20ನೇ ಶತಮಾನದ ರಾಜಕೀಯದ ಹೊಸ ಪಟ್ಟುಗಳನ್ನು ಹಾಗೂ ಬಂಡವಾಳಶಾಹಿಯ ಚಿಂತನೆಗಳನ್ನು ಮೈಗೂಡಿಸಿಕೊಂಡು ರೂಪುತಳೆದಿರುವುದನ್ನು ಕಾಣಬಹುದಾಗಿದೆ.[93] "ಮಾನವನ ವ್ಯವಸ್ಥಿತ ಬದುಕು ಆರಂಭವಾದ ಮೇಲೆ ನಾಯಕತ್ವದ ಕಲ್ಪನೆ, ಖಾಸಗಿ ಒಡೆತನ, ಅಧಿಕಾರ ಹಾಗೂ ಸಂಪತ್ತಿನ ಕ್ರೋಢಿಕರಣ ಮುಂತಾದ ಯಜಮಾನಿಕೆಯ ಲಕ್ಷಣಗಳು ವಸಾಹತುಶಾಹಿ ಅಧಿಕಾರದ ಅವಧಿಯ ಕಾಲದಿಂದ ಹೆಚ್ಚು ಸ್ಪಷ್ಟತೆಯನ್ನು ಹೊಂದಿತು. ಅಧಿಕಾರವನ್ನು ಪಡೆಯುವುದು ಅಥವಾ ಅಧಿಕಾರ ಹಾಗೂ ಸವಲತ್ತುಗಳಿಗಾಗಿ ಹಾತೊರೆಯುವುದು ಮಾನವನ ವಿಕಾಸದ ಪ್ರತಿಯೊಂದು

ಹೆಜ್ಜೆಯಲ್ಲೂ ಇದ್ದಂತಹ ದಾಹವಾಗಿತ್ತು. ಕೃಷಿ ಪ್ರಧಾನ ಪ್ರದೇಶ ವಸಾಹತುಶಾಹಿಯಿಂದ ಕೈಗಾರಿಕಾ ವಲಯವಾಗಿ ಬದಲಾವಣೆಯಾದರೆ, ಬಾಸೆಲ್ಗಳು ವಸಾಹತನ್ನು ಶಿಕ್ಷಣದೆಡೆಗೆ ಆಕರ್ಷಿಸಿ, ಧಾರ್ಮಿಕ ಚಟುವಟಿಕೆಗಳಿಗೆ ಹಾದಿಯನ್ನು ಸುಗಮಗೊಳಿಸಿದರು.[94] ಶಿಕ್ಷಣದ ಮೂಲಕ ವಸಾಹತಿನ ಧಾರ್ಮಿಕ ಆಚರಣೆಗಳು ಮೂಢನಂಬಿಕೆ ಲೇಪಿತವೆಂದು ಬಿಂಬಿತವಾಗಿದ್ದರಿಂದ ಸಾಮಾಜಿಕ ಪರಿವರ್ತನೆ ಆಯ್ಕೆ ಸರಳೀಕೃತವಾಯಿತು. ಆಧುನಿಕ ಶಿಕ್ಷಣ, ವಸಾಹತುಶಾಹಿ ಆಡಳಿತ ಬದಲಾವಣೆಯ ಪರಿಕಲ್ಪನೆಯನ್ನು ಪರಿಚಯಿಸಿತ್ತಾದರೂ, ಹಳೆಯದ್ದೆಲ್ಲ ಕಂದಾಚಾರಗಳೆಂಬ ಹಣೆಪಟ್ಟಿ ಕಟ್ಟಿಕೊಂಡಿರುವುದು ಮತ್ತು ವಸಾಹತಿನ ಈ ಬ್ರಾಂಡ್ ಹೆಸರನ್ನು ದೇಶಿಯ ಪ್ರಜೆಗಳು ಹಾಗೇಯೆ ಸ್ವೀಕರಿಸಿದ್ದು ಮತ್ತು ತನ್ನದೇ ನೆಲದ ಅಡಿಪಾಯದ ವಿರುದ್ಧ ಬಂಡೆದಿದ್ದು ತುಳುನಾಡಿನ ಇತಿಹಾಸದ ದುರಂತಮಯ ದೃಶ್ಯಗಳಲ್ಲಿ ಒಂದು. ತುಳುನಾಡಿನ ವಾರಸುದಾರಿಕೆಯ ಬದಲಾವಣೆಯ ಪ್ರಕ್ರಿಯೆಗಳಿಗೆ ವಸಾಹತುಶಾಹೀ ಆಡಳಿತದ ಧೋರಣೆಗಳು ನೇರವಾಗಿ ಕಾರಣವಾದವು. ನೂತನ ಶಿಕ್ಷಣ ವ್ಯವಸ್ಥೆ, ನ್ಯಾಯಾಂಗ ರಚನೆ, ಪೋಲಿಸ್ ವ್ಯವಸ್ಥೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ಇತಿಹಾಸ ಬರವಣಿಗೆ, ಮುದ್ರಣ ಮುಂತಾದ ಸಾಧನಗಳಿಂದ ನೆಲೆ ಕಂಡುಕೊಂಡ ವಸಾಹತುಶಾಹಿಯಿಂದಾಗಿ ತುಳುನಾಡಿಗೆ ಬೇರೆ ಆಯ್ಕೆಯಿಲ್ಲದೇ ತನ್ನ ಪರಂಪರಾಗತ ಜೀವನದ ಮೂಲಾಂಶಗಳನ್ನು ಬದಲಾಯಿಸಿಕೊಳ್ಳಬೇಕಾಯಿತು. ತುಳುನಾಡಿಗೆ ಸರಿಹೊಂದಿ ಕಾರ್ಯಾಚರಿಸುತ್ತಿದ್ದ ಧರ್ಮ, ಸಮಾಜ, ಆರ್ಥಿಕತೆ, ಸಾಂಸ್ಕೃತಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಂಡು, ಅವುಗಳನ್ನು ನಿಯಂತ್ರಿಸಿ, ನಿರ್ದೇಶಿಸುತ್ತಿದ್ದ ವಾರಸುದಾರಿಕೆಯು ಶಿಕ್ಷಣದ ಸಂವಹನೆ, ವಸಾಹತುಶಾಹಿಯ ಆಡಳಿತದಿಂದಾಗಿ ಪಲ್ಲಟಗೊಂಡವು. ಈ ಎಲ್ಲಾ ಕ್ಷೇತ್ರಗಳಲ್ಲಿ ಸೃಷ್ಟಿಸಲಾದ ಬದಲಾವಣೆಗಳನ್ನು ಅಧುನಿಕೀಕರಣ ಎಂದು ಕರೆದು ಅದರ ಆಯ್ಕೆಯ ಮಾರ್ಗಗಳೆಲ್ಲವೂ ಉತ್ತಮವಾಗಿರುತ್ತದೆ ಎಂದು ಪ್ರತಿಪಾದನೆಗೊಂಡಿರುವುದು ಒಂದು ಕಡೆ ಪರಂಪರಾಗತ ವ್ಯವಸ್ಥೆಯ ಮರೆಯಾಗುವಿಕೆಗೆ ಕಾರಣವಾದರೇ ಇನ್ನೊಂದೆಡೆ ವಸಾಹತುಶಾಹೀಯ ಬೇರುಗಳು ವಸಾಹತಿನಲ್ಲಿ ಆಳಕ್ಕಿಳಿಯಲು ಅನುವು ಮಾಡಿಕೊಟ್ಟಿತು.

--------

## ---ಕೊನೆಟಿಪ್ಪಣಿ---

1 ಪಮೇಲಾ ಜಿ. ಪ್ರೈಸ್, ಕಿಂಗ್‌ಷಿಪ್ ಅಂಡ್ ಪೊಲಿಟಿಕಲ್ ಪ್ರಾಕ್ಟೀಸ್ ಇನ್ ಕೊಲೊನಿಯಲ್ ಇಂಡಿಯಾ, ಸಿ.ಯು.ಪಿ, ಪುಟ 40.

2 ಶ್ರೀನಿವಾಸ ಹಾವನೂರ್, ಹೊಸಗನ್ನಡದ ಅರುಣೋದಯ, ಪುಟ 9.

3 ಪಮೇಲಾ ಜಿ. ಪ್ರೈಸ್, ಕಿಂಗ್‌ಷಿಪ್ ಅಂಡ್ ಪೊಲಿಟಿಕಲ್ ಪ್ರಾಕ್ಟೀಸ್ ಇನ್ ಕೊಲೊನಿಯಲ್ ಇಂಡಿಯಾ, ಸಿ.ಯು.ಪಿ, ಪುಟ 40.

4 ತುಳುನಾಡಿನಲ್ಲಿ ಗುತ್ತು ಕೇಂದ್ರಿತ ಅಧಿಕಾರಗಳು ವಸಾಹತುಶಾಹಿಯ ಅಧಿಕಾರವನ್ನು ಪೋಷಿಸುವ ನರ್ಸರಿಗಳಾಗಿ ಸಹಯೋಗಗೊಂಡಿರುವುದರಿಂದ ಮುಖ್ಯವಾಗುತ್ತದೆ.

5 ಎಡ್ವರ್ಡ ಸಯೀದ್, ಒರಿಯಂಟಲಿಸಂ, ನ್ಯೂಯಾರ್ಕ 1978–1985 ಪುಟ 31–110.

6 ಗಿರೀಶ ಭಟ್, ಅಧುನಿಕತೆಯ ವ್ಯಾಖ್ಯಾನ–ಡಿ.ಆರ್ ಮಾದರಿ, ಅಪ್ರಕಟಿತ ಸಂಶೋಧನ ಪ್ರಬಂಧ ಮಂಗಳೂರು ವಿ.ವಿ. ಪುಟ 27.

7 ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ, ಒ.ಯು.ಪ್ರೆಸ್ ದಿಲ್ಲಿ; 1998, ಪುಟ 33.

8 ಸುರೇಂದ್ರರಾವ್ ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ. 210.

9 ಫ್ರಾನ್ಸಿಸ್ ಬುಖಾನನ್, ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807.

10 ವರ್ಷಾಂತಿಕೆಗಳನ್ನು ಆಚರಿಸುವ ಮೂಲಕ ಅವುಗಳನ್ನು ನೆನಪಿಸಿ ಅವರ ಕೊಡುಗೆಗಳನ್ನು ಕೊಂಡಾಡಲಾಗುತ್ತಿದೆ. ಉದಾಹರಣೆಗೆ ಮೋಗ್ಲಿಂಗ್‌ನ 150 ವರ್ಷಗಳ ಆಚರಣೆ. ಕಿಟೆಲ್‌ರ ಕೊಡುಗೆಗಳು ಬಗೆಗಿನ ವಿಚಾರಸಂಕಿರಣಗಳು, ಕೆನರಾ 200ರ ನೆನಪು, ಜೋಸೆಫ್‌ವಾಜ್‌ರ ತ್ಯಾಗ ಇತ್ಯಾದಿ.

11 ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟ 6.

12 ಲಾರ್ಡ್‌ಕಾರ್ನವಾಲೀಸನಿಂದ ಪ್ರಾರಂಭವಾದ ಅಭಿವೃದ್ಧಿಯ ಮುಖವಾಡ ವಸಾಹತುಪೂರ್ವದ ಊಳಿಗ ವ್ಯವಸ್ಥೆಯನ್ನು ನಾಶ ಮಾಡಿತು.

13 ನಿತ್ಯಾನಂದ, ಅಪ್ರಕಟಿತ ಸಂಶೋಧನಾ ಪ್ರಬಂಧ ಮಂ.ವಿ.ವಿ ಪುಟ 33. ಕೌಂಟರ್ ಹೆಜಿಮನಿ ಸ್ಥಾಪಿಸುವಲ್ಲಿ ಊರಿನ ಎಲ್ಲಾ ಸಮುದಾಯಗಳಿಗೆ ಕೃಷಿ ಅಧಿಕಾರ ರಚನೆಯಲ್ಲಿ ಉತ್ಸವದ ಕಾರ್ಯಭಾಗಗಳನ್ನು ಸಾಂಸ್ಕೃತಿಕ ಅಧಿಕಾರದ ರೂಪದಲ್ಲಿ ಹಂಚಿಕೊಳ್ಳುವ ಪ್ರಕ್ರಿಯೆಗಳು. ಉದಾ ವಸಾಹತುಪೂರ್ವದಲ್ಲಿ ತುಳುನಾಡಿನ ಗುತ್ತು ವ್ಯವಸ್ಥೆಗಳು ದೈವದ ಉತ್ಸವಗಳ ಆಚರಣೆಯೊಂದಿಗೆ ಕೃಷಿ ಅಧಿಕಾರವನ್ನು ಪಡೆಯುವ ಕಾರ್ಯಯೋಜನೆಯಲ್ಲಿ ಬಲಪ್ರಯೋಗಿಸದೇ ಅಧಿಕಾರ ಚಲಾಯಿಸುವ ನಿರಂತರತೆಯನ್ನು ನೋಡಬಹುದು.

14 ಮೋಹನಕೃಷ್ಣ ರೈ, ಕೆನರಾದ ವಿಭಜನೆ ಪ್ರಸರಾಂಗ, ಕ.ವಿ.ವಿ ಹಂಪಿ, 2010. ಪುಟ 66.

15 ಎ.ಎಸ್ ಪ್ರಭಾಕರ, ಆಧಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ 2006, ಪುಟ 143; ಮಲೆಕುಡಿಯರು, ಕೊರಗ, ಬೈರ, ಮನ್ಸರು. ಶಿವರಾಮ ಕಾರಂತರ ಚೋಮನ ದುಡಿಯಲ್ಲಿ ತುಳುನಾಡಿನ ಈ ಸ್ಥಿತ್ಯಂತರದ ಬಗ್ಗೆ ಚಿತ್ರಣವಿದೆ.

16 ಗ್ಲೆಗ್, ಮುನ್ರೋನ ಜೀವನ ಚರಿತ್ರೆ, ಪುಟ 142. ಫ್ರಾನ್ಸಿಸ್ ಬುಖಾನನ್, ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಮದ್ರಾಸ್; 1807, 1807 ಪುಟ 6. ಸ್ಟರಕ್ ಜೆ,. ಸೌತ್‌ಕೆನರಾ, ಸಂಪುಟ–1 ಮದ್ರಾಸ್ ಪ್ರೆಸಿಡೆನ್ಸಿ, ಮದ್ರಾಸ್, 1864, ಪುಟ 4.

17 ಸೆನ್ಸಸ್ ಒಫ್ ಇಂಡಿಯಾ 1891

18 ಸೆನ್ಸಸ್ ಒಫ್ ಇಂಡಿಯಾ 1871, ಪುಟ 112.

19 ಮೋಹನಕೃಷ್ಣ ರೈ, ತುಳುನಾಡು ಕನ್ನಡ ನುಡಿ, ಪುಟ 260; ಮೋಹನಕೃಷ್ಣ ರೈ, ಕೆನರಾದ ವಿಭಜನೆ ಪ್ರಸರಾಂಗ, ಕ.ವಿ.ವಿ ಹಂಪಿ, 2010. ಪುಟ 66; ಮಾಲತಿ ಮೂರ್ತಿ, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂಗಳೂರು ವಿ.ವಿ 1991.

20 ವೈಟ್ಸಮೆನ್ಸ್ ಬರ್ಡನ್.

21 ಮಂಗಳೂರು ಮ್ಯಾಗಜೀನ್–ವಿ 2, ನಂ.2 ಜೂನ್ 1901 ಪುಟ 15.

22 ಜರ್ಮನಿಯ ಪಿಯೀಟಿಸಮ್ (ಕ್ರೈಸ್ತ ಮಿಷನರಿಗಳಲ್ಲಿ ಒಂದು ವಿಭಾಗ) ಅಂದೋಲನಕಾರರಿಗೆ ಹಾಗೂ ಮತಪರಿವರ್ತನೆಗೆ ಉತ್ಸುಕತೆ ತೋರಿದ ಮಿಷನರಿಗಳಿಗೆ ವಸಾಹತು ವಿಚಿತ್ರವಾಗಿಯೂ, ಅದ್ಭುತ ಅವಕಾಶವಾಗಿಯೂ ಕಂಡಿತು. ಮುಂದುವರೆದು ಅಭಿವೃದ್ಧಿಯ ನೆಪದಲ್ಲಿ ಕಾರ್ಯಯೋಜನೆಗಳನ್ನು

ಹಮ್ಮಿಕೊಂಡ ವಸಾಹತುಶಾಹಿ ಆಡಳಿತಗಾರರಿಗೆ 19ನೇ ಶತಮಾನದ ವಸಾಹತು ಅದ್ಭುತ ಶತಮಾನವಾಗಿ ಗೋಚರಿಸಿತು.

23 ವಸಾಹತುಶಾಹಿ ಮಾದರಿಯ ಅಭಿವೃದ್ಧಿ ಮತ್ತು ಅಧುನಿಕತೆ 4 ಬಗೆಯಲ್ಲಿ ಒದಗಿ ಬಂತು. 1 ಆಡಳಿತ ವ್ಯವಹಾರ, 2. ಮುದ್ರಣ, 3. ಕ್ರೈಸ್ತಮತ ಪ್ರಚಾರ, 4. ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ.

24 ಜಯಶ್ರೀ. ಸಿ.ಎಚ್, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂ.ವಿ.ವಿ 2004. ಪುಟಗಳು 200–210.

25 ಬಿ.ಎಸ್.ಕೊಹನ್, ರೆಪ್ರಸೆಂಟಿಂಗ ಅಥಾರಿಟಿ ಇನ್ ವಿಕ್ಟೋರಿಯನ್ ಇಂಡಿಯಾ, ಪುಟಗಳು 632–682; ರಣಜಿತ್ ಗುಹಾ, ಡೋಮಿನೆನ್ಸ್ ವಿತ್ಔಟ್ ಹೆಜಿಮನಿ, ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998 ಪುಟ 42.

26 ಯೋಗೇಂದ್ರ ಸಿಂಗ್, ಮೋಡರ್ನೈಸೇಷನ್ ಆಫ್ ಇಂಡಿಯನ್ ಟ್ರೇಡಿಶನ್, 2007, ನ್ಯೂದಿಲ್ಲಿ, ಪುಟಗಳು 101–107.

27 ವಿಲ್ಸನ್. ಎಚ್.ಎಸ್, ಆನ್ ಇಂಪಾಕ್ಟ್ ಒಫ್ ಪ್ರೊಟೆಸ್ಟಂಟ್ ಕ್ರಿಶ್ಚನ್ ಆನ್ ದ ರಿಲಿಜಿಯಸ್, ಸೋಷಲ್ ಅಂಡ್ ಕಲ್ಚರಲ್ ಅಸ್ಪೆಕ್ಟ್ ಒಫ್ ತುಳುವ ಕಮ್ಯೂನಿಟಿ ಇನ್ ಸೌತ್‌ಕೆನರಾ, ಚರ್ಚ್ ಹಿಸ್ಟರಿ ರಿವಿವ್ಯೂ ಪುಟ 1–3.

28 ಮ್ಯಾಥ್ಯೂ ಎಡ್ನೆ, ಮ್ಯಾಪಿಂಗ್ ಆನ್ ಎಂಪೈರ್, ಒಕ್ಸಪರ್ಡ 1990, ಪುಟಗಳು 1, 2, 26.

29 ರಣಜಿತ್ ಗುಹಾ, ಡಾಮಿನೆನ್ಸ್ ವಿತ್ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ; 1998, ಪುಟ 32.

30 1833ರ ಕಾಯಿದೆ ಜಾರಿಗೆ ಬರುವ ತನಕ ವಸಾಹತುಶಾಹಿ ವಸಾಹತಿನ ಸಾಮಾಜಿಕ ಸ್ತರಗಳಲ್ಲಿ ಯಾವುದೇ ಬದಲಾವಣೆಗೆ ಅವಕಾಶ ನೀಡಿರಲಿಲ್ಲ. ವಸಾಹತುಶಾಹಿ ತನ್ನ ನೆಲೆಯನ್ನು ಭದ್ರಪಡಿಸುವಲ್ಲಿ ನಿರತವಾಗಿದ್ದರಿಂದ ರಾಜಕೀಯವಾಗಿ ತನ್ನನ್ನು ತೊಡಗಿಸಿಕೊಂಡಿದ್ದರಿಂದ ಸಾಮಾಜಿಕ ಸುಧಾರಣೆಗೆ ಹೆಚ್ಚು ಮಹತ್ವವನ್ನು ಕೊಟ್ಟಿಲ್ಲ. 1833ರ ಕಾಯಿದೆ ಮತಪ್ರಚಾರಕ ಚಟುವಟಿಕೆಗಳಿಗೆ ಮಹತ್ವ ನೀಡಿದ ಕಾರಣ ಮಿಷನರಿಗಳು ಇಲ್ಲಿನ ಸಮಾಜದ ಸುಧಾರಣೆಯ ನೆಪದಲ್ಲಿ ಬದಲಾವಣೆಯನ್ನು ತರಲು ಉದ್ದೇಶಿಸಿದವು.

31 ತುಳು ಸಾಹಿತ್ಯ ಚರಿತ್ರೆ, ಸಂಪಾದನೆ ಬಿ.ಎ ವಿವೇಕ ರೈ, ಪ್ರಸರಾಂಗ ಕನ್ನಡ ವಿ.ವಿ ಹಂಪಿ 2007, ಪುಟಗಳು 93–102. ಆಕ್ಟ್ 5 ಆಫ್ 1843.

32 ತುಳು ಸಾಹಿತ್ಯ ಚರಿತ್ರೆ, ಸಂಪಾದನೆ ಬಿ.ಎ ವಿವೇಕ ರೈ, ಪ್ರಸರಾಂಗ ಕನ್ನಡ ವಿ.ವಿ ಹಂಪಿ 2007 ಪುಟಗಳು 99. ಕೆನರಾದ ಕಲೆಕ್ಟರ್ ರವೆನ್‌ಷಾನ ಪ್ರಕಾರ ಗುಲಾಮಗಿರಿಯ ಬಗ್ಗೆ, ಅದರ ಕುಂದುಕೊರತೆಗಳ ಬಗ್ಗೆ ಅರಿವು ಮೂಡಿಸಿದ್ದಲ್ಲಿ ಹಾಗೂ ತಮ್ಮ ಮಾಲೀಕರ ಕಪಿಮುಷ್ಠಿಯಿಂದ ತಾವೇ ಬಿಡಿಸಿಕೊಂಡು ಓಡಿಹೋಗಲು ಬ್ರಿಟಿಷ್ ಸರಕಾರ ಪ್ರೋತ್ಸಾಹ ನೀಡಿದ್ದಲ್ಲಿ ಅದು ತುಳುನಾಡಿನ ಉದ್ದಗಲಕ್ಕೂ ಆಸ್ತಿತ್ವದಲ್ಲಿದ್ದಂತಹ ಸಾಂಪ್ರದಾಯಿಕ ವ್ಯವಸ್ಥೆಗೆ ತೊಂದರೆಯಾಗುತ್ತದೆ. ಅಲ್ಲದೇ ಈ ರೀತಿಯ ಪ್ರಯತ್ನಗಳಿಂದ ಅವರಿಗೆ ಹರಿದು ಬರುತ್ತಿದ್ದ ಕಂದಾಯಕ್ಕೂ ಸಂಚಕಾರ ಬರಬಹುದು. ಹೆಚ್ಚಾಗಿ ಅದೇ ಮಾಲೀಕರು ಬ್ರಿಟಿಷ್ ಸರಕಾರಕ್ಕೆ ಕಂದಾಯ ನೀಡುವವರಾಗಿರುವುದರಿಂದ ಅವರು ಅನುಸರಿಸುತ್ತಿದ್ದ ಸಂಪ್ರದಾಯದಲ್ಲಿ ಹಸ್ತಕ್ಷೇಪ ನಡೆಸುವಲ್ಲಿ ಹಿಂದೇಟು ಹಾಕಿದರು. ಕಾರಣ ವಿಧೇಯರಿರುವ ಮಾಲೀಕರನ್ನು ಕೆರಳಿಸುವುದು ಲಾಭದದೃಷ್ಟಿಯಲ್ಲಿ ಸರಿಯಲ್ಲ.

33 ಮಂಗಳೂರು ಮ್ಯಾಗಜೀನ್, ಸಂಪುಟ 3, 1904–1906 ಪುಟ 160.

34 ಆಜ್ಞೆಗಳನ್ನು ಕಾರ್ಯರೂಪಕ್ಕೆ ತರುವ ಏಜಂಟರುಗಳಾದ ಲೆಫ್ಟಿನೆಂಟ್ ಗವರ್ನರನಿಂದ ಹಿಡಿದು ಲಂಬರ್ದಾರ ವರೆಗಿನ ನೌಕರಶಾಹಿಗಳು ಆಜ್ಞೆಗಳನ್ನು ದೌರ್ಜನ್ಯದ ಸಂಕೇತಗಳನ್ನಾಗಿಸಿದರು. ಮಾತ್ರವಲ್ಲ ಯುದ್ಧಗಳ ಸಂದರ್ಭದಲ್ಲಿ ಕೂಲಿ ಕಾರ್ಮಿಕರನ್ನು ಶಸ್ತ್ರಾಸ್ತ್ರಗಳ ಸರಬರಾಜು ಮಾಡುವಲ್ಲಿ ಸಹಕರಿಸಲು ದುಡಿಸಿಕೊಳ್ಳಲಾಯಿತು. ತುಳುನಾಡಿನ ಕೃಷಿ ಕಾರ್ಮಿಕರು ಕೊಡಗು ಇಲ್ಲವೇ ಚಿಕ್ಕಮಂಗಳೂರಿನ ಎಸ್ಟೇಟುಗಳಲ್ಲಿ ದುಡಿಮೆಗೆ ಸಾಗಿಸಲ್ಪಟ್ಟರು. ಮತಾಂತರಿತರು ಕ್ರೈಸ್ತಧರ್ಮದ ಅನುಯಾಯಿಗಳಾಗಿ ಬ್ರಿಟಿಷರ ಎಸ್ಟೇಟುಗಳನ್ನು ನೋಡಿಕೊಳ್ಳುವ ಮೇಲ್ವಿಚಾರಕರಾದರು ಇಲ್ಲವೇ ಅವರ ಮನೆವಾರ್ತೆಯಲ್ಲಿ ತೊಡಗಿಸಿಕೊಂಡರು. ಪಂಜಾಬಿನ ಸಂದರ್ಭದಲ್ಲಿ ಅಲ್ಲಿನ ಸ್ಥಳೀಯರು ಆಜ್ಞೆಗೆ ಒಳಗಾಗಿ ಬಲವಂತವಾಗಿ ವಸಾಹತುಶಾಹಿ ಸೈನ್ಯಕ್ಕೆ ಸೇರ್ಪಡೆಗೊಳ್ಳಬೇಕಾಯಿತು.

35 ಶ್ಯಾಮ್‌ಭಟ್ ಎಸ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್‌ಕೆನರಾ 1799–1862.

36 ಶ್ಯಾಮ್‌ಭಟ್ ಎಸ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್‌ಕೆನರಾ 1799–1862 ಪುಟಗಳು 8–11.

37 ಯೋಗೇಂದ್ರ ಸಿಂಗ್, ಮೋಡರ್ನೈಸೇಷನ್ ಆಫ್ ಇಂಡಿಯನ್ ಟ್ರೇಡಿಶನ್, 2007, ನ್ಯೂದಿಲ್ಲಿ, ಪುಟಗಳು ಎಂ. ಮುಕುಂದ ಪ್ರಭು, ಪೊಲಿ, ಕೆನರಾ–200, ಮಂಗಳೂರು 2000, ಪುಟ 55.

38 ಶ್ಯಾಮ್‌ಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್‌ಕೆನರಾ 1799–1862, ಪುಟಗಳು 23–25.

39 ಎಂ. ಮುಕುಂದ ಪ್ರಭು, ಪೊಲಿ, ಕೆನರಾ–200, ಮಂಗಳೂರು 2000, ಪುಟ 56.

40 ಎಂ. ಮುಕುಂದ ಪ್ರಭು, ಪೊಲಿ, ಕೆನರಾ–200, ಮಂಗಳೂರು 2000, ಪುಟ 56.

41 ಸ್ಟರಕ್, ಪುಟ 192. ಬಿಪಿನ್‌ಚಂದ್ರ, ದ, ಇಸ್ಟ್ರೀ ಆಫ್ ಮಾಡರ್ನ್ ಇಂಡಿಯಾ, ಅನುವಾದ ಎಚ್.ಎಸ್ ಗೋಪಾಲರಾವ್ ಪುಟ 122.

42 ಶ್ಯಾಮ್‌ಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್‌ಕೆನರಾ 1799–1862, ಪುಟ 33.

44 ಬಿಪಿನ್‌ಚಂದ್ರ, ದ, ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಅನುವಾದ ಎಚ್.ಎಸ್ ಗೋಪಾಲರಾವ್ ಪುಟ 130.

45 ಯೋಗೇಂದ್ರ ಸಿಂಗ್, ಮೋಡರ್ನೈಸೇಷನ್ ಆಫ್ ಇಂಡಿಯನ್ ಟ್ರೇಡಿಶನ್, ಪುಟಗಳು 98–99.

46 ತುಳುನಾಡಿನ ಹೆಚ್ಚಿನ ದೇವಸ್ಥಾನಗಳು ಹಾಗೂ ದೈವಸ್ಥಾನಗಳು ವಸಾಹತುಶಾಹಿಯ ಪ್ರಭಾವದಿಂದಾಗಿ ಅವುಗಳ ಪಾರಂಪರಿಕ ನ್ಯಾಯವಿತರಣೆ ಮಸುಕುಗೊಂಡಿತ್ತಲ್ಲದೇ ತೋರಿಕೆಗೆ ಕೇವಲ ಆಚರಣಾತ್ಮಕ ನ್ಯಾಯವಿತರಣೆಯನ್ನು ಮುಂದುವರೆಸಿ ಪಾರಂಪರಿಕ ನ್ಯಾಯವ್ಯವಸ್ಥೆಯ ಪಳಿಯುಳಿಕೆಗಳಾಗಿ ಉಳಿದಿವೆ. ಅವುಗಳಲ್ಲಿ ಧರ್ಮಸ್ಥಳ, ಮಾರಣಕಟ್ಟೆ, ಕಾನತ್ತೂರು ಮುಂತಾದ ದೈವ, ದೇವಸ್ಥಾನಗಳು ನ್ಯಾಯಾಧಿಕರಣದ ಕೇಂದ್ರಗಳಾಗಿ ತುಳುವರ ನ್ಯಾಯಾಡಳಿತದಲ್ಲಿ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಕಾನೂನಿನ ಮುಂದೆ ಸಮಾನರು ಎಂಬ ಮಹತ್ವದ ಸಿದ್ಧಾಂತ ಇಂಗ್ಲೀಷ್ ಅಧಿಕಾರಿಗಳು, ಸೈನ್ಯದ ಅಧಿಕಾರಿಗಳು, ಉನ್ನತ ದರ್ಜೆಯ ತೋಟದ ಮಾಲೀಕರು, ವ್ಯಾಪಾರಿಗಳು ಭಾರತೀಯರ ಜತೆ ಒರಟಾಗಿ ಮತ್ತು ಮೊಂಡುತನದಿಂದ ಕ್ರೂರವಾಗಿ ವರ್ತಿಸಿದರೂ ಯುರೋಪಿನ ನ್ಯಾಯಧೀಶರು ಅವರಿಗೆ ಬಹಳ ಕಡಿಮೆ ಪ್ರಮಾಣದಲ್ಲಿ ಶಿಕ್ಷೆ ವಿಧಿಸುತ್ತಿದ್ದರು. ಕಾನೂನಿನ ಅಸಮಾನತೆ ಈ ರೀತಿ ಹಲವು ಸಂಧರ್ಭಗಳಲ್ಲಿ ಕಾರ್ಯಾಚರಿಸುತ್ತಿತ್ತು.

47 1.ಕಾನೂನಿನ ಮುಂದೆ ಸಮಾನರು ಎಂಬ ಮಹತ್ವದ ಸಿದ್ಧಾಂತ ಇಂಗ್ಲೀಷ್ ಅಧಿಕಾರಿಗಳು, ಸೈನ್ಯದ ಅಧಿಕಾರಿಗಳು, ಉನ್ನತ ದರ್ಜೆಯ ತೋಟದ ಮಾಲೀಕರು, ವ್ಯಾಪಾರಿಗಳು ಭಾರತೀಯರ ಜತೆ ಒರಟಾಗಿ ಮತ್ತು ಮೊಂಡುತನದಿಂದ ಕ್ರೂರವಾಗಿ ವರ್ತಿಸಿದರೂ ಯುರೋಪಿನ ನ್ಯಾಯಧೀಶರು ಅವರಿಗೆ ಬಹಳ ಕಡಿಮೆ ಪ್ರಮಾಣದಲ್ಲಿ ಶಿಕ್ಷೆ ವಿಧಿಸುತ್ತಿದ್ದರು. ಕಾನೂನಿನ ಅಸಮಾನತೆ ಈ ರೀತಿ ಹಲವು ಸಂಧರ್ಭಗಳಲ್ಲಿ ಕಾರ್ಯಾಚರಿಸುತ್ತಿತ್ತು. 2.ನ್ಯಾಯಾಲಯದ ಶುಲ್ಕ ಪಾವತಿ, ನ್ಯಾಯವಾದಿಗಳನ್ನು ಗೊತ್ತುಪಡಿಸುವುದು ಮತ್ತು ಸಾಕ್ಷಿಗಳಿಗಾಗಿ ಖರ್ಚು ಮಾಡುವ ಹಣ ಇತ್ಯಾದಿಗಳು ಹೆಚ್ಚಿದ ಕಾರಣ ನ್ಯಾಯವು ದುಭಾರಿಯಾಗಿತ್ತು. ನ್ಯಾಯಕ್ಕೆ ಸಂಬಂಧಿಸಿದ ವಾದ–ವಿವಾದಗಳು ಸುದೀರ್ಘ ವಿಚಾರಣೆಯಿಂದ ವಿಳಂಬವಾಗುವುದು, ಅನಕ್ಷರಸ್ಥರು, ತಿಳುವಳಿಕೆ ಇಲ್ಲದ ರೈತರಿಗೆ ಅರ್ಥವಾಗದ ಭಾಷೆ, ಕಾನೂನುಗಳಲ್ಲಿನ ಸಂಕೀರ್ಣತೆ, ಆಡಳಿತ ವ್ಯವಸ್ಥೆಯ ಭ್ರಷ್ಟಚಾರ ಇವೇ ಮೊದಲಾದವುಗಳು.

48 ಬಿಪಿನ್‌ಚಂದ್ರ, ದ, ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಅನುವಾದ ಎಚ್.ಎಸ್ ಗೋಪಾಲರಾವ್ ಪುಟ 131.

49 ಭಾರತದ ಅಧುನಿಕ ಪೋಲಿಸ್ ವ್ಯವಸ್ಥೆಯ ಸೃಷ್ಟಿಕರ್ತ ಲಾರ್ಡ್ ಕಾರ್ನವಾಲೀಸ್. ತುಳುನಾಡಿನಲ್ಲಿ ಜಮೀನುದಾರರನ್ನು ಅವರ ಪೋಲಿಸ್ ಕೆಲಸದಿಂದ ನಿವೃತ್ತಿಗೊಳಿಸಿ, ಕಾನೂನು ವ್ಯವಸ್ಥೆಯನ್ನು ವಿಧಿಬದ್ಧ ಪೋಲಿಸ್ ವ್ಯವಸ್ಥೆಯನ್ನು ಸ್ಥಾಪಿಸಿದವು.

50 ಎಂ. ಮುಕುಂದ ಪ್ರಭು, ಪೊಲಿ, ಕೆನರಾ–200, ಮಂಗಳೂರು 2000, ಪುಟಗಳು 57–60.

51 ಶ್ಯಾಮ್‌ಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್ ಕೆನರಾ 1799–1862 ಪುಟ 55.

52 ಗ್ರಾಮಗಳಲ್ಲಿ, ಗ್ರಾಮಸ್ಥರ ಪರವಾಗಿ ಗ್ರಾಮರಕ್ಷಕನೇ ಮೊದಲಿನಂತೆ ಪೋಲಿಸ್ ವ್ಯವಸ್ಥೆಯನ್ನು ನೋಡಿಕೊಳ್ಳುವ ಅಧಿಕಾರ ನೀಡಲಾಯಿತು.

53 ಶ್ಯಾಮ್‌ಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್ ಕೆನರಾ 1799–1862 ಪುಟ 64.

54 ಶ್ಯಾಮ್‌ಭಟ್ ಎನ್, ಜುಡಿಷಿಯರಿ ಅಂಡ್ ಪೋಲಿಸ್ ಇನ್ ಅರ್ಲಿ ಕೊಲೊನಿಯಲ್ ಸೌತ್ ಕೆನರ 1799–1862. ಪುಟ 42; ಎ.ಎಸ್ ಪ್ರಭಾಕರ, ಆಧಿವಾಸಿ ಆಖ್ಯಾನ ಸಮುದಾಯ ಅಧ್ಯಯನಕ್ಕೊಂದು ಆಕರ ಸಂಪಾದನ ಗ್ರಂಥ ಸಿದ್ಧಾರ್ಥ ಪ್ರಕಾಶನ 2006, ಪುಟ 206.

55 ಧರ್ಮಪಾಲ್, ದ ಬ್ಯೂಟಿಫುಲ್ ಟ್ರೀ, 1822–1825ರ ಅವಧಿಯಲ್ಲಿ ವಸಾಹತುಶಾಹಿ ಸರ್ವೇಕ್ಷಣೆ ಮಾಡಿದ ಪ್ರಕಾರ ಅಂದು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ 11,575 ಶಾಲೆಗಳು, 1,52,195 ವಿದ್ಯಾರ್ಥಿಗಳು, 1094

ಕಾಲೇಜುಗಳಲ್ಲಿ 5431 ವಿದ್ಯಾರ್ಥಿಗಳು ಪಾರಂಪರಿಕ ಜ್ಞಾನ ಪಡೆದ ಬಗ್ಗೆ ಪ್ರೆಸಿಡೆನ್ಸಿಯ ಬ್ರಿಟಿಷರ ವರದಿಗಳು ಉಲ್ಲೇಖಿಸಿವೆ.

56 ಸತ್ಪಾಲ್ ಸಂಗ್ವಾನ್, ಸೈನ್ಸ್, ಟೆಕ್ನಾಲಜಿ, ಸಿವಿಲೈಷೇಸನ್, ಪುಟ 53.

57 ಸತ್ಪಾಲ್ ಸಂಗ್ವಾನ್, ಪುಟ 54.

58 ಪಾರಂಪರಿಕ ವ್ಯವಸ್ಥೆಗಳನ್ನು ನಾಶಗೊಳಿಸಿ, ಅವುಗಳ ಜಾಗದಲ್ಲಿ ವಸಾಹತುಶಾಹಿಯ ನೆಲೆಗಳನ್ನು ಭದ್ರಪಡಿಸುವುದಾಗಿತ್ತು.

59 ಬಿಪನ್‌ಚಂದ್ರ, ದ. ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ, ಅನುವಾದ ಎಚ್.ಎಸ್, ಗೋಪಾಲರಾವ್ ಪುಟ 142.

60 ರಹಮತ್ ತರೀಕೆರೆ, ವಸಾಹತುಪ್ರಜ್ಞೆ ಮತ್ತು ವಿಮೋಚನೆ, ಅನುವಾದಿತ ಗ್ರಂಥ. ಪುಟ 31.

61 ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ: 1998, ಪುಟಗಳು 80–83.

62 ಸುರೇಂದ್ರರಾವ್, ಇತಿಹಾಸ ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ 211.

63 ವಸಾಹತುಶಾಹಿಯ ಸೈನ್ಯ, ಪೋಲಿಸ್ ವ್ಯವಸ್ಥೆ, ನಾಗರೀಕ ಸೇವೆಗಳು, ನ್ಯಾಯಾಂಗ, ವರ್ಣಸಂಬಂಧಗಳು, ಆರ್ಥಿಕ ನೀತಿಗಳು, ಸಾರಿಗೆ ಸಂಪರ್ಕಗಳು

64 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ–203

65 ಇಳಿಮುಖ ಸೋಸುವಿಕೆಯ ಸಿದ್ದಾಂತ. ಒಬ್ಬನಿಂದ ಹತ್ತು, ಹತ್ತರಿಂದ ನೂರು, ನೂರರಿಂದ ಸಾವಿರ ಹೀಗೆ ಮುಂದುವರೆಯುತ್ತದೆ.

66 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ 203.

67 ರಣಜಿತ್ ಗುಹಾ, ಡಾಮಿನೆನ್ಸ್ ವಿತ್‌ಔಟ್ ಹೆಜಿಮನಿ ಹಿಸ್ಟ್ರಿ ಅಂಡ್ ಪವರ್ ಇನ್ ಕೊಲೊನಿಯಲ್ ಇಂಡಿಯಾ ಒ.ಯು.ಪ್ರೆಸ್ ದಿಲ್ಲಿ: 1998.

68 1857ರ ಸಿಪಾಯಿದಂಗೆಯ ಕಾಲದಲ್ಲಿ ತುಳುನಾಡು ಕಾರ್ಯಶೀಲಗೊಂಡಿರುವುದು ಗೌಣವಾದಂತಿದೆ.

69 ಮಂಗಳೂರು ಮ್ಯಾಗಜೀನ್, ಸಂಚಿಕೆ–1 1897–1900, ಪುಟ 22.

70 ರೆವರೆಂಡ್ ಸಿ.ಎಚ್ ಹೋಕ್ಸನ್, ಇಂಡಿಯನ್ ಇವಾಂಜಲಿಕಲ್ ರಿವಿವ್ಯೂ 1873–1900, ಶಿಕ್ಷಣ ಮತ್ತು ಮತಾಂತರ? ಪುಟ 132–135.

71 ವಿವೇಕ ರೈ ಬಿ.ಎ, ತುಳು ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿ.ವಿ ಹಂಪಿ 2010, ಪುಟಗಳು 807–812.

72 ರಹಮತ್ ತರಿಕೆರೆ, ವಸಾಹತುಪ್ರಜ್ಞೆ ಮತ್ತು ವಿಮೋಚನೆ

73 ಪೀಟರ್ ವಿಲ್ಸನ್ ಪ್ರಭಾಕರ, ಬಾಸಲ್ ಮಿಷನು ಒಂದು ಅಧ್ಯಯನ, ಅಪ್ರಕಟಿತ ಸಂಶೋಧನ ಪ್ರಬಂಧ, ಮಂ.ವಿ.ವಿ, ಪುಟ 126. ವಿಶಾನ್ಸ್, ಅಪ್ರಕಟಿತ ಸಂಶೋಧನ ಪ್ರಬಂಧ- ಮಂ.ವಿ.ವಿ ಪುಟಗಳು 55, 105–106.

74 ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ 204.

75 ಬಾಸೆಲ್ ಇವಾಂಜಲಿಕಲ್ ಮಿಷನಿನ 33ನೇ ವರದಿ, 1872(1873) ಪುಟ 34–35.

76 ಬಾ.ಇ.ಮಿ 62ನೇ ವಾರ್ಷಿಕ ವರದಿ, 1901, ಮಂಗಳೂರು 1902 ಪುಟ 31.

77 ವಿಶಾನ್ಸ್, ಅಪ್ರಕಟಿತ ಸಂಶೋಧನ ಪ್ರಬಂಧ ಮಂ.ವಿ.ವಿ ಪುಟಗಳು 50–56.

78 ವಿಶಾನ್ಸ್, ಅಪ್ರಕಟಿತ ಸಂಶೋಧನಾ ಪ್ರಬಂಧ, ಮಂ.ವಿ.ವಿ ಮಂಗಳಗಂಗೋತ್ರಿ ಪುಟ 56.

79 ಮಂಗಳೂರು ಮ್ಯಾಗಜೀನ್, ಸಂಚಿಕೆ 1, 1897–1900 ಪುಟ 115. ಗೌರಿ ವಿಶ್ವನಾಥನ್, ಮಾಸ್ಕ್ ಆಫ್ ಕಾಂಕ್ವೆಸ್ಟ್, ಒ.ಯು.ಪಿ ದಿಲ್ಲಿ 1998, ಪುಟಗಳು 68–80.

80 1841ರಲ್ಲಿ ಮಿಷನ್ ಪ್ರೆಸ್ ಪ್ರಾರಂಭಗೊಂಡು ತುಳು ಸಾಹಿತ್ಯ ಗ್ರಂಥಗಳು ಮುದ್ರಣಗೊಳ್ಳಲ್ಪಟ್ಟವು.

81 ವಿಲಿಯಂ ಬೆಂಟಿಂಕ್‌ನ ಕಾಲದಲ್ಲಿ ಸಾಮಾಜಿಕ ಸುಧಾರಣೆಯ ಆಶಯದಂತೆ ಸತಿಪದ್ಧತಿಯ ರದ್ಧತಿ, ವಿಧವಾ ಪುನರ್–ವಿವಾಹ, ಬಾಲ್ಯ ವಿವಾಹ ನಿಷೇಧ, ಇಂಗ್ಲೀಷ್ ವಿದ್ಯಾಭ್ಯಾಸ ಮುಂತಾದವುಗಳನ್ನು ಕಾರ್ಯರೂಪಕ್ಕೆ ತರಲಾಯಿತು.

82 ಬಾಸೆಲ್ ಇವಾಂಜಲಿಕಲ್ ಮಿಷನಿನ 31ನೇ ವಾರ್ಷಿಕ ವರದಿ, 1879 ಪುಟ 18, ಬಾಸೆಲ್ ಇವಾಂಜಲಿಕಲ್ ಮಿಷನಿನ 32ನೇ ವಾರ್ಷಿಕ ವರದಿ, ಪುಟ 20.

83 ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ, ಪುಟ 37.

[84] ಪ್ರಸ್ತುತ ಸರಕಾರಗಳು ನಿರುದ್ಯೋಗದ ಸಮಸ್ಯೆಯನ್ನು ಬಗೆಹರಿಸಲು ಕೌಶಲ್ಯಾಧಾರಿತ ಶಿಕ್ಷಣಕ್ಕೆ ಅಧುನಿಕ ಮಾದರಿಯಲ್ಲಿ ಒತ್ತುಕೊಡುತ್ತಿರುವುದು.

[85] ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ, ಪುಟ 35.

[86] ಡೊಮಿನಿಕ್. ಅಪ್ರಕಟಿತ ಸಂಶೋಧನಾ ಗ್ರಂಥ ಮಂಗಳೂರು ವಿ.ವಿ 68.

[87] ಗೌರಿ ವಿಶ್ವನಾಥನ್, ಔಟ್‌ಸೈಡ್ ದಿ ಪೋಲ್ಡ್:

[88] ಎಂ.ವಿ.ಆರ್ ಶಾಸ್ತ್ರಿ, ಯಾವುದು ಚರಿತ್ರೆ?, ಅನುವಾದ ಬಾಬು ಕೃಷ್ಣಮೂರ್ತಿ, ದ್ರಾವಿಡ ವಿಶ್ವವಿದ್ಯಾಲಯ ಕುಪ್ಪಂ, 2008. ಪುಟ 15–21.

[89] ಮಂಗಳೂರು ಸಮಾಚಾರ, ಸಂಪುಟ.1, ನಂ.11843 ಪುಟಗಳು 1–2.

[90] ಮೋಹನಕೃಷ್ಣ ರೈ ಕೆ, ಕನ್ನಡ ನಾಡು ನುಡಿ, ಪುಟಗಳು 117–120.

[91] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು. ಕನ್ನಡಾನುವಾದ ವಿ.ಬಿ ಅರ್ತಿಕಜೆ, ಪುಟ 285.

[92] ಸುರೇಂದ್ರರಾವ್, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು. ಕನ್ನಡಾನುವಾದ ವಿ.ಬಿ ಅರ್ತಿಕಜೆ ಪುಟ 286–294.

[93] "ರೆಡ್ಯೂಸಿಂಗ್ ಇಂಡಿಯನ್ ಹಿಸ್ಟರಿ ಟು ಎ ಪೋರ್ಷನ್ ಒಫ್ ದ ಬ್ರಿಟಿಷ್ ಹಿಸ್ಟರಿ ವಾಸ್ ರಿಯಲೈಸ್ಡ್ ದಸ್ ಇನ್ ದ ರಿಡಕ್ಷನ್ ಒಫ್ ಇಂಡಿಯನ್ ಪೊಲಿಟಿಕ್ಸ ಟು ಎ ವೆಸ್ಟರ್ನ ಸ್ಟೈಲ್ ಒಫ್ ಎಜುಕೇಷನ್."

[94] ಜಯಪ್ರಕಾಶ ರಾಘವಯ್ಯ, ಬಾಸೆಲ್ ಮಿಷನ್ ಇಂಡಸ್ಟ್ರೀಸ್ ಇನ್ ಮಲಬಾರ್ ಅಂಡ್ ಸೌತ್ ಕೆನರಾ 1834–1914. ಪುಟ 35.

## ಉಪಸಂಹಾರ

ವಸಾಹತುಶಾಹಿ ಆಡಳಿತ; ತುಳುನಾಡಿನ ವಾರಸುದಾರಿಕೆಯ ಆಯಾಮಗಳು ಈ ಪ್ರವೇಶಿಕೆಯ ಸಂಶೋಧನಾ ಪ್ರಬಂಧವನ್ನು ಒಂಬತ್ತು ಅಧ್ಯಾಯಗಳಲ್ಲಿ ವಿಭಾಗಿಸಲಾಗಿದ್ದು, ಇವುಗಳಲ್ಲಿ ಬಹುಮುಖ್ಯವಾಗಿ ವಸಾಹತುಶಾಹಿ ಆಡಳಿತದ ಪ್ರಭಾವದಿಂದಾಗಿ ತುಳುನಾಡಿನಲ್ಲಾದ ಸ್ಥಿತ್ಯಂತರದ ಬಗ್ಗೆ ವಿಮರ್ಶೆ ನಡೆಸಲಾಗಿದೆ. ಗತಕಾಲದ ಇತಿಹಾಸದಲ್ಲಿ ಗತಚಟುವಟಿಕೆಗಳ ಜೊತೆಗೆ ವರ್ತಮಾನಕ್ಕೆ ಸಂಬಂಧಿಸಿದ ಸಂಗತಿಗಳು, ಲೋಕಾನುಭವ, ಲೋಕಗ್ರಹಿಕೆ ಮತ್ತು ಲೋಕತಿಳುವಳಿಕೆ ಮುಂತಾದವುಗಳ ಬಗ್ಗೆ ಸಾಂದರ್ಭಿಕ ಪ್ರಸ್ತಾಪಗಳು ಕಾಣಸಿಗುತ್ತವೆ. ಆದ್ದರಿಂದ ವರ್ತಮಾನದ ಬೇಡಿಕೆಗಳಿಗುಣವಾಗಿ ಸಂದುಹೋದ ಕಾಲದ ಘಟನೆಗಳನ್ನು ನೆನಪು ಮಾಡಿಕೊಳ್ಳುವುದು ಮಾತ್ರವಲ್ಲದೇ ಪ್ರಸ್ತುತವೆನಿಸುವ ಸಂಗತಿಗಳನ್ನು ಆಯ್ಕೆ ಮಾಡಿಕೊಂಡು ಅಗತ್ಯವಾಗಿರುವ ಚರಿತ್ರೆಯೊಂದನ್ನು ಕಟ್ಟುವ ಕ್ರಮ ಮತ್ತು ಆ ಮೂಲಕ ಒಂದು ಪ್ರದೇಶದ ಇತಿಹಾಸವನ್ನು ಮರುಸಂಯೋಜಿಸುವ ಪ್ರಯತ್ನಗಳು ಮಾಡಲ್ಪಟ್ಟಿವೆ ಎಂಬುವುದು ವಸಾಹತುಶಾಹಿ ಸಂದರ್ಭದ ಬಹುಮುಖ್ಯ ಅಂಶವಾಗಿದೆ. ಇದು ತುಳುನಾಡಿನ ವಾರಸುದಾರಿಕಾ ಪರಿಕಲ್ಪನೆಯ ವ್ಯಾಖ್ಯಾನಕ್ಕೆ ಸಂಬಂಧಿಸಿದಂತೆ ಹೆಚ್ಚು ಪ್ರಸ್ತುತವೆನಿಸುತ್ತದೆ.

ಪುರಾತನ ಕಾಲದಿಂದ ತನ್ನದೇ ಆದ, ಮತ್ತು ತನ್ನ ಮಟ್ಟಿಗೆ ವ್ಯವಸ್ಥಿತವೇ ಎನಿಸಿಕೊಂಡ ವ್ಯವಸ್ಥೆಯೊಂದನ್ನು ಹೊಂದಿದ್ದ ತುಳುನಾಡು ಸಮಯ-ಸಂದರ್ಭದ ಕರೆಗಳಿಗೆ ಓಗೊಟ್ಟು ಅದಕ್ಕೆ ಸ್ಪಂದಿಸಿ ತನ್ನ ಪ್ರಸ್ತುತತೆಯನ್ನು ಮುಂದುವರೆಸಿಕೊಂಡು ಬಂದಿದೆ. ಅದರಲ್ಲೂ ತುಳುನಾಡಿನ ವಾರಸಾಧಿಕಾರ ಪರಿಕಲ್ಪನೆಯು ಈ ಪ್ರಕ್ರಿಯೆಯಲ್ಲಿ ಹೆಚ್ಚು ತೊಡಗಿಸಿಕೊಂಡದ್ದನ್ನು ಕಾಣಬಹುದು. ವಾರಸುದಾರಿಕೆಯ ಇನ್ನೊಂದು ಮುಗ್ಗುಲನ್ನು ಪರಂಪರೆ ಎಂಬ ಅರ್ಥದಲ್ಲೂ ಗ್ರಹಿಸಿಕೊಳ್ಳಬಹುದ್ದಾಗಿದ್ದರಿಂದ ತುಳುನಾಡಿನ ಪರಂಪರೆ ಒಂದು ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಗೊಳ್ಳುವ ಒಂದು ಸ್ಥಿತಿಯಾಗಿ ಅಥವಾ ಪ್ರಕ್ರಿಯೆಯಾಗಿ ವಸಾಹತುಪೂರ್ವದಲ್ಲಿ ಪರಿಗಣಿಸಲ್ಪಟ್ಟವು. ಇದು ಸಂಪರ್ಕದ ಸಾಂಗತ್ಯದಿಂದ ನಡೆದಿದ್ದಲ್ಲದೇ ಆ ಕಾಲದ ಪ್ರಬಲ ಸಾಮಾಜಿಕ ಗುಂಪುಗಳು ವಿಮರ್ಶಿಸಿ ಒಪ್ಪಿಕೊಂಡ ವ್ಯವಸ್ಥೆಯಾಗಿತ್ತು.[1] ಪ್ರತಿರೋಧಗಳಿದ್ದಾಗ್ಯೂ ಅವು ಸಾಮಾಜಿಕ ವ್ಯವಸ್ಥೆಯಲ್ಲಿ ಒಪ್ಪಿತಗೊಂಡಿರುವುದರಿಂದ ಸಹಜವಾಗಿಯೇ ಇದು ಕಲ್ಚರಲ್ ಹೆರಿಟೇಜ್ ಅಥವಾ ಸಾಂಸ್ಕೃತಿಕ ಬಳುವಳಿಯ ರೂಪ ಪಡೆದುಕೊಂಡಿತ್ತು.

ತುಳುನಾಡು ಈ ರೀತಿ ಪರಂಪರೆ ಹೊಂದಿರುವ ವಿಶೇಷ ಘಟಕವಾಗಿ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ವಸಾಹತುಶಾಹಿ ಪ್ರವೇಶದ ನಂತರ ಈ ಪರಂಪರೆಗಳ ಮೌಲ್ಯ ಕ್ಷೀಣಗೊಳ್ಳುವ ಹಂತಕ್ಕೆ ಮುಟ್ಟಿದರೂ, ಪರಂಪರೆಯಲ್ಲಿದ್ದ ಅಂತಸ್ತು ವಿಚಾರಗಳು ಅದರ

ಅಧುನಿಕತೆಯೊಂದಿಗೆ ಪಳಿಯುಳಿಕೆಯ ರೂಪದಲ್ಲಿ ಉಳಿದುಕೊಂಡು ಬಂದಿದೆ ಎಂಬುವುದು ಸ್ಪಷ್ಟಗೊಂಡಿವೆ. ವಸಾಹತುಪೂರ್ವದ ಈ ಪರಿಕಲ್ಪನೆ ಸ್ವಲ್ಪಮಟ್ಟಿಗೆ ಗೊಂದಲಮಯವೆನಿಸಿಕೊಂಡರೂ, ವರ್ತಮಾನದ ಪರಂಪರೆಯಾಗಿ ಅದು ವಸಾಹತುಶಾಹೀ ಆಡಳಿತದಡಿಯಲ್ಲಿ ಪಾರದರ್ಶಕವಾಗುವ ಚಟುವಟಿಕೆಯಲ್ಲಿ ಪಾಲ್ಗೊಂಡಿದೆ.[2]

ಈ ಸಂಶೋಧನೆಯಲ್ಲಿ ತುಳುನಾಡಿನ ವಾರಸುದಾರಿಕೆಯ ನೆಲೆಗಳನ್ನು ವಾಸ್ತವ್ಯ ಮತ್ತು ಭೂಒಡೆತನಗಳ ಆಧಾರದಲ್ಲಿ ವಿಶ್ಲೇಷಿಸಲಾಗಿದೆ. ತುಳುನಾಡು ಕೃಷಿ ಪ್ರಧಾನವಾದ ಭೌಗೋಳಿಕ ನೆಲೆ. ತುಳುನಾಡಿನ ಸಮಾಜ ಸಹಬಾಳ್ವೆಯ ಸ್ವರೂಪದ್ದೆಂದರೂ, ಶ್ರೇಣಿಕೃತವಾದ ಸಾಮಾಜಿಕ ರಚನೆಯನ್ನು ಹೊಂದಿದೆ. ಭತ್ತದ ಕೃಷಿ, ಜನಸಂಖ್ಯೆಯ ವೃದ್ಧಿ, ಸಮುದಾಯಗಳ ಚಲನೆ, ಶ್ರಮ, ವೃತ್ತಿ ಆಧಾರಿತ ಸಮುದಾಯಗಳಲ್ಲಾದ ಸಂಚಲನೆ ಮುಂತಾದವುಗಳು ಶ್ರೇಣಿಕೃತ ವ್ಯವಸ್ಥೆಗೆ ಹೆಚ್ಚು ಬಲ ತಂದುಕೊಟ್ಟವು. ಸಮಾಜದ ತಾತ್ವಿಕ ಚೌಕಟ್ಟುಗಳು ಧಾರ್ಮಿಕ ಆಚರಣೆಗಳ ಹಿಡಿತಕ್ಕೊಳಪಟ್ಟಾಗ ಕೃಷಿ ಅಧಿಕಾರದ ರಚನೆಗಳು ಸಂಕೀರ್ಣಗೊಂಡವು. ಈ ಬೆಳವಣಿಗೆ ತುಳುನಾಡು ವಿಜಯನಗರದ ಆಡಳಿತಕ್ಕೊಳಪಡುವಲ್ಲಿಂದ ಸ್ಪಷ್ಟವಾಗಿ ಕಾಣಿಸಿಕೊಂಡವು. ಇನ್ನೊಂದೆಡೆ ಮುಚ್ಚಿದ ಆರ್ಥಿಕತೆ ತೆರೆದುಕೊಳ್ಳುವ ಹಂತವೂ ಈ ಕಾಲಘಟ್ಟದ ಪ್ರಮುಖ ಬೆಳವಣಿಗೆಯಾಗಿ ಮುಂದುವರೆದು ಪರಶುರಾಮನ ಐತಿಹ್ಯದ ಮೂಲಕ ನೆಲೆಗೊಳ್ಳುವ ಸಮುದಾಯಗಳ ಅನನ್ಯತೆ, ಅದರ ಪ್ರಭಾವದಿಂದ ಕೃಷಿಭೂಮಿ ವಸಾಹತುಪೂರ್ವದ ಬಂಡವಾಳ ವ್ಯವಸ್ಥೆಗೆ ತೆರೆದುಕೊಳ್ಳುವಲ್ಲಿಂದ ಭತ್ತ ಪ್ರಣೀತ ಆರ್ಥಿಕತೆ ಈ ಭಾಗದಲ್ಲಿ ಬದಲಾವಣೆಗೆ ನಾಂದಿ ಹಾಡಿತು. ಜೊತೆಗೆ ಪ್ರಭಾವಿ ಸಮುದಾಯಗಳು ರೂಢಿ-ಶಾಸ್ತ್ರಗಳ ಮುಖೇನ ಧಾರ್ಮಿಕ ವಿಚಾರಗಳನ್ನು ಮುಂದಿಟ್ಟು, ಸಾಂಸ್ಕೃತಿಕ ಯಾಜಮಾನ್ಯತೆಯನ್ನು ಹೊಂದಿದವು. ಭೂಮಿಯ ಒಡೆತನದೊಂದಿಗೆ ಗ್ರಾಮಗಣ್ಯರಾಗಿ ಸ್ಥಳೀಯ ಆಡಳಿತವನ್ನು ವ್ಯವಸ್ಥೆಗೊಳಿಸಿದರು. ಬ್ರಾಹ್ಮಣರು, ಜೈನರು, ಒಕ್ಕಲುಗಳು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿ ತುಳುನಾಡಿನ ಕೃಷಿ ಅಧಿಕಾರದ ರಚನೆಯಲ್ಲಿ ಪ್ರಧಾನ ಭೂಮಿಕೆಯನ್ನು ನಿರ್ವಹಿಸಿದ್ದವು.

ಕಾಲಾನುಕ್ರಮದ ರಾಜಕೀಯ ಸ್ಥಿತ್ಯಂತರಗಳಿಂದಾಗಿ ಜೈನಮನೆತನಗಳು ಬೀಡಿನಲ್ಲಿ ಅಧಿಕಾರ ಕಳೆದುಕೊಂಡವಲ್ಲದೇ ಕೃಷಿ ಭೂಮಿಯ ಒಡೆತನ, ಒಕ್ಕಲ್ಮರ ಗುತ್ತುಗಳಿಗೆ ವರ್ಗಾವಣೆಯಾಗಿ ಸ್ಥಳೀಯ ಆಡಳಿತದ ರಚನೆಯಲ್ಲಿ ಗಣನೀಯ ಬದಲಾವಣೆಗಳಾದವು. ಹೀಗೆ ವಸಾಹತುಪೂರ್ವದಲ್ಲಿನ ಭೂಮಿಯ ಒಡೆತನದ ಪಲ್ಲಟ ರಾಜಕೀಯ ಸ್ಥಿತ್ಯಂತರಗಳಿಗೆ ಅವಕಾಶ ಮಾಡಿಕೊಟ್ಟವು. ಹೀಗೆ ತುಳುನಾಡಿನಲ್ಲಿ ಭೂಮಿಯನ್ನು ಆಧರಿಸಿದ ಕೃಷಿ ವಾರಸುದಾರಿಕೆ ಇಲ್ಲವೇ ಪರಂಪರೆ, ಸಾಮುದಾಯಿಕ ಒಡೆತನದ ಪರಿಕಲ್ಪನೆ, ಸಹಬಾಳ್ವೆ, ಶ್ರೇಣಿಕೃತ

ಸಮಾಜದರಚನೆ, ಕೃಷಿ ಆಧಾರದಲ್ಲಿ ರೂಪಿತಗೊಂಡ ಆರ್ಥಿಕತೆ ಮತ್ತು ಕೃಷಿ ಅಧಿಕಾರದ ರಚನೆಗಳು, ಕೃಷಿ ಅಧಿಕಾರವನ್ನು ವಿನ್ಯಾಸಗೊಳಿಸಿದ ರೂಢ, ಆರಾಧನ ಸಂಪ್ರದಾಯಗಳು, ಇವೆಲ್ಲವನ್ನು ಹೊಂದಿಕೊಂಡ ಸಾಂಸ್ಕೃತಿಕ ಯಾಜಮಾನ್ಯದ ವಾರಸುದಾರಿಕೆ ಇಲ್ಲವೇ ಪರಂಪರೆಗಳು ವಸಾಹತುಶಾಹಿ ಕಾಲದಲ್ಲಿ ಮತ್ತಷ್ಟು ಸಂಕೀರ್ಣಗೊಂಡು ವಾರಸುದಾರಿಕೆಯಲ್ಲಿ ಮಹತ್ತರ ಬದಲಾವಣೆಯನ್ನು ತಂದವು.

ಇತಿಹಾಸದ ಈ ಪ್ರಕ್ರಿಯೆಗಳು ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಅನುಷ್ಠಾನಗೊಂಡ 'ಉಳುವವನೇ ಭೂಮಿಯ ಒಡೆಯ' ಭೂಮಸೂದೆ ಕಾಯ್ದೆಯ ರೂಪದಲ್ಲಿ ಜಾರಿಗೆ ಬಂದ ನಂತರ ವಾರಸುದಾರಿಕೆಗಳು ಸಾರ್ವತ್ರಿಕಗೊಂಡದ್ದನ್ನು ಕಾಣಬಹುದು. ಇದು ತುಳುನಾಡಿನ ಭೂಮಿಯ ಒಡೆತನ, ಮತ್ತು ಕೃಷಿ ಅಧಿಕಾರ ಗೌಣಗೊಂಡರೂ ಸಾಂಸ್ಕೃತಿಕ ಯಜಮಾನಿಕೆಗೆ ಹೊಸ ಮನ್ವಂತರವನ್ನು ಒದಗಿಸಿಕೊಟ್ಟಿದೆ.[3]

ವಸಾಹತುಶಾಹಿಯ ಆಳ್ವಿಕೆಯ ಆರಂಭವು ಈ ನಾಡಿನ ಎಲ್ಲಾ ರಂಗದಲ್ಲೂ ಮಿಶ್ರ ಪ್ರತಿಕ್ರಿಯೆಯನ್ನು ಉಂಟು ಮಾಡಿ ಜಟಿಲಗೊಳಿಸಿತು. ದೇಶಿಯ ಕೆಲವು ರಚನೆಗಳು ಈ ಬದಲಾದ ವ್ಯವಸ್ಥೆ ಮತ್ತು ಆಳ್ವಿಕೆಗೆ ಹೊಂದಿಕೊಂಡರೆ ಮತ್ತೆ ಕೆಲವು ಹೊಸತನ್ನು ದ್ವೇಷಿಸಿ, ಪ್ರತಿಭಟಿಸಿ ತಿರಸ್ಕರಿಸಿದವು. ಇನ್ನೂ ಕೆಲವು ಅಲಿಪ್ತ ಅಥವಾ ಅನಿಶ್ಚಿತ ಸ್ವರೂಪ ಪಡೆದುಕೊಂಡವು. ತುಳುನಾಡಿನಲ್ಲಿ ವಸಾಹತುಶಾಹಿ ಪ್ರಕಟಪಡಿಸಿದ ಅಧುನಿಕ ಎನ್ನಲಾಗುವ ಬದುಕು, ಜೀವನ ಕ್ರಮ ಮತ್ತು ಯೋಚನಾ ಕ್ರಮದಲ್ಲಿ ಹಾಸುಹೊಕ್ಕಾಗಿರುವ ವಿಜ್ಞಾನದ ಪಾರಮ್ಯ, ಬಂಡವಾಳ ವ್ಯವಸ್ಥೆ, ವೈಚಾರಿಕತೆಯ ಆಸೀಮ ನಂಬಿಕೆ, ಪ್ರಗತಿಯ ಕಲ್ಪನೆ ಇವೆಲ್ಲವೂ ಹೊಸ ಪ್ರಪಂಚವೊಂದರ ಸೃಷ್ಟಿಗೆ ಕಾರಣವಾದವು.[4] ಅಧುನಿಕತೆ ಎಂಬುವುದು ಜನಜೀವನಕ್ಕೆ ಸಂಬಂಧಿಸಿದ ಮತ್ತು ಜನರು ಅದನ್ನು ಬೇರೆ ಬೇರೆ ಪ್ರಮಾಣದಲ್ಲಿ ವಿರೋಧಿಸುವ, ಸ್ವೀಕರಿಸುವ, ಪರಿಷ್ಕರಿಸುವ ಒಂದು ವಿದ್ಯಾಮಾನವಾಗಿ ಪರಿವರ್ತಿತವಾದರೆ, ತುಳುನಾಡಿನ ತಳಸಮುದಾಯಕ್ಕೆ ಸ್ವಲ್ಪಮಟ್ಟಿಗೆ ವಿವೇಚನೆಯನ್ನು ತಂದು ಇಲ್ಲಿನ ಋಣಾತ್ಮಕ ವ್ಯವಸ್ಥೆಗಳನ್ನು ನಿಗ್ರಹಿಸಿ, ಧನಾತ್ಮಕ ಅಂಶಗಳ ಸೃಷ್ಟಿಗೆ ಕಾರಣವಾಯಿತ್ತಾದರೂ, ಬಹುತೇಕವಾಗಿ ಇಲ್ಲಿನ ವ್ಯವಸ್ಥೆಯನ್ನು ಅನುಮಾನ ಹಾಗೂ ಪ್ರಶ್ನಾರ್ಥವಾಗಿ ನೋಡಿರುವುದರಿಂದ ಅನಾಹುತಕಾರಿಯಾಗಿಯೇ ಪರಿಣಮಿಸಿತು.

ಅಧುನಿಕತೆಯ ಜೀವನ ಮತ್ತು ಯೋಚನಾ ಕ್ರಮಗಳು ತುಳುನಾಡಿನ ಪರಂಪರೆಯ ಜತೆಗಿನ ಸಂಬಂಧವನ್ನು ಕಡಿದುಕೊಳ್ಳುವಂತೆ ಮಾಡಿತ್ತಲ್ಲದೇ ತುಳುವರ ಬಹುಮುಖಿ ಪರಂಪರೆಗಳನ್ನು ಒಂದರ್ಥದಲ್ಲಿ ನಾಶಗೊಳ್ಳುವ ಅಂಚಿಗೆ ತಲುಪಿಸಿದವು. ತುಳುನಾಡಿನಲ್ಲಿ ಬಹುಮುಖಿ ಪರಂಪರೆಗಳು ಬದಲಿಗೆ ಏಕಮುಖಿ ದೃಷ್ಟಿಕೋನ ಬೆಳೆಸಿಕೊಳ್ಳುವಲ್ಲಿ ಅಧುನಿಕತೆ

ಕಾರಣವಾಯಿತ್ತಲ್ಲದೇ ಇದು ಚರಿತ್ರೆ-ಪ್ರಗತಿಯನ್ನು ತನ್ನ ಅನುಕೂಲತೆಗಳಿಗೆ ಅನುಗುಣವಾಗಿ ಚರ್ಚೆಗೆ ಒಳಪಡಿಸಿ ಸಮುದಾಯಗಳ ಪರಂಪರೆಗಳ ಚದುರಿ ಹೋಗಿದ್ದ ನೆನಪುಗಳನ್ನು ನಿರ್ದಿಷ್ಟ ಸೂತ್ರಕ್ಕೆ ಪೋಣಿಸಿ ಹಳೆಯ ಸಂಗತಿಗಳಿಗೆ ಹೊಸ ಆಕಾರವನ್ನು ನೀಡಿತು.

ವಸಾಹತುಪೂರ್ವದ ತುಳುನಾಡಿನ ಸಾಂಸ್ಕೃತಿಕ ಅನನ್ಯತೆಗಳನ್ನು ಅಧ್ಯಯನಕ್ಕೆ ಒಳಡಿಸಿದ ವಸಾಹತುಶಾಹೀ ಆ ವಿಶ್ಲೇಷಣೆಗಳ ಫಲವನ್ನು ತನ್ನ ನೆಲೆ ಭದ್ರಗೊಳಿಸಲು ಬಳಸಿಕೊಂಡಿತು. ಈ ಪ್ರಕ್ರಿಯೆಯಲ್ಲಿ ಸಾಂಸ್ಕೃತಿಕ ಅನನ್ಯತೆಗಳ ಕೆಲವೊಂದು ಭಾಗಗಳು ಉಳಿದುಕೊಂಡವಾದರೂ, ಅವುಗಳನ್ನು ವಸಾಹತುಶಾಹಿ ಆಡಳಿತಕ್ಕೆ ಅನುಕೂಲವಾಗುವ ರೀತಿಯಲ್ಲಿ ಮರುರೂಪಿಸಿತು.[5]

ವಸಾಹತುಶಾಹಿಯ ಆಗಮನವು ವಸಾಹತಿನಲ್ಲಿ ಗೊಂದಲ, ಹತಾಶೆ, ರೋಷ, ಸಂತೋಷ, ನಿರ್ಲಿಪ್ತತೆ ಹೀಗೆ ಹಲವು ಪ್ರತಿಕ್ರಿಯೆಗಳ ಪ್ರಕಟಣೆಗೆ ಅವಕಾಶ ನೀಡಿತ್ತಾದರೂ, ಸಾಮಾಜಿಕ ಪರಿವರ್ತನೆ, ಶಿಕ್ಷಣ, ಆಡಳಿತ ವ್ಯವಸ್ಥೆ, ನ್ಯಾಯಾಂಗ, ಧರ್ಮ, ತಂತ್ರಜ್ಞಾನ ಮುಂತಾದವುಗಳಿಗೆ ಸಂಬಂಧಿಸಿದಂತೆ ವಸಾಹತು ಸ್ಪಷ್ಟ ನೀತಿಯೊಂದನ್ನು ಪ್ರಕಟಿಸಿ ಈ ಗೊಂದಲಗಳನ್ನು ನಿವಾರಿಸಲು ಪ್ರಯತ್ನಿಸಿತು. ಸಾಮಾಜಿಕವಾಗಿ ಹಳ್ಳಿಗಳಿಗೆ ಧಾರ್ಮಿಕ ಮಿಷನರಿಗಳ ಭೇಟಿ ಪ್ರಮುಖ ಘಟನೆಯಾಯಿತು. ತುಳುನಾಡಿನ ಹಳ್ಳಿಗಳು ವಿದೇಶಿಗರಿಗೆ ಮೊದಲ ಬಾರಿ ತೆರೆದುಕೊಂಡ ಪರಿಣಾಮವಾಗಿ ಮತಪರಿವರ್ತನೆಯ ಸಂವಾದಗಳು ಹಾಗೂ ಕ್ರಿಯೆಗಳು ಆರಂಭಗೊಂಡು ಸಾಂಸ್ಕೃತಿಕ ಪಲ್ಲಟವೊಂದರ ಆರಂಭಕ್ಕಾಗಿ ನಾಂದಿ ಹಾಡಿತು. ಅನ್ಯ ಮತಗಳ ನುಗ್ಗುವಿಕೆ ಇಲ್ಲವೇ ಅನ್ಯಕ್ಕೆ ತೆರೆದುಕೊಳ್ಳುವಿಕೆ ಒಂದರ್ಥದಲ್ಲಿ ವಸಾಹತುಪೂರ್ವದಲ್ಲಿ ಶೋಷಣೆಗೆ ಒಳಗಾಗಿದ್ದ ಕೆಳವರ್ಗದ ಜನರ ವಿಮೋಚನೆಗೆ ಮಾರ್ಗವೊಂದನ್ನು ಕಂಡುಕೊಳ್ಳುವಂತೆ ಮಾಡಿತು. ಪರಿಣಾಮವಾಗಿ ಸಾಂಪ್ರದಾಯಿಕ ನೆಲೆಗಳ ಶೋಷಣಾ ಪ್ರಾಕರಗಳು ದುರ್ಬಲಗೊಂಡು ಹೊಸ ಮಾದರಿಯ ಶೋಷಣೆಗಳು ಪ್ರಕಟಗೊಂಡವು.

ವಸಾಹತುಶಾಹಿ ಪ್ರಾರಂಭಿಸಿದ ಅಧುನಿಕ ಶಿಕ್ಷಣ ಅದುವರೆಗೆ ಶತಮಾನಗಳಿಂದ ಸುಪ್ತವಾಗಿದ್ದ ರಾಷ್ಟ್ರೀಯ ಚಳವಳಿ ಮತ್ತು ಪ್ರಜ್ಞೆ ರೂಪುಗೊಳ್ಳಲು ಪಡೆಯಲು ಅವಕಾಶ ಮಾಡಿಕೊಟ್ಟು ರಾಜಕೀಯ ಯೋಜನೆಗಳಿಗೆ ಹೊಸ ದಾರಿಗಳನ್ನು ಶೋಧಿಸುವಂತೆ ಮಾಡಿತು. ಈ ರಾಜಕೀಯ ಚಿಂತನೆಗಳು ಇನ್ನೊಂದೆಡೆ ಸಮುದಾಯ ಅಭಿವೃದ್ಧಿಗೆ ಒತ್ತುಕೊಟ್ಟವಲ್ಲದೇ ವಸಾಹತುಶಾಹಿ ನಿಗದಿಪಡಿಸಿದ ಸಾಮಾಜಿಕ ಮಾನದಂಡಗಳಲ್ಲಿ ತನ್ನನ್ನು ಸೇರಿಸಿಕೊಳ್ಳಲು ಪ್ರಯತ್ನಿಸಿತು. ವಸಾಹತುಶಾಹಿ ಅಧುನಿಕತೆಯನ್ನು ಮುಂದಿಟ್ಟು ವಿಮೋಚನೆಗೊಳ್ಳುತ್ತಿರುವ ಕೆಳವರ್ಗಗಳು ಹಕ್ಕುಗಳಿಗಾಗಿ ಹೋರಾಟ ನಡೆಸುವಲ್ಲಿಂದ ಚಳುವಳಿಯ ಹೊಸ ಆಯಾಮಗಳು

ಹುಟ್ಟಿಕೊಂಡರೇ, ಅಧಿಕಾರದಲ್ಲಿ ಪಾಲು ಪಡೆಯಲು ಹವಣಿಸಿದ್ದ ವ್ಯವಸ್ಥೆಗಳು ಸರಕಾರಕ್ಕೆ ವಿಧೇಯತೆಯನ್ನು ತೋರಿಸುತ್ತಾ ಸಮತೋಲನವನ್ನು ಸಾಧಿಸುವ ಪ್ರಯತ್ನಗಳನ್ನು ನಡೆಸಿದವು.[6] ಈ ತೆರನಾದ ಅಧಿಕಾರವನ್ನು ಯಥವತ್ತಾಗಿ ಕಾಯ್ದಿರಿಸಿಕೊಳ್ಳುವ ಚಿಂತನೆಗಳು ವಸಾಹತುಪೂರ್ವದ ತುಳುನಾಡಿನಲ್ಲಿಯೂ ಜಾರಿಯಲ್ಲಿದದ್ದನ್ನು ಕಾಣಬಹುದಾಗಿದೆ. ವಾಸ್ತವವಾಗಿ ತುಳುನಾಡು ವಸಾಹತುಶಾಹಿ ಆಡಳಿತದ ಹತೋಟಿಗೆ ಒಳಪಟ್ಟು ಅದಾಗಲೇ ಗೋಚರಕ್ಕೆ ಬಂದಿದ್ದ ಕಾಲಘಟ್ಟದಲ್ಲಿ ಸಾರ್ವಜನಿಕ ವಲಯಗಳಲ್ಲಿ ತುಳುವರಿಗೆ ಅವಕಾಶಗಳನ್ನು ಒದಗಿಸಿಕೊಟ್ಟು ತನ್ನ ಉದಾರವಾದಿ ಮನೋಧರ್ಮವನ್ನು ಪ್ರದರ್ಶಿಸಿತ್ತಾದರೂ ನೈಜವಾಗಿ ಅವುಗಳು ವಸಾಹತಿನಲ್ಲಿ ತಮ್ಮ ಮುದ್ರೆ ಒತ್ತುವ ತಂತ್ರಗಳಾಗಿದ್ದವು. ಈ ತಂತ್ರಗಾರಿಕೆಗಳು ಬೇರೆ ಬೇರೆ ಸಿದ್ಧಾಂತಗಳಾಗಿ ಮುದ್ರಿತ ಮಾಧ್ಯಮಗಳ ಮೂಲಕ ವ್ಯಕ್ತಗೊಂಡು ಪ್ರಗಲ್ಬಗೊಂಡವು.

ತುಳುನಾಡಿನಲ್ಲಿ ಆರಂಭಗೊಂಡ ಅಧುನಿಕತೆಯ ಪ್ರಕ್ರಿಯೆಗಳು ಸಮಾಜ ಮತ್ತು ಆರ್ಥಿಕ ವ್ಯವಸ್ಥೆಗಳಲ್ಲಿ ಬದಲಾವಣೆ ತಂದವು. ಮಧ್ಯಯುಗೀನಾ ತುಳುನಾಡಿನ ಆಡಳಿತದ ವಾರಸುದಾರರಾಗಿದ್ದವರು ಈ ಅಧುನಿಕತೆಯ ಕೊಡುಗೆಯಾಗಿದ್ದ ಆರ್ಥಿಕ ಅವಕಾಶಗಳನ್ನು ತಮ್ಮದಾಗಿಸಿ, ಸರಿಯಾಗಿಯೇ ಬಳಸಿಕೊಂಡು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಬಲವನ್ನು ವೃದ್ಧಿಸಿಕೊಂಡರು. ಈ ಪರಿಪಾಠ ಹತ್ತೊಂಬತ್ತನೆಯ ಶತಮಾನದಲ್ಲೂ ಮುಂದುವರೆದು ಅಧಿಕಾರ ಮತ್ತು ಆರ್ಥಿಕ ಪ್ರಭಾವವನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಿತ್ತಲ್ಲದೇ ಅವುಗಳನ್ನು ವಾರಸಾ ಅಧಿಕಾರದ ರೂಪದಲ್ಲಿ ಮುಂದುವರೆಸಿಕೊಳ್ಳಲು ಪ್ರಯತ್ನಿಸಿದರು.[7] ತುಳುನಾಡಿನಲ್ಲಿ ವಸಾಹತುಶಾಹಿ ಆಡಳಿತವು ಸೃಷ್ಟಿಸಿದ ಆಡಳಿತ ವ್ಯವಸ್ಥೆಯು ವಿನ್ಯಾಸದಲ್ಲಿ ಅದರ ಕೆಳಹಂತದ ಅಧಿಕಾರಿಗಳು ಕಲೆಕ್ಟರನಿಗೆ ಹೊಣೆಯಾಗಿದ್ದು ಅವನು ಜಿಲ್ಲೆಯಲ್ಲಿ ಸರಕಾರದ ವಾಸ್ತವಿಕ ಅಧಿಕಾರಗಳನ್ನು ತನ್ನಲ್ಲಿ ಏಕೀಕರಿಸಿಕೊಂಡಿದ್ದರಿಂದ ವಸಾಹತುಶಾಹಿ ತನ್ನ ವಸಾಹತಿನ ಜನರಿಗೆ ಮಾ-ಬಾಪ್ ಆಗಬೇಕೆಂಬ ನಿರೀಕ್ಷೆಯನ್ನಿಟ್ಟುಕೊಂಡಿತ್ತು. ವಸಾಹತುಪೂರ್ವದಲ್ಲಿ ಗ್ರಾಮೀಣ ಗ್ರಾಮಗಣ್ಯರು ಗ್ರಾಮಸ್ಥರಿಗೆ ಮಾ-ಭಾಪ್ ಆಗಿದ್ದಂತೆ ಇಲ್ಲಿ ವಸಾಹತುಶಾಹಿ ಆ ಪ್ರಯತ್ನವನ್ನು ಮಾಡಿದೆ. ಮುಂದುವರಿದು ವಸಾಹತಿನ ಸಾಂಪ್ರದಾಯಿಕ ವ್ಯವಸ್ಥೆಯ ಮೇಲೆ ಹೊಸ ವ್ಯವಸ್ಥೆಯನ್ನು ಕಟ್ಟಬೇಕಾಗಿದ್ದರಿಂದ ಅದರ ಅವಶ್ಯಕತೆಗಳು, ಉದ್ಯೋಗಿಗಳು ಮತ್ತು ಸಂವಾದ ವಿಧಾನಗಳು ಹೊಸ ಆಡಳಿತಗಾರರಿಂದ ನಿರ್ಣಯಿಸಲ್ಪಟ್ಟವು. ಇದು ಸಾಧ್ಯವಾಗಲು ಕಾರಣವಾದುದು ವಸಾಹತುಶಾಹಿ ಆಡಳಿತದವಧಿಯಲ್ಲಿ ನಿರೀಕ್ಷೆ ಮತ್ತು ಹತಾಶೆಗಳ ಮಿಶ್ರ ಮಾನಸಿಕ ಸ್ಥಿತಿಯನ್ನು ಒಳಗೊಂಡಿದ್ದ ಇಲ್ಲಿನ ಸ್ಥಳೀಯಾಡಳಿತದ ವಾರಸಾ ಅಧಿಕಾರವನ್ನು ಹೊಂದಿಕೊಂಡಿದ್ದವುಗಳು ವಸಾಹತುಶಾಹಿ ಹೆಣಿಗೆ ಮಾಡಿದ್ದ ಸ್ಥಳೀಯ ಮತ್ತು ಪ್ರಾಂತೀಯ

ಸಭೆಗಳಲ್ಲಿ ಅಧಿಕ ಪ್ರಾತಿನಿಧ್ಯವನ್ನು ಬಯಸಿ ಪರಸ್ಪರ ಮೇಲಾಟ ನಡೆಸಿರುವುದು. ಉದಾಹರಣೆಗೆ ಯಡ್ತರೆ, ಹಂದಾಡಿ, ಪಾಲ್ತಮನೆಯವರು ಭೂಮಾಲಿಕರಾಗಿದ್ದು, ತಮ್ಮಲ್ಲಿರುವ ಸಂಪತ್ತನ್ನು ವ್ಯಾಪಾರಿ ಬಂಡವಾಳವನ್ನಾಗಿ ಪರಿವರ್ತಿಸಲು ಉತ್ಸುಕರಾಗಿದ್ದರು. ಮದ್ಯಮಾರಾಟ ವಸಾಹತು ಪೂರ್ವದಲ್ಲಿ ಜಾತಿಗೆ ಸಂಬಂಧಿಸಿದ ವೃತ್ತಿಯಾಗಿದ್ದರೇ, ವಸಾಹತುಶಾಹಿಯ ಕಾಲದಲ್ಲಿ ಪಾರಂಪರಿಕವೆಂದು ಬಿಂಬಿಸಿದವುಗಳು ತಮ್ಮ ನೆಲೆ ಕಳೆದುಕೊಂಡವು. ಅಧಿಕಾರದಲ್ಲಿ ವಸಾಹತುಶಾಹಿಯ ಪಾಲುದಾರರಾಗುವುದು, ವ್ಯಾಪಾರ, ಭೂಒಡೆತನದಂತೆ ಗೌರವಯುತವಾದ ವೃತ್ತಿಯಾಗಿ ಮಾರ್ಪಾಟ್ಟಿತ್ತು. ವಸಾಹತುಶಾಹಿ ಸಂದರ್ಭದಲ್ಲಿ ಮದ್ಯ ಪೂರೈಸುವವ ಒರ್ವ ಸಹಕಾರಿ ಮಿತ್ರನಾಗಿ, ಆಳುವವರ ಬಲಬದಿಗೆ ಇರುವ ಅವಕಾಶವನ್ನು ಮಾಡಿಕೊಟ್ಟಿತ್ತು. ಮುಂದುವರೆದು ಇಪ್ಪತ್ತನೆಯ ಶತಮಾನದಲ್ಲಿ ತುಳುನಾಡು ಈ ರೀತಿಯ ಬದಲಾವಣೆಗಳಲ್ಲಿ ಪ್ರತಿಬಿಂಬಿತವಾಗಿದ್ದು, ಈ ಬದಲಾವಣೆಯನ್ನು ಆಶಿಸಿದ್ದ ಸಮುದಾಯ ಇಲ್ಲವೆ ಜಾತಿಗಳು ವಸಾಹತುಶಾಹಿಯಿಂದ ಪ್ರಯೋಜನ ಪಡೆಯಬಯಸಿ, ಸ್ವತಃ ಬದಲಾವಣೆಯ ಉಪಕರಣಗಳಾಗಬಯಸಿದವು.[8]

ಭೂಮಿಯ ಒಡೆತನದ ಅಧಿಕಾರ ಮತ್ತು ಸಾಮಾಜಿಕ ಅಧಿಕಾರದಲ್ಲಿ ಪಾಲುಪಡೆದುಕೊಂಡಿದ್ದ ಸ್ಥಳೀಯ ಆಡಳಿತದ ವಾರಸುದಾರರು ವಸಾಹತುಶಾಹಿಯ ಅಧುನಿಕತೆಗೆ ಹೊಂದಿಕೊಂಡ ಫಲವಾಗಿ, ಬದಲಾವಣೆಯ ಕಾಲದಲ್ಲೂ ಪಾರಂಪರಿಕ ನಾಯಕತ್ವವನ್ನು ಉಳಿಸಿಕೊಂಡು, ವಿಸ್ತರಿಸಿ, ಮುಂದುವರೆದುಕೊಂಡು ಬರಲು ಯಶಸ್ವಿಯಾದರು. ತನ್ನದನ್ನು ಉಳಿಸಿಕೊಂಡ ವಸಾಹತು ಒಂದೆಡೆ ವಸಾಹತುಶಾಹಿಯಿಂದ ತನಗೆ ಹೊಂದಿಕೆಯಾಗುವ ಬದಲಾವಣೆಯ ಲಾಭವನ್ನು ಪಡೆದುಕೊಂಡು ಮುಂದಾಳ್ತನವನ್ನು ಮುಂದುವರೆಸುವ ಪ್ರಯತ್ನ ಮಾಡಿತು. ಹೀಗೆ ಸ್ಥಳೀಯಾಡಳಿತ ವ್ಯವಸ್ಥೆಯಲ್ಲಿ ಪಾಲುದಾರರಾಗಬಯಸಿದವರು ಬದಲಾವಣೆಯ ಅಲೆಗಳಿಂದ ಸಮತೋಲನ ಕಳೆದುಕೊಳ್ಳದೇ ಅಥವಾ ಎಡವಟ್ಟಿಗೆ ಬೀಳದೇ ಸವಾರಿ ಮಾಡಲು ಅದಕ್ಕೆ ಸಾಧ್ಯವಾಗಿ ಅಮೂಲ್ಯ ಸ್ವಂತಿಕೆಯನ್ನು ಉಳಿಸಿಕೊಂಡು ಅಕ್ರಮಣಕಾರಿ ಅಧುನಿಕತೆಯು ಅನಿವಾರ್ಯಗೊಳಿಸಿದ ಬದಲಾವಣೆಗಳೊಂದಿಗೆ ಸಂಧಾನ ನಡೆಸಿದರು. ಈ ಹಂತದಲ್ಲಿ ವಸಾಹತುಶಾಹಿ ಹುಟ್ಟುಹಾಕಿದ ಬದಲಾವಣೆ ವಸಾಹತುಪೂರ್ವದ ಭೂಮಿಯ ಒಡೆತನ ಮತ್ತು ಗ್ರಾಮಾಧಿಕಾರದ ವ್ಯವಸ್ಥೆಗಳಲ್ಲಿ ಹಸ್ತಕ್ಷೇಪ ಮಾಡಿತ್ತಾದರೂ, ತುಳುನಾಡಿನಲ್ಲಿ ಅವುಗಳು ಸಂಪೂರ್ಣವಾಗಿ ಅಸ್ತವ್ಯಸ್ತಗೊಳ್ಳಲಿಲ್ಲ. ಹಳೆಯ ಉಪಸ್ಥಿತಿಯನ್ನು ಪೂರ್ಣವಾಗಿ ತ್ಯಜಿಸದೇ ಅಥವಾ ಕಳೆದುಕೊಳ್ಳದೇ ಅದರೊಳಗೆ ಹೊಸತನ್ನು ಸಂಪಾದಿಸಿತು. ವಸಾಹತುಪೂರ್ವದ ಸ್ಥಳೀಯಾಡಳಿತದಲ್ಲಿ ಬಿಂಬಿತವಾಗಿದ್ದ ಸಾಂಸ್ಕೃತಿಕ ಬಂಡವಾಳವನ್ನು ಹೊಸ ವ್ಯವಸ್ಥೆ ಹಾಗೂ

ನೂತನ ಪರಿಸ್ಥಿತಿಗಳಲ್ಲಿ ಬಳಸಬಹುದು ಮತ್ತು ವೃದ್ಧಿಸಬಹುದು ಎಂಬುವುದನ್ನು ತೋರಿಸಿಕೊಡಲು ಹಲವಾರು ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಿತು. ವಸಾಹತುಪೂರ್ವದ ಅಧಿಕಾರ ಶಕ್ತಿಗಳು ಗ್ರಾಮದೊಂದಿಗಿನ ತನ್ನ ಸಾಂಸ್ಕೃತಿಕ ನಂಟನ್ನು ಕಳೆದುಕೊಳ್ಳದೇ, ಅಧುನಿಕತೆಯೊಂದಿಗೆ ಸಂಧಾನ ಮಾಡುವ ಇಲ್ಲವೇ ನಡೆಸುವ ಪ್ರೇರಕ ಶಕ್ತಿಯ ಅನುಸಂಧಾನದೊಂದಿಗೆ ಬದಲಾಗುತ್ತಿರುವ ಕಾಲಾವಧಿಯಲ್ಲೂ ಯಶಸ್ಸನ್ನು ಪಡೆದುಕೊಂಡಿತು.[9]

ವಸಾಹತುಶಾಹೀ ಆಡಳಿತದ ಸಂದರ್ಭದ ತುಳುವರ ವಿಧೇಯತೆ ಮತ್ತು ಪ್ರತಿಕ್ರಿಯೆಗಳು 19ನೆಯ ಶತಮಾನದ ಉತ್ತರಾರ್ಧದಲ್ಲಿ ಹಾಗೂ 20ನೇ ಶತಮಾನದ ಮೊದಲ ಎರಡು ದಶಕಗಳಲ್ಲಿ ಕಂಡುಬಂದವು. ವಿಧೇಯತೆ ಮತ್ತು ಸಹಕಾರ ವಸಾಹತುಶಾಹಿಯ ನಿಲುವಾಗಿ ವಸಾಹತಿನ ಅಧಿಕಾರಿಗಳಿಗೆ ತಮ್ಮ ಅತಿನಿಷ್ಠೆ ಪ್ರದರ್ಶಿಸಲು ಅಥವಾ ದಬ್ಬಾಳಿಕೆಯ ಮನೋಭಾವ ತೋರಲು ಇದೊಂದು ಅವಕಾಶವಾಗಿತ್ತು.[10] ಪರಂಪರೆ–ಅಧುನಿಕತೆ, ಚರಿತ್ರೆ–ಪ್ರಗತಿಯ ಚಿಂತನೆಗೆ ಒಳಪಡುತ್ತಾ ತುಳುನಾಡಿನ ಪರಂಪರೆಗಳು ಚದುರಿ ಹೋಗಿದ್ದ ನೆನಪುಗಳನ್ನು ನಿರ್ದಿಷ್ಟ ಸೂತ್ರವೊಂದಕ್ಕೆ ಪೋಣಿಸಿ ಹಳೆಯ ಸಂಗತಿಗಳಿಗೆ ಹೊಸ ಆಕಾರ ಹುಟ್ಟಿಕೊಳ್ಳುವಂತೆ ಪ್ರೇರೆಪಿಸಿತು. ಪಶ್ಚಿಮ ಯಾವ ದೃಷ್ಟಿಕೋನದಿಂದ ತುಳುನಾಡನ್ನು ಭಿನ್ನವಾಗಿಸಿತ್ತೋ, ಅದೇ ಪಶ್ಚಿಮದ ಚಿಂತನೆಗಳನ್ನು ಎರವಲಾಗಿ ಪಡೆದುಕೊಂಡು ಇಲ್ಲಿನ ವಿದ್ಯಾವಂತ ವರ್ಗ ಈ ಪ್ರದೇಶದ ಅನನ್ಯತೆಗಳನ್ನು ಕಾಪಾಡುವಲ್ಲಿ ಮುಂದಾಯಿತು.[11] ಹಳೇಯ ಸಾಂಸ್ಕೃತಿಕ, ಧಾರ್ಮಿಕ ನೆನಪುಗಳು ಬದಲಾವಣೆಯ ಪಥದಲ್ಲಿ ಸಾಗಿ ಹೊಸ ರಾಜಕೀಯ ಉದ್ದೇಶಗಳಿಗೆ ಬೆಂಗಾವಲಾಗಿ ಪರಂಪರೆಯನ್ನು ಪುನರುತ್ಥಾನಗೊಳಿಸಿದಲ್ಲದೆ ಅವುಗಳನ್ನು ಸಂರಕ್ಷಣೆ ಮಾಡುವುದರ ಮೂಲಕ ನೂತನ ತುಳುನಾಡನ್ನು ನಿರ್ಮಾಣ ಮಾಡುವಲ್ಲಿ ಭಾಗಶಃ ಯಶಸ್ಸು ಪಡೆಯಿತು.[12]

ವಸಾಹತುಶಾಹಿ ಆಡಳಿತ ವೈಖರಿಯು ಕೃಷಿ ಪ್ರಧಾನವಾಗಿದ್ದ ಈ ಪ್ರದೇಶವನ್ನು ವಾಣಿಜ್ಯ ವ್ಯವಹಾರಗಳಿಗೆ ತೆರೆದುಕೊಳ್ಳುವಂತೆ ಮಾಡಿ ಆಮದು–ರಫ್ತು ವ್ಯಾಪಾರ, ಕೃಷಿ ಕಚ್ಚಾವಸ್ತು, ಕಾಡುತ್ಪತ್ತಿಗಳ ಸಂಗ್ರಹ, ಪೂರೈಕೆ ಹಾಗೂ ವಸ್ತುಗಳ ಮಾರಾಟಕ್ಕೆ ಉಪಯುಕ್ತ ಪ್ರದೇಶವಾಗಿ ಪರಿವರ್ತಿತಗೊಂಡು ವಸಾಹತುಶಾಹಿಯ ವಾಣಿಜ್ಯ ಉದ್ದೇಶಗಳ ಈಡೇರಿಕೆಯ ಎಂಪೋರಿಯಮ್ ಆಗಿ ಮಾರ್ಪಾಡಾಯಿತು. ಕೊಡಗು, ಮೈಸೂರನ್ನು ಸಂಪರ್ಕಿಸುವ ರಸ್ತೆಗಳು, ಘಟ್ಟ, ಮಲೆನಾಡು ಪ್ರದೇಶಗಳೊಂದಿನ ವಾಣಿಜ್ಯ ಸಂಬಂಧ, ದಕ್ಷಿಣದ ವಸಾಹತು ಕೇಂದ್ರಗಳೊಂದಿಗೆ ಸಂಪರ್ಕಿಸುವ ರೈಲು ಮಾರ್ಗದಿಂದಾಗಿ ವಸಾಹತು ಹಲವು ವಿಷಯಗಳ ಪ್ರಯೋಗಗಳ ಕೇಂದ್ರವಾಗಿ ಪುನರ್‌ರಚನೆಗೊಂಡು ಬೆಳೆಯಿತು. ಈ ಎಲ್ಲ ಬೆಳವಣಿಗೆಯಿಂದ ಗ್ರಾಮ ಸಾಮಾಜಿಕ ಮತ್ತು ಆರ್ಥಿಕ ಬದುಕಿನ ಆತ್ಮವಾದರೆ ಪ್ರಗತಿಯ ಮುಖ ಮಾಡಿದ್ದ

ನಗರಗಳು ಅದೇ ಬಗೆಯ ಕೇಂದ್ರಗಳಾಗಿ ಪರಿವರ್ತಿತಗೊಂಡವು. ಇದರಿಂದ ತುಳುನಾಡಿನಲ್ಲಿ ಐತಿಹಾಸಿಕವಾಗಿ ಪ್ರಯೋಗದಲ್ಲಿದ್ದ ಆರ್ಥಿಕ ಊಳಿಗಮಾನ್ಯತೆ ನಿಧಾನವಾಗಿ ಅಪ್ರಸ್ತುತವೆನಿಸಿಕೊಂಡಿತು. ಹೀಗೆ ವಸಾಹತುಶಾಹಿಯ ಪರಿವರ್ತನಾ ಯೋಜನೆಯಿಂದಾಗಿ ತುಳುನಾಡಿನ ಪಾರಂಪರಿಕ ಸಂಸ್ಥೆ ಹಾಗೂ ಮೌಲ್ಯಗಳು ನಿಧಾನವಾಗಿ ನೆಲೆ ಕಳೆದುಕೊಂಡವು. ಆದಾಗ್ಯೂ ಅವುಗಳ ಪಳಿಯುಳಿಕೆಗಳು ಮುಂದುವರಿದು ವಸಾಹತುಶಾಹಿ ಅವಧಿಯಲ್ಲಿ ತೀವ್ರ ಬದಲಾವಣೆಗೆ ಒಳಗಾಯಿತ್ತಲ್ಲದೇ ಪ್ರಮುಖ ಕಾರಣವಾಗಿ ಕಾಣಲ್ಪಟ್ಟವು. ಅದರ ಭೌಗೋಳಿಕ ಸ್ಥಳೀಕರಣ, ಆಡಳಿತಾತ್ಮಕ ವ್ಯೂಹರಚನೆ, ಜೊತೆಗೆ ಆರ್ಥಿಕ ಪ್ರಗತಿಗೆ ಪೂರಕವಾದ ಕೈಗಾರಿಕೆಗಳ ಸ್ಥಾಪನೆ. ಇವೆಲ್ಲವೂ ವಸಾಹತುಶಾಹಿ ಯೋಜನೆಗಳ ಅನುಷ್ಠಾನಕ್ಕೆ ಪೂರಕ ನೆಲೆ ಒದಗಿಸಿಕೊಟ್ಟವು. ಇವೆಲ್ಲದರ ಜತೆಗೆ ಬಾಸೆಲ್ ಮಿಶನ್‌ನ ಆಗಮನ, ಅಧುನಿಕ ಶಿಕ್ಷಣದ ಬೆಳವಣಿಗೆ ಮುಂತಾದವುಗಳು ವಸಾಹತುಶಾಹಿಯ ನೈತಿಕ ಚಿಂತನೆಗಳಿಗೆ ಮಹತ್ವವನ್ನು ನೀಡಿತು. ಈ ಚಿಂತನೆಗಳು ವಸಾಹತಿನ ಸಮುದಾಯಗಳ ಮೇಲೆ, ಪ್ರಮುಖವಾಗಿ ಮಧ್ಯಮವರ್ಗದ ಮೇಲೆ ನಿಧಾನವಾಗಿ, ಆದರೆ ಕ್ರಮಬದ್ಧವಾಗಿ ಹೇರಿ ಸಾಮಾಜಿಕ ಬದಲಾವಣೆಗೆ ಕಾರಣವಾಯಿತು. ಜೊತೆಗೆ ತುಳುನಾಡಿನ ಮಧ್ಯಮವರ್ಗ ಇಂಗ್ಲಿಷ್ ಶಿಕ್ಷಣ ಪಡೆದು ತನ್ಮೂಲಕ ತಮ್ಮ ಶಕ್ತಿ ಮತ್ತು ಅವಕಾಶಗಳ ಬಗ್ಗೆ ಅರಿವು ಬೆಳೆಸಿಕೊಂಡು, ಆಕಾಂಕ್ಷೆಗಳು ಮತ್ತು ಹತಾಶೆಗಳನ್ನು ವ್ಯಕ್ತಪಡಿಸುವ ಸಾಮರ್ಥ್ಯದ ತಿಳುವಳಿಕೆಯನ್ನು ಪಡೆದುಕೊಂಡರು. ಇಲ್ಲಿನ ಸಮಾಜ ಕ್ರಾಂತಿಯ ಕುರುಹೇ ಇಲ್ಲದಿದ್ದ ಸಮಯದಲ್ಲಿ ವಸಾಹತುಶಾಹಿ ಚಿಂತನೆ, ಮಿಷನರಿಗಳ ಮತಪರಿವರ್ತನೆಯ ಪ್ರಕ್ರಿಯೆ, ಅಧುನಿಕತೆಯ ಸ್ಪರ್ಶ ಮುಂತಾದವುಗಳಿಂದ ಪ್ರೇರಿತಗೊಂಡು ಬದಲಾವಣೆಗೆ ತೆರೆದುಕೊಂಡಿತ್ತಲ್ಲದೇ ಆಳುವವರೊಂದಿಗೆ ತಮ್ಮ ಮತ್ತು ಪ್ರದೇಶದ ವರ್ತಮಾನ-ಭವಿಷ್ಯಗಳ ಬಗ್ಗೆ ಸಂವಾದಿಸಲು ಮತ್ತು ಚೌಕಾಸಿ ಮಾಡಲು ಕಸುವನ್ನು ಪಡೆದವು. ಜೊತೆಗೆ ವಸಾಹತುಶಾಹಿಯ ಉದಾರತೆ ಮತ್ತು ಅಧುನಿಕ ಶಿಕ್ಷಣ ತುಳುವರ ಆಸ್ತಿತ್ವಕ್ಕಾಗಿ ಹೋರಾಡುವ ಪಾಠ ಹಾಗೂ ಸಾಧನಗಳನ್ನು ನೀಡಿದವು.[13] ಹೀಗೆ ತುಳುನಾಡು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ನೆಲೆಯಲ್ಲಿ ಬೆಳವಣಿಗೆ ಕಂಡದ್ದು ವಸಾಹತುಶಾಹಿ ಕಾಲದಲ್ಲಿ. ಬಾಸೆಲ್, ಜೆಸೂಯಿಟ್‌ಗಳ ಮೂಲಕ ಆರಂಭವಾದ ಸಾಮಾಜಿಕ ಪರಿವರ್ತನೆಯ ಕಾರ್ಯಚಟುವಟಿಕೆ, ಅಧುನೀಕರಣದ ಚಿಂತನೆಗಳು ಪರಿವರ್ತನೆಗೆ ನಾಂದಿ ಹಾಡಿದವು.

ವಸಾಹತುಶಾಹಿ ಸಿದ್ಧಾಂತಗಳು ಆತ್ಮವಿಮರ್ಶೆಯ ದಂಡಗಳನ್ನು ಒಳಗೊಂಡಿದ್ದರಿಂದ ಉದಾರ ನೀತಿಯಲ್ಲಿ ಜಯಿಸಲ್ಪಟ್ಟವರಿಗೆ ಒಳ್ಳೆಯ ಭವಿಷ್ಯದ ಭರವಸೆಯನ್ನು ಕೊಡುವುದರ ಜತೆಗೆ ತನ್ನ ಅಧೀನ ಜನತೆಯ ಸದಾಶಯವನ್ನು ಪಡೆದು ಅದರ ಆಡಳಿತದ ಯಶಸ್ವಿ

ಮುಂದುವರಿಕೆಗೆ ಸಾಕಷ್ಟು ಪ್ರಯತ್ನ ಮಾಡಿತು. ಆದುದರಿಂದ ಸಾರ್ವಜನಿಕ ವಲಯದ ತೀಕ್ಷ್ಣತೆಯ ಬೇರೆ ಬೇರೆ ಮಟ್ಟಗಳಲ್ಲಿ ತಟ್ಟುವಂತೆ ತೋರಿದ ರಾಷ್ಟ್ರೀಯತೆಯ ಫಲವಾಗಿ ವಸಾಹತುಶಾಹಿ ಸಂದರ್ಭವು ಅಧುನಿಕ ತುಳುನಾಡಿನ ಪುನರ್ ನಿರ್ಮಾಣಕ್ಕೆ ಎಡೆ ಮಾಡಿಕೊಟ್ಟಿತ್ತು. ಪಶ್ಚಿಮದ ಪ್ರಭಾವ, ವಸಾಹತು ಅಧುನಿಕತೆಯ ಅಗತ್ಯತೆಗಳು ಮತ್ತು ಅಪಾಯಗಳು, ಅದನ್ನು ಸ್ವೀಕರಿಸುವ ಮತ್ತು ತಿರಸ್ಕರಿಸುವ ಅನಿವಾರ್ಯತೆ ಹಾಗೂ ಸ್ವಾತಂತ್ರ್ಯದ ನಡೆಯಲ್ಲಿ ಅಧುನಿಕ ರಾಷ್ಟ್ರ ಭಾವನೆಗಳು ಹೊರಹುಮ್ಮಿದವು. ಉತ್ಸಾಹಿ ಮತ್ತು ವಿಮರ್ಶಾತ್ಮಕ ಸಹಯೋಗ, ಅಧುನಿಕತೆಯ ನಡುವೆ ಯಥಾಸ್ಥಿತಿಯ ತೀವ್ರ ಸಮರ್ಥನೆ, ಸುಧಾರಣೆಗಳು ಮತ್ತು ಆಳುವವರೊಂದಿಗಿನ ಸಂವಾದ ಮತ್ತು ಮುಖಾಮುಖಿ ಇತ್ಯಾದಿಗಳು ವರ್ಣಪಂಕ್ತಿಯ ಬೇರೆ ಬೇರೆ ಛಾಯೆಗಳನ್ನು ಅದು ವ್ಯಕ್ತಪಡಿಸಿತು. ಸಂಘಗಳು ಮತ್ತು ಸಂಘಟನೆಗಳು, ಚರ್ಚೆಗಳು ಮತ್ತು ನಿರ್ಣಯಗಳು, ಆನಂತರ ಘೋಷಣೆಗಳು ಮತ್ತು ಗುಂಪು–ಜನಸಮೂಹಗಳ ಉಗ್ರವಾದ ಇತ್ಯಾದಿಗಳ ಮೂಲಕ ಇವು ವ್ಯಕ್ತಗೊಂಡವು.[14]

ಹತ್ತೊಂಬತ್ತನೆಯ ಶತಮಾನದ ಸುಧಾರಣಾ ಚಳುವಳಿಗಳು, ಪಾಶ್ಚಾತ್ಯ ಶಿಕ್ಷಣ ಪಡೆದ ತುಳುವರ ವಿಮರ್ಶಾತ್ಮಕ ಚಿಂತನೆಗಳು ಅದುವರೆಗೆ ಸುರಕ್ಷಿತವಾಗಿದ್ದ ಸಾಂಪ್ರದಾಯಿಕ ಧರ್ಮ ಮತ್ತು ಸಮಾಜಗಳಿಗೆ ಮುತ್ತಿಗೆ ಹಾಕಿ ಇಲ್ಲಿನ ವ್ಯವಸ್ಥೆಗಳ ಕೆಡುಕುಗಳನ್ನು ಪ್ರಸ್ತಾಪಿಸಿದ ಮತಪರಿವರ್ತಕರ ವಾದಗಳನ್ನು ಸರಿಪಡಿಸಿ ಪ್ರತೀ ಬದಲಾವಣಾ ತಂತ್ರಗಳನ್ನು ಆರಂಭಿಸಿದವು. ಆದಾಗ್ಯೂ ಪಾಶ್ಚಾತ್ಯ ಶಿಕ್ಷಣ ಪಡೆದ ತುಳುವರ ಕೆಲವು ವರ್ಗಗಳು ವಸಾಹತುಶಾಹಿಯ ನಿಲುವುಗಳನ್ನು ಸಮರ್ಥಿಸಿದವು.[15] ಜೊತೆಗೆ ಶೋಷಿತರನ್ನು ಹಿಂದು ಸಮುದಾಯದಿಂದ ಬೇರ್ಪಡಿಸಿ ದೇಶವನ್ನು ವಿಭಜಿಸಲು ಹೊರಟ ವಸಾಹತುಶಾಹಿಯ ನಿರ್ಧಾರಗಳು ರೋಗಗ್ರಸ್ತ ಮಾನಸಿಕತೆಯವನೊಬ್ಬ ಮಾಡುವಂತಹ ಕೆಲಸಗಳಾಗಿ ಕಂಡರೂ ಅದು ತುಳುನಾಡಿನಲ್ಲಿ ಸಾಮಾಜಿಕ ಸುಧಾರಣೆ ಮಾಡಲು ಅವಕಾಶಗಳನ್ನು ಒದಗಿಸಿತು. ಇದಕ್ಕೆ ಉದಾಹರಣೆಯೆಂದರೆ ದೇವಾಲಯ ಪ್ರವೇಶವು ಆಸಕ್ತಿದಾಯಕ ವಿಚಾರವಾಗಿ ಒಂದು ಪ್ರಮುಖ ಸಾಮಾಜಿಕ, ಧಾರ್ಮಿಕ ಬದಲಾವಣೆಯಾಗಿ ಮಾರ್ಪಾಟ್ಟಿರುವುದು.[16] ಉಡುಪಿ, ವಡಭಾಂಡೇಶ್ವರ, ಕಾರ್ಕಳ, ಕೊಲ್ಲೂರು, ಕೋಟೇಶ್ವರ, ಉಪ್ಪೂರು, ಬಾರ್ಕೂರು, ಮೂಡಬಿದಿರೆಗಳಲ್ಲಿ ದೇವಾಲಯ ಪ್ರವೇಶ ಕಾರ್ಯಕ್ರಮವು ವಸಾಹತುಶಾಹಿಯ ಹೊಡೆತಗಳನ್ನು ಧೈರ್ಯವಾಗಿ ಎದುರಿಸುವಂತೆ ಪ್ರೇರೆಪಣೆ ನೀಡಿದವಲ್ಲದೇ, ಸಂಪ್ರದಾಯದ ಹೆಸರಿನಲ್ಲಿ ಜಡ್ಡುಗಟ್ಟಿದ್ದ ಜಿಗುಟುಗಳನ್ನು ನಿವಾರಿಸುವಲ್ಲಿ ಪ್ರಯತ್ನ ಮಾಡುವಂತೆ ಪ್ರೇರೆಪಿಸಿತು. ಹರಿಜನೊದ್ಧಾರ, ಪುನರ್‌ವಸತಿ, ಸಹಭೋಜನ ಮುಂತಾದವುಗಳು ಕೆಳವರ್ಗದಲ್ಲಿ ಜಾಗೃತಿ ಮಾಡಿಸಿ, ತಾವು ಕಳೆದುಕೊಂಡಿದ್ದ ಸಾಮಾಜಿಕ ನ್ಯಾಯವನ್ನು ಮರಳಿ ಪಡೆಯುವಂತೆ ಪ್ರೇರೆಪಿಸಿತು. ಹೀಗೆ ತುಳುನಾಡಿನಲ್ಲಿ

ಸಂಪ್ರದಾಯಸ್ಥವಾಗಿದ್ದ ವಾರಸುದಾರಿಕೆಯ ಆಯಾಮವೊಂದು ವಸಾಹತುಶಾಹಿ ಪ್ರಭಾವದಿಂದಾಗಿ ಮರುರೂಪುಗೊಂಡಿತ್ತು.

1870ರಲ್ಲಿ ಬ್ರಹ್ಮಸಮಾಜದ ಶಾಖೆ ಮಂಗಳೂರಿನಲ್ಲಿ ಪ್ರಾರಂಭಗೊಳ್ಳುವುದರೊಂದಿಗೆ ವಸಾಹತುಶಾಹಿಯ ಸಾಮಾಜಿಕ ಪರಿವರ್ತನೆಯ ನೆಲೆಗಟ್ಟಿನಲ್ಲಿಯೇ, ಪಾರಂಪರಿಕ ಸಮಾಜದ ಹುಳುಕುಗಳನ್ನು ತೆಗೆಯುವ ದೇಶಿಯ ಪ್ರಯತ್ನ ಮಾಡಿದುದರಿಂದ ಸಾಮಾಜಿಕ ಸಂಚಲನದ ಅಂದೋಲನ ಪ್ರಾರಂಭಗೊಂಡಿತು. ಬಾಸೆಲ್ ಮಿಷನ್‌ನ ಪ್ರಭಾವಕ್ಕೆ ಒಳಗಾದ ಅಸಂಖ್ಯಾತ ತುಳುವರ ಮತಪರಿವರ್ತನೆ ಪ್ರಾಜ್ಞರಲ್ಲಿ ಸಾಮಾಜಿಕ ಕಳಕಳಿ ಮೂಡುವಲ್ಲಿ ನಿರ್ಣಾಯಕವೆನಿಸಿತು. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ 1870ರಲ್ಲಿ ಮಂಗಳೂರಿನ ಪ್ರತಿಷ್ಠಿತ ಬಿಲ್ಲವರ ನಾಯಕ ಅರಸಪ್ಪ ತನ್ನ ಸ್ಥಿತಿ ಮತ್ತು ಅಂತಸ್ತುಗಳನ್ನು ಇನ್ನಷ್ಟು ವೃದ್ಧಿಸಲು ಕ್ರೈಸ್ತಮತಕ್ಕೆ ಸೇರಲು ಉತ್ಸುಕನಾಗಿ ಮಿಷನರಿಗಳ ಸಂಪರ್ಕದಲ್ಲಿದ್ದು, ಮಾತುಕತೆ ವಿಫಲಗೊಂಡಾಗ ತನ್ನ ಮಾತೃಧರ್ಮದ ಬಗ್ಗೆ ಯೋಚಿಸುವಂತೆ ಮಾಡಿತ್ತಲ್ಲದೇ, ಬ್ರಹ್ಮಸಮಾಜಕ್ಕೆ ಸೇರುವ ಇಚ್ಚೆ ವ್ಯಕ್ತಪಡಿಸಿದ ಘಟನೆ ಬಹಳಷ್ಟು ಮಹತ್ವದ್ದು. ಈ ಘಟನೆ ಮತಪರಿವರ್ತನೆಗೆ ತಡೆಯೊಡ್ಡಿದ್ದ ಚಟುವಟಿಕೆಯಾದರೂ ತುಳುವ ಸಮಾಜದಲ್ಲಾದ ಸಂಚಲನದ ಕ್ರಿಯೆಯಾಗಿತ್ತು. ಆರ್ಯಸಮಾಜದ ಶುದ್ಧಿ ಚಳುವಳಿಯೂ ಕೂಡಾ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸುವಲ್ಲಿ ತನ್ನದೇ ಆದ ಕೊಡುಗೆಯನ್ನು ಕೊಟ್ಟಿತ್ತು. ಈ ದಿಸೆಯಲ್ಲಿ ಈ ಸಮಾಜದ ಕಾರ್ಯಚಟುವಟಿಕೆಗಳನ್ನು ತುಳುನಾಡಿನಲ್ಲಿ ಪ್ರಖರಗೊಳಿಸಿದವರು ಇಂದಬೆಟ್ಟಿನ ನಾಗರಾಜಶೆಟ್ಟಿಯವರು. ಪಂಚಮರನ್ನು ಶುದ್ಧಿಚಳುವಳಿಯ ಉದ್ದೇಶವಿಟ್ಟುಕೊಂಡು ತುಳುವ ಸಮಾಜವನ್ನು ಸುಧಾರಿಸುವ, ಮಿಷನರಿಗಳ ಮತಪರಿವರ್ತನೆಯನ್ನು ತಡೆಯೊಡ್ಡುವಲ್ಲಿ ಅವರ ಮತ್ತು ಆರ್ಯಸಮಾಜದ ಕಾರ್ಯಚಟುವಟಿಕೆಗಳು ಮಹತ್ವದ್ದು. ಇದೇ ತೆರನಾಗಿ ಸಾಮಾಜಿಕ ಸುಧಾರಣೆಯ ಉದ್ದೇಶವನ್ನಿಟ್ಟುಕೊಂಡ ಬ್ರಹ್ಮಜ್ಞಾನ ಸಂಘ, 1901ರಲ್ಲಿ ಸ್ಥಾಪಿತವಾದ ಥಿಯಾಸೊಫಿಕಲ್ ಸೊಸಾಯಿಟಿ, ಹರಿಜನರೊದ್ಧಾರಕ ಸಂತ ಕುದ್ಮುಲ್ ರಂಗರಾಯರ 'ಅಸ್ಪೃಶ್ಯತ ವಿರೋಧಿ ಚಳುವಳಿ', ಕಾರ್ಯೋನ್ಮುಖವಾದವು. ಅಧುನಿಕ ಶಿಕ್ಷಣದ ಅಗತ್ಯತೆಯನ್ನು ಮನಗಂಡು ಅವರ ಉದ್ಧಾರದ ಕಾಳಜಿಯಂತೂ ಮುಖ್ಯವಾದುದು. ಹೀಗೆ ಅವರ ನಿಮ್ನ ವರ್ಗಗಳ ಸಾಮಾಜಿಕ ಸುಧಾರಣೆಯ ಚಿಂತನೆ, ಸಾಮಾಜಿಕ ಗೌರವ, ಸ್ವಾಭಿಮಾನ ಮೂಡಿಸುವ ವಿಚಾರಗಳು ಕೆಳವರ್ಗಗಳ ಬದುಕಿಗೆ ದಾರಿದೀಪವಾದವು. ಮಾತ್ರವಲ್ಲ ಹಿಂದು ಸವರ್ಣಿಯರ ಮೇಲಾಗುತ್ತಿದ್ದ ಮಿಷನರಿಗಳ ಅಪಪ್ರಚಾರವನ್ನು ತಡೆಯುವ ಪ್ರಯತ್ನವೂ ಈ ಮೂಲಕ ಆಯಿತು.

ಇನ್ನೊಂದು ಮಹತ್ವದ ವಿಚಾರಧಾರೆ ಶ್ರೀನಾರಾಯಣ ಗುರುಗಳ 'ಧರ್ಮ ಪರಿಪಾಲನ ಚಳುವಳಿ'. ಈ ಅಂದೋಲನದಿಂದ ವಸಾಹತುಶಾಹಿಯ ಒತ್ತಡಕ್ಕೊಳಗಾಗಿ ತಮ್ಮ ಮೂಲ ಆಸ್ತಿತ್ವ ಕಳೆದುಕೊಳ್ಳುವ ಭೀತಿಯಲ್ಲಿದ್ದ ತುಳುನಾಡಿನ ಕೆಳವರ್ಗಗಳು ಸ್ವಾಭಿಮಾನಿ ನೆಲೆಯಲ್ಲಿ ಉತ್ಥಾನಗೊಂಡವಲ್ಲದೇ, ಮೇಲ್ವರ್ಗಗಳ ಶೋಷಣೆ ಇನ್ನೊಂದೆಡೆ ಮಿಷನರಿಗಳ ಮತಪರಿವರ್ತನೆಯ ಯೋಜನೆಗಳನ್ನು ಪುನರ್ ಅವಲೋಕಿಸುವಂತೆ ಮಾಡಿತು. ಒಂದೇ ಜಾತಿ, ಒಂದೇ ಕುಲ, ಒಂದೇ ದೇವರು, ವಿದ್ಯೆಯಿಂದ ಸ್ವತಂತ್ರರಾಗಿ, ಸಂಘಟಿತರಾಗಿ ಎಂಬ ದೀಕ್ಷಾ ಮಂತ್ರ ತುಳುವ ಕೆಳವರ್ಗದ ಸಾಮಾಜಿಕರಲ್ಲಿ ಹೊಸ ಚೇತನವನ್ನು ಮೂಡಿಸಿತು. ಮೊಳಹಳ್ಳಿ ಶಿವರಾಯರ ಸಹಕಾರ ಚಳುವಳಿಯೂ ಈ ದಿಸೆಯಲ್ಲಿ ತುಳುವರನ್ನು ಜೋಡಿಸುವ ಕಾರ್ಯ ಮಾಡಿತ್ತಲ್ಲದೇ, ಆರ್ಥಿಕ ಮನಶ್ಚೇತನದ ಜೊತೆಗೆ ಸಹೋದರ ಭಾವವನ್ನು ಮರುವ್ಯಾಖ್ಯಾನಿಸಿತು.

ಕಾರ್ನಾಡ್ ಸದಾಶಿವರಾಯರ ರಾಜಕೀಯ ಚಟುವಟಿಕೆಗಳು, ಸ್ವದೇಶಿ ವಿಚಾರವನ್ನು ಮುಂದಿಟ್ಟು ತುಳುನಾಡಿನಲ್ಲಿ ಸುಮಾರು ಎರಡು ದಶಕಗಳ ಕಾಲ ನಾಯಕತ್ವದ ಮುಂಚೂಣಿ ವಹಿಸಿದ್ದು, ಈ ಪ್ರದೇಶಕ್ಕೆ ಹೊಸ ಮಾರ್ಗದೀಪಿಕೆಯನ್ನು ನೀಡಿದವು. ಜೊತೆಗೆ ಗಾಂಧೀಜಿಯವರ ತುಳುನಾಡ ಭೇಟಿ ತುಳುನಾಡಿನಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಬಲವರ್ಧನೆ ನೀಡಿತ್ತಲ್ಲದೇ, ಜಾತಿ, ಧಾರ್ಮಿಕ ಚೌಕಟ್ಟುಗಳನ್ನು ಮೀರಿ ವಸಾಹತುಪೂರ್ವದ ಅಧಿಕಾರ ಹಾಗೂ ಸಾಮಾಜಿಕ ಗಣ್ಯತೆಯನ್ನು ಹೊಂದಿದ್ದ ಮನೆತನಗಳು ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಪ್ರೇರೆಪಿಸಿತು. ಹೀಗೆ ಕಾರ್ನಾಡ್ ಸದಾಶಿವರಾಯರು ಸ್ವಾತಂತ್ರ್ಯ ಸಂಗ್ರಾಮಕ್ಕೆ ವಿಶೇಷ ಸಂಚಲನೆಯನ್ನು ಮೂಡಿಸಲು ಕಾರಣವಾದರು. ವಸಾಹತುಶಾಹಿ ಆಳ್ವಿಕೆಯಿಂದಾಗಿ ತುಳುನಾಡಿನ ವಿವಿಧ ಸಮುದಾಯಗಳಲ್ಲಾದ ಜಾಗೃತಿ ಚಿಂತನೆಗಳು, ಜಾತಿ ಸಂಘಟನೆಗಳ ಸಾಂಘಿಕರೂಪ, ಪ್ರಾಜ್ಞರ ಬೆಂಬಲ ಮುಂತಾದವುಗಳು ತುಳುವರ ಎಲ್ಲಾ ರಂಗದ ಚಟುವಟಿಕೆಗಳಲ್ಲೂ ಪ್ರತಿಫಲನಗೊಂಡವು. ಅಲ್ಲದೇ ಮಹಿಳಾ ಶಿಕ್ಷಣ, ಪ್ರೌಢಾವಸ್ಥೆಗೆ ತಲುಪಿದ್ದ ರಾಷ್ಟ್ರೀಯ ಚಿಂತನೆಗಳು ಇಲ್ಲವೇ ರಾಷ್ಟ್ರದ ಪರಿಕಲ್ಪನೆಗಳು ರಾಜಕೀಯ ಚಿಂತನೆಗಳಲ್ಲಿ ಹೊಸತನವನ್ನು ಮೂಡಿಸುವುದರೊಂದಿಗೆ ತುಳುವರನ್ನು ಸಕ್ರಿಯಗೊಳಿಸಿದವು.

ವಸಾಹತುಶಾಹಿಯ ಸಾಂಸ್ಕೃತಿಕ ಅವಜ್ಞೆಗೊಳಗಾದ ತುಳುನಾಡಿನ ಜನಪ್ರಿಯ ಕಲಾಪ್ರಕಾರಗಳಾದ ಯಕ್ಷಗಾನ, ಹರಿಕಥೆ, ನಾಟಕ ಮುಂತಾದವುಗಳು ಸ್ವಾತಂತ್ರ್ಯ ಮತ್ತು ಅದಕ್ಕಾಗಿ ಹೋರಾಡಬೇಕಾದ ಅಗತ್ಯವನ್ನು ಪ್ರಚಾರಗೊಳಿಸುವಲ್ಲಿ ಉತ್ತಮ ಮಾಧ್ಯಮಗಳೆನಿಸಿಕೊಂಡು ತನ್ನದೇ ರೀತಿಯಲ್ಲಿ ಜಾಗೃತಿಯ ವಾರಸುದಾರಿಕಾ ಕಾರ್ಯವನ್ನು ನಿರ್ವಹಿಸಿದವು. ತುಳು ಜನಪದ ಪದ್ಯಗಳ ಮೂಲಕವೂ ಸ್ವಾತಂತ್ರ್ಯದ ಕಹಳೆ ಮೊಳಗಿತ್ತಲ್ಲದೇ,

